# ಬಾಲ್ಯ ವಿವಾಹ ಪದ್ಧತಿ : ಸ್ತ್ರೀವಾದಿ ಅಧ್ಯಯನ
## (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು
ಪಂಪಾಪತಿ. ಎನ್.ಎಲ್.

ಮಾರ್ಗದರ್ಶಕರು
ಡಾ.ಶೈಲಜ ಹಿರೇಮಠ
ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ







ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೭

# ಬಾಲ್ಯ ವಿವಾಹ ಪದ್ಧತಿ : ಸ್ತ್ರೀವಾದಿ ಅಧ್ಯಯನ

(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

ಪಂಪಾಪತಿ ಎನ್.ಎಲ್.

ಮಾರ್ಗದರ್ಶಕರು

ಡಾ.ಶೈಲಜ ಹಿರೇಮಠ

ಪ್ರಾಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ



ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ,ಹಂಪಿ

ವಿದ್ಯಾರಣ್ಯ-೫೮೩೨೭೬

೨೦೧೭



## ಸಂಶೋಧಕರ ಘೋಷಣಾ ಪತ್ರ

ಬಾಲ್ಯ ವಿವಾಹ ಪದ್ಧತಿ : ಸ್ತ್ರೀವಾದಿ ಅಧ್ಯಯನ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಶೊಧನಾ ಮಹಾಪ್ರಬಂಧವನ್ನು ಡಾ.ಶೈಲಜ ಹಿರೇಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

ದಿನಾಂಕ : ೦೪.೦೨.೧೭
ಸ್ಥಳ : ಹಂಪಿ

(ಪಂಪಾಪತಿ ಎನ್.ಎಲ್.)
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ,ಹಂಪಿ

## ಮಾರ್ಗದರ್ಶಕರ ದೃಢೀಕರಣ ಪತ್ರ

ಪಂಪಾಪತಿ ಎನ್. ಎಲ್. ಇವರು ಸಿದ್ಧಪಡಿಸಿದ **ಬಾಲ್ಯ ವಿವಾಹ ಪದ್ಧತಿ : ಸ್ತ್ರೀವಾದಿ ಅಧ್ಯಯನ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ದಿನಾಂಕ : ೦೪.೦೨.೧೨

ಸ್ಥಳ : ವಿದ್ಯಾರಣ್ಯ.

ಡಾ.ಶೈಲಜ ಹಿರೇಮಠ
ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ,ಹಂಪಿ

## ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವೈಧಾನಿಕತೆ

೧.೪. ಅಧ್ಯಯನದ ಸ್ವರೂಪ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

ಭಾರತೀಯ ಸಾಮಾಜಿಕ ಚಿಂತನೆಗೆ ಪ್ರಾಚೀನ ಇತಿಹಾಸವಿದೆ. ವೇದ, ಶಾಸ್ತ್ರ, ಪುರಾಣಗಳ ಕಾಲದಿಂದಲೂ ವಿವಾಹ ಸಂಸ್ಥೆಗೆ ಹಲವಾರು ನಿಯಮಗಳನ್ನು ರೂಪಿಸುತ್ತಲೇ ಬರಲಾಗಿದೆ. ಪಿತೃಪ್ರಧಾನ ಚಿಂತನೆಯ ಪ್ರಕಾರ ವಿವಾಹದ ಮೂಲಕವೇ ಕುಟುಂಬವು ಸಂರಚನೆಗೊಳ್ಳುತ್ತದೆ. ವ್ಯವಸ್ಥೆಯಲ್ಲಿ ಮಹಿಳೆಯರ ವಿಷಯದ ಕುರಿತು ಯಾವುದೇ ವಿಷಯವನ್ನು ಪ್ರಸ್ತಾಪಿಸಬೇಕಾದರೂ ಅದು ಕುಟುಂಬದ ಹಂತದಿಂದಲೇ ಆರಂಭವಾಗಬೇಕು. ಏಕೆಂದರೆ ಕುಟುಂಬವನ್ನು ಬಿಟ್ಟು ಸಮಾಜವಿಲ್ಲ. ಕುಟುಂಬದೊಳಗಿನ ವಿಷಯಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಗೋಚರಿಸುವ ವಿಷಯಗಳು ಒಂದಕ್ಕೊಂದು ಪೂರಕವಾಗಿರುತ್ತವೆ. ಮುಖ್ಯವಾಗಿ ಕುಟುಂಬದಲ್ಲಿ ಪುರುಷರು ಯಜಮಾನ ನೆಲೆಯಲ್ಲಿ ಮತ್ತು ಮಹಿಳೆಯರನ್ನು ಅಧೀನ ನೆಲೆಯಲ್ಲಿ ಗುರುತಿಸಲಾಗುತ್ತಿದೆ. ಹಾಗಾಗಿ ಮಹಿಳೆಯರು ಎಷ್ಟೇ ಮುಂದುವರೆದರೂ, ಅವರು ಪುರುಷರ ಅಧೀನದಲ್ಲಿಯೇ ಜೀವಿಸಬೇಕಾದ ಅನಿವಾರ್ಯತೆಯನ್ನು ಸಮಾಜ ಎತ್ತಿ ಹಿಡಿದಿದೆ. ಇದು ಕೇವಲ ಒಂದು ಜಾತಿಗೆ, ಸಮುದಾಯಕ್ಕೆ ಸೀಮಿತವಾಗಿಲ್ಲ. ಎಲ್ಲ ಜಾತಿ ವರ್ಗಗಳಿಗೆ ಹೆಣ್ಣಿನ ಅಧೀನ ಸ್ಥಿತಿಯ ಕಲ್ಪನೆ ಸವಿಸ್ತಾರವಾಗಿ ಹಬ್ಬಿದೆ.

ಪ್ರತಿಯೊಂದು ಜಾತಿ ಜನಾಂಗಗಳಲ್ಲಿಯೂ ಮಹಿಳೆಯರಿಗೆ ಪ್ರತ್ಯೇಕವಾದ ಸ್ಥಾನಮಾನಗಳಿವೆ. ಇದಕ್ಕೆ ಪೂರಕವಾಗಿ ಧರ್ಮಗಳು ಕಾರ್ಯ ನಿರ್ವಹಿಸುತ್ತಿರುತ್ತವೆ. ಹಾಗಾಗಿ ಪ್ರತಿಯೊಂದು ಜಾತಿಯು ತನ್ನದೇ ಆದ ಸಂಪ್ರದಾಯ, ಆಚರಣೆ, ಪದ್ಧತಿಗಳನ್ನು ಒಳಗೊಂಡಿದ್ದು, ಪ್ರತಿಯೊಂದು ಸಂಪ್ರದಾಯವೂ ಒಂದೊಂದು ಆಚರಣಾ ವಿಧಾನವನ್ನು ಹೊಂದಿರುತ್ತದೆ. ಇವುಗಳನ್ನು ಮಹಿಳೆಯರೇ ಪಾಲಿಸಬೇಕಾಗುತ್ತದೆ. ಇವುಗಳ ಮೂಲಕ ಮಹಿಳೆಯರ ಒಟ್ಟು ಚಲನ ವಲನದ ಮೇಲೆ ನಿಯಂತ್ರಣವನ್ನು ಸಾಧಿಸಲಾಗುತ್ತಿದೆ. ಮಹಿಳೆಯ ನಡೆ ಹೇಗಿರಬೇಕು, ಅವರು ಯಾವುದನ್ನು ಮಾತನಾಡಬೇಕು, ಯಾವುದನ್ನು ಮಾತನಾಡಬಾರದು ಎಂಬುದನ್ನು ನಿರ್ಧರಿಸುವುದು ಪುರುಷ ವ್ಯವಸ್ಥೆಯೇ ಹೊರತು

ಮಹಿಳೆಯಲ್ಲ. ಹಾಗಾಗಿಯೇ ಜೀವನದ ಪ್ರತಿಯೊಂದು ಘಟ್ಟದಲ್ಲಿಯೂ ಪರಾವಲಂಬಿತನವನ್ನೇ ಹೊಂದಿದ್ದು, ಕುಟುಂಬದ ನಾಲ್ಕು ಗೋಡೆಗಳ ಮಧ್ಯೆ ಜೀವಿಸುವಂತಹ ಪರಿಸ್ಥಿತಿ ಮಹಿಳೆಯದ್ದಾಗಿದೆ. ಹಾಗಾಗಿಯೇ ಅವಳು ಕುಟುಂಬದಾಚೆಗಿನ ಪ್ರಪಂಚವನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಾಗದಾಗಿದೆ. ಪ್ರತಿಯೊಂದು ಧರ್ಮದಲ್ಲಿಯೂ ರೂಪಿಸಲ್ಪಟ್ಟ ನಿಯಮಗಳು ಪುರುಷನಿಗೆ ಪೂರಕವಾಗಿ ಮತ್ತು ಮಹಿಳೆಯರಿಗೆ ಮಾರಕವಾಗಿವೆ. ಧರ್ಮಗಳು ಮಹಿಳೆಯರ ಬಗೆಗೆ ಹೊಂದಿರುವ ದೃಷ್ಟಿಕೋನಗಳು ಮತ್ತು ಧೋರಣೆಗಳೇ ಮಹಿಳೆಯರ ಸಾಮಾಜಿಕ ಪಾತ್ರ ನಿರ್ವಹಣೆಯ ಹಿಂದಿರುವ ಸೂತ್ರವಾಗಿದೆ. ಹಾಗಾಗಿಯೇ ಮಹಿಳೆಯರಿಗೆ ಅಸ್ತಿತ್ವವೇ ಇಲ್ಲದಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಮುಖ್ಯವಾಗಿ ಪ್ರಪಂಚದ ಪ್ರಮುಖ ಧರ್ಮಗಳಲ್ಲಿ ಮಹಿಳೆ ಪುರುಷನಿಗೆ ಅಧೀನವಾಗಿರುವುದನ್ನೇ ಆದರ್ಶವೆನ್ನಲಾಗಿದೆ. ಈ ಆದರ್ಶದ ಮಾದರಿಯನ್ನು ಮಹಿಳೆಯರ ಮುಂದಿಡುವುದರ ಮೂಲಕ ಅವರನ್ನು ನಿಯಂತ್ರಣದಲ್ಲಿರಿಸಿಕೊಳ್ಳಲಾಗಿದೆ. ಹಲವು ಆಚರಣೆ, ನಂಬಿಕೆಗಳ ಮೂಲಕ ಹೆಣ್ಣಿನ ಮೇಲೆ ಅನೇಕ ಬಗೆಯ ನೀತಿಗಳನ್ನು ಹೇರಲಾಗಿದೆ; ಅವುಗಳನ್ನು ಹೆಣ್ಣಿನ ಕರ್ತವ್ಯಗಳೆಂದು ನಿರ್ವಚಿಸಲಾಗಿದೆ. ಆಚರಣೆ, ಸಂಪ್ರದಾಯ, ನಂಬಿಕೆ ಇವುಗಳು ಸಂಸ್ಕೃತಿಯ ಸಂಕೇತಗಳಾಗಿವೆ; ಅವುಗಳನ್ನು ಚಾಚೂ ತಪ್ಪದೆ ನಿರ್ವಹಿಸುವ ಮತ್ತು ಮುಂದಿನ ಪೀಳಿಗೆಗೆ ಕೊಂಡೊಯ್ಯುವ ರಾಯಭಾರಿಯಂತೆ ಹೆಣ್ಣನ್ನು ಪ್ರತಿನಿಧಿಸಲಾಗುತ್ತಿದೆ. ಆ ಮೂಲಕ ಸತಿ ಆಚರಣೆ, ವೈಧವ್ಯ, ಪಾತಿವ್ರತ್ಯ, ಬಾಲ್ಯವಿವಾಹ, ವರದಕ್ಷಿಣೆ ಮುಂತಾದ ಅಮಾನುಷ ಆಚರಣೆಗಳು ರೂಢಿಯಲ್ಲಿ ಬರತೊಡಗಿದವು. ಮುಖ್ಯವಾಗಿ ಇವುಗಳ ಹಿಂದಿನ ಉದ್ದೇಶ ಮಹಿಳಾ ಹಕ್ಕುಗಳ ಹರಣವೇ ಹೊರತು ಮತ್ತೇನೂ ಅಲ್ಲ.

ವಿವಾಹವು ಒಂದು ಸಾಮಾಜಿಕ ಸಂಸ್ಥೆಯಾಗಿದ್ದು, ಇದಕ್ಕೆ ಪ್ರತ್ಯೇಕವಾದ ಮಾನ್ಯತೆ ಇದೆ. ಮುಖ್ಯವಾಗಿ ಪ್ರಾಚೀನ ಕಾಲದಿಂದ ಹಿಡಿದು ಪ್ರಸ್ತುತದ ಸಂದರ್ಭದವರೆಗೂ ಮಾನವರಾಗಿ ಹುಟ್ಟಿದ ಪ್ರತಿಯೊಂದು ಜೀವಿಯೂ ವಿವಾಹ ಬಂಧನಕ್ಕೆ ಒಳಗಾಗಲೇ ಬೇಕೆಂಬ ನಿಯಮ ರೂಢಿಯಲ್ಲಿದೆ. ಇದು ಧರ್ಮಾತೀತವಾಗಿದ್ದು ಎಲ್ಲ ಧರ್ಮಗಳಲ್ಲೂ ವಿವಾಹದ ಕುರಿತು ಪ್ರತ್ಯೇಕ ನಿಯಮಗಳು ರೂಪಿಸಲ್ಪಟ್ಟಿವೆ. ಈ ನಿಯಮಗಳ ಆದೇಶದಂತೆಯೇ ವಿವಾಹವಾಗಬೇಕು. ಇದನ್ನು ಮೀರಿದರೆ ಧರ್ಮದಿಂದ ಆಚೆ ಇರಬೇಕಾಗುತ್ತದೆ. ವಿವಾಹ ಎಂಬ ಸಂಸ್ಥೆಯು ತಾರತಮ್ಯದಿಂದ ಕೂಡಿದ್ದು, ಇದು ಪುರುಷರಿಗೆ ಸ್ವಾತಂತ್ರ್ಯವನ್ನು ಒದಗಿಸಿಕೊಟ್ಟರೆ, ಮಹಿಳೆಯರಿಗೆ ಪರಾವಲಂಬಿತನವನ್ನು ತಂದೊಡ್ಡುತ್ತದೆ. ವಿವಾಹಕ್ಕೆ ಎಷ್ಟೊಂದು ಮಾನ್ಯತೆ ಇತ್ತೆಂದರೆ ಮಹಿಳೆಯರು ಇನ್ನು ಋತುಮತಿಯಾಗುವುದಕ್ಕೂ ಮೊದಲೇ ವಿವಾಹ ಮಾಡಿ ಬಿಡುತ್ತಿದ್ದರು. ಮಹಿಳೆಯರನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಇನ್ನು ಚಿಕ್ಕ ವಯಸ್ಸಿನವರಿರುವಾಗಲೇ ವಿವಾಹ ಮಾಡಲಾಗುತ್ತಿತ್ತು. ಹೆಣ್ಣು ಮಗು ಋತುಮತಿಯಾಗುವುದಕ್ಕಿಂತ ಮುಂಚಿತವಾಗಿಯೇ ವಿವಾಹ ಮಾಡಬೇಕು. ಇಲ್ಲವಾದರೆ ಆ

ಹೆಣ್ಣುಮಗುವಿನ ತಂದೆ ತಾಯಿಗಳು ನರಕಕ್ಕೆ ಹೋಗುತ್ತಾರೆ ಎಂಬ ನಂಬಿಕೆಯ ಕಾರಣದಿಂದ ಬಾಲ್ಯ ವಿವಾಹಗಳು ನಡೆಯುತ್ತಿದ್ದವು. ಬಾಲ್ಯ ವಿವಾಹವು ಸತಿಪದ್ಧತಿ, ವರದಕ್ಷಿಣೆ ಪದ್ಧತಿ, ವೈಧವ್ಯ ಪದ್ಧತಿಗಳಂತೆಯೇ ಒಂದು ಸಾಮಾಜಿಕ ಪಿಡುಗಾಗಿದೆ. ಬಾಲ್ಯವಿವಾಹಕ್ಕೆ ಪ್ರಾಚೀನ ಧರ್ಮಶಾಸ್ತ್ರಗಳಲ್ಲಾಗಲೀ, ಸಂಪ್ರದಾಯಗಳಲ್ಲಾಗಲೀ ವಿರೋಧಗಳಿಲ್ಲ. ಹಾಗಾಗಿಯೇ ಇಂದಿಗೂ ಈ ಪದ್ಧತಿ ನಿರಾಂತಕವಾಗಿ ಜಾರಿಯಲ್ಲಿರುವುದನ್ನು ಕಾಣಬಹುದು. ಮುಖ್ಯವಾಗಿ ವಸಾಹತು ಸಂದರ್ಭದಲ್ಲಿ ಸಮಾಜ ಸುಧಾರಕರ ಪರಿಶ್ರಮದಿಂದ ೧೯೨೯ರಲ್ಲಿ ಬಾಲ್ಯ ವಿವಾಹ ನಿಷೇಧ ಕಾಯಿದೆಯನ್ನು ಜಾರಿಗೆ ತರಲಾಗಿತ್ತಾದರೂ, ಅಂದಿನ ಸಂದರ್ಭದಲ್ಲಿ ಇದಕ್ಕೆ ಬಹಳಷ್ಟು ಸಾಂಪ್ರದಾಯಿಕ ಮನುವಾದಿಗಳಿಂದ ವಿರೋಧಗಳು ವ್ಯಕ್ತವಾದವು. ಏಕೆಂದರೆ ಇದನ್ನು ಹಿಂದೂ ಧರ್ಮದ ಸಂಸ್ಕೃತಿಯ ನೆಲೆಯಲ್ಲಿ ನೋಡಲಾಗುತ್ತಿತ್ತು. ಆದರೂ ಈ ಎಲ್ಲ ಸಂಪ್ರದಾಯವಾದಿಗಳ ವಿರೋಧದ ನಡುವೆಯೂ ಬಾಲ್ಯವಿವಾಹ ನಿಷೇಧ ಕಾಯಿದೆ ೧೯೨೯ರಲ್ಲಿ ಜಾರಿಗೆ ಬಂದಿತು. ಇದು ಸರ್‌ದಾ ಕಾಯಿದೆಯೆಂತಲೇ ಇಂದಿಗೂ ಗುರುತಿಸಲ್ಪಡುತ್ತಿದೆ. ಈ ಕಾಯಿದೆ ಜಾರಿಗೆ ಬರುವುದಕ್ಕೂ ಮೊದಲು ಹೆಣ್ಣು-ಗಂಡಿನ ವಿವಾಹ ವಯಸ್ಸಿನಲ್ಲಿ ಬದಲಾವಣೆಗಳು ಆಗಿರಲಿಲ್ಲ. ಬದಲಾಗಿ ಅಂದಿನ ಸಂದರ್ಭದಲ್ಲಿ ಲೈಂಗಿಕ ಒಪ್ಪಿಗೆಯ ವಯಸ್ಸನ್ನು ಆಧರಿಸಿಕೊಂಡು ಹಲವಾರು ಚರ್ಚೆಗಳು ನಡೆದು ಲೈಂಗಿಕ ಒಪ್ಪಿಗೆ ವಯಸ್ಸಿನಲ್ಲಿ ಬದಲಾವಣೆಗಳನ್ನು ತರಲಾಯಿತು. ಅಂದರೆ ೧೯೨೯ಕ್ಕೂ ಪೂರ್ವದಲ್ಲಿ ಹೆಣ್ಣು-ಗಂಡಿನ ಲೈಂಗಿಕ ಒಪ್ಪಿಗೆಯ ವಯಸ್ಸಿಗೆ ಸಂಬಂಧಿಸಿದಂತೆ ೧೨, ೧೩, ೧೪ ವರ್ಷಗಳ ವಯಸ್ಸಿನವರೆಗೆ ವಿಸ್ತರಿಸಿಕೊಳ್ಳುತ್ತಾ ಸಾಗಿತು. ಆದರೆ ಈ ವಯಸ್ಸಿನ ಏರಿಕೆಗೂ ಮತ್ತು ವಿವಾಹ ವಯಸ್ಸಿಗೂ ಯಾವುದೇ ಸಂಬಂಧಗಳಿರಲಿಲ್ಲ. ಹಾಗಾಗಿ ವಿವಾಹ ವಯಸ್ಸಿನ ಕುರಿತ ಚರ್ಚೆ ಮತ್ತು ಕಾಯಿದೆ ರೂಪುಗೊಂಡಿದುದು ೧೯೨೯ರಲ್ಲಿಯೇ. ಕಾಲ ಬದಲಾದಂತೆ ಈ ವಿವಾಹ ಕಾನೂನಿನಲ್ಲಿ ಅಮೂಲಾಗ್ರವಾದ ಬದಲಾವಣೆಗಳನ್ನು ಮಾಡಲಾಯಿತು. ಸ್ವಾತಂತ್ರ್ಯ ನಂತರದಲ್ಲಿ ವಿವಾಹ ವಯಸ್ಸಿನಲ್ಲಿ ಹೆಚ್ಚಳವನ್ನು ಮಾಡಲಾಯಿತು. ಪ್ರಸ್ತುತ ವಿವಾಹವಾಗುವಂತಹ ಗಂಡಿನ ವಯಸ್ಸು ೨೧ ವರ್ಷ, ಹೆಣ್ಣಿನ ವಯಸ್ಸು ೧೮ ವರ್ಷ ಇರಬೇಕು. ಈ ವಯಸ್ಸಿಗಿಂತ ಪೂರ್ವದಲ್ಲಿ ವಿವಾಹ ಮಾಡಿದರೆ ಅದು ಬಾಲ್ಯ ವಿವಾಹ ಎಂದು ಪರಿಗಣಿಸಲ್ಪಡುತ್ತದೆ. ಅಷ್ಟು ಮಾತ್ರವಲ್ಲದೆ ಕಾನೂನಿನ ಪ್ರಕಾರ ಶಿಕ್ಷೆಗೆ ಒಳಗಾಗಬೇಕಾಗುತ್ತದೆ. ಬಾಲ್ಯ ವಿವಾಹ ಎಂಬುದು ಕೇವಲ ನಮ್ಮ ರಾಜ್ಯಕ್ಕೆ ಮಾತ್ರ ಸೀಮಿತವಾಗಿರದೇ, ಇಡೀ ದೇಶದಲ್ಲಿ ಮತ್ತು ಪ್ರಪಂಚದ ಹಲವಾರು ದೇಶಗಳಲ್ಲಿ ಈ ವಿವಾಹ ಜಾರಿಯಲ್ಲಿದೆ. ಬಾಲ್ಯ ವಿವಾಹ ಪದ್ಧತಿ ಮಕ್ಕಳ ಹಕ್ಕುಗಳನ್ನು ಸಂಪೂರ್ಣವಾಗಿ ನಿರಾಕರಿಸುತ್ತದೆ. ಅದಕ್ಕಾಗಿ ಈ ಸಮಸ್ಯೆಯನ್ನು ಮಾನವ ಹಕ್ಕುಗಳ ವ್ಯಾಪ್ತಿಗೆ ತಂದುಕೊಂಡು ಪರಿಶೀಲಿಸುವ ಜರೂರಿದೆ. ಹಾಗಾಗಿಯೇ ಇಂದು ಬಾಲ್ಯ ವಿವಾಹಗಳನ್ನು ಮಾನವ ಹಕ್ಕುಗಳ ವ್ಯಾಪ್ತಿಯಲ್ಲಿ ನೋಡಲಾಗುತ್ತದೆ. ಪ್ರತಿಯೊಂದು ದೇಶವು ಬಾಲ್ಯ ವಿವಾಹಗಳನ್ನು ತಡೆಗಟ್ಟಲು ಹಲವಾರು ಪ್ರಯತ್ನಗಳನ್ನು ಮಾಡುತ್ತಲೇ ಇವೆ. ಭಾರತದಲ್ಲಿಯೂ ಸಹ ಬಾಲ್ಯ ವಿವಾಹ ನಿಷೇಧ ಕಾನೂನಿನಲ್ಲಿ ಹಲವಾರು ತಿದ್ದುಪಡಿಗಳನ್ನು

ಮಾಡುವುದರ ಮೂಲಕ ಕಾನೂನನ್ನು ಹೆಚ್ಚು ಬಲಿಷ್ಠಗೊಳಿಸಲಾಗಿದೆ. ಆದರೂ ಬಾಲ್ಯ ವಿವಾಹ ಅವ್ಯಾಹತವಾಗಿ ನಡೆಯುತ್ತಲೇ ಇವೆ. ಈ ಹಿನ್ನೆಲೆಯಲ್ಲಿ ಅಧ್ಯಯನವು ಕೆಲವು ಉದ್ದೇಶಗಳನ್ನು ಹೊಂದಿದ್ದು ಅವುಗಳನ್ನು ಕೆಳಗಿನಂತೆ ಗುರುತಿಸಿಕೊಳ್ಳಲಾಗಿದೆ.

**೧.೧. ಅಧ್ಯಯನದ ಉದ್ದೇಶ**

ಬಾಲ್ಯ ವಿವಾಹ ಪದ್ಧತಿಯೂ ಸಹ ಮಹಿಳೆಯರ ಅಧೀನ ನೆಲೆಗೆ ಕಾರಣ ವಾಗಿರುವುದನ್ನು ಗುರುತಿಸಬಹುದಾಗಿದೆ. ಬಾಲ್ಯ ವಿವಾಹ ಮಕ್ಕಳ ಸಂಪೂರ್ಣವಾದ ಹಕ್ಕುಗಳನ್ನು ನಾಶ ಮಾಡುತ್ತದೆಯಾದ್ದರಿಂದ ಇದನ್ನು ಸಮಾಜದಿಂದ ಬುಡ ಸಮೇತ ಕಿತ್ತುಹಾಕಲು ಕಾನೂನಾತ್ಮಕ ಪ್ರಯತ್ನಗಳನ್ನು ಮಾಡಲಾಯಿತು. ಹಾಗಾಗಿಯೇ ಬಾಲ್ಯ ವಿವಾಹ ನಿಷೇಧ ಕಾನೂನಿನಲ್ಲಿ ಹಲವಾರು ತಿದ್ದುಪಡಿಗಳನ್ನು ತರಲಾಯಿತು. ಮಕ್ಕಳ ಹಕ್ಕುಗಳನ್ನು ಸಂರಕ್ಷಿಸುವ ಮತ್ತು ಅವರ ಸರ್ವತೋಮುಖ ಬೆಳವಣಿಗೆಗೆ ಪೂರಕವಾಗಬೇಕೆಂಬ ಆಶಯದೊಂದಿಗೆ ಬಾಲ್ಯ ವಿವಾಹ ನಿಷೇಧ ಕಾನೂನು ಜಾರಿಯಾಗಿದೆ. ಆದರೆ ಈ ಕಾಯಿದೆ ಜಾರಿಯಾಗಿ ೮೭ ವರ್ಷಗಳು ಕಳೆದರೂ ಮಕ್ಕಳ ಜೀವನದ ಮೇಲೆ ಇದು ಪ್ರತಿಫಲನ ಗೊಂಡಿದೆಯೇ ಎಂಬುದು ಪ್ರಶ್ನಾರ್ಹ ಸಂಗತಿಯಾಗಿದೆ. ಹಾಗಾಗಿ ಸಮಾಜದಲ್ಲಿನ ಜನರು ಈ ಕಾಯಿದೆಯನ್ನು ಹೇಗೆ ಪರಿಭಾವಿಸಿಕೊಂಡಿದ್ದಾರೆ ಮತ್ತು ಉಪಯೋಗಿಸಿಕೊಂಡಿದ್ದಾರೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳುವ ನಿಟ್ಟಿನಲ್ಲಿ ಈ ಅಧ್ಯಯನವು ಕೆಳಕಂಡ ಉದ್ದೇಶಗಳನ್ನು ಹೊಂದಿದೆ.

ಬಾಲ್ಯ ವಿವಾಹಕ್ಕೆ ಕಾರಣಗಳನ್ನು ಮತ್ತು ಅವುಗಳಿಂದ ಮಕ್ಕಳ ಮೇಲಾಗುವ ದುಷ್ಪರಿಣಾಮಗಳಿಗೆ ಮೂಲ ಕಾರಣ ಯಾವುದು?ಎಂಬುದನ್ನು ತಿಳಿಯುವ ಅಗತ್ಯತೆ ಇದೆ. ಬಾಲ್ಯ ವಿವಾಹಗಳು ವ್ಯವಸ್ಥೆಯಲ್ಲಿ ಇನ್ನೂ ಜೀವಂತವಾಗಿ ಇರುವುದಕ್ಕೆ ಕಾರಣಗಳೇನು?, ಅವುಗಳ ಹಿಂದಿನ ಸಾಮಾಜಿಕ ಧೋರಣೆಗಳೇನು? ಮತ್ತು ಈ ವಿವಾಹಗಳಿಂದ ಮಕ್ಕಳ ಮೇಲಾಗುತ್ತಿರುವ ದುಷ್ಪಪರಿಣಾಮಗಳು ಯಾವುವು? ಮುಖ್ಯವಾಗಿ ಹೆಣ್ಣುಮಕ್ಕಳ ಅಸ್ತಿತ್ವ ಹೇಗೆ ನಿರಾಕರಣೆಗೆ ಒಳಗಾಗುತ್ತದೆ ಎಂಬುದನ್ನು ತಿಳಿಯುವ ಉದ್ದೇಶವನ್ನು ಹೊಂದಿದೆ.

ಸಂವಿಧಾನದ ಅಡಿಯಲ್ಲಿ ಪ್ರತಿಯೊಬ್ಬರೂ ತಮ್ಮದೇ ಆದ ವೈಯಕ್ತಿಕ ಹಕ್ಕುಗಳನ್ನು ಪಡೆದಿದ್ದಾರೆ. ಮುಖ್ಯವಾಗಿ ಸ್ವತಂತ್ರವಾಗಿ ಜೀವಿಸುವ, ಮಾತನಾಡುವ, ತಮ್ಮ ಅಭಿಪ್ರಾಯಗಳನ್ನು ಅಭಿವ್ಯಕ್ತಿಸುವ ಹಕ್ಕುಗಳನ್ನು ಪಡೆದಿರುತ್ತಾರೆ. ಬಾಲ್ಯ ವಿವಾಹಗಳಿಂದ ಮಕ್ಕಳ ಹಕ್ಕುಗಳು ಯಾವ ರೀತಿಯಲ್ಲಿ ಹರಣಗೊಳ್ಳುತ್ತಿವೆ, ಈ ವಿವಾಹಗಳು ಮಾನವ ಹಕ್ಕುಗಳ ಯಾವ ಅಧಿನಿಯಮಗಳನ್ನು ಉಲ್ಲಂಘಿಸುತ್ತವೆ ಎಂಬುದನ್ನು ತಿಳಿಯುವ ಉದ್ದೇಶವನ್ನು ಹೊಂದಿದೆ.

ಮೊದಲ ಬಾರಿಗೆ ಬಾಲ್ಯ ವಿವಾಹ ನಿಷೇಧ ಕಾಯಿದೆ ಜಾರಿಗೆ ಬಂದದ್ದು ೧೯೨೯ರಲ್ಲಿ. ಅಂದಿನಿಂದ ಇಂದಿನವರೆಗೆ ಸುಮಾರು ೮೭ ವರ್ಷಗಳು ಕಳೆದಿವೆ. ಇವುಗಳ ಮಧ್ಯೆ ಬಾಲ್ಯ

ವಿವಾಹ ನಿಷೇಧ ಕಾನೂನನ್ನು ಬಲಿಷ್ಠಗೊಳಿಸಲು ಹಲವಾರು ತಿದ್ದುಪಡಿಗಳನ್ನೂ ತರಲಾಗಿದೆ. ಆದರೂ ಇಂದಿಗೂ ಬಾಲ್ಯ ವಿವಾಹಗಳು ಜಾರಿಯಲ್ಲಿವೆ. ಈ ಸಮಸ್ಯೆಯು ಕಾನೂನು ನಿರ್ವಹಣೆಯಲ್ಲಿನ ಕೊರತೆಯಿಂದ ಹುಟ್ಟಿಕೊಂಡದ್ದೇ? ಅಥವಾ ಸಾಮಾಜಿಕ ವ್ಯವಸ್ಥೆಯಲ್ಲಿನ ಸಂಕೀರ್ಣತೆಗಳು ಇಂದಿಗೂ ಬಾಲ್ಯ ವಿವಾಹ ಪದ್ಧತಿಯನ್ನು ಪೋಷಿಸುತ್ತಿವೆಯೇ ಎಂಬುದನ್ನು ತಿಳಿಯುವ ಉದ್ದೇಶವನ್ನು ಹೊಂದಲಾಗಿದೆ.

ವಸಾಹತುಶಾಹಿ ಸಂದರ್ಭದಲ್ಲಿ ಬಾಲ್ಯ ವಿವಾಹದ ವಿರುದ್ಧ ಹೋರಾಡಿದ ಸುಧಾರಣಾವಾದಿಗಳು ಜಾತಿಯನ್ನು ಎಲ್ಲಿಯೂ ಪ್ರಸ್ತಾಪಿಸದಿದ್ದರೂ, ಅದು ಸಂಪೂರ್ಣವಾಗಿ ಬ್ರಾಹ್ಮಣ ಕೇಂದ್ರೀತವಾಗಿತ್ತು. ಹಾಗೂ ಅಂದಿನ ಸಂದರ್ಭದಲ್ಲಿ ಈ ವಿವಾಹ ಕಾನೂನಿನ ನಿಷೇಧಕ್ಕೆ ವಿರೋಧ ವ್ಯಕ್ತಪಡಿಸಿದವರೂ ಸಹ ಉನ್ನತ ಜಾತಿಯವರೇ ಆಗಿದ್ದರು. ಇಂದು ಈ ಸಮುದಾಯಗಳಲ್ಲಿ ಬಾಲ್ಯ ವಿವಾಹಗಳಾಗುತ್ತಿರುವುದನ್ನು ಕಾಣಲು ಸಾಧ್ಯವಿಲ್ಲ. ಬಾಲ್ಯ ವಿವಾಹ ನಿಷೇಧ ಕಾಯಿದೆಯ ಸಫಲತೆಗೆ ಬ್ರಾಹ್ಮಣ ಸಮುದಾಯದ ಅರ್ಥಪೂರ್ಣ ಭಾಗವಹಿಸುವಿಕೆಗೆ ಹೇಗೆ ಕಾರಣವಾಯಿತು? ಆದರೆ ಬಾಲ್ಯ ವಿವಾಹ ಬ್ರಾಹ್ಮಣ ಸಮುದಾಯವನ್ನು ಹೊರತುಪಡಿಸಿ ಯಾಕೆ ಸಮಾಜದ ಇತರೆಲ್ಲಾ ಜಾತಿಗಳಿಗೆ ಹಬ್ಬಿಕೊಂಡಿತು ಮತ್ತು ಇಂದಿಗೂ ರೂಢಿಯಲ್ಲಿದೆ ಎಂಬುದನ್ನು ತಿಳಿಯುವ ಉದ್ದೇಶವನ್ನು ಹೊಂದಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಗಂಡು ಮತ್ತು ಹೆಣ್ಣಿನ ಜೈವಿಕ ಭಿನ್ನತೆಯೇ ಲಿಂಗ ತಾರತಮ್ಯದ ಆರಂಭಿಕ ಬಿಂದು. ವ್ಯವಸ್ಥೆಯಲ್ಲಿನ ಅಧಿಕಾರವು ಇದರ ಆಧಾರದಿಂದಲೇ ನಿರ್ಧರಿಸಲ್ಪಡುತ್ತದೆ. ಹಾಗಾಗಿ ಅಧಿಕಾರವು ಪುರುಷ ಪರವಾದರೆ, ಅಧೀನತೆ ಮಹಿಳೆಯದ್ದಾಗಿದೆ. ಇದಕ್ಕೆ ವಿವಾಹವು ಪುಷ್ಠಿ ನೀಡುತ್ತದೆ. ಇದೇ ಮಹಿಳೆಯರಿಗೆ ಅತ್ಯಂತ ಸಮಸ್ಯಾತ್ಮಕವಾಗಿದೆ. ಇಂತಹ ಸಂದರ್ಭದಲ್ಲಿ ಬಾಲ್ಯ ವಿವಾಹವು ಮಹಿಳೆಯರನ್ನು ಇನ್ನೂ ಸಂಕೀರ್ಣತೆಗೆ ದೂಡುತ್ತಿದೆ. ಹಾಗಾಗಿ ಬಾಲ್ಯ ವಿವಾಹ ಎಂಬುದು ಕೇವಲ ಒಂದು ದೇಶ, ರಾಜ್ಯ, ಜಿಲ್ಲೆಗೆ ಸೀಮಿತವಾಗಿರದೇ ಇಡೀ ಪ್ರಪಂಚದಾದ್ಯಂತ ವಿಸ್ತರಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಸಂಶೋಧನೆಯು ಉತ್ತರ ಕರ್ನಾಟಕವನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿತ್ತು. ಆದರೆ ಮೊದಲು ಬಳ್ಳಾರಿ, ಕೊಪ್ಪಳ, ಗದಗ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಸಾವಿರಕ್ಕೂ ಹೆಚ್ಚು ಪ್ರಕರಣಗಳು ಈ ನಾಲ್ಕು ಕ್ಷೇತ್ರ ವ್ಯಾಪ್ತಿಯಲ್ಲಿ ಸಂಗ್ರಹಿಸಲಾಯಿತು. ಹಾಗಾಗಿ ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಪ್ರಮಾಣ ಅಧಿಕವಾಗಿದ್ದುದರಿಂದ ವ್ಯಾಪ್ತಿಯನ್ನು ನಾಲ್ಕು ಜಿಲ್ಲೆಗಳಿಗೆ ಮಿತಿಗೊಳಿಸಿಕೊಳ್ಳಲಾಗಿದೆ. ಹಾಗೆಯೇ ಸಂಗ್ರಹಿಸಿದ ಪ್ರಕರಣಗಳಲ್ಲಿ ವಿಶೇಷವಾದ ಮುನ್ನೂರು ಪ್ರಕರಣಗಳನ್ನಷ್ಟೇ ಅಧ್ಯಯನಕ್ಕೆ ಒಳಪಡಿಸಿಕೊಂಡು ವಿಶ್ಲೇಷಿಸಲಾಗಿದೆ. ಅಧ್ಯಯನದಲ್ಲಿ ಆಯ್ದುಕೊಂಡ ಈ ನಾಲ್ಕು ಜಿಲ್ಲೆಗಳಲ್ಲಿ ದೊರೆತ ಪ್ರಕರಣಗಳು ಸಮಗ್ರ ಉತ್ತರ ಕರ್ನಾಟಕವನ್ನು ಒಳಗೊಳ್ಳುತ್ತವೆ. ಈಗಾಗಲೇ ನಡೆದ ಅಧ್ಯಯನಗಳನ್ನು ಅನುಲಕ್ಷಿಸಿ ಭಾರತದ ಹಾಗೂ

ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿನ ಬಾಲ್ಯ ವಿವಾಹ ಪದ್ಧತಿಯ ಸಮಸ್ಯೆಯ ಸಂಕೀರ್ಣತೆಗಳನ್ನು ಅಧ್ಯಯನದಲ್ಲಿ ಹಿಡಿದಿಡಲು ಪ್ರಯತ್ನಿಸಲಾಗಿದೆ. ಅಂದರೆ ಕ್ಷೇತ್ರಕಾರ್ಯದಲ್ಲಿ ನಿಗದಿಪಡಿಸಿಕೊಂಡ ಪ್ರಾದೇಶಿಕ ವ್ಯಾಪ್ತಿಯ ಮಿತಿಯನ್ನು ಮೀರಿ ಜಾಗತಿಕ ನೆಲೆಗೆ ವಿಸ್ತರಿಸಿಕೊಳ್ಳುತ್ತದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈಗಾಗಲೇ ಬಾಲ್ಯ ವಿವಾಹಕ್ಕೆ ಒಳಗಾದ ಮಹಿಳೆಯರನ್ನು, ಬಾಲಕಿಯರನ್ನು, ಪುರುಷರನ್ನು, ಮಕ್ಕಳನ್ನು ಭೇಟಿ ಮಾಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹಾಗೆಯೇ ಬಾಲ್ಯ ವಿವಾಹ ಪದ್ಧತಿಯನ್ನು ಸಮಾಜದಿಂದ ತೊಡೆದು ಹಾಕುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರಿ ಇಲಾಖಾ ಅಧಿಕಾರಿಗಳನ್ನು ಮತ್ತು ಸರ್ಕಾರೇತರ ಸಂಘಸಂಸ್ಥೆಯ ಅಧಿಕಾರಿಗಳನ್ನು ವ್ಯಾಪ್ತಿಯಲ್ಲಿ ತೆಗೆದುಕೊಳ್ಳಲಾಗಿದೆ.

**೧.೩. ಅಧ್ಯಯನದ ವೈಧಾನಿಕತೆ**

ವ್ಯವಸ್ಥೆಯಲ್ಲಿರುವ ಹಲವು ಜ್ಞಾನಶಾಖೆಗಳಿಗೆ ಹಲವಾರು ಶತಮಾನಗಳ ಇತಿಹಾಸವಿರುವುದನ್ನು ಕಾಣಬಹುದು. ಈ ಜ್ಞಾನಶಾಖೆಗಳೆಲ್ಲವೂ ಮಹಿಳೆಯರನ್ನು ಒಂದು ವಸ್ತುವೆಂದು ಪರಿಗಣಿಸಿವೆಯೇ ಹೊರತು ಒಬ್ಬ ವ್ಯಕ್ತಿಯನ್ನಾಗಿ ಅಲ್ಲ. ಹಾಗಾಗಿ ಮಹಿಳೆಯರ ಬದುಕಿನ ಸಂಕೀರ್ಣತೆಯನ್ನು ಅರಿಯಲು ಸಾಧ್ಯವಾಗಿಲ್ಲ. ಹಾಗಾಗಿ ಮಹಿಳಾ ಬದುಕಿನ ವಿವಿಧ ಆಯಾಮಗಳನ್ನು ಸೂಕ್ಷ್ಮವಾಗಿ ಗ್ರಹಿಸಲು ಅವರ ಖಾಸಗೀ ಬದುಕಿನ ವಿವರಗಳಿಗೆ ಹೋಗುವುದು ಅತ್ಯಗತ್ಯ. ಬದುಕು ಕಂಡ ನೋವು–ನಲಿವು, ಸವಾಲು–ಸಾಧ್ಯತೆಗಳನ್ನು ತಿಳಿಯಲು ವಿಶೇಷವಾಗಿ ಪ್ರಕರಣ ಅಧ್ಯಯನವನ್ನು ಸಂಶೋಧನಾ ಅಧ್ಯಯನದ ಭಾಗವಾಗಿ ಬಳಸಿಕೊಳ್ಳಲಾಗಿದೆ. ಜೀವನದ ಅನುಭವಗಳು ಮಾತಾದಾಗ ಸಂದರ್ಭ ಹಾಗೂ ಘಟನೆಗಳು ಹೆಚ್ಚು ಸ್ಪಷ್ಟತೆಯನ್ನು ಪಡೆಯುವುದರೊಂದಿಗೆ ಅಧ್ಯಯನದ ಹಾದಿ ಸುಗಮವಾಗಲು ಪುಷ್ಠಿ ನೀಡುತ್ತವೆ. ಇದು ಮಹಿಳಾ ಅಧ್ಯಯನದ ಸಂಶೋಧನಾ ವಿಧಾನದಲ್ಲಿ ಕಥನ ಕ್ರಮವಾಗಿ ಬಳಸಲ್ಪಡುತ್ತದೆ. ಅಂದರೆ ಸಂದರ್ಶಿಸಿದ ವ್ಯಕ್ತಿಯ ಅನುಭವಗಳನ್ನು ಅವರದೇ ಮಾತುಗಳಲ್ಲಿ ದಾಖಲಿಸುವ ವಿಧಾನ ಇದಾಗಿದೆ. ಹೀಗೆ ಸಂಶೋಧನಾ ಅಧ್ಯಯನದ ಭಾಗವಾಗಿ ದಾಖಲಿಸಲಾದ ಪ್ರಕರಣ ಅಧ್ಯಯನದಲ್ಲಿ ಕಥನ ಕ್ರಮವನ್ನೇ ಬಹುವಾಗಿ ಅನ್ವಯಿಸಿಕೊಳ್ಳಲಾಗಿದೆ. ಒಟ್ಟಾರೆ ಈ ಮೇಲಿನ ಅಂಶಗಳ ಮೂಲಕ ಬಾಲ್ಯ ವಿವಾಹ ಪದ್ಧತಿಯ ಸಂಕೀರ್ಣ ಸ್ವರೂಪವನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಯನವು ಪ್ರಾಥಮಿಕ ಆಕರವಾದ ಕ್ಷೇತ್ರಕಾರ್ಯ ಮಾಹಿತಿಯನ್ನೇ ಹೆಚ್ಚಾಗಿ ಅವಲಂಬಿಸಿದೆ. ಹೀಗೆ ಕ್ಷೇತ್ರಕಾರ್ಯದ ಮೂಲಕ ಬಾಲ್ಯ ವಿವಾಹಕ್ಕೆ ಒಳಗಾದ ಮಹಿಳೆಯರನ್ನು, ಬಾಲ್ಯ ವಿವಾಹಗಳನ್ನು ಮಾಡಿದ ಕುಟುಂಬ ಸದಸ್ಯರುಗಳನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ವ್ಯವಸ್ಥೆಯಲ್ಲಿನ ವಿಭಿನ್ನ ವಯಸ್ಸು, ವಿಭಿನ್ನ ಜಾತಿ, ಜನಾಂಗ,

ವರ್ಗಗಳಲ್ಲಿ ಬಾಲಕಿಯರ, ಮಹಿಳೆಯರ ಅನುಭವಗಳು ವಿಭಿನ್ನವಾಗಿರುತ್ತವೆ. ಇವುಗಳನ್ನು ಗುರುತಿಸಲು ಸ್ತ್ರೀವಾದಿ ಸಂಶೋಧನಾ ವಿಧಾನಗಳು ಸಹಕಾರಿಯಾಗಿರುತ್ತವೆ. ಈ ಸಂದರ್ಭದಲ್ಲಿ ಸಂದರ್ಶನ, ಅವಲೋಕನ, ಪ್ರಶ್ನಾವಳಿ (ರಚಿತ/ಅರಚಿತ) ಮಾದರಿಗಳನ್ನು ಅನುಸರಿಸಲಾಗಿದೆ. ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿಯನ್ನು ಅಂಕಿ ಸಂಖ್ಯೆಗಳಲ್ಲಿ ನಿರ್ದಿಷ್ಟಪಡಿಸಿಕೊಳ್ಳುವುದು ಮತ್ತು ಅವುಗಳನ್ನು ವಸ್ತುನಿಷ್ಠವಾಗಿ ವಿವರಿಸಿಕೊಳ್ಳಲಾಗಿದೆ. ಜೊತೆಗೆ ಕಾಯಿದೆಯ ಕುರಿತ ಅನುಷಂಗಿಕ ಮಾಹಿತಿಯನ್ನು ಪುಸ್ತಕಗಳು, ವರದಿಗಳು, ಲೇಖನಗಳು, ಪತ್ರಿಕೆಗಳು ಮತ್ತು ಅಂತರ್ಜಾಲದ ಮೂಲಕ ಸಂಗ್ರಹಿಸಲಾಗಿದೆ. ಈ ಎಲ್ಲಾ ಮಾಹಿತಿಗಳನ್ನು ಗುಣಾತ್ಮಕ ಮತ್ತು ಪರಿಮಾಣಾತ್ಮಕ ಸಂಶೋಧನಾ ವಿಧಾನಗಳನ್ನು ಮತ್ತು ಲೈಂಗಿಕತಾವಾದಿಯಲ್ಲದ ಸಂಶೊಧನಾ ವಿಧಾನವನ್ನು ಅವಳವಡಿಸಿಕೊಳ್ಳುವುದರ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ೧.೪. ಅಧ್ಯಯನದ ಸ್ವರೂಪ

ಈ ಮಹಾಪ್ರಬಂಧವು ಒಟ್ಟು ಹತ್ತು ಅಧ್ಯಾಯಗಳನ್ನು ಒಳಗೊಂಡಿದ್ದು, ಈ ಕೆಳಗಿನಂತೆ ಅವುಗಳ ಸ್ವರೂಪವನ್ನು ಸಂಕ್ಷಿಪ್ತಗೊಳಿಸಲಾಗಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆಯನ್ನು ಹಾಗೆಯೇ ಅಧ್ಯಯನದ ಸ್ವರೂಪವನ್ನು ಸ್ಥೂಲವಾಗಿ ವಿವರಿಸಲಾಗಿದೆ.

ಎರಡನೆಯ ಅಧ್ಯಾಯ ಅಧ್ಯಯನಗಳ ತಾತ್ವಿಕ ಸಮೀಕ್ಷೆಯನ್ನು ನಡೆಸುತ್ತದೆ. ಈ ಅಧ್ಯಾಯದಲ್ಲಿ ಬಾಲ್ಯ ವಿವಾಹಕ್ಕೆ ಸಂಬಂಧಿಸಿದಂತೆ ಇದುವರೆಗೆ ನಡೆದಿರುವ ಅಧ್ಯಯನಗಳು, ವರದಿಗಳು, ಪ್ರಕಟಗೊಂಡಿರುವ ಕೃತಿಗಳು, ಲೇಖನಗಳು, ದಿನಪತ್ರಿಕೆಗಳು, ಈಗಾಗಲೇ ಮಂಡನೆಗೊಂಡ ಸಂಶೋಧನೆಗಳನ್ನು ವಿಮರ್ಶಾತ್ಮಕವಾಗಿ ಸಮೀಕ್ಷೆಗೆ ಒಳಪಡಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಬಾಲ್ಯ ವಿವಾಹ ಪದ್ಧತಿಯ ಚಾರಿತ್ರಿಕ ಹಿನ್ನೆಲೆಯನ್ನು ಪರಿಶೀಲಿಸಲಾಗಿದೆ. ಯಾವುದೇ ಮಹಿಳಾ ಸಂಬಂಧಿ ವಿಷಯಕ್ಕೆ ತನ್ನದೇ ಆದ ಚರಿತ್ರೆಯ ಹಿನ್ನೆಲೆ ಇರುತ್ತದೆ. ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸದ ಹೊರತು, ವರ್ತಮಾನದ ಜೊತೆಗೆ ವಿಷಯದ ಮುನ್ನೋಟಗಳನ್ನು ಗ್ರಹಿಸುವುದು ಕಷ್ಟಸಾಧ್ಯ. ಹಾಗಾಗಿ ಬಾಲ್ಯ ವಿವಾಹಕ್ಕೆ ತನ್ನದೇ ಆದಂತಹ ಚಾರಿತ್ರಿಕ ಹಿನ್ನೆಲೆ ಇರುವುದು ಕಂಡುಬರುತ್ತದೆ. ಇವು ವರ್ತಮಾನದ ಸಂಗತಿಗಳಿಗೆ ಬಹುಮುಖ್ಯವಾಗುತ್ತವೆ. ಈ ನೆಲೆಯಲ್ಲಿ ಬಾಲ್ಯ ವಿವಾಹದ ಕುರಿತಾದ ಚಾರಿತ್ರಿಕ ಅಂಶಗಳನ್ನು ಹಿನ್ನೆಲೆಯಾಗಿ ಗುರುತಿಸಿಕೊಳ್ಳುವುದು ಅಗತ್ಯವಾಗಿದೆ. ಹಾಗಾಗಿ ಈ ಅಧ್ಯಾಯದಲ್ಲಿ ಬಾಲ್ಯ ವಿವಾಹ ಪದ್ಧತಿಯ ಚಾರಿತ್ರಿಕ ಅಂಶಗಳನ್ನು ವಿವರಿಸಿಕೊಳ್ಳಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬಾಲ್ಯ ವಿವಾಹ ಪದ್ಧತಿಯ ಜಾಗತಿಕದಿಂದ ಸ್ಥಳೀಯ ನೆಲೆಗಳವರೆಗೆ ಹಬ್ಬಿಕೊಂಡ ವಿವರಗಳನ್ನು ಸಂಖ್ಯಾತ್ಮಕ ನೆಲೆಯಲ್ಲಿ ಪರಿಶೀಲಿಸಲಾಗಿದೆ. ಬಾಲ್ಯ

ವಿವಾಹವು ಕೇವಲ ಒಂದು ರಾಜ್ಯ, ದೇಶಕ್ಕೆ ಸೀಮಿತವಾದುದಲ್ಲ, ಬದಲಾಗಿ ಇದು ಪ್ರಪಂಚದಾದ್ಯಂತ ಕಂಡುಬರುವ ಸಾಮಾಜಿಕ ಪಿಡುಗಾಗಿದೆ. ಹಾಗಾಗಿ ಬಾಲ್ಯ ವಿವಾಹ ಪದ್ಧತಿ ಅಂತರಾಷ್ಟ್ರೀಯ ಮಟ್ಟದಲ್ಲಿ ಯಾವ ಬಗೆಯಲ್ಲಿ ರೂಢಿಯಲ್ಲಿದೆ. ಮುಖ್ಯವಾಗಿ ಯಾವ ಯಾವ ದೇಶಗಳಲ್ಲಿ ಬಾಲ್ಯ ವಿವಾಹ ಪದ್ಧತಿಗಳ ಪ್ರಮಾಣ ಎಷ್ಟಿದೆ ಎಂಬುದನ್ನು ಅಂಕಿ ಸಂಖ್ಯೆಗಳ ಆಧಾರದಲ್ಲಿ ವಿವರಿಸಲಾಗಿದೆ. ಹಾಗೆಯೇ ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಬಾಲ್ಯ ವಿವಾಹಗಳ ಪ್ರಮಾಣ ಎಷ್ಟಿದೆ ಎಂಬುದನ್ನು ಅಂಕಿ ಸಂಖ್ಯೆಗಳ ಮೂಲಕ ವಿವರಿಸಿಕೊಳ್ಳಲಾಗಿದೆ.

ಐದನೆಯ. ಅಧ್ಯಾಯದಲ್ಲಿ ಬಾಲ್ಯ ವಿವಾಹ ಪದ್ಧತಿಯ ಪರಿಣಾಮಗಳ ಶೋಧವನ್ನು ನಡೆಸಲಾಗಿದೆ. ಬಾಲ್ಯ ವಿವಾಹದಿಂದಾಗುವ ಪರಿಣಾಮಗಳು ತುಂಬಾ ಸಂಕೀರ್ಣವೂ ಮತ್ತು ಭಯಾನಕವೂ ಆಗಿವೆ. ಮುಖ್ಯವಾಗಿ ಬಾಲ್ಯ ವಿವಾಹವು ಮಕ್ಕಳ ಬೆಳವಣಿಗೆಯನ್ನು ಅಂದರೆ ದೈಹಿಕ ಮತ್ತು ಮಾನಸಿಕ ಬೆಳವಣಿಗೆಯನ್ನು ಬಾಲ್ಯದಲ್ಲಿಯೇ ಕುಂಠಿತಗೊಳಿಸುತ್ತದೆ. ಜೊತೆಗೆ ಸ್ವಾಭಾವಿಕವಾಗಿ ಮಕ್ಕಳ ಹಕ್ಕುಗಳನ್ನು ಕಿತ್ತುಕೊಳ್ಳುತ್ತದೆ. ಹೀಗಾಗುವುದರಿಂದ ಇದು ಮಾನವ ಹಕ್ಕುಗಳಲ್ಲಿ ತಿಳಿಸಿರುವಂತೆ ಮಕ್ಕಳ ಹಕ್ಕುಗಳಿಗೂ ಧಕ್ಕೆಯನ್ನುಂಟುಮಾಡುತ್ತಿದೆ. ಕುಟುಂಬದಲ್ಲಿನ ಹಿರಿಯರು ಆದಷ್ಟು ಬೇಗ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳುವುದರ ಸಲುವಾಗಿ ತಮ್ಮ ಮಕ್ಕಳು ಚಿಕ್ಕವರಿದ್ದಾರೆ ಎಂಬುದನ್ನೂ ಯೋಚಿಸದೆ ಬಹು ಬೇಗನೇ ವಿವಾಹ ಬಂಧನಕ್ಕೆ ತಳ್ಳುತ್ತಾರೆ. ಈ ಒತ್ತಡಗಳಿಗೆ ಒಳಗಾದ ಮಕ್ಕಳು ಯಾವ ರೀತಿಯ ಜೀವನವನ್ನು ನಡೆಸುತ್ತಿದ್ದಾರೆ ಅಥವಾ ಅವರಿಗೆ ಆಗುತ್ತಿರುವ ತೊಂದರೆಗಳಾವುವು? ಅಥವಾ ಹಾಗೆ ತೊಂದರೆಗಳಾಗುತ್ತಿದ್ದರೆ ಅದಕ್ಕೆ ಕಾರಣಗಳೇನು? ಎಂಬುದನ್ನು ಯೋಚಿಸಲೂ ತಂದೆ ತಾಯಂದಿರು ಮುಂದಾಗುವುದಿಲ್ಲ. ವಾಸ್ತವದಲ್ಲಿ ಬಾಲ್ಯ ವಿವಾಹಕ್ಕೆ ಒಳಗಾದ ಮಕ್ಕಳು ಅನೇಕ ಬಗೆಯ ತೊಂದರೆಗಳನ್ನು ಅನುಭವಿಸುತ್ತಿದ್ದಾರೆ. ಅದರಲ್ಲಿಯೂ ಮುಖ್ಯವಾಗಿ ಹೆಣ್ಣು ಮಕ್ಕಳು ಗಂಡು ಮಕ್ಕಳಿಗಿಂತ ಹೆಚ್ಚಿನ ರೀತಿಯಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಈ ಅಧ್ಯಾಯವು ಮುಖ್ಯವಾಗಿ ಕ್ಷೇತ್ರಕಾರ್ಯದ ಮಾಹಿತಿಯನ್ನೇ ಅಧಿಕವಾಗಿ ಅವಲಂಬಿಸಿದೆ. ಬಾಲ್ಯ ವಿವಾಹಕ್ಕೆ ಒಳಗಾದಂತಹ ಮಹಿಳೆಯರನ್ನು ನೇರವಾಗಿ ಸಂದರ್ಶಿಸಿ ಅವರಿಂದ ಸಂಗ್ರಹಿಸಿದ ಮಾಹಿತಿಯನ್ನು ಸ್ತ್ರೀವಾದಿ ನೆಲೆಯಲ್ಲಿ ವಿವರಿಸಲಾಗಿದೆ. ಹೀಗೆ ವಿವರಿಸುವುದರ ಮೂಲಕ ಬಾಲ್ಯ ವಿವಾಹ ಎಂಬುದು ಮಕ್ಕಳ ಅದರಲ್ಲೂ ಹೆಣ್ಣುಮಕ್ಕಳ ಜೀವನಕ್ಕೆ ಎಷ್ಟೊಂದು ಮಾರಕವಾಗಿದೆ ಎಂಬುದನ್ನು ತಿಳಿಸಲಾಗಿದೆ. ಹಾಗೆಯೇ ಪುರುಷ ಪ್ರಧಾನ ವ್ಯವಸ್ಥೆಯ ರೋಗಗ್ರಸ್ಥ ಮನಃಸ್ಥಿತಿಯನ್ನು ತಿಳಿಸುವ ನಿಟ್ಟಿನಲ್ಲಿ ಅಧ್ಯಾಯವನ್ನು ರೂಪಿಸಲಾಗಿದೆ.

ಅಧ್ಯಾಯ ಆರರಲ್ಲಿ ಬಾಲ್ಯ ವಿವಾಹ ಪದ್ಧತಿಯನ್ನು ಮಾನವ ಹಕ್ಕುಗಳ ನೆಲೆಯಲ್ಲಿ ಪರಿಶೀಲಿಸಲಾಗಿದೆ. ಈ ಅಧ್ಯಾಯದಲ್ಲಿ ಬಾಲ್ಯ ವಿವಾಹಗಳು ಮಕ್ಕಳ ಹಕ್ಕುಗಳನ್ನು ಹರಣ ಮಾಡುತ್ತಿವೆಯಷ್ಟಲ್ಲದೆ ಮಾನವ ಹಕ್ಕುಗಳ ಉಲ್ಲಂಘನೆಗೂ ಕಾರಣವಾಗಿವೆ. ಹಾಗಾಗಿ ಮಾನವ ಹಕ್ಕುಗಳು ಮಕ್ಕಳ ಹಕ್ಕುಗಳನ್ನು ಹೇಗೆ ಪರಿಭಾವಿಸಿವೆ, ಹಾಗೆಯೇ ಯಾವ ಅಧಿನಿಮಗಳಡಿ

ಮಕ್ಕಳ ಹಕ್ಕುಗಳು ಗುರುತಿಸಿಕೊಳ್ಳುತ್ತವೆ ಎಂಬುದನ್ನು ಮತ್ತು ಅವುಗಳನ್ನು ಬಾಲ್ಯ ವಿವಾಹಗಳು ಹೇಗೆ ಉಲ್ಲಂಘಿಸಿವೆ ಎಂಬ ಅಂಶಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ ಏಳರಲ್ಲಿ ಬಾಲ್ಯ ವಿವಾಹ ನಿಷೇಧಕ್ಕೆ ಸಂಬಂಧಿಸಿದ ಕಾನೂನು ಕ್ರಮಗಳ ಕುರಿತು ಚರ್ಚಿಸಲಾಗಿದೆ. ಸಮಾಜದಲ್ಲಿ ಬೇರೂರಿರುವಂತಹ ಬಾಲ್ಯ ವಿವಾಹ ಪದ್ಧತಿಯನ್ನು ಸಂಪೂರ್ಣವಾಗಿ ನಿಷೇಧಿಸಲು ಹಲವಾರು ಕಾನೂನಾತ್ಮಕ ಪ್ರಯತ್ನಗಳು ನಡೆದವು. ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದಂತಹ ಪ್ರಯತ್ನಗಳ ಫಲವಾಗಿ ಇಂದು ಬಾಲ್ಯ ವಿವಾಹ ನಿಷೇಧ ಕಾಯ್ದೆ ಜಾರಿಯಲ್ಲಿದೆ. ಬಾಲ್ಯ ವಿವಾಹ ಪದ್ಧತಿಯನ್ನು ತಡೆಯುವಲ್ಲಿ ನಡೆದಂತಹ ಶಾಸನಾತ್ಮಕ ಪ್ರಯತ್ನಗಳನ್ನು ಮೂರು ನೆಲೆಗಳಲ್ಲಿ ಗುರುತಿಸಲಾಗಿದೆ. ೧. ವಸಾಹತು ಸಂದರ್ಭ ೨. ವಸಾಹತೊತ್ತರ ಸಂದರ್ಭ ೩. ಆಧುನಿಕೋತ್ತರ ಸಂದರ್ಭ ಈ ಮೂರೂ ಕಾಲಘಟ್ಟಗಳ ಸಂದರ್ಭಗಳಲ್ಲಿ ಬಾಲ್ಯ ವಿವಾಹ ಪದ್ಧತಿಯನ್ನು ನಿರ್ಮೂಲನೆ ಮಾಡಲು ನಡೆದ ಶಾಸನಾತ್ಮಕ ಪ್ರಯತ್ನಗಳನ್ನು ವಿವರಿಸಲಾಗಿದೆ.

ಅಧ್ಯಾಯ ಎಂಟರಲ್ಲಿ ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸಲು ಸರ್ಕಾರ ತೆಗೆದು ಕೊಂಡ ಕ್ರಮಗಳನ್ನು ಮತ್ತು ಖಾಸಗೀ ಸಂಸ್ಥೆಗಳು ನಡೆಸಿದ ಪ್ರಯತ್ನಗಳನ್ನು ಪರಿಶೀಲಿಸಲಾಗಿದೆ. ಸ್ತ್ರೀ–ಪುರುಷರಿಬ್ಬರಿಗೂ ಕಾನೂನಿನ ಅರಿವಿರಬೇಕು. ಅಂದಾಗ ಮಾತ್ರ ಕಾನೂನು ಸಮರ್ಥವಾಗಿ ಜಾರಿಗೊಳ್ಳುತ್ತದೆ. ಬಾಲ್ಯ ವಿವಾಹ ನಿಷೇಧ ಕಾನೂನಿನ ಅರಿವು ಮೂಡಿಸಲು ಸರ್ಕಾರಿ ಇಲಾಖೆಗಳು ಮತ್ತು ಸರ್ಕಾರೇತರ ಸಂಸ್ಥೆಗಳು ಕೈಗೊಂಡಿರುವ ಕ್ರಮಗಳಾವುವು ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಹಾಗೆಯೇ ಸ್ತ್ರೀ ಪುರುಷರ ನಡುವಿನ ಸಮಾನತೆಯ ಅರಿವನ್ನು ಮೂಡಿಸುವಲ್ಲಿ ಮತ್ತು ಬಾಲ್ಯ ವಿವಾಹ ನಿಷೇಧ ಕಾನೂನಿನ ಜಾರಿಯಲ್ಲಿ ಶಿಕ್ಷಣ, ಮಾಧ್ಯಮ, ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳು, ನ್ಯಾಯಾಂಗ ವ್ಯವಸ್ಥೆ ಇವುಗಳ ಪಾತ್ರ ಬಹು ದೊಡ್ಡದಿದೆ. ಇವುಗಳು ಯಾವ ಬಗೆಯಲ್ಲಿ ಕಾರ್ಯ ನಿರ್ವಹಿಸಿದರೆ ಬಾಲ್ಯವಿವಾಹಗಳನ್ನು ತಡೆಯಬಹುದು ಮತ್ತು ಆ ಮೂಲಕ ಮಹಿಳೆಯರ ಅಭಿವೃದ್ಧಿ ಸಾಧ್ಯವಾಗುತ್ತದೆ ಎಂಬುದನ್ನು ವಿವರಿಸಲಾಗಿದೆ.

ಅಧ್ಯಾಯ ಒಂಬತ್ತರಲ್ಲಿ ಬಾಲ್ಯ ವಿವಾಹ ನಿಷೇಧ ಕಾಯಿದೆಯ ಅನುಷ್ಠಾನ ಸಂದರ್ಭದಲ್ಲಿ ಎದುರಿಸುವ ತೊಡಕುಗಳನ್ನು ಸವಿಸ್ತಾರವಾಗಿ ಪ್ರಕರಣಗಳ ಅಧ್ಯಯನಗಳ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಬಾಲ್ಯ ವಿವಾಹ ನಿಷೇಧ ಕಾನೂನು ರೂಪುಗೊಂಡು ಜಾರಿಯಾದ ನಂತರ ಅದನ್ನು ಅನುಷ್ಠಾನಕ್ಕೆ ತರುವ ಪ್ರಕ್ರಿಯೆಯಲ್ಲಿ ಹಲವಾರು ತೊಡಕುಗಳು ಎದುರಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಈ ಕಾನೂನಿನ ಸಾಫಲ್ಯತೆ 'ಅಥವಾ ವಿಫಲತೆಯು ಮಹಿಳೆಯರು ಈ ಕಾನೂನನ್ನು ಎಷ್ಟು ಸಮರ್ಥವಾಗಿ ಬಳಸಿಕೊಂಡಿದ್ದಾರೆ ಎಂಬುದನ್ನು ಆಧರಿಸಿದೆ. ಏಕೆಂದರೆ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಎರಡನೆಯ ದರ್ಜೆಯವಳಾಗಿ ಜೀವಿಸುತ್ತಿರುವುದರಿಂದಾಗಿ ಹಲವಾರು ನಿರ್ಬಂಧಗಳಿಗೆ

ಒಳಪಟ್ಟಿದ್ದಾಳೆ ಮತ್ತು ಈ ನಿರ್ಬಂಧಗಳನ್ನು ಮೀರಿ/ಧಿಕ್ಕರಿಸಿ ತಮ್ಮ ಹಕ್ಕುಗಳನ್ನು ಪಡೆಯಲು ಕಾನೂನಾತ್ಮಕವಾಗಿ ಮುನ್ನಡೆದರೆ ವ್ಯವಸ್ಥೆಯಲ್ಲಿ ಹಲವಾರು ಸಾಮಾಜಿಕ ಮತ್ತು ಕಾನೂನಾತ್ಮಕ ತೊಡಕುಗಳನ್ನು ಎದುರಿಸಬೇಕಾದ ಅನಿವಾರ್ಯತೆಗೆ ಒಳಗಾಗಿದ್ದಾರೆ. ಆದರೂ ಈ ಎಲ್ಲ ಬಗೆಯ ತೊಡಕುಗಳನ್ನು ಎದುರಿಸಿಯೂ ಮಹಿಳೆಯರು ಬಾಲ್ಯ ವಿವಾಹ ನಿಷೇಧ ಕಾನೂನಿನ ಅರಿವು ಪಡೆಯುವುದರ ಮೂಲಕ ಅದನ್ನು ನಿರ್ಮೂಲನೆ ಮಾಡುವ ಕಾರ್ಯದಲ್ಲಿ ತೊಡಗಬೇಕಾದ ಅನಿವಾರ್ಯತೆ ಇದೆ. ಆದರೆ ಮಹಿಳೆಯರು ಸಾಮಾಜಿಕ, ಕೌಟುಂಬಿಕ ಒತ್ತಡಗಳಿಗೆ ಮಣಿದು ಸಂವಿಧಾನ ಬದ್ಧವಾದ ಯಾವ ಕಾನೂನುಗಳ ಬಗೆಗೂ ಅರಿವನ್ನು ಹೊಂದುವುದರಿಂದ ದೂರವಿದ್ದಾರೆ. ಹಾಗಾಗಿಯೇ ಬಾಲ್ಯ ವಿವಾಹಗಳಿಗೆ ಹೆಣ್ಣುಮಕ್ಕಳು ಬಹು ಬೇಗನೇ ಒಳಗಾಗುತ್ತಿದ್ದಾರೆ. ಇವುಗಳ ಜೊತೆಗೆ ಕಾನೂನು ನಿರ್ವಹಿಸುವವರು ಮತ್ತು ಜನರ ನಡುವೆ ಒಂದು ದೊಡ್ಡ ಕಂದಕ ಏರ್ಪಟ್ಟಿದೆ. ಹಾಗಾಗಿ ಸಂವಿಧಾನ ಬದ್ಧವಾದ ಯಾವುದೇ ಕಾನೂನು ಜನರನ್ನು ತಲುಪಲು ಸಾಧ್ಯವಾಗುತ್ತಿಲ್ಲ. ಮುಖ್ಯವಾಗಿ ಬಾಲ್ಯ ವಿವಾಹ ನಿಷೇಧ ಕಾನೂನು ಸರಿಯಾಗಿ ಅನುಷ್ಠಾನಕ್ಕೆ ತರಲು ಸರ್ಕಾರಿ ಇಲಾಖೆಗಳು ಮತ್ತು ಸರ್ಕಾರೇತ ಸಂಘಸಂಸ್ಥೆಗಳು ಹಲವಾರು ಪ್ರಯತ್ನಗಳನ್ನು ಮಾಡುತ್ತಲೇ ಇವೆ. ಆದರೂ ಸಂಪೂರ್ಣವಾಗಿ ಸಫಲವಾಗಿಲ್ಲ. ಏಕೆಂದರೆ ಅನುಷ್ಠಾನದ ಸಂದರ್ಭದಲ್ಲಿ ಹಲವು ತೊಡಕುಗಳು ಎದುರಾಗುತ್ತಿವೆ. ಅಧ್ಯಯನ ವಿಷಯದ ಕ್ಷೇತ್ರವ್ಯಾಪ್ತಿಯಾದ ಬಳ್ಳಾರಿ, ಕೊಪ್ಪಳ, ಗದಗ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಕಂಡುಬಂದಿರುವ ಬಾಲ್ಯ ವಿವಾಹ ಪ್ರಕರಣಗಳನ್ನು ಕ್ಷೇತ್ರಾಧ್ಯಯನದ ಮೂಲಕ ವಕ್ತೃಗಳನ್ನು ಸಂದರ್ಶಿಸಿ, ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ ಬಾಲ್ಯ ವಿವಾಹ ನಿಷೇಧ ಕಾನೂನಿನ ಅನುಷ್ಠಾನದ ಸಂದರ್ಭದಲ್ಲಿನ ತೊಡಕುಗಳನ್ನು ಎಂಟು ಮುಖ್ಯ ಭಾಗಗಳನ್ನಾಗಿ ಅಂದರೆ ೧. ಕೌಟುಂಬಿಕ ತೊಡಕುಗಳು ೨. ಸಾಮಾಜಿಕ ತೊಡಕುಗಳು ೩. ಆರ್ಥಿಕ ತೊಡಕುಗಳು ೪. ಸಾಂಪ್ರದಾಯಿಕ ನಂಬಿಕೆಗಳು ೫. ವಲಸೆ ಕಾರಣಗಳು ೬. ಶೈಕ್ಷಣಿಕ ವ್ಯವಸ್ಥೆಯಲ್ಲಿನ ಕೊರತೆಗಳು ೭. ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳ ಅನುಷ್ಠಾನದ ಕ್ರಮಗಳು : ಎದುರಾದ ತೊಡಕುಗಳು ೮. ಇತರೆ ತೊಡಕುಗಳು ಎಂಬುದಾಗಿ ಗುರುತಿಸಿಕೊಂಡು ಪ್ರತಿಯೊಂದನ್ನೂ ಸ್ತ್ರೀವಾದಿ ನೆಲೆಯಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಹತ್ತರಲ್ಲಿ ಬಾಲ್ಯ ವಿವಾಹ ಪದ್ಧತಿಯ ಸಮಸ್ಯೆಯ ಸಂಕೀರ್ಣತೆಗಳನ್ನು ಮತ್ತು ಪರ್ಯಾಯ ಶೋಧಗಳನ್ನು ಹಿಡಿದಿಡಲು ಪ್ರಯತ್ನಿಸಲಾಗಿದೆ. ಈ ಅಧ್ಯಾಯದಲ್ಲಿ ಸಾಂಪ್ರದಾಯಿಕ ಸಮಾಜದಲ್ಲಿನ ಮಹಿಳೆಯರು ಎದುರಿಸುತ್ತಿರುವ ಇಕ್ಕಟ್ಟುಗಳನ್ನು ಮತ್ತು ಅವುಗಳ ಸ್ವರೂಪಗಳನ್ನು ತಿಳಿಸಲಾಗಿದೆ. ಹಾಗೆಯೇ ಈ ಇಕ್ಕಟ್ಟುಗಳನ್ನು ನಿವಾರಿಸುವ ನಿಟ್ಟಿನಲ್ಲಿ ಬಾಲ್ಯ ವಿವಾಹ ನಿಷೇಧ ಕಾಯಿದೆಯು ಪ್ರಸ್ತುತ ಮಹಿಳೆಯರ ಬದುಕಿನಲ್ಲಿ ಆಶಾದಾಯಕ ನಿರೀಕ್ಷೆಗಳನ್ನು ಮೂಡಿಸುತ್ತದೆ. ಹೀಗೆ ಹೆಣ್ಣುಮಕ್ಕಳು ಬಾಲ್ಯ ವಿವಾಹದಿಂದ ಹೊರಬರಲು ಯಾವ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬ ಅಂಶಗಳನ್ನು ಸಂಶೋಧನಾ ಅಧ್ಯಯನದ ಫಲಿತಗಳನ್ನಾಗಿ ಗುರುತಿಸಲಾಗಿದೆ.

## ಅಧ್ಯಾಯ ಎರಡು

# ಅಧ್ಯಯನಗಳ ತಾತ್ವಿಕ ಸಮೀಕ್ಷೆ

ಬಾಲ್ಯ ವಿವಾಹ ಪದ್ಧತಿಯು ಸಮಾಜದ ಸ್ವಸ್ಥತೆಗೆ ಬಹು ದೊಡ್ಡ ಮಾರಕವನ್ನುಂಟು ಮಾಡುವಂತಹದ್ದಾಗಿದೆ. ಇದರ ಕಾರಣವಾಗಿ ಹೆಣ್ಣುಮಕ್ಕಳು ಬಹು ಸಮಸ್ಯೆಗಳಿಗೆ ಒಳಗಾಗುತ್ತಿರುವುದು ವಾಸ್ತವ ಸಂಗತಿ. ಶತಮಾನಗಳ ಕಾಲದಿಂದಲೂ ಮಹಿಳೆಯರ ಎಲ್ಲಾ ಸಮಸ್ಯೆಗಳಿಗೆ ಕುಟುಂಬವೇ ಮೂಲ ಕಾರಣವಾಗಿದೆ. ಇದಕ್ಕೆ ಪ್ರೇರಣೆಯೆಂಬಂತೆ ವಿವಾಹ ಸಂಸ್ಥೆಯು ಹುಟ್ಟಿಕೊಂಡಿದೆ. ಅಂದರೆ ವಿವಾಹ ಪದ್ಧತಿಯೇ ಕುಟುಂಬದ ರಚನೆಗೆ ಮೂಲ ಕಾರಣವಾಗಿದೆ. ವಿವಾಹದ ಕಾರಣವಾಗಿ ಜಾತಿ ಸಮುದಾಯಗಳಲ್ಲಿನ ಪಿತೃಪ್ರಧಾನ ಮೌಲ್ಯಗಳು ಗಟ್ಟಿಗೊಳ್ಳುತ್ತಿವೆ. ವಿವಾಹ ಎಂಬ ಸಂಸ್ಥೆಗೆ ಸ್ತ್ರೀ ಪುರುಷರಿಬ್ಬರಿಗೂ ಕಡ್ಡಾಯವಾಗಿ ಒಳಗೊಳ್ಳಬೇಕು. ಇದೇ ಹಲವು ಕುಟುಂಬಗಳಲ್ಲಿ ಆತಂಕವನ್ನುಂಟುಮಾಡುತ್ತಿದೆ. ವ್ಯವಸ್ಥೆಯಲ್ಲಿ ಮಹಿಳೆಯರ ಕುರಿತಾಗಿ ಇರುವ ಅಭಿಪ್ರಾಯಗಳು, ಅವರಿಗಾಗಿಯೇ ರಚನೆಗೊಂಡಿರುವ ಮೌಲ್ಯಗಳ ಕಾರಣವಾಗಿ ಕುಟುಂಬದ ಹೊರಗೇ ಉಳಿಯುವವಳಾಗಿದ್ದಾಳೆ. ಹೆಣ್ಣು ಮನೆಯಲ್ಲಿದ್ದಷ್ಟು ದಿನ ಕುಟುಂಬಕ್ಕೆ ಹೊರೆ ಎಂಬ ಕಾರಣಕ್ಕಾಗಿ ಆ ಹೆಣ್ಣುಮಕ್ಕಳಿಗೆ ಮದುವೆ ಮಾಡಿಕೊಡುವುದೇ ಬಹು ದೊಡ್ಡ ಜವಾಬ್ದಾರಿಯಾಗಿರುತ್ತದೆ. ತಮ್ಮ ಜವಾಬ್ದಾರಿಗಳನ್ನು ಕಳೆದುಕೊಳ್ಳುವ ಕಾರಣದಿಂದಾಗಿ ಕುಟುಂಬದಲ್ಲಿನ ತಂದೆ-ತಾಯಂದಿರು ತಮ್ಮ ಮಕ್ಕಳಿಗೆ ಬಹು ಬೇಗನೇ ವಿವಾಹ ಬಂಧನಕ್ಕೆ ಒಳಪಡಿಸುತ್ತಿದ್ದಾರೆ. ಹೀಗೆ ವಿವಾಹ ಬಂಧನಕ್ಕೆ ಒಳಗಾದಂತಹ ಅಪ್ರಾಪ್ತ ವಯಸ್ಸಿನ ಮಕ್ಕಳು ಹಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಬಾಲ್ಯ ವಿವಾಹ ಪದ್ಧತಿಯನ್ನು ತೊಡೆದುಹಾಕಲು ಕಾನೂನು ಜಾರಿಯಾಗಿದೆಯಾದರೂ, ಬಾಲ್ಯವಿವಾಹಗಳು ನಡೆಯುತ್ತಲೇ ಇವೆ. ಈ ಬಗೆಯ ಬಾಲ್ಯ ವಿವಾಹಗಳನ್ನು ತಡೆಯಲು ಸರ್ಕಾರಿ ಇಲಾಖೆಗಳು ಮತ್ತು ಸರ್ಕಾರೇತರ ಸಂಘಸಂಸ್ಥೆಗಳು ಯಾವ ಬಗೆಯ ಕ್ರಮಗಳನ್ನು ಕೈಗೊಂಡಿದ್ದಾರೆ, ಹಾಗೆಯೇ ಈ ವಿಷಯದ ಕುರಿತು ಸಮಗ್ರ ಸಂಶೋಧನೆಗಳು ನಡೆದಿವೆಯೇ ಎಂಬುದನ್ನು

ತಿಳಿಯುವುದು ಉತ್ತಮವೆನಿಸುತ್ತದೆ. ಏಕೆಂದರೆ ಬಾಲ್ಯ ವಿವಾಹದ ಕುರಿತಂತೆ ಈಗಾಗಲೆ ನಡೆದಿರುವ ಅಧ್ಯಯನಗಳ ಮೂಲಕ ಕಾಯಿದೆಯು ಜಾರಿಯಲ್ಲಿರುವುದರ ಪ್ರಸ್ತುತತೆಯನ್ನು ಕಂಡುಕೊಳ್ಳಲು ಸಾಧ್ಯ. ಹಾಗಾಗಿ ಈ ಅಧ್ಯಾಯದಲ್ಲಿ ಪ್ರಮುಖವಾಗಿ ಬಾಲ್ಯ ವಿವಾಹಕ್ಕೆ ಸಂಬಂಧಿಸಿದಂತೆ ಈಗಾಗಲೇ ನಡೆದ ಅಧ್ಯಯನಗಳು, ವರದಿಗಳು, ವಿಮರ್ಶೆಗಳ ಬಗ್ಗೆ ಪರಿಶೀಲಿಸಲಾಗಿದೆ. ಈ ಮೂಲಕ ಬಾಲ್ಯ ವಿವಾಹದ ಕುರಿತಂತೆ ಪ್ರಸ್ತಾಪಿತವಾಗಿರುವ ಸಂಗತಿಗಳಾವುವು? ಬಾಲ್ಯ ವಿವಾಹದ ಕುರಿತಾದ ವಿಮರ್ಶೆಗಳೇನು? ಕಾಯಿದೆಯಲ್ಲಿರುವ ನ್ಯೂನ್ಯತೆಗಳೇನು?, ಅಧ್ಯಯನದ ಮಿತಿಗಳೇನು? ಆ ಮಿತಿಗಳನ್ನು ಸರಿಪಡಿಸಿಕೊಳ್ಳಲು ಕೊಡಬಹುದಾದ ಸಲಹೆಗಳು, ಆ ಮೂಲಕ ಪ್ರಸ್ತುತ ಅಧ್ಯಯನಕ್ಕೆ ದೊರೆಯಬಹುದಾದ ಒಳಹುಗಳು, ಸ್ಪಷ್ಟತೆಗಳು ಮತ್ತು ರೂಪಿಸಿಕೊಳ್ಳಬಹುದಾದ ಪ್ರಶ್ನೆಗಳು ಹಾಗೂ ಚೌಕಟ್ಟನ್ನು ಸ್ಪಷ್ಟಪಡಿಸಿಕೊಳ್ಳುವ ನಿಟ್ಟಿನಲ್ಲಿ ಇಲ್ಲಿನ ಅಧ್ಯಯನಗಳ ಸಂಕ್ಷಿಪ್ತ ವಿಶ್ಲೇಷಣೆ ಮತ್ತು ಮಿತಿಗಳನ್ನು ಗುರುತಿಸಿಕೊಳ್ಳುವಲ್ಲಿ ಸಹಾಯಕವಾಗಲು ಸಮೀಕ್ಷೆಯನ್ನು ನಡೆಸಲಾಗಿದೆ.

ಕರ್ನಾಟಕದ ಸಂದರ್ಭದಲ್ಲಿ ಬಾಲ್ಯ ವಿವಾಹ ಮತ್ತು ಅದರ ನಿಷೇಧಕ್ಕೆ ಸಂಬಂಧಿಸಿ ಜಾರಿಯಲ್ಲಿರುವ ಕಾಯಿದೆಯ ಕುರಿತಂತೆ ಸಮಗ್ರವಾಗಿ ಸಂಶೋಧನಾತ್ಮಕ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು. ಬದಲಾಗಿ ಬಿಡಿ ಲೇಖನಗಳು, ಬಿಡಿ ಬರಹಗಳು ದೊರೆಯುತ್ತವೆ. ಕೆಲವು ಕೃತಿಗಳಲ್ಲಿ ಲಿಂಗತಾರತಮ್ಯದ ನೆಲೆಯಲ್ಲಿ ಬಾಲ್ಯ ವಿವಾಹ ನಿಷೇಧ ಕಾನೂನಿನ ಚೌಕಟ್ಟಿನಲ್ಲಿ ವಿಶ್ಲೇಷಣೆಗೊಳಪಡಿಸಿರುವುದು ಒಂದೆರಡು ಅಧ್ಯಾಯಗಳಲ್ಲಿ ಮಾತ್ರವೆ ಕಂಡುಬರುತ್ತದೆ. ಹಾಗೆಯೇ ಕೆಲವು ಸಂಶೋಧನಾ ಅಧ್ಯಯನಗಳು ನಡೆದಿವೆಯಾದರೂ ಅವು ಸಮಗ್ರವಾಗಿಲ್ಲ. ಹಾಗಾಗಿ ಬಾಲ್ಯ ವಿವಾಹದ ಕುರಿತಂತೆ ಇದುವರೆಗೂ ಬಂದಿರುವ ಅಧ್ಯಯನಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಹೀಗಾಗಿ ಇದುವರೆಗೂ ಅಧ್ಯಯನ ವಿಷಯಕ್ಕೆ ಸಂಬಂಧಿಸಿರುವಂತೆ ದೊರೆತಿರುವ ಎಲ್ಲಾ ಮಾಹಿತಿಯನ್ನು ಕೇಂದ್ರೀಕರಿಸಿಕೊಂಡು ಸಮೀಕ್ಷೆಯನ್ನು ಮಾಡಲಾಗಿದೆ.

ಕರ್ನಾಟಕದಲ್ಲಿ ಬಾಲ್ಯ ವಿವಾಹ ಪದ್ಧತಿಯ ಸ್ಥಿತಿಗತಿಗಳನ್ನು ಅರಿಯಲು ಮತ್ತು ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸುವ ಸಲುವಾಗಿ ಅದರ ಆಗುಹೋಗುಗಳ ಕುರಿತು ಅಧ್ಯಯನ ಮಾಡುವ ಒಂದು ಸಮಿತಿಯನ್ನು ರಚಿಸಲಾಗಿತ್ತು. ಈ ಸಮಿತಿಗೆ ಭಾರತದ ಸುಪ್ರೀಂ ಕೋರ್ಟಿನ ನಿವೃತ್ತ ನ್ಯಾಯಾದೀಶರಾದ ಜಸ್ಟೀಸ್ ಶಿವರಾಜ್ ವಿ. ಪಾಟೀಲ್ ಇವರು ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದರು. ಈ ಸಮಿತಿಯು "Report on prevention of child marriages in the state of Karnataka" ಎಂಬ ಹೆಸರಿನಲ್ಲಿ ದಿನಾಂಕ ೩೦.೦೬.೨೦೧೧ರಂದು ಸರಕಾರಕ್ಕೆ ವರದಿಯನ್ನು ಸಲ್ಲಿಸಿತು. ಈ ಸಮಿತಿಯು ದಿನಾಂಕ ೧೩ನೇ ಜನೇವರಿ ೨೦೧೧ ರಂದು ತನ್ನ ಕಾರ್ಯವನ್ನು ಆರಂಭಿಸಿತು. ಮೊದಲು ಕರ್ನಾಟಕದಲ್ಲಿರುವ ಜಿಲ್ಲೆಗಳಿಗೆ ಭೇಟಿಕೊಟ್ಟು ಅಲ್ಲಿನ ಸ್ಥಿತಿಗತಿಗಳನ್ನು ಅರಿಯಲು ಮುಂದಾಯಿತು. ಈ ಹಿನ್ನೆಲೆಯಲ್ಲಿ ಮೊದಲ

ಜಿಲ್ಲಾಮಟ್ಟದ ಸಮಾವೇಶವನ್ನು ದಿನಾಂಕ ೧೬ ಮತ್ತು ೧೭ನೇ ಫೆಬ್ರವರಿ ೨೦೧೧ರಂದು ಗದಗ, ಬೆಳಗಾಂ ಮತ್ತು ಧಾರವಾಡ ಜಿಲ್ಲೆಗಳನ್ನು ಒಳಗೊಂಡಂತೆ ಧಾರವಾಡದಲ್ಲಿ ಏರ್ಪಡಿಸಲಾಗಿತ್ತು. ಎರಡನೇ ಹಂತದ ಸಮಾವೇಶವನ್ನು ಗುಲ್ಬರ್ಗಾ, ಬೀದರ್, ಮತ್ತು ಯಾದಗಿರಿ ಜಿಲ್ಲೆಗಳನ್ನು ಒಳಗೊಂಡಂತೆ ದಿನಾಂಕ ೨೫ ಮತ್ತು ೨೬ನೇ ಮಾರ್ಚ್ ೨೦೧೧ರಂದು ಗುಲ್ಬರ್ಗಾ ಜಿಲ್ಲೆಯಲ್ಲಿ ಏರ್ಪಡಿಸಲಾಗಿತ್ತು. ಮೂರನೆಯ ಸಮಾವೇಶವನ್ನು ಬಾಗಲಕೋಟೆ ಮತ್ತು ಬಿಜಾಪುರ ಜಿಲ್ಲೆಗಳನ್ನು ಒಳಗೊಂಡಂತೆ ಬಾಗಲಕೋಟೆಯಲ್ಲಿ ದಿನಾಂಕ ೬ ಮತ್ತು ೭ನೇ ಏಪ್ರಿಲ್ ೨೦೧೧ರಂದು ಏರ್ಪಡಿಸಲಾಗಿತ್ತು. ರಾಯಚೂರು ಮತ್ತು ಕೊಪ್ಪಳ ಎರಡು ಜಿಲ್ಲೆಗಳನ್ನು ಒಳಗೊಂಡಂತೆ ನಾಲ್ಕನೆಯ ಸಮಾವೇಶವನ್ನು ೨೦, ೨೧ನೆಯ ಏಪ್ರಿಲ್ ೨೦೧೧ರಂದು ಏರ್ಪಡಿಸಲಾಗಿದೆ. ಐದನೆಯ ಸಮಾವೇಶವನ್ನು ೨೬.೪.೨೦೧೧ರಂದು ಬಳ್ಳಾರಿಯಲ್ಲಿ ಏರ್ಪಡಿಸಲಾಗಿದೆ. ಹಾಗೆಯೇ ೬ನೆಯ ಸಮಾವೇಶವನ್ನು ಮೈಸೂರು, ಮಂಡ್ಯ ಮತ್ತು ಚಾಮರಾಜನಗರ ಜಿಲ್ಲೆಗಳನ್ನು ಒಳಗೊಂಡಂತೆ ದಿನಾಂಕ ೨೮.೦೪.೨೦೧೧ರಂದು ಮೈಸೂರಿನಲ್ಲಿ ಏರ್ಪಡಿಸಲಾಗಿದೆ. ಹೀಗೆ ರಾಜ್ಯದ ಜಿಲ್ಲೆಗಳಲ್ಲಿ ಸಮಾವೇಶಗಳನ್ನು ಏರ್ಪಡಿಸಿ ಬಾಲ್ಯ ವಿವಾಹದ ಕುರಿತಾಗಿ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಇದರ ಜೊತೆಗೆ ಸರ್ಕಾರೇತರ ಸಂಘ ಸಂಸ್ಥೆಗಳಲ್ಲಿನ ಪರಿಣಿತರನ್ನು, ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯುನಿವರ್ಸಿಟಿ, ಬೆಂಗಳೂರು ಇವರುಗಳ ಸಹಕಾರವನ್ನು ಪಡೆದಿದೆ. ಈ ಸಮಾವೇಶಗಳಲ್ಲಿ ಜಿಲ್ಲಾಧಿಕಾರಿಗಳು, ಜಿಲ್ಲಾ ಪಂಚಾಯತ್‌ನ ಮುಖ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು, ಜಿಲ್ಲಾ ನೋಂದಣಾಧಿಕಾರಿಗಳು, ಜಿಲ್ಲಾ ಆರೋಗ್ಯಾಧಿಕಾರಿಗಳು, ಸಾರ್ವಜನಿಕ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಸರ್ವಶಿಕ್ಷಣ ಅಭಿಯಾನ, ಎನ್.ಜಿ.ಒ.ಗಳು, ತಾಲೂಕುಗಳಲ್ಲಿ ಮಕ್ಕಳ ಹಕ್ಕುಗಳ ಕುರಿತು ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು, ತಳಸ್ತರದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಂಘಗಳು, ಮಹಿಳಾ ಹೋರಾಟಗಾರ್ತಿಯರು, ಶಿಕ್ಷಕರು, ಸ್ವ ಸಹಾಯ ಗುಂಪಿನ ಸದಸ್ಯರು ಮತ್ತು ಮಕ್ಕಳ ಹಕ್ಕುಗಳ ಸಮಿತಿಯ ಸದಸ್ಯರು ಇವರುಗಳೆಲ್ಲಾ ಭಾಗವಹಿಸಿದ್ದರು. ಸಮಿತಿಯು ಇವರುಗಳೆಲ್ಲರ ಅಭಿಪ್ರಾಯಗಳನ್ನೊಳಗೊಂಡಂತೆ ಬಾಲ್ಯ ವಿವಾಹದ ಕುರಿತು ಮಾಹಿತಿಯನ್ನು ಸಂಗ್ರಹಿಸಿ ವರದಿ ರೂಪದಲ್ಲಿ ಬಿಡುಗಡೆಗೊಳಿಸಿದೆ. ಈ ವರದಿಯು ಎರಡು ಸಂಪುಟಗಳಲ್ಲಿ ತಯಾರಾಗಿದ್ದು, ಮೊದಲನೆಯ ಸಂಪುಟದಲ್ಲಿ ಐದು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಸಮಿತಿಯು ವರದಿಯನ್ನು ತಯಾರಿಸಲು ಯಾವ ನಿಯಮಗಳನ್ನು ರೂಪಿಸಿಕೊಂಡಿದೆ ಮತ್ತು ಕೆಲಸದ ಸ್ವರೂಪದ ಕುರಿತು ತಿಳಿಸಿದ್ದಾರೆ. ಎರಡನೆಯ ಅಧ್ಯಾಯದಲ್ಲಿ ಬಾಲ್ಯವಿವಾಹಕ್ಕೆ ಕಾರಣಗಳು ಮತ್ತು ಅದರಿಂದಾಗುವ ಪರಿಣಾಮಗಳ ಕುರಿತಂತೆ ಚರ್ಚಿಸಿದ್ದಾರೆ. ಮೂರನೆಯ ಅಧ್ಯಾಯದಲ್ಲಿ ಬಾಲ್ಯವಿವಾಹಕ್ಕೆ ಕಾರಣರಾದವರನ್ನು ಬಾಲ್ಯ ವಿವಾಹ ನಿಷೇಧ ಕಾನೂನಿನಡಿ ಹೇಗೆ ಶಿಕ್ಷಿಸಬೇಕು ಎಂಬುದರ ಚರ್ಚೆ ಇದೆ. ಹಾಗೆಯೇ ನಾಲ್ಕನೆಯ ಅಧ್ಯಾಯವು ಬಾಲ್ಯವಿವಾಹ ನಿಷೇಧ ಕಾನೂನನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಯಾವ

ಕ್ರಮಗಳನ್ನು ಕೈಗೊಳ್ಳಬೇಕು ಎಂಬುದನ್ನು ಚರ್ಚಿಸುತ್ತದೆ. ಐದನೆಯ ಅಧ್ಯಾಯವು ಕೊನೆಯ ಅಧ್ಯಾಯವಾಗಿದ್ದು ಸಮಿತಿಯ ಶಿಫಾರಸ್ಸುಗಳನ್ನು ನೀಡಲಾಗಿದೆ. ಈ ವರದಿಯಲ್ಲಿ ಮುಖ್ಯವಾಗಿ ಬಾಲ್ಯ ವಿವಾಹಕ್ಕೂ ಮತ್ತು ಶಿಕ್ಷಣ, ಬಡತನಗಳಿಗೂ ನೇರವಾದ ಸಂಬಂಧವಿರುವುದನ್ನು ಕೋಷ್ಟಕಗಳ ಮೂಲಕ ತಿಳಿಸುತ್ತಾರೆ. ಹಾಗೆಯೇ ಪ್ರತಿಯೊಂದು ಜಿಲ್ಲೆಯಲ್ಲಿ ಬಾಲ್ಯ ವಿವಾಹದ ಪ್ರಮಾಣ ಎಷ್ಟಿದೆ ಎಂಬುದನ್ನು ವಿವರಿಸಿದ್ದಾರೆ. ಆದರೆ ಸಮಾಜದಲ್ಲಿ ಜಾರಿಯಲ್ಲಿರುವ ಪಿತೃಪ್ರಧಾನ ಮೌಲ್ಯಗಳು ಬಾಲ್ಯ ವಿವಾಹಗಳಿಗೆ ಹೇಗೆ ಕಾರಣವಾಗಿವೆ ಎಂಬುದನ್ನು ವಿವರಿಸದೇ ಇರುವುದು ವರದಿಯ ಮಿತಿಯಾಗಿದೆ. ಹೀಗೆ ಬಾಲ್ಯ ವಿವಾಹದ ಕುರಿತಂತೆ ವಾಸ್ತವವನ್ನು ಅರಿಯಲು ರಚನೆಗೊಂಡ ಸಮಿತಿ ನೀಡಿದ ವರದಿಯು ಅಧ್ಯಯನಕ್ಕೆ ಪೂರಕವಾದ ಹಲವಾರು ಅಂಶಗಳನ್ನು ಒದಗಿಸಿಕೊಡುತ್ತದೆ.

ಪ್ರಧಾನ್ ಗುರುದತ್ತರವರ "ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ" ಎಂಬ ಕೃತಿಯು ಅನುವಾದಿತ ಕೃತಿಯಾಗಿದ್ದು, ಇದರ ಮೂಲ ಭಗವತ್ ಶರಣ ಉಪಾಧ್ಯಾಯರು ಹಿಂದಿಯಲ್ಲಿ ರಚಿಸಿದ್ದಾರೆ. ಈ ಕೃತಿಯು ೧೪ ಅಧ್ಯಾಯಗಳನ್ನು ಒಳಗೊಂಡಿದ್ದು ಸಂಸ್ಕೃತಿಗೆ ಸಂಬಂಧಿಸಿದ ಪ್ರಬಂಧಗಳ ಸಂಗ್ರಹವಾಗಿದೆ. ಇದು ಭಾರತೀಯ ಸಂಸ್ಕೃತಿಯ ಸಮಷ್ಟಿ ರೂಪದ ವಿಶ್ಲೇಷಣೆಯಾಗಿದೆ. ಇವರು ಪಶ್ಚಿಮ ಏಷ್ಯಾ, ಈಜಿಪ್ಟ್ ಮೊದಲಾದ ದೇಶಗಳಲ್ಲಿ ನಡೆಸಿದ ಉತ್ಖನನಗಳಿಂದ ದೊರೆತಿರುವ ಭಾರತೀಯ ಸಂಸ್ಕೃತಿಗೆ ಆಧಾರ ಪ್ರಾಯವಾಗಿರುವ ಮೂಲ ಪುರಾತತ್ವ– ಸಾಮಗ್ರಿಯ ಬಗೆಗೆ ಅಮೇರಿಕೆಯ ಹಾಗೂ ಯುರೋಪಿನ ವಸ್ತು ಸಂಗ್ರಹಾಲಯಗಳಲ್ಲಿ ಅಧ್ಯಯನವನ್ನು ಕೈಗೊಂಡು ಪ್ರಬಂಧಗಳನ್ನು ರಚಿಸಿದ್ದಾರೆ. ಭಾರತೀಯ ಸಂಸ್ಕೃತಿಯನ್ನೇ ಕೇಂದ್ರವಾಗಿರಿಸಿಕೊಂಡು ಕೃತಿಯನ್ನು ರಚಿಸಿರುವುದು ಇಲ್ಲಿನ ವಿಶೇಷವಾಗಿದೆ. ಕೃತಿಯಲ್ಲಿ 'ನಾರಿಯ ಅಧೋಗತಿಯ ಪರಂಪರೆ/ಮುನ್ನಡೆ' ಎಂಬುದು ೧೦ನೇ ಅಧ್ಯಾಯವಾಗಿದ್ದು, ಇದರಲ್ಲಿ ಮಹಿಳೆ ಪುರುಷನ ಅಧೀನತೆಯನ್ನು ಒಪ್ಪಿಕೊಳ್ಳುವಂತೆ ಪಿತೃಪ್ರಧಾನ ವ್ಯವಸ್ಥೆ ತಂತ್ರಗಳನ್ನು ಹೇಗೆ ರೂಪಿಸಿದೆ ಎಂಬುದನ್ನು ವಿವರಿಸಿದ್ದಾರೆ.

ಮೊಹೆಂಜದಾರೋ ಮತ್ತು ಹರಪ್ಪಾಗಳಲ್ಲಿನ ಸಿಂಧೂ ನಾಗರಿಕತೆಯ ಅವಧಿಯಲ್ಲಿ ಮಹಿಳೆಯ ಸ್ಥಾನದ ಕುರಿತು ಆಧಾರಗಳು ದೊರೆತಿಲ್ಲ ಎಂಬುದನ್ನು ಮತ್ತು ಈ ಅವಧಿಯಲ್ಲಿ ಅವಳ ಸ್ಥಿತಿ ಚಿಂತಾಜನಕವಾಗಿರಲಿಲ್ಲ ಎಂಬುದಕ್ಕೆ ಕೆಲವು ಸುಳಿವುಗಳು ದೊರೆತಿರುವುದನ್ನು ತಿಳಿಸುತ್ತಾರೆ. "ಈ ನಾಗರಿಕತೆಯ ಅವಧಿ ಆರಂಭಗೊಳ್ಳುವುದಕ್ಕಿಂತಲೂ ತುಂಬಾ ಹಿಂದೆಯೇ ಮಾತೃಪ್ರಧಾನ ವ್ಯವಸ್ಥೆ ಕೊನೆಗೊಂಡಿತ್ತು ಮತ್ತು ಅದರ ಭಾಗದಲ್ಲಿ ಪಿತೃಪ್ರಧಾನ ವ್ಯವಸ್ಥೆ ನೆಲೆಗೊಂಡಿತ್ತು ಎಂಬುದರಲ್ಲಿ ಅನುಮಾನವೇ ಇಲ್ಲ. ಈ ನಾಗರಿಕತೆಗೆ ಸಂಬಂಧಿಸಿದಂತೆ ದೊರೆತಿರುವ ನರ್ತಕಿಯೊಬ್ಬಳ ವಿಗ್ರಹದಿಂದ ಗಣಿಕೆಯರ ಬಾಳು ಅಲ್ಲಿ ಆರಂಭಗೊಂಡಿತ್ತು ಎಂಬ ವಿಚಾರ ತಿಳಿದುಬರುತ್ತದೆ" (ಪು.೧೯೪). ಋಗ್ವೇದದ ಕಾಲದಲ್ಲಿ ಮಹಿಳೆಯರ ಸ್ಥಿತಿಯ ಕುರಿತು ಸಹ ಚರ್ಚಿಸಿದ್ದಾರೆ. ಮುಖ್ಯವಾಗಿ ಸೂತ್ರಗಳ ಕಾಲ ಅಥವಾ ಸೂತ್ರಗಳ ಯುಗವೆಂದು

ಗುರುತಿಸಲ್ಪಟ್ಟಿರುವ ಕ್ರಿ.ಪೂ. ೬ನೆಯ ಶತಮಾನದಿಂದ ಕ್ರಿ.ಪೂ ಮೊದಲನೆಯ ಶತಮಾನದವರೆಗೆ ಇರುವ ಈ ಅವಧಿಯಲ್ಲಿ ಮಹಿಳೆಯರ ಸ್ಥಿತಿ ತುಂಬಾ ಚಿಂತಾಜನಕವಾಗಿದ್ದನ್ನು ತಿಳಿಸುತ್ತಾರೆ. ಈ ಅವಧಿಯು ಬೌಧಾಯನ ಮತ್ತು ಆಪಸ್ತಂಭರ ಯುಗವಾಗಿತ್ತು. ವಶಿಷ್ಠ ಮತ್ತು ಪಾಣಿನೀಯ, ಮನು ಮತ್ತು ಪತಂಜಲಿ, ಚಾಣಕ್ಯ ಮತ್ತು ಪುಷ್ಯ ಮಿತ್ರರ ಹಾಗೂ ಧರ್ಮ ಶಾಸ್ತ್ರಗಳ ಯುಗವೂ ಆಗಿತ್ತು. ಇವುಗಳಲ್ಲಿ ಗಾರ್ಗಿ ಸಂಹಿತೆಯ ಯುಗ ಪುರಾಣವನ್ನು ಉಲ್ಲೇಖಿಸುತ್ತಾ ಬಾಲ್ಯ ವಿವಾಹದ ಹುಟ್ಟಿನ ಬಗ್ಗೆ ತಿಳಿಸುತ್ತಾರೆ. ಈ ಅಧ್ಯಾಯವು ಬಾಲ್ಯ ವಿವಾಹ ಆರಂಭವಾಗುವುದಕ್ಕೆ ಚಾರಿತ್ರಿಕ ಅಂಶಗಳನ್ನು ಒದಗಿಸಿಕೊಡುತ್ತದೆ. ಒಟ್ಟಾರೆಯಾಗಿ ಈ ಅಧ್ಯಾಯದಲ್ಲಿ ಮಹಿಳೆ ಹಂತ ಹಂತವಾಗಿ ಹೇಗೆ ಪುರುಷನ ದಾಸ್ಯಕ್ಕೆ ಒಳಗಾದಳು ಎಂಬುದನ್ನು ವಿವರವಾಗಿ ಚರ್ಚಿಸಿದ್ದಾರೆ.

ಜಯಾ ಸಗಾಡೆಯವರ “child Marriage in India ( Socio-legal and human Right Dimensions)” ಎಂಬ ಕೃತಿಯು ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್‌ರವರಿಂದ ೨೦೦೫ರಲ್ಲಿ ಪ್ರಕಟಗೊಂಡಿದೆ. ಭಾರತದಲ್ಲಿ ನಡೆಯುವ ಬಾಲ್ಯವಿವಾಹ ಪದ್ಧತಿಗಳನ್ನು ಸಾಮಾಜಿಕ–ಕಾನೂನಾತ್ಮಕ ಮತ್ತು ಮಾನವ ಹಕ್ಕುಗಳ ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಬಾಲ್ಯ ವಿವಾಹಗಳನ್ನು ನಿಷೇಧಿಸಿ ಮಹಿಳೆಯರ ಸ್ಥಾನಮಾನಗಳನ್ನು ಹೆಚ್ಚಿಸುವ ನಿಟ್ಟಿನಲ್ಲಿ ಸರಕಾರಿ ಮತ್ತು ಸರಕಾರೇತರ ಸಂಘ ಸಂಸ್ಥೆಗಳ ಪಾತ್ರ ಏನಾಗಿದೆ ಎಂಬುದನ್ನು ತಿಳಿಸುತ್ತಾರೆ. ಜಯಾ ಸಗಾಡೆಯವರು ಒಟ್ಟು ಏಳು ಅಧ್ಯಾಯಗಳಲ್ಲಿ ತಮ್ಮ ಚಿಂತನೆಯನ್ನು ಮಂಡಿಸುತ್ತಾರೆ. ಮೊದಲನೆಯ ಅಧ್ಯಾಯದಲ್ಲಿ ಭಾರತದಲ್ಲಿ ನಡೆಯುವ ಬಾಲ್ಯ ವಿವಾಹಗಳಿಗೆ ಕಾರಣಗಳೇನು ಮತ್ತು ಆ ವಿವಾಹಗಳಿಂದ ಆಗುವ ಪರಿಣಾಮಗಳ ಕುರಿತಾದ ಚರ್ಚೆ ಇದೆ. ಎರಡನೆಯ ಅಧ್ಯಾಯದಲ್ಲಿ ವಿವಾಹ ವಯಸ್ಸಿನ ಕುರಿತ ಕಾನೂನಾತ್ಮಕ ಮಾಹಿತಿ ಮತ್ತು ಬಾಲ್ಯ ವಿವಾಹ ಪದ್ಧತಿ ನಿಷೇಧ ಕಾನೂನು ೧೯೨೯ನ್ನು ವಿವರಿಸಿದ್ದಾರೆ. ವೈಯಕ್ತಿಕ ಕಾನೂನುಗಳು, ಕಾನೂನಾತ್ಮಕ ಸುಧಾರಣೆಗಳು ಮತ್ತು ನ್ಯಾಯಾಲಯ ಎಂಬ ಅಧ್ಯಾಯದಲ್ಲಿ ವೈಯಕ್ತಿಕ ಕಾನೂನುಗಳನ್ನು ರೂಪಿಸುವಲ್ಲಿ ನ್ಯಾಯಾಲಯಗಳ ಪಾತ್ರ ಏನು? ಎಂಬುದನ್ನು ಮತ್ತು ಆ ಸಂದರ್ಭದಲ್ಲಿ ಒದಗಿಬರುವ ಸಮಸ್ಯೆಗಳನ್ನೂ ಸಹ ವಿವರಿಸುತ್ತಾರೆ. ಇಂದಿನ ಸಂದರ್ಭದಲ್ಲಿ ಸಾರ್ವಜನಿಕ ಹಿತಾಸಕ್ತಿ ನ್ಯಾಯಾಲಯಗಳ ಅವಶ್ಯಕತೆ ತುಂಬಾ ಇದೆ ಹಾಗಾಗಿ ಇವುಗಳನ್ನು ರೂಪಿಸುವಲ್ಲಿ ಸಂವಿಧಾನ ಅಥವಾ ಕಾನೂನಿನ ಪಾತ್ರ ಮಹತ್ವದ್ದಾಗಿರುತ್ತದೆ ಎಂದು ಹೇಳುತ್ತಾರೆ. ಅಂತರಾಷ್ಟ್ರೀಯ ಮಾನವ ಹಕ್ಕುಗಳ ಸಂದರ್ಭದಲ್ಲಿ ಬಾಲ್ಯ ವಿವಾಹ ಪದ್ಧತಿಗಳು ಮಕ್ಕಳ ಹಕ್ಕುಗಳನ್ನು ಹೇಗೆ ಕಿತ್ತುಕೊಳ್ಳುತ್ತವೆ ಎಂಬುದನ್ನು ಹಾಗೆಯೇ ಅಂತರಾಷ್ಟ್ರೀಯ ಮಾನವ ಹಕ್ಕುಗಳು ಮತ್ತು ಮಕ್ಕಳ ಹಕ್ಕುಗಳಿಗಿರುವ ಸಂಬಂಧಗಳನ್ನೂ ಸಹ ತಿಳಿಸಿದ್ದಾರೆ. ಬಾಲ್ಯ ವಿವಾಹಗಳು ಮಕ್ಕಳ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದರ ಮೂಲಕ ಅವರ ಭವಿಷ್ಯವನ್ನೂ ಸಹ ಹಾಳುಗೆಡವುತ್ತದೆ ಎಂಬುದರ ಕುರಿತಂತೆ ಚರ್ಚಿಸಿದ್ದಾರೆ. ಒಟ್ಟಾರೆಯಾಗಿ ಈ ಕೃತಿಯು ಬಾಲ್ಯ

ವಿವಾಹದ ಚಾರಿತ್ರಿಕ, ಸಂವಿಧಾನಾತ್ಮಕ ಮಾಹಿತಿಯನ್ನು ಒದಗಿಸಿಕೊಡುವುದರ ಜೊತೆಗೆ ಅಧ್ಯಯನಕ್ಕೆ ಪೂರಕವಾದ ವಿಷಯಗಳನ್ನು ಒದಗಿಸಿಕೊಡುತ್ತದೆ.

ಪಾತ್ ಜಲ್ಲಂಡ್‌ರವರ " Women, Marriage and Politics" ಎಂಬ ಕೃತಿಯು ೧೮೬೦-೧೯೧೪ರ ಅವಧಿಯ ಸಂದರ್ಭದಲ್ಲಿ ವಿವಾಹದಲ್ಲಾದ ಬದಲಾವಣೆಗಳನ್ನು ಮತ್ತು ಈ ರೀತಿಯ ಬದಲಾವಣೆಗಳಿಂದ ಮಹಿಳೆಯರ ಮೇಲಾಗುವ ಪರಿಣಾಮಗಳ ಕುರಿತು ವಿವರಿಸಿದ್ದಾರೆ. ೧೮೬೦-೧೯೧೪ರ ಅವಧಿಯಲ್ಲಿ ಬ್ರಿಟಿಷ್ ಸರಕಾರದಲ್ಲಿ ರಾಜಕೀಯಕ್ಕೆ ಸೇರಲ್ಪಟ್ಟಿದ್ದ ೫೦ ಕುಟುಂಬಗಳನ್ನು ಆಯ್ಕೆಮಾಡಿಕೊಂಡು, ಈ ಕುಟುಂಬಗಳಲ್ಲಿನ ಮಹಿಳೆಯರ ಕುರಿತಂತೆ ಅವರ ಜೀವಿತ ಅವಧಿಯಲ್ಲಿನ ಘಟನಾವಳಿಗಳನ್ನು ಚರ್ಚಿಸಿದ್ದಾರೆ. ಈ ಮಹಿಳೆಯರಾರೂ ಶಿಕ್ಷಣವನ್ನು ಪಡೆದವರಲ್ಲ. ಇವರು ಕೇವಲ ಅನೌಪಚಾರಿಕ ಶಿಕ್ಷಣದಿಂದಲೇ ತಮ್ಮ ಡೈರಿಗಳನ್ನು ಬರೆದಿದ್ದಾರೆ. ಇವುಗಳೇ ಅಧ್ಯಯನಕ್ಕೆ ಆಧಾರಗಳಾಗಿವೆ. ಈ ಡೈರಿಗಳಲ್ಲಿನ ಮಾಹಿತಿಗಳು ಮತ್ತು ಕೆಲವು ವಿದ್ವಾಂಸರೊಂದಿಗಿನ ಚರ್ಚೆ ತುಂಬಾ ಸಹಕಾರಿಯಾಗಿದೆ. ಈ ಕುಟುಂಬಗಳು ವಿವಾಹ, ಸ್ನೇಹ ಮತ್ತು ರಾಜಕೀಯ ಇವುಗಳಿಂದ ಒಂದುಗೂಡಲ್ಪಟ್ಟಿದ್ದವು. ಇವರಲ್ಲಿ ಉನ್ನತ ವರ್ಗದ ಕುಟುಂಬ ಮತ್ತು ಮಧ್ಯಮ-ಉನ್ನತ ವರ್ಗದ ಕುಟುಂಬದ ಮಹಿಳೆಯರು ಎಂದು ವಿಭಾಗಿಸಿಕೊಳ್ಳಲಾಗಿದೆ. ಈ ಎರಡೂ ವರ್ಗಗಳ ನಡುವೆ ಬಹಳಷ್ಟು ತಲೆಮಾರುಗಳ ಅಂತರವಿರುವುದನ್ನು ತಿಳಿಸುತ್ತಾರೆ. ನ್ಯಾಯಾಡಳಿತ, ವಿವಾಹ, childbirth and spinsterhood, ಬ್ರಿಟೀಷ್ ರಾಜಕಾರಣದಲ್ಲಿ ರಾಜಕಾರಣಿಗಳ ಹೆಂಡತಿಯರ ಪಾತ್ರ ಮತ್ತು ಅವರ ಚಟುವಟಿಕೆಗಳು ಹೀಗೆ ಭಾಗಗಳನ್ನಾಗಿ ಮಾಡಿಕೊಂಡು ಇವುಗಳ ಕುರಿತಂತೆ ವಿಸ್ತರಿಸಿದ್ದಾರೆ. ನ್ಯಾಯಾಡಳಿತಗಳಿಂದ ಸಾಂಪ್ರದಾಯಿಕ ಆಚರಣೆಗಳು ಮತ್ತು ವಿವಾಹ, ಹಣ ಮತ್ತು ವಿವಾಹ ಎಂಬ ಈ ಭಾಗದಲ್ಲಿ ವಿವಾಹ ಪೂರ್ವ ಒಪ್ಪಂದಗಳು, ಹೊಸ ಕುಟುಂಬಗಳ ರಚನೆಗೆ ಕಾರಣವಾಗಿರುವ ನೆಲೆಗಳು ಮತ್ತು ವಿವಾಹದ ನಂತರದ ಕಾರ್ಯಕ್ರಮಗಳ ಕುರಿತು ವಿವರಿಸಿದ್ದಾರೆ. ವಿವಾಹದ ಸಂದರ್ಭದಲ್ಲಿನ ಹಣದ ಕುರಿತ ಒಪ್ಪಂದಗಳಿಗೆ ಸಂಬಂಧಿಸಿದಂತೆ ಸಾಮಾಜಿಕವಾಗಿ ಹೇಗೆ ಮಾನ್ಯತೆ ಇದೆ ಎಂಬುದನ್ನು ವಿವರಿಸಿದ್ದಾರೆ. ಒಟ್ಟಾರೆ ಈ ಕೃತಿಯಲ್ಲಿ ಚೈಲ್ಡ್ ಬರ್ತ ಮತ್ತು ವಿವಾಹ ಈ ಕುರಿತ ಚರ್ಚೆಯು ಅಧ್ಯಯನಕ್ಕೆ ತುಂಬಾ ಪೂರಕವಾದ ಮಾಹಿತಿಯನ್ನು ಒದಗಿಸಿಕೊಡುತ್ತವೆ.

ಬಿ.ಎಸ್. ನಾಗಿ ಅವರ "Child Marriage in India (A Study of its differential Patterns in Rajasthan)" ಎಂಬ ಈ ಕೃತಿಯನ್ನು ಮಿತ್ತಲ್ ಪಬ್ಲಿಕೇಷನ್ಸ್ ರವರು ೧೯೯೩ರಲ್ಲಿ ಪ್ರಕಟಿಸಿದ್ದಾರೆ. ಭಾರತದಲ್ಲಿಯೇ ಅಧಿಕ ಬಾಲ್ಯ ವಿವಾಹಗಳು ನಡೆಯುವ ರಾಜ್ಯವೆಂದರೆ ರಾಜಸ್ಥಾನ. ಈ ರಾಜ್ಯದ ಮೂರು ಜಿಲ್ಲೆಗಳಾದ ಉದಯಪುರ, ಭಿಲಾವರ ಮತ್ತು ಚಿತ್ತೂರ್‌ಘರ್ ಜಿಲ್ಲೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗೆಯೇ ಅಧ್ಯಯನದ

ಅನುಕೂಲಕ್ಕಾಗಿ ಈ ಮೂರೂ ಜಿಲ್ಲೆಗಳಿಂದ ರಾವ್‌ಮದ್ರಾ, ಕುರಾಜ್, ರೈಲಾ ಮತ್ತು ಗೋಪಾಲ್ ಎಂಬ ನಾಲ್ಕು ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯವನ್ನು ಕೈಗೊಂಡು ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಪ್ರತಿಯೊಂದು ಗ್ರಾಮದಲ್ಲೂ ಹೌಸ್‌ಹೋಲ್ಡ್ ಸರ್ವೆಯನ್ನು ಮಾಡಲಾಗಿದೆ. ಪ್ರತಿಯೊಂದು ಗ್ರಾಮದಿಂದ ೫೦ ಕುಟುಂಬಗಳನ್ನು ಅಂದರೆ ಒಟ್ಟು ನಾಲ್ಕು ಗ್ರಾಮಗಳಿಂದ ೨೦೦ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಈ ೨೦೦ ಕುಟುಂಬಗಳಲ್ಲಿ ೧೭೬ ಕುಟುಂಬಗಳು ಹಿಂದೂಗಳದ್ದಾಗಿದ್ದರೆ ೫ ಕುಟುಂಬಗಳು ಮುಸ್ಲಿಂರದ್ದಾಗಿವೆ. ಇವುಗಳಲ್ಲಿ ಶೇ. ೬೦ರಷ್ಟು ಕುಟುಂಬಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದವುಗಳಾಗಿವೆ. ಈ ಶೇ. ೬೦ರಲ್ಲಿ ಶೇ.೪೮ರಷ್ಟು ಕುಟುಂಬಗಳು ಪರಿಶಿಷ್ಟ ವರ್ಗಕ್ಕೆ ಸೇರಿದ್ದರೆ, ಶೇ. ೧೨ರಷ್ಟು ಕುಟುಂಬಗಳು ಪರಿಶಿಷ್ಟ ಪಂಗಡಕ್ಕೆ ಸೇರಿವೆ. ಹೀಗೆ ಸ್ಯಾಂಪಲಿಂಗ್ ವಿಧಾನವನ್ನು ಅಳವಡಿಸಿಕೊಂಡು ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ. ಈ ವೈಧಾನಿಕತೆಯ ಫಲವಾಗಿ ಪ್ರತಿಯೊಂದು ಗ್ರಾಮದ ಜನಸಂಖ್ಯೆ, ಶಿಕ್ಷಣ, ಕೃಷಿ ಕಾರ್ಮಿಕರು, ಅಂಚಿನ ಸಮುದಾಯದ ಕೆಲಸಗಾರರು, ಹೀಗೆ ಹಲವಾರು ರೀತಿಯಲ್ಲಿ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಒಟ್ಟಾರೆಯಾಗಿ ಇದು ವಸ್ತುನಿಷ್ಠ ಮತ್ತು ವ್ಯಕ್ತಿನಿಷ್ಠ ಅಧ್ಯಯನದ ಕೃತಿಯಾಗಿದ್ದು, ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸಿಕೊಡುತ್ತದೆ.

"ಮಹಿಳೆ, ಸಮಾಜ, ಕಾನೂನು" ಎಂಬ ಕೃತಿಯನ್ನು ಡಾ. ಗೀತಾ ಕೃಷ್ಣಮೂರ್ತಿಯವರು ರಚಿಸಿದ್ದಾರೆ. ಈ ಕೃತಿಯು ೨೦೧೦ರಲ್ಲಿ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್ ರವರಿಂದ ಮೂರನೆಯ ಮುದ್ರಣವನ್ನು ಕಂಡಿದೆ. ಈ ಕೃತಿಯು ಬಿಡಿ ಲೇಖನಗಳ ಸಂಗ್ರಹವಾಗಿದ್ದು, ಇವುಗಳಲ್ಲಿ ಹೆಚ್ಚಿನವು ಮಹಿಳಾ ಸಂಬಂಧಿ ಲೇಖನಗಳಾಗಿವೆ. ಮಹಿಳೆಯರ ವಿರುದ್ಧ ನಡೆಯುತ್ತಿರುವ ಅತ್ಯಾಚಾರ, ಶೋಷಣೆ, ವರದಕ್ಷಿಣೆ ಕಿರುಕುಳ, ಕೌಟುಂಬಿಕ ಹಿಂಸೆ, ಹೆಣ್ಣುಭ್ರೂಣ ಹತ್ಯೆ, ಬಾಲ್ಯ ವಿವಾಹ ಈ ಎಲ್ಲಾ ವಿಷಯಗಳಿಗೆ ಸಂಬಂಧಿಸಿದಂತೆ ಲೇಖನಗಳ ಸಂಗ್ರಹವಾಗಿದೆ. ಈ ಎಲ್ಲಾ ಅನಿಷ್ಟ ಪದ್ದತಿಗಳನ್ನು ತೊಡೆದು ಹಾಕಲು ಕಾನೂನು ಹೇಗೆ ಸಹಕಾರಿಯಾಗುತ್ತದೆ ಎಂಬುದನ್ನು ತಿಳಿಸಿದ್ದಾರೆ. ತುಂಬಾ ಸರಳವಾಗಿ ಮಹಿಳಾ ಪರವಾದ ಕಾನೂನುಗಳನ್ನು ತಿಳಿಸಿಕೊಡಲಾಗಿದೆ. ಅವರೇ ಹೇಳುವ ಹಾಗೆ "ಅಪರಾಧಗಳಿಗೆ ಶಿಕ್ಷೆಯಾಗುವಂತೆ ನೋಡಿಕೊಳ್ಳುವುದಕ್ಕೆ ಮತ್ತು ಆ ಮೂಲಕ ಸಮಾಜದಲ್ಲಿ ಶಾಂತಿ, ಸುವ್ಯವಸ್ಥೆ ನೆಲೆಗೊಳ್ಳುವಂತೆ ಮಾಡಿ ನಾಗರೀಕರಲ್ಲಿ ಸುಭದ್ರತೆಯ ನಿಶ್ಚಿಂತ ಭಾವ ಮೂಡಿಸುವುದಕ್ಕೆ ಇರುವುದೊಂದೇ ಮಂತ್ರದಂಡ– ಅದೆಂದರೆ ಕಾನೂನು. ಜನತೆಗೆ ಕಾನೂನಿನ ಅರಿವಿಲ್ಲದಿದ್ದರೆ ಈ ಮಂತ್ರದಂಡ ನಿಷ್ಕ್ರಿಯ"(ಪು–೩). ಅಂದರೆ ಕಾನೂನಿನ ಕುರಿತಾಗಿ ಜನರಲ್ಲಿ ಜಾಗೃತಿ ಉಂಟಾಗುವುದು ಮುಖ್ಯ ಎಂದು ಹೇಳುತ್ತಾರೆ. ಈ ಹಿನ್ನೆಲೆಯನ್ನಿಟ್ಟುಕೊಂಡೇ ಹಲವಾರು ಲೇಖನಗಳನ್ನು ರಚಿಸಿದ್ದಾರೆ. ಈ ಕೃತಿಯಲ್ಲಿನ ಒಟ್ಟಾರೆ ಲೇಖನಗಳಲ್ಲಿ "ಬಾಲ್ಯ ವಿವಾಹ: ಇದಕ್ಕೆಂದು ಅಂತ್ಯ?" ಎಂಬ ಲೇಖನವು ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು

ಒದಗಿಸಿಕೊಡುತ್ತದೆ. ಮುಖ್ಯವಾಗಿ ಬಾಲ್ಯ ವಿವಾಹದ ವಿರುದ್ಧ ಧ್ವನಿ ಎತ್ತಿದ ಚಿಕ್ಕ ಬಾಲಕಿಯ ಕುರಿತು ತಿಳಿಸುವುದರ ಮೂಲಕ ಲೇಖನವನ್ನು ಆರಂಭಿಸುತ್ತಾರೆ. ಅಂದರೆ ಛತ್ತೀಸ್‌ಘಡ ರಾಜ್ಯದ ರಾಜಾನಂದ್ ಗಾಂವ್ ಜಿಲ್ಲೆಯ ಅಮಿತ ಎಂಬ ಬಾಲಕಿ ೭ನೇ ತರಗತಿಯಲ್ಲಿ ಓದುತ್ತಿರುವಾಗಲೇ ತನ್ನ ತಂದೆ ತಾಯಿಯರು ವಿವಾಹ ಮಾಡಲು ಮುಂದಾಗಿದ್ದರು. ಈ ವಿವಾಹವನ್ನು ವಿರೋಧಿಸಿದ್ದೇ ಅಲ್ಲದೆ ತನ್ನಂತೆಯೇ ಬಾಲ್ಯ ವಿವಾಹವನ್ನು ವಿರೋಧಿಸುವ ಇತರೆ ಬಾಲಕಿಯರನ್ನೂ ಸಹ ಒಂದು ಗೂಡಿಸಿ "ಕಿಶೋರಿ ವಾಹಿನಿ" ಎಂಬ ಹೆಸರಿನಲ್ಲಿ ಸಂಘಟಿತರಾದರು. ಈ ಸಂಘಟನೆಯಲ್ಲಿ ಸಾವಿರಕ್ಕೂ ಹೆಚ್ಚು ಬಾಲಕಿಯರು ಸೇರಿದರು. ಇವರೆಲ್ಲರೂ ಒಟ್ಟುಗೂಡಿ ತಾವು ಪ್ರಾಪ್ತ ವಯಸ್ಕರಾಗುವವರೆಗೆ ಅಂದರೆ ೧೮ ವರ್ಷಗಳು ತುಂಬುವವರೆಗೆ ವಿವಾಹವಾಗುವುದಿಲ್ಲ ಎಂಬ ಘೋಷಣಾ ಪತ್ರಕ್ಕೆ ಸಹಿ ಹಾಕಿ ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ಸಲ್ಲಿಸಿರುವುದನ್ನು ಉಲ್ಲೇಖಿಸಿದ್ದಾರೆ. ಈ ಘಟನೆಯನ್ನು ವಿವರಿಸುತ್ತಾ ಬಾಲ್ಯ ವಿವಾಹ ಪ್ರತಿಬಂಧಕ ಅಧಿನಿಯಮ ೧೯೨೯ರ ಕುರಿತು ಚರ್ಚಿಸುತ್ತಾರೆ. ಹಾಗೆಯೇ ಭಾರತದಲ್ಲಿನ ಈ ಬಾಲ್ಯ ವಿವಾಹಕ್ಕೆ ಸಂಬಂಧಿಸಿದ ವರದಿಗಳನ್ನು ವಿವರಿಸುತ್ತಾರೆ. ಅಂದರೆ "೨೦೦೧ರಲ್ಲಿ ಯೂನಿಸೆಫ್ ಒಂದು ವರದಿಯನ್ನು ಪ್ರಕಟಿಸಿತು. ೨೦೦೧ರ ಜನಗಣತಿಯ ಪ್ರಕಾರ ೧೮ ವರ್ಷ ತುಂಬುವುದಕ್ಕೂ ಮುನ್ನವೇ ವಿವಾಹಿತರಾಗಿರುವವರ ಸಂಖ್ಯೆ ೬.೫ ದಶಲಕ್ಷ"(ಪು.೧೦೮). ಎಂದು ತಿಳಿಸುತ್ತಾರೆ. ೧೯೨೯ರ ಬಾಲ್ಯ ವಿವಾಹ ನಿಷೇಧ ಕಾನೂನಿಗೆ ತಿದ್ದುಪಡಿಯನ್ನು ತರಲಾಗಿದ್ದುದರ ಕುರಿತಾಗಿಯೂ ವಿವರಿಸುತ್ತಾರೆ. ಈ ತಿದ್ದುಪಡಿಯ ಪ್ರಕಾರ ಬಾಲ್ಯದಲ್ಲಿ ವಿವಾಹವಾಗಿದ್ದವರು ನ್ಯಾಯಾಲಯದಲ್ಲಿ ಅದನ್ನು ಪ್ರಶ್ನಿಸಿ ಅದರಿಂದ ಬಿಡುಗಡೆಯನ್ನು ಹೊಂದಬಹುದು. ರಾಜಸ್ಥಾನದಲ್ಲಿ ಸರಕಾರೇತರ ಸಂಘಸಂಸ್ಥೆಗಳು ೨೮೦ ಬಾಲ್ಯ ವಿವಾಹಗಳನ್ನು ತಡೆಗಟ್ಟಿದ್ದರೆ, ಸರಕಾರದ ಇಲಾಖೆಗಳು ತಡೆಗಟ್ಟಿದ್ದು ಕೇವಲ ಎರಡು ವಿವಾಹಗಳನ್ನು ಮಾತ್ರ. ಎಂದು ಹೇಳುವುದರೊಂದಿಗೆ ಸಮಾಜದಲ್ಲಿನ ಬಾಲ್ಯ ವಿವಾಹಗಳನ್ನು ತಡೆಯುವ ಕಾರ್ಯದಲ್ಲಿ ಸರಕಾರಿ ಇಲಾಖೆಗಳ ಕಾರ್ಯ ವೈಖರಿಗಿಂತ ಸರಕಾರೇತರ ಸಂಘಸಂಸ್ಥೆಗಳ ಕಾರ್ಯಕ್ಷಮತೆ ಹೆಚ್ಚಿರುತ್ತದೆ ಎಂಬುದನ್ನು ಸೂಚ್ಯವಾಗಿ ತಿಳಿಸುತ್ತಾರೆ. ಹೀಗೆ ಈ ಕೃತಿಯಲ್ಲಿ ಕಾನೂನು, ಸಮಾಜ ಮತ್ತು ವ್ಯವಸ್ಥೆಯಲ್ಲಿನ ಅನಿಷ್ಟ ಪದ್ಧತಿಗಳನ್ನು ಹೋಗಲಾಡಿಸಲು ಇರುವಂತಹ ಮಾರ್ಗೋಪಾಯಗಳನ್ನು ಜನಸಾಮಾನ್ಯರಿಗೂ ಅರ್ಥವಾಗುವಂತಹ ರೀತಿಯಲ್ಲಿ ವಿವರಿಸಿದ್ದಾರೆ.

ಬೆ.ಕಾ.ಮೂರ್ತೀಶ್ವರಯ್ಯರವರ "ಮಹಿಳೆ,ಸಮಾಜ,ಕಾನೂನು" ಎಂಬ ಕೃತಿಯನ್ನು ಸ್ವಪ್ನ ಬುಕ್ ಹೌಸ್ ಬೆಂಗಳೂರು ಇವರು ೨೦೦೦ನೇ ಇಸವಿಯಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯು ೨೪ ಬಿಡಿ ಲೇಖನಗಳಿಂದ ಕೂಡಿದೆ. ಸಂವಿಧಾನವು ಕೊಡಮಾಡಲ್ಪಟ್ಟ ಕಾನೂನುಗಳು ಮಹಿಳೆಯರ ಕುರಿತಾಗಿ ಯಾವ ಧೋರಣೆಯನ್ನು ತಾಳಿವೆ ಎಂಬುದನ್ನು ವಿವರಿಸುತ್ತಾ ಸಾಗಿದ್ದಾರೆ. ಮುಖ್ಯವಾಗಿ ಹಿಂದೂ, ಮುಸ್ಲಿಂ, ಪಾರ್ಸಿ, ಕ್ರೈಸ್ತ ಧರ್ಮೀಯರ ವಿವಾಹಕ್ಕೆ ಸಂಬಂಧಿಸಿದಂತೆ

ಕಾನೂನು ಏನು ಹೇಳುತ್ತದೆ ಎಂಬುದನ್ನು ವಿವರಿಸುತ್ತಾರೆ. ಹಿಂದೂ ವಿವಾಹ ಕಾನೂನು ಕುರಿತಂತೆ "ಪ್ರಾಚೀನ ಕಾಲದಲ್ಲಿ ಹಿಂದೂ ಧರ್ಮದ ಅನ್ವಯ ವಿವಾಹ ಎಂಬುದು ೧೦ ಪವಿತ್ರ ಕಾರ್ಯಗಳಲ್ಲಿ ಒಂದು ಎಂಬುದಾಗಿತ್ತು. ಅಂತಹ ೧೦ ಕಾರ್ಯಗಳಲ್ಲಿ ಮಹಿಳೆ ಆದವಳು ವಿವಾಹಕ್ಕೆ ಅರ್ಹಳಾಗಿದ್ದಳು. ವಿವಾಹವು ವ್ಯಕ್ತಿಯ ಅಗತ್ಯತೆಗಳಲ್ಲಿ ಒಂದಾಗಿತ್ತು. ಯಾಕೆಂದರೆ ಹಿಂದೂ ಆದವನಿಗೆ ಸತ್ತ ನಂತರ ಮೋಕ್ಷ ಪಡೆಯಲು ಮಗನನ್ನು ಹೊಂದಿರಬೇಕಾಗಿರುತ್ತಿತ್ತು"(ಪು.೪೨) ಎಂದು ಹೇಳುತ್ತಾರೆ. ಹಾಗೆಯೇ "ಹಿಂದೂಗಳಲ್ಲಿ ಇರುವ ಎಂಟು ಬಗೆಯ ವಿವಾಹಗಳನ್ನು ಸಂಕ್ಷಿಪ್ತವಾಗಿ ತಿಳಿಸುತ್ತಾರೆ. ಹಿಂದೂ ವಿವಾಹ ಜಾರಿಗೆ ಬರುವುದಕ್ಕೂ ಮೊದಲು ಮಕ್ಕಳ ನಡುವೆ ವಿವಾಹದ ನಿಶ್ಚಿತಾರ್ಥಗಳು ನಡೆಯುತ್ತಿದ್ದವು ಇವುಗಳನ್ನು ಬಾಲ್ಯ ವಿವಾಹಗಳೆಂದು ಕರೆಯಲಾಗುತ್ತಿತ್ತು"(ಪು.೪೩). ಹೀಗೆ ಹಿಂದೂ ವಿವಾಹದ ಕುರಿತಂತೆ ಚರ್ಚಿಸಿರುವುದು ಕಂಡುಬಂದಿದೆ. ಆದರೆ ಈ ಕೃತಿಯಲ್ಲಿನ ಲೇಖನಗಳು ವಿಮರ್ಶಾತ್ಮಕವಾಗಿ ಮೂಡಿ ಬಂದಿಲ್ಲ.

"ಮಹಿಳೆ, ಸಮಾಜ ಮತ್ತು ಸಂಸ್ಕೃತಿ" ಈ ಕೃತಿಯನ್ನು ಡಾ. ಆರ್. ಇಂದಿರಾರವರು ರಚಿಸಿದ್ದಾರೆ. ಇದನ್ನು ಕನ್ನಡ ವಿಶ್ವವಿದ್ಯಾಲಯವು ಪ್ರಸಾರಾಂಗದಿಂದ ೨೦೦೨ರಲ್ಲಿ ಪ್ರಕಟಿಸಿದೆ. ಸಮಾಜದಲ್ಲಿ ಮಹಿಳೆಯರ ಸ್ಥಾನಮಾನಗಳು ಬದಲಾಗಿದ್ದರೂ ಸಬಲೀಕರಣದ ಕನಸು ಮಾತ್ರ ನನಸಾಗದೆ ಹಾಗೆಯೇ ಉಳಿದಿದೆ. ಇದಕ್ಕೆ ಕಾರಣವಾಗಿರುವ ಪರಿಸ್ಥಿತಿಗಳನ್ನು ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಗಳಿಂದ ವಿಶ್ಲೇಷಿಸುವಂತಹ ಕೆಲಸವನ್ನು ಮಾಡಲಾಗಿದೆ. ಈ ಕೃತಿಯಲ್ಲಿ ೯ ಅಧ್ಯಾಯಗಳಿವೆ. ವ್ಯವಸ್ಥೆಯಲ್ಲಿರುವ ಲಿಂಗ ಪೂರ್ವಗ್ರಹಗಳನ್ನು ಹೊಡೆದೋಡಿಸುವ ಮತ್ತು ಲಿಂಗ ಸಮಾನತೆಯನ್ನು ನೆಲೆಯೂರುವಂತೆ ಮಾಡುವ ಪ್ರಯತ್ನ ಈ ಕೃತಿಯಲ್ಲಿ ನಡೆದಿದೆ. ಸಾಮಾಜಿಕ ಸಂಸ್ಥೆಗಳಾದ ವಿವಾಹ, ಕುಟುಂಬ ಇವುಗಳಲ್ಲಿ ಮಹಿಳೆಯು ಯಾವ ನೆಲೆಯಲ್ಲಿದ್ದಾಳೆ ಮತ್ತು ಅವಳ ಅಧೀನತೆಗೆ ಯಾವ ಕಾರಣಗಳು ಒತ್ತಾಸೆಯಾಗಿ ನಿಲ್ಲುತ್ತವೆ ಎಂಬುದನ್ನು ವಿವರಿಸಿದ್ದಾರೆ. ಮುಖ್ಯವಾಗಿ ಶಿಕ್ಷಣ, ಧರ್ಮ, ಜಾತಿ, ಕಲೆ, ಮಾಧ್ಯಮ ಮತ್ತು ಸಂಸ್ಕೃತಿ ಈ ವಲಯಗಳಲ್ಲಿ ಮಹಿಳೆಯರು ಪುರುಷನ ದಾಸ್ಯದಿಂದ ಹೊರಬರಲು ಜಾಗೃತಳಾಗುವುದರ ಕುರಿತು ವಿವರಿಸಿದ್ದಾರೆ. ಮುಖ್ಯವಾಗಿ 'ವಿವಾಹ ಮತ್ತು ಲಿಂಗವ್ಯವಸ್ಥೆ' ಎಂಬ ಎರಡನೇ ಅಧ್ಯಾಯದಲ್ಲಿ ವಿವಾಹದ ಬಗೆಗಳನ್ನು ತಿಳಿಸುತ್ತಾ ಆ ಸಂಸ್ಥೆಯಲ್ಲಿ ನಡೆಯುವ ತಾರತಮ್ಯಗಳ ಕುರಿತು ಚರ್ಚಿಸಿದ್ದಾರೆ. ಹಾಗೆಯೇ ಮುಂದುವರೆದು ವಿವಾಹ ಸಂಸ್ಥೆಯಲ್ಲಿನ ಕ್ರೌರ್ಯಗಳು ಎಂಬ ಶೀರ್ಷಿಕೆಯಡಿಯಲ್ಲಿ ವರದಕ್ಷಿಣೆ ಸಂಬಂಧಿ ಕ್ರೌರ್ಯ, ಬಹು ಪತ್ನಿತ್ವ, ವಿವಾಹ ವಿಚ್ಛೇದನೆ ಮತ್ತು ಸಣ್ಣ ವಯಸ್ಸಿನಲ್ಲಿ ವಿವಾಹ ಇವುಗಳಿಗೆ ಸಂಬಂಧಿಸಿದಂತೆ ಮತ್ತು ಇವುಗಳಿಂದಾಗುವ ಪರಿಣಾಮಗಳ ಕುರಿತಂತೆ ವಿವರಿಸಿದ್ದಾರೆ. ಬಾಲ್ಯ ವಿವಾಹಕ್ಕೆ ಪುಷ್ಟಿಕೊಡುವ ಯಜ್ಞಾವಲ್ಕ್ಯ ಮುನಿಯ ಮಾತುಗಳನ್ನು ಉಲ್ಲೇಖಿಸಿದ್ದಾರೆ. ಅಂದರೆ "ಹೆಣ್ಣು ಮಕ್ಕಳು ಪ್ರಾಪ್ತ ವಯಸ್ಸಿಗೆ ಬರುವ ಮುನ್ನವೇ ಅವರಿಗೆ ವಿವಾಹ ಮಾಡಬೇಕು, ಇಲ್ಲದಿದ್ದರೆ ಆಕೆ ಪ್ರತೀ ಬಾರಿ

ಋತುಮತಿಯಾದಾಗ ಒಂದು ಭ್ರೂಣವನ್ನು ಕೊಂದ ಪಾಪ ಆಕೆಯ ಪೋಷಕರಿಗೆ ತಟ್ಟುತ್ತದೆ"(ಪು.೩೬) ಎಂದು ಹೇಳುತ್ತಾನೆ. ಈ ಆಚರಣೆಯೇ ಬಾಲ್ಯ ವಿವಾಹಕ್ಕೆ ಕಾರಣ ಎಂದು ಹೇಳುತ್ತಾರೆ. ಹಾಗೆಯೇ ತೊಟ್ಟಿಲು ವಿವಾಹಗಳು, ಮಕ್ಕಳು ತಾಯಿಯ ಗರ್ಭದಲ್ಲಿ ಇರುವಾಗಲೇ ನಡೆದ ವಿವಾಹ ಒಪ್ಪಂದಗಳ ಬಗ್ಗೆ ಐತಿಹಾಸಿಕ ದಾಖಲೆಗಳು ಇರುವುದನ್ನು ತಿಳಿಸುತ್ತಾರೆ. ೧೯೨೯ರ ಬಾಲ್ಯ ವಿವಾಹ ನಿಷೇಧ ಕಾಯ್ದೆ ಮತ್ತು ಈ ಕಾಯ್ದೆಗೆ ೧೯೭೮ರಲ್ಲಿ ನಡೆದ ತಿದ್ದುಪಡಿಯ ಕುರಿತಾಗಿ ವಿವರಿಸಿದ್ದಾರೆ. ಸಣ್ಣ ವಯಸ್ಸಿನಲ್ಲಿಯೇ ಹೆಣ್ಣು ಮಕ್ಕಳಿಗೆ ವಿವಾಹ ಮಾಡುವುದರಿಂದ ಅವರ ಭವಿಷ್ಯತ್ತಿನ ಅಭಿವೃದ್ಧಿಗೆ ಎಲ್ಲಾ ವಿಧದಲ್ಲೂ ಅಡ್ಡಿಯುಂಟಾಗುತ್ತದೆ. ಅವರನ್ನು ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿ ಅಜ್ಞಾನಿಗಳನ್ನಾಗಿಸುವುದು , ದೈಹಿಕ, ಮಾನಸಿಕ ತೊಂದರೆಗಳೊಡನೆ ಅಪೌಷ್ಟಿಕತೆ, ಅನಾರೋಗ್ಯದಿಂದ ನರಳಾಡುವುದು ಹೀಗೆ ಹಲವಾರು ಮಾನಸಿಕ ಮತ್ತು ದೈಹಿಕ ತೊಂದರೆಗಳನ್ನು ಪಟ್ಟಿ ಮಾಡಿದ್ದಾರೆ. ಒಟ್ಟಾರೆಯಾಗಿ ಈ ಕೃತಿಯು ಸ್ತ್ರೀವಾದಿ ನೆಲೆಯಲ್ಲಿ ರೂಪಿತಗೊಂಡಿರುವುದರಿಂದ ಅಧ್ಯಯನಕ್ಕೆ ಹೆಚ್ಚು ಅನುಕೂಲವಾಗಿದೆ.

"ವೇದಗಳಲ್ಲಿ ಜನ ಸಾಮಾನ್ಯರು" ಎಂಬ ಕೃತಿಯನ್ನು ಬಿ.ವಿ.ವೀರಭದ್ರಪ್ಪರವರು ರಚಿಸಿದ್ದಾರೆ. ಈ ಕೃತಿಯು ೧೪ ಅಧ್ಯಾಯಗಳನ್ನು ಒಳಗೊಂಡಿದೆ. ಈ ಅಧ್ಯಾಯಗಳಲ್ಲಿ ೧೧ನೇ ಅಧ್ಯಾಯವು 'ಮಹಿಳೆಯರ ಸ್ಥಿತಿಗತಿಗಳು' ಎಂಬುದಾಗಿದ್ದು, ಇದರಲ್ಲಿ ಋಗ್ವೇದ, ಯಜುರ್ವೇದ, ಅಥರ್ವವೇದ ಮತ್ತು ಸಾಮವೇದ ಈ ಕಾಲಘಟ್ಟಗಳಲ್ಲಿ ಮಹಿಳೆಯರ ಸ್ಥಿತಿಗತಿಗಳು ಹೇಗಿದ್ದವು ಎಂಬುದನ್ನು ತಿಳಿಸುತ್ತಾರೆ. "ಪ್ರಾರಂಭದ ವೈಧಿಕ ಕಾಲದಲ್ಲಿ ಬಾಲ್ಯ ವಿವಾಹದ ಕಲ್ಪನೆಯೇ ಇರಲಿಲ್ಲ, ಹುಡುಗಿಯು ಮದುವೆಗೂ ಮುಂಚೆ ಋತುಮತಿಯಾದರೆ ಅವಳ ತಂದೆ ತಾಯಿಗಳು ನರಕಕ್ಕೆ ಹೋಗುತ್ತಾರೆ ಎಂಬ ನಂಬಿಕೆಯೂ ಇರಲಿಲ್ಲ. ವಿಧವೆಯರು ತಮ್ಮ ಮೃತ ಗಂಡನ ಸ್ಮರಣೆ ಮಾಡುತ್ತಾ ಆಜೀವ ಪರ್ಯಂತ ವಿಧವೆಯಾಗಿಯೇ ಉಳಿಯಬೇಕಾಗಿರಲಿಲ್ಲ. ಪ್ರಾರಂಭದ ಆರ್ಯರು ಮಹಿಳೆಯ ಋತುಸ್ರಾವ ವ್ಯರ್ಥವಾಗುವುದನ್ನು ಸಹಿಸುತ್ತಿರಲಿಲ್ಲ. ಕುಟುಂಬ ಮತ್ತು ಬುಡಕಟ್ಟಿನ ಜನಸಂಖ್ಯೆ ವೃದ್ಧಿಯಾಗುವುದು ಅವರಿಗೆ ಬಹು ಮುಖ್ಯವಾಗಿತ್ತು (ಪು.೯೭) ಎಂದು ಹೇಳುತ್ತಾರೆ. ತದನಂತರದ ಕಾಲಘಟ್ಟಗಳಲ್ಲಿ ಮಹಿಳೆಯರ ಸ್ಥಾನಮಾನಗಳು ಕ್ಷೀಣಿಸತೊಡಗಿದವು ಎಂಬುದನ್ನು ತಿಳಿಸುತ್ತಾರೆ. ಈ ಅಧ್ಯಾಯದಲ್ಲಿ ಬಾಲ್ಯವಿವಾಹದ ಕುರಿತ ಮಾಹಿತಿ ಪಾರ್ಶ್ವಿಕವಾಗಿ ಕಂಡುಬಂದಿದೆ. ಆದರೆ ಇದರ ಕುರಿತ ಸಮಗ್ರ ಮಾಹಿತಿಯಿಲ್ಲ. ವೇದಗಳ ಸಂದರ್ಭದ ವಿವರಗಳನ್ನು ಹೊರತುಪಡಿಸಿ, ಅಂದಿನ ಸಂದರ್ಭದ ಮಹಿಳೆಯರ ಸ್ಥಿತಿಗತಿಗಳನ್ನು ವಿಮರ್ಶಾತ್ಮಕವಾಗಿ ವಿವರಿಸದಿರುವುದು ಕಂಡುಬರುತ್ತದೆಯಾದರೂ ಈ ಅಧ್ಯಾಯದಲ್ಲಿನ ಮಾಹಿತಿಗಳು ಸಂಶೋಧನಾ ಅಧ್ಯಯನಕ್ಕೆ ಸಹಕಾರಿಯಾಗಿವೆ.

ಪ್ರೊ. ಬಿ.ವಿ. ವೀರಭದ್ರಪ್ಪ ರವರ "ಭಾರತೀಯ ಮಹಿಳೆಯ ಸಾಂಸ್ಕೃತಿಕ ವಿಕಾಸ" ಎಂಬ ಕೃತಿಯು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟಗೊಂಡಿದೆ. ಈ ಕೃತಿಯು ವೇದಪೂರ್ವ ಕಾಲದಿಂದ ಪ್ರಾರಂಭವಾಗಿ ಸ್ವಾತಂತ್ರ್ಯಾ ನಂತರದ ಕಾಲದವರೆಗೆ ಭಾರತೀಯ ಸಾಂಸ್ಕೃತಿಕ

ಪರಂಪರೆಯಲ್ಲಿ ಮಹಿಳೆಯು ನಡೆದು ಬಂದ ದಾರಿಯನ್ನು ಗುರುತಿಸಿದೆ. ಧರ್ಮಶಾಸ್ತ್ರಗಳು ಮತ್ತು ಪುರಾಣಗಳ ಕಾಲದ ಸಂದರ್ಭದಲ್ಲಿ ಬಾಲ್ಯ ವಿವಾಹ ಪದ್ದತಿಯು ಆರಂಭವಾಯಿತು ಎಂದು ಕೃತಿಕಾರರು ತಿಳಿಸುತ್ತಾರೆ. ವೇದಗಳ ಕಾಲದ ನಂತರ ಧರ್ಮಶಾಸ್ತ್ರಕಾರರು ಹುಡುಗಿಯು ಋತುಮತಿಯಾಗುವುದಕ್ಕೂ ಮೊದಲೇ ಅವಳ ವಿವಾಹವನ್ನು ಮಾಡಬೇಕೆಂಬುದಕ್ಕೆ ಒಮ್ಮತವನ್ನು ಹೊಂದಿದ್ದರು. ಇದಕ್ಕೆ ಆ ಸಂದರ್ಭದಲ್ಲಿನ ಸ್ಮೃತಿಕಾರರ ಹೇಳಿಕೆಗಳೇ ಕಾರಣವಾಗಿವೆ. ಅಂದರೆ "ಯಾಜ್ಞವಲ್ಕ್ಯನ ಪ್ರಕಾರ ಬಾಲಕಿಯನ್ನು ಅವಳು ಋತುಮತಿಯಾಗುವ ಮೊದಲೇ ವಿವಾಹ ಮಾಡದ ತಂದೆ ತಾಯಿಯರು, ಅವಳು ಪ್ರತಿಸಾರಿ ಬಹಿಷ್ಠೆಯಾದಾಗಲೂ ಭ್ರೂಣಹತ್ಯೆಗೆ ಸಮಾನವಾದ ಪಾಪವನ್ನು ಗಳಿಸುತ್ತಾ ಹೋಗುತ್ತಾರೆ. ಇನ್ನೊಬ್ಬ ಧರ್ಮಶಾಸ್ತ್ರಕಾರ ಯಮನ ಪ್ರಕಾರ ಮದುವೆಗೆ ಮೊದಲು ಹುಡುಗಿ ಬಹಿಷ್ಠೆಯಾಗುವುದನ್ನು ಕಂಡ ತಂದೆ, ತಾಯಿ ಮತ್ತು ಹಿರಿಯಣ್ಣ ಈ ಮೂವರೂ ನರಕಕ್ಕೆ ಹೋಗುತ್ತಾರೆ. ಮತ್ತೊಬ್ಬ ಸ್ಮೃತಿಕಾರ ಮರೀಚಿಯ ಪ್ರಕಾರ ಎಂಟು ವರ್ಷದ ಬಾಲಕಿಯನ್ನು ಮದುವೆ ಮಾಡಿಕೊಡುವ ತಂದೆ ಸ್ವರ್ಗಕ್ಕೆ ಹೋಗುತ್ತಾನೆ, ಒಂಬತ್ತು ವರ್ಷದ ಬಾಲಕಿಯನ್ನು ಮದುವೆ ಮಾಡಿಕೊಡುವ ತಂದೆ ವೈಕುಂಟಕ್ಕೆ ಹೋಗುತ್ತಾನೆ, ಅವಳು ಹತ್ತು ವರ್ಷ ತಲುಪುವ ಮುನ್ನ ಮದುವೆ ಮಾಡಿಕೊಡುವ ತಂದೆ ಬ್ರಹ್ಮ ಲೋಕಕ್ಕೆ ಹೋಗುತ್ತಾನೆ. ಆದರೆ ಅವಳು ಋತುಮತಿಯಾದ ಮೇಲೆ ಮದುವೆ ಮಾಡಿಕೊಡುವ ತಂದೆ ನರಕಕ್ಕೆ ಹೋಗುತ್ತಾನೆ ಎಂದು ಹೇಳುತ್ತಾನೆ. ಸ್ವಯಂ ಘೋಷಿತ ಕಲಿಯುಗದ ಧರ್ಮಶಾಸ್ತ್ರಜ್ಞನಾದ ಪರಾಶರನು ಮಗಳು ಹನ್ನೆರಡು ತಲುಪಿದರೂ ತಂದೆ ಮದುವೆ ಮಾಡದೇ ಹೋದರೆ ಅವಳ ಹಿರಿಯರು ಪ್ರತೀ ತಿಂಗಳು ಅವಳ ಋತುಸ್ರಾವವನ್ನು ಕುಡಿಯುತ್ತಾರೆ. ಅವಳನ್ನು ಋತು ಸಮಯದಲ್ಲಿ ಕಾಣುವ ತಂದೆ, ತಾಯಿ ಮತ್ತು ಹಿರಿಯಣ್ಣ ಈ ಮೂವರೂ ನರಕಕ್ಕೆ ಹೋಗುತ್ತಾರೆ. ತಿಳಿಯದೇ ಅಂಥವಳನ್ನು ಮದುವೆಯಾಗುವ ಬ್ರಾಹ್ಮಣನು ಸಹಪಂಕ್ತಿ ಬೋಜನಕ್ಕೆ ಮತ್ತು ಸಂಭಾಷಣೆಗೆ ಅನರ್ಹನಾಗುತ್ತಾನೆ. ಅವನನ್ನು ಶೂದ್ರ ಸ್ತ್ರೀಯ ಗಂಡನೆಂದು ಪರಿಗಣಿಸಬೇಕು"(ಪು.೪೨) ಎಂದು ಹೇಳುತ್ತಾರೆ. ಹೀಗೆ ಬಾಲ್ಯ ವಿವಾಹದ ಕುರಿತಂತೆ ವಿವಿಧ ಧರ್ಮಶಾಸ್ತ್ರಕಾರರು ಅಂದಿನ ಸಂದರ್ಭದಲ್ಲಿ ನಿಯಮಗಳನ್ನು ರೂಪಿಸಿರುವುದನ್ನು ಉಲ್ಲೇಖಿಸಿದ್ದಾರೆ. ಈ ಸಮಯದಲ್ಲಿ ಮದುವೆಯ ಗರಿಷ್ಠ ವಯಸ್ಸನ್ನು ಸೂಚಿಸಿದ್ದರೂ ಕನಿಷ್ಟ ವಯಸ್ಸನ್ನು ಸೂಚಿಸಿಲ್ಲ ಹಾಗಾಗಿ ಶಿಶುಗಳ ವಿವಾಹವನ್ನೂ ಮಾಡುತ್ತಿದ್ದರು. ಇದಕ್ಕೆ ಉಲ್ಲೇಖಗಳನ್ನೂ ನೀಡುತ್ತಾರೆ. ಹಾಗೆಯೇ ಈ ಅಧ್ಯಾಯದಲ್ಲಿ ಬಾಲ್ಯ ವಿವಾಹದಿಂದ ಉಂಟಾಗುವ ಪರಿಣಾಮಗಳನ್ನೂ ಸಹ ಸೂಚಿಸಿದ್ದಾರೆ. ಅಂದರೆ ಆ ಸಂದರ್ಭದಲ್ಲಿ ಬಾಲ್ಯ ವಿವಾಹಕ್ಕೆ ಒಳಗಾಗುವ ಮಹಿಳೆ ಶಿಕ್ಷಣದಿಂದ ವಂಚಿತಳಾಗಿ ಮನೆತನದ ಗೌರವವನ್ನು ಉಳಿಸುವ ಹಾಗೂ ತಾಯ್ತನದ ಜವಾಬ್ದಾರಿಯನ್ನು ನಿಭಾಯಿಸುವ ಕೆಲಸಗಳಿಗೆ ಸೀಮಿತಳಾಗುತ್ತಿದ್ದಳು. ಹೀಗೆ ಈ ಕೃತಿ ಬಾಲ್ಯ ವಿವಾಹದ ಕುರಿತಂತೆ ಚಾರಿತ್ರಿಕ ನೆಲೆಯನ್ನು ಕಂಡುಕೊಳ್ಳಲು ಸಹಕಾರಿಯಾಗಿದೆ.

"ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು" ಈ ಕೃತಿಯನ್ನು ಡಾ.ಎಂ.ಉಷಾ ರವರು ರಚಿಸಿದ್ದಾರೆ. ಇದನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟಿಸಲಾಗಿದೆ. ಈ ಕೃತಿಯು ಆರು ಭಾಗಗಳಲ್ಲಿ ವಿಸ್ತರಿಸಿಕೊಂಡಿದ್ದು ಮಹಿಳಾ ವಿಷಯಗಳನ್ನಿಟ್ಟುಕೊಂಡು ಮಹಿಳಾ ಚಳುವಳಿಗಳು ನಡೆದು ಬಂದ ದಾರಿಯನ್ನು ಚರ್ಚಿಸಿದ್ದಾರೆ. ವಸಾಹತುಶಾಹಿ ಸಂದರ್ಭದಲ್ಲಿ ಭಾರತವು ಕೈಗೆತ್ತಿಕೊಂಡ ವಿಷಯಗಳಲ್ಲಿ ಬಾಲ್ಯ ವಿವಾಹವೂ ಒಂದಾಗಿದೆ. ಬಾಲ್ಯ ವಿವಾಹ ಪದ್ಧತಿ ಎಂದು ಆರಂಭಗೊಂಡಿತು ಎಂಬುದನ್ನು ನಿಖರವಾಗಿ ಹೇಳುವುದು ಸಾಧ್ಯವಿಲ್ಲ ಎಂಬುದನ್ನು ತಿಳಿಸುತ್ತಾರೆ. ಇವರ ಪ್ರಕಾರ "ಇದು ಮಧ್ಯಕಾಲೀನ ಬೆಳವಣಿಗೆಯಾಗಿದೆ. ಕಾಲದಿಂದ ಕಾಲಕ್ಕೆ ಹೆಚ್ಚುತ್ತಾ ಹೋದ ಪಾವಿತ್ರ್ಯದ ಕಲ್ಪನೆ , ಹೆಣ್ಣಿನ ಪಾವಿತ್ರ್ಯ ನಾಶವನ್ನೇ ಪೌರುಷದ ಸಂಕೇತವಾಗಿ ಪ್ರಕಟಿಸುತ್ತಾ ಬಂದ ಸಾಮಾಜಿಕ ಧೋರಣೆಗಳ ನಡುವಿನ ತಿಕ್ಕಾಟದಲ್ಲಿ ವಿವಾಹವೇ ಸ್ತ್ರೀಗೆ ಭದ್ರತೆಯನ್ನೊದಗಿಸುವ, ಪಾವಿತ್ರ್ಯವನ್ನು ರಕ್ಷಿಸುವ ಏಕೈಕ ಸಂಸ್ಥೆ ಎಂಬ ನಿಲುವು ಬಲಗೊಳ್ಳುತ್ತಾ ಹೋಗಿ ಅಂತಿಮವಾಗಿ ಅದು ಬಾಲ್ಯ ವಿವಾಹ, ತೊಟ್ಟಿಲು ವಿವಾಹಗಳ ಹಂತವನ್ನು ತಲುಪಿತು"(ಪು.೭೫) ಎಂದು ಹೇಳುತ್ತಾರೆ. ೧೯ನೇ ಶತಮಾನದಲ್ಲಿ ಸತೀ ಪದ್ಧತಿಯನ್ನು ನಿರ್ಮೂಲನ ಮಾಡಲು ಸುಧಾರಣಾವಾದಿಗಳು ನಿರ್ಧರಿಸಿದ್ದರು. ಅದರ ಬೆನ್ನಲ್ಲಿಯೇ ಬಾಲ್ಯ ವಿವಾಹ ಪದ್ಧತಿಯನ್ನೂ ನಿರ್ಮೂಲನೆ ಮಾಡಲು ಮುಂದಾದರು. ಈ ಸಂದರ್ಭದ ಪ್ರಯತ್ನದ ಫಲವಾಗಿ ೧೯೨೯ರಲ್ಲಿ ಸರ್‌ದ ಕಾಯಿದೆ ಜಾರಿಗೆ ಬಂದಿತು. ಇದರ ಪ್ರಕಾರ ಹೆಣ್ಣು ಮಕ್ಕಳ ವಿವಾಹ ವಯಸ್ಸನ್ನು ೧೪ಕ್ಕೆ ಏರಿಸಲಾಯಿತು. ನಂತರ ೧೯೭೬ ರಲ್ಲಿ ಈ ಕಾಯ್ದೆಗೆ ತಿದ್ದುಪಡಿಯನ್ನು ಮಾಡಲಾಯಿತು. ಇದರ ಪ್ರಕಾರ ಮದುವೆಯಾಗುವ ಹೆಣ್ಣು ಗಂಡಿನ ವಯಸ್ಸು ೧೮–೨೧ ಎಂದು ನಿರ್ಧರಿಸಲಾಗಿದೆ. ಒಟ್ಟಾರೆಯಾಗಿ ೧೯ನೇ ಶತಮಾನದಲ್ಲಿ ನಡೆದ ಸಮಾಜ ಸುಧಾರಣೆಯ ಸಂದರ್ಭದಲ್ಲಿನ ಮಹಿಳೆಯರಿಗೆ ಸಂಬಂಧಿಸಿದ ವಿಷಯಗಳಲ್ಲಿ ಬಾಲ್ಯ ವಿವಾಹವೂ ಒಂದಾಗಿದ್ದು ಅದನ್ನು ಹೋಗಲಾಡಿಸಲು ಯಾವ ಯಾವ ಕ್ರಮಗಳನ್ನು ಅನುಸರಿಸಲಾಗಿತ್ತು ಎಂಬುದನ್ನು ವಿವರಿಸಲಾಗಿದೆ. ಒಟ್ಟಾರೆಯಾಗಿ ಈ ಕೃತಿಯು ಬಾಲ್ಯ ವಿವಾಹವನ್ನು ಒಳಗೊಂಡಂತೆ ಸತಿ ಪದ್ಧತಿ. ಸ್ತ್ರೀ ಶಿಕ್ಷಣ, ಅತ್ಯಾಚಾರ, ವೈಧವ್ಯ, ಹೆಣ್ಣು ಶಿಶುಹತ್ಯೆ, ಆಸ್ತಿಹಕ್ಕು ಹೀಗೆ ಇನ್ನು ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಚಳುವಳಿಗಳು ಹೇಗೆ ನಡೆದವು ಮತ್ತು ಅದರಿಂದ ಬಂದಂತಹ ಫಲಿತಾಂಶದ ಬಗ್ಗೆ ಸ್ತ್ರೀವಾದಿ ನೆಲೆಯಲ್ಲಿ ವಿವರಿಸಿದ್ದಾರೆ.

ಬಾಲ್ಯ ವಿವಾಹದ ಕುರಿತಂತೆ ಈವರೆಗೆ ಸಮೀಕ್ಷೆಗೊಳಪಟ್ಟ ಎಲ್ಲ ಬರಹ/ಮಾಹಿತಿಯನ್ನು ವಿಶ್ಲೇಷಿಸಿದಾಗ ಕಂಡುಬಂದ ಅಂಶಗಳನ್ನು ಕೆಲವು ಹಂತಗಳಲ್ಲಿ ವಿವರಿಸಿಕೊಳ್ಳಲು ಸಾಧ್ಯವಾಗಿದೆ. ಮುಖ್ಯವಾಗಿ ಬಾಲ್ಯ ವಿವಾಹದ ಕುರಿತು ಕರ್ನಾಟಕದ ಉತ್ತರ ಭಾಗದಲ್ಲಿನ ಜಿಲ್ಲೆಗಳಲ್ಲಿ ನಡೆದಿರುವ ಸಮೀಕ್ಷಾ ವರದಿಯು ತಿಳಿಸುವಂತೆ ಬಾಲ್ಯ ವಿವಾಹಕ್ಕೆ ಇರುವಂತಹ ಕಾರಣಗಳು ಮತ್ತು ಅವುಗಳಿಂದಾಗುವ ದುಷ್ಪರಿಣಾಮಗಳನ್ನು ಕುರಿತು ವಿವರಿಸಲಾಗಿದೆ. ಹಾಗೆಯೇ ಕೆಲವು

ಲೇಖನಗಳಲ್ಲಿ ತಿಳಿಸಿರುವಂತೆ ಬಾಲ್ಯ ವಿವಾಹ ನಿಷೇಧ ಕಾಯಿದೆಯ ಕುರಿತ ಪ್ರಾಥಮಿಕ ಮಾಹಿತಿ ನೀಡಿರುವುದು, ಹಾಗೆಯೇ ದೇಶದಲ್ಲಿ ನಡೆದ ವಿವಿಧ ಅಧ್ಯಯನಗಳು ಸೂಕ್ಷ್ಮ ನೆಲೆಯ ಸಂಶೋಧನಾ ಮಾಹಿತಿಯನ್ನು ನೀಡಲಾಗಿದೆ. ಬಾಲ್ಯ ವಿವಾಹ ನಿಷೇಧದ ಕುರಿತಂತೆ ನಡೆಸಿರುವ ಕಾರ್ಯ ಯೋಜನೆಗಳ ಕುರಿತಾಗಿ ಮಾಹಿತಿಯು ದೊರೆಯುತ್ತದೆ. ಕರ್ನಾಟಕದ ಸಂದರ್ಭಕ್ಕೆ ಸೂಕ್ಷ್ಮವಾದ ಸಂಶೋಧನೆಗಳು ನಡೆದಿಲ್ಲವೆಂದೇ ಹೇಳಬಹುದು. ಅಂದರೆ ಬಾಲ್ಯ ವಿವಾಹಕ್ಕೆ ಇರಬಹುದಾದ ಕಾರಣಗಳನ್ನು ಮತ್ತು ಹೆಣ್ಣುಮಕ್ಕಳು ಎದುರಿಸುತ್ತಿರುವ ಪರಿಣಾಮಗಳನ್ನು ಸ್ತ್ರೀವಾದಿ ನೆಲೆಯಲ್ಲಿ ವಿಶ್ಲೇಷಿಸುವ ನೆಲೆಯಲ್ಲಿ ಅಧ್ಯಯನಗಳು ನಡೆದಿಲ್ಲ. ಮುಖ್ಯವಾಗಿ ಬಾಲ್ಯ ವಿವಾಹವನ್ನು ನಿಷೇಧಿಸುವ ಸಲುವಾಗಿ ಕಾನೂನುಗಳು ಜಾರಿಯಾಗಿವೆ ಮತ್ತು ಕಾಲದಿಂದ ಕಾಲಕ್ಕೆ ಹಲವು ತಿದ್ದುಪಡಿಗಳಿಗೆ ಒಳಗಾಗಿರುವುದು ಕಂಡುಬರುತ್ತದೆ. ಆ ಮೂಲಕ ಮಕ್ಕಳ ಹಕ್ಕುಗಳನ್ನು ರಕ್ಷಿಸುವ ಮತ್ತು ಈ ಕಾಯಿದೆಯ ಸಂಪೂರ್ಣವಾದ ಲಾಭವನ್ನು ಪಡೆಯುವುದರ ಮೂಲಕ ಸ್ವಸ್ಥ ಸಮಾಜ ನಿರ್ಮಾಣಕ್ಕೆ ಹೇಗೆ ಕಾರಣವಾಗಿದೆ ಎಂಬುದನ್ನು ತಿಳಿಸುತ್ತದೆ. ಆದರೆ ಬಾಲ್ಯ ವಿವಾಹ ನಿಷೇಧ ಕಾಯಿದೆ ತಿದ್ದುಪಡಿಯ ವಿವರಗಳು ವಿಸ್ತೃತವಾಗಿ ಇಲ್ಲಿಯವರೆಗಿನ ಅಧ್ಯಯನಗಳಲ್ಲಿ ಕಂಡುಬಂದಿರುವುದಿಲ್ಲ. ಆದಂತಹ ಮಾರ್ಪಾಡುಗಳು ಆ ಮೂಲಕ ದೊರೆಯುವ ಸೌಲಭ್ಯಗಳನ್ನು ಮಾತ್ರ ತಿಳಿಸುವ ರೀತಿಯಲ್ಲಿ ಲೇಖನಗಳಲ್ಲಿ ಪಾರ್ಶ್ವಿಕವಾಗಿ ಕಾಣಬಹುದಾಗಿದೆ. ಬಾಲ್ಯ ವಿವಾಹ ನಿಷೇಧವು ಕಾಯಿದೆಯಾಗಿ ಜಾರಿಯಾಗಿರುವುದು ಒಂದು ನೆಲೆಯಾದರೆ ಅದರ ಅನುಷ್ಠಾನದ ಸಂಗತಿಗಳು ಮತ್ತೊಂದು ನೆಲೆ ಮತ್ತು ಈ ಕಾಯಿದೆ ಮಹಿಳೆಯರನ್ನು ಒಳಗೊಳ್ಳುವ ಬಗೆಯನ್ನು ಅನಾವರಣಗೊಳಿಸಬೇಕಾದ ಅನಿವಾರ್ಯತೆ ಇದೆ.

ಬಾಲ್ಯ ವಿವಾಹ ನಿಷೇಧವು ಒಂದು ಕಾಯಿದೆಯಾಗಿ ಸಾರ್ವತ್ರಿಕವಾದುದಾದರೆ ಅನುಷ್ಠಾನದ ಹಿನ್ನೆಲೆಯಲ್ಲಿ ಇದರ ನಿರ್ವಚನ ಭಿನ್ನವೇ ಆಗಿದೆ. ಅಂದರೆ ಪ್ರಾದೇಶಿಕವಾಗಿ, ಧರ್ಮ, ಜಾತಿ ಮತ್ತು ವರ್ಗದ ಹಿನ್ನೆಲೆಯಲ್ಲಿ ಹಲವು ಸೂಕ್ಷ್ಮ ಆಯಾಮಗಳಲ್ಲಿ ಲಿಂಗತಾರತಮ್ಯದ ನೆಲೆಗಳು ರೂಪಿತವಾಗಿರುತ್ತವೆ ಎಂಬ ಸೂಕ್ಷ್ಮಗಳನ್ನು ಗಮನದಲ್ಲಿರಿಸಿಕೊಂಡು ಕ್ಷೇತ್ರಕಾರ್ಯವನ್ನು ಕೈಗೊಂಡು ಮಾಹಿತಿ ಸಂಗ್ರಹಣೆ ಮತ್ತು ಸ್ತ್ರೀವಾದಿ ಹಿನ್ನೆಲೆಯಲ್ಲಿ ವಿಶ್ಲೇಷಣೆಯನ್ನು ಮಾಡಲಾಗಿದೆ. ಈ ಕಾರಣಕ್ಕಾಗಿ ಇದುವರೆಗಿನ ಅಧ್ಯಯನಗಳಿಗಿಂತ ಪ್ರಸ್ತುತ ಅಧ್ಯಯನವು ಭಿನ್ನವಾಗಿದೆ. ಒಟ್ಟಾರೆಯಾಗಿ ಬಾಲ್ಯ ವಿವಾಹ ನಿಷೇಧ ಕಾನೂನಿನಲ್ಲಿರುವ ಲಿಂಗಸಂಬಂಧಿ ಸೂಕ್ಷ್ಮಗಳನ್ನು ಗಮನಿಸಲಾಗುವುದು. ಕಾಯಿದೆಯ ಬಳಕೆಯಲ್ಲಿ ಅಥವಾ ಅನುಷ್ಠಾನದ ಸಂದರ್ಭದಲ್ಲಿ ಮಹಿಳೆಯರು ಎದುರಿಸುತ್ತಿರುವ ಅನಿವಾರ್ಯತೆಗಳನ್ನು ಗಮನಿಸಿ, ಕಾಯಿದೆ ಮತ್ತು ವ್ಯವಸ್ಥೆ ಹಾಗೂ ಮಹಿಳೆಯರ ಸಂವೇದನೆಯ ನಡುವಿನ ಸಂಘರ್ಷಗಳನ್ನು ಗುರುತಿಸುವ ಮತ್ತು ವಿಶ್ಲೇಷಿಸುವ ಸಾಧ್ಯತೆಯೆಡೆಗಿನ ಅಧ್ಯಯನ ಇದಾಗಿದೆ.

## ಅಧ್ಯಾಯ ಮೂರು

# ಬಾಲ್ಯ ವಿವಾಹ ಪದ್ಧತಿ : ಚಾರಿತ್ರಿಕ ಹಿನ್ನೆಲೆ

ವ್ಯವಸ್ಥೆಯಲ್ಲಿ ವಿವಾಹ ಎಂಬ ಪದಕ್ಕೆ ಅರ್ಥ ವ್ಯಾಖ್ಯಾನ ಅಥವಾ ಅರ್ಥ ಪ್ರಾಮುಖ್ಯತೆ ಇದೆ. ಇದೊಂದು ಸಮಾಜದ ಬಲಿಷ್ಠ ಸಂಸ್ಥೆಯಾಗಿದೆ. ಸ್ತ್ರೀಪುರುಷರು ಈ ಸಂಸ್ಥೆಗೆ ಅನಿವಾರ್ಯವಾಗಿ ಒಳಗಾಗಬೇಕಿದೆ. ಇದರಲ್ಲಿ ಪಾಲ್ಗೊಳ್ಳುವವರು ಸ್ತ್ರೀಪುರುಷರಿಬ್ಬರಾದರೂ ಇಲ್ಲಿ ಮಹಿಳೆಗೆ ಅಧೀನತೆಯನ್ನು ಪುರುಷರಿಗೆ ಅಧಿಕಾರವನ್ನು ದೊರಕಿಸಿಕೊಡುವ ಸಂಸ್ಥೆಯಾಗಿದೆ. ವಿವಾಹ ಎಂಬುದು ಪುರುಷರಿಗೆ ಆಯ್ಕೆಯ ವಿಚಾರವಾದರೆ, ಮಹಿಳೆಗೆ ಯಾವುದೇ ಆಯ್ಕೆಗಳಿಲ್ಲ. ವಿವಾಹಕ್ಕೆ ಒಳಗಾದ ಪುರುಷ ಆ ಸಂಸ್ಥೆಗೆ ನಿಷ್ಠೆಯಿಂದ ಇರಬೇಕೆಂದೇನೂ ಇಲ್ಲ. ಬದಲಾಗಿ ಈ ಸಂಸ್ಥೆಯಲ್ಲಿದ್ದುಕೊಂಡೇ ಉಳಿದೆಲ್ಲಾ ಸಂಸ್ಥೆಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುವ ಆಯ್ಕೆಗಳು ಅವನ ಮುಂದಿವೆ. ಆದರೆ ಮಹಿಳೆಯ ವಿಷಯದಲ್ಲಿ ಹಾಗಾಗುವುದಿಲ್ಲ. ಮಹಿಳೆ ಯಾವಾಗ ವಿವಾಹ ಎಂಬ ಸಂಸ್ಥೆಯನ್ನು ಪ್ರವೇಶಿಸುತ್ತಾಳೋ ಅಂದಿನಿಂದಲೇ ತನ್ನೆಲ್ಲಾ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಾಳೆ. ವಿವಾಹವು ಮಹಿಳೆಗೆ ಲೌಕಿಕವಾದ ಮತ್ತು ಪಾರಮಾರ್ಥಿಕವಾದ ಸಾರ್ಥಕಗಳನ್ನು ಒದಗಿಸಿಕೊಡುವ ಏಕೈಕ ಸಂಸ್ಥೆ ಎಂಬ ನಂಬಿಕೆ ಸಮಾಜದಲ್ಲಿ ಬಲಿಷ್ಟವಾಗಿ ಬೇರೂರಿಬಿಟ್ಟಿದೆ. ಆದ್ದರಿಂದ ಮಹಿಳೆ ಈ ಹಂತವನ್ನು ದಾಟಿ ಮುಂದಿನ ಹಂತಗಳಾದ ತಾಯಿ, ತಾಯ್ತನದ ಅನುಭವಗಳನ್ನು ಪಡೆಯುವಂತಿಲ್ಲ. ಹಾಗಾಗಿ ಸಮಾಜ ಒಪ್ಪಿತ ನೆಲೆಯಲ್ಲಿಯೇ ಮಹಿಳೆ ವಿವಾಹಕ್ಕೆ ಒಳಗಾಗುವ ಅನಿವಾರ್ಯತೆಗೆ ಒಳಗಾಗುತ್ತಿದ್ದಾಳೆ. ವಿವಾಹದ ಮುಖ್ಯ ಧ್ಯೇಯ ಮಹಿಳೆಯ ಲೈಂಗಿಕತೆಯ ಮೇಲೆ ಅಧಿಕಾರವನ್ನು ಸ್ಥಾಪಿಸುವುದಾಗಿದೆ. ಆ ಹಿನ್ನೆಲೆಯಲ್ಲಿಯೇ ಅವಳ ಪಾತಿವ್ರತ್ಯವನ್ನು ಕಾಪಾಡಿಕೊಳ್ಳುವ ಹೊಣೆಗಾರಿಕೆಯನ್ನು ಮಹಿಳೆಯ ಮೇಲೆಯೇ ಹೇರುವಂತಹ ಕೆಲಸ ನಡೆಯುತ್ತಿದೆ. ಮುಖ್ಯವಾಗಿ ಶೀಲ, ಪಾತಿವ್ರತ್ಯ ಇವುಗಳು ಕೇವಲ ಮಹಿಳೆಗೆ ಮಾತ್ರ ಸೀಮಿತವಾಗಿವೆಯೇ ಹೊರತು ಪುರುಷರಿಗಲ್ಲ. ಅವನು ಅವುಗಳಿಂದ ಹೊರತಾದವನು.

ವಿವಾಹ ಸಂಸ್ಥೆ ಮಾನವನಷ್ಟೇ ಪ್ರಾಚೀನವಾದುದು. ಭಾರತದಲ್ಲಿ ವಿವಾಹವನ್ನು ಒಂದು ಧಾರ್ಮಿಕ ಸಂಸ್ಕಾರವೆಂದು ಪರಿಗಣಿಸಲಾಗಿದೆ. ವಿವಾಹಗಳು ಧಾರ್ಮಿಕ ರೀತಿ–ನೀತಿ, ನಡವಳಿಕೆಗಳಿಗನುಸಾರವಾಗಿ ಸಂಪ್ರದಾಯಬದ್ಧವಾಗಿ ನಡೆಯುತ್ತವೆ. ಹಿಂದೂ ಧರ್ಮದ ಪ್ರಕಾರ ವಿವಾಹವು ಅತೀ ಮುಖ್ಯವಾದ ಸಂಸ್ಕಾರ. ಇದು ದೇವರಿಂದ ಕಟ್ಟಲ್ಪಟ್ಟ ಒಂದು ಪವಿತ್ರವಾದ ಬಂಧನವೆಂಬ ನಂಬಿಕೆ ಇದೆ. ಮದುವೆಯಿಲ್ಲದೇ ಮೋಕ್ಷವಿಲ್ಲವೆಂಬ ನಂಬಿಕೆಯೂ ಇದೆ. ಹಾಗೆಯೇ ಹುಡುಗಿ ಪ್ರಾಪ್ತವಯಸ್ಕಳಾಗಿಯೂ ವಿವಾಹವಾಗದಿದ್ದರೆ ಕುಲಕ್ಕೆ ಕಳಂಕಪ್ರಾಯಳೆಂಬ ಬಿರುದು ಹಾಗೂ ನರಕಕ್ಕೆ ದಾರಿಯೆಂಬ ನಂಬಿಕೆಯೂ ಇದೆ. ಹಾಗೆಯೇ ಸಂಸ್ಕಾರಗಳಲ್ಲಿ ಅತೀ ಮುಖ್ಯವಾದುದು ವಿವಾಹ. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಇವುಗಳು ಸಾಧಿತ ವಾಗುವುದು ವಿವಾಹದಿಂದಲೇ. ಇವುಗಳನ್ನು ಹೊಂದುವುದು ಪ್ರತಿಯೊಬ್ಬ ಹಿಂದುವೂ ಗಳಿಸತಕ್ಕ ಪುರುಷಾರ್ಥಗಳಾಗಿವೆ. ಹೆಣ್ಣಿಲ್ಲದವನ ಸಂಸಾರ ಮರಳೊಳಗೆ ಎಣ್ಣೆ ಹೊಯ್ದಂತೆ, ಪುರುಷನಿಲ್ಲದವಳ ಬಾಳುವೆ ನೀರೊಳಕ್ಷರವ ಬರೆದಂತೆ, ಸ್ತ್ರೀ ಪುರುಷರಿಬ್ಬರಿಗೂ ಒಬ್ಬರ ಕಣ್ಣಿಗೊಬ್ಬರು ಬೆಳಕಾಗಿ, ಹಕ್ಕಿಯ ಎರಡು ರೆಕ್ಕೆಗಳಿದ್ದಂತೆ ಸಹಕರಿಸಿದರೆ ಇಬ್ಬರಿಗೂ ಶಾಂತಿ ಶ್ರೇಯಸ್ಸು ದೊರೆಯುತ್ತದೆ ಎಂಬುದು ಹಿಂದೂ ಧರ್ಮದ ಆಶಯ. ಹೀಗೆ ವಿವಾಹ ಸಂಸ್ಥೆಯ ಕುರಿತಂತೆ ಸ್ಮೃತಿಗಳು ಅಷ್ಟವಿಧ ವಿವಾಹಗಳನ್ನು ವಿವರಿಸುತ್ತವೆ. ಪ್ರಾಚೀನ ಭಾರತೀಯರಲ್ಲಿ ಎಂಟು ಬಗೆಯ ವಿವಾಹ ಪದ್ಧತಿಗಳು ರೂಢಿಯಲ್ಲಿದ್ದವು. ಈ ಎಂಟೂ ಬಗೆಗಳೂ ಧರ್ಮಸೂತ್ರಗಳಲ್ಲಿ, ಗೃಹ್ಯಸೂತ್ರಗಳಲ್ಲಿ ನಿರೂಪಿತವಾಗಿವೆ. ಅವುಗಳೆಂದರೆ,

೧. "ಬ್ರಹ್ಮವಿವಾಹ : ವಿವಾಹವಾಗುವ ಕನ್ಯೆಯ ತಂದೆಯು ತನ್ನ ಮಗಳನ್ನು ಚಿನ್ನ, ಬೆಳ್ಳಿ, ವಸ್ತ್ರ, ವೈಢೂರ್ಯಗಳಿಂದ ಸಿಂಗರಿಸಿ ಸುಯೋಗ್ಯವಂತನಾದ, ವಿದ್ಯಾವಂತನಾದ ವರನನ್ನು ಅವನ ಅನುಮತಿಯ ಮೇರೆಗೆ ಅವನಿಗೆ ಧಾರೆಯೆರೆದು ಕೊಡುತ್ತಾನೆ. ಇದನ್ನು ಕನ್ಯಾದಾನವೆಂದೂ ಕರೆಯುತ್ತಾರೆ.

೨. ದೈವ ವಿವಾಹ : ತನ್ನ ಯಜ್ಞಯಾಗಾದಿ ಕಾರ್ಯಗಳನ್ನು ಮಾಡಿಕೊಟ್ಟಂತಹ ಪುರೋಹಿತನಿಗೆ ಸಾಲಾಂಕೃತಳಾಗಿರುವ ತನ್ನ ಮಗಳನ್ನು ದಕ್ಷಿಣೆಯಾಗಿ ಕೊಟ್ಟು ವಿವಾಹ ವಿಧಿಗಳನ್ನು ಕನ್ಯಾ ತಂದೆಯು ನೆರವೇರಿಸುತ್ತಾನೆ. ಯಜ್ಞದ ಯಶಸ್ಸನ್ನು ಸಂಕೇತಿಸಲು ದಕ್ಷಿಣೆಯ ಬದಲು ಕನ್ಯಾ ತಂದೆಯು ತನ್ನ ಮಗಳನ್ನೇ ವಿವಾಹ ಮಾಡಿಕೊಡುವ ಪದ್ಧತಿ.

೩. ಆರ್ಷ ವಿವಾಹ : ಗೃಹಸ್ಥಾಶ್ರಮದ ಪವಿತ್ರ ಜವಾಬ್ದಾರಿಗಳನ್ನು ನಿರ್ವಹಿಸಲು ಸಮರ್ಥನಾಗಿರುವ ವರನಿಂದ ಕನ್ಯೆಯ ತಂದೆಯು ಒಂದು ಆಕಳು ಅಥವಾ ಒಂದು ಎತ್ತು ಅಥವಾ ಎರಡನ್ನೂ ಪಡೆದು ತನ್ನ ಮಗಳನ್ನು ವಿವಾಹ ಮಾಡಿಕೊಡುವ ಪದ್ಧತಿ.

೪. ಪ್ರಜಾಪತ್ಯ ವಿವಾಹ : ಕನ್ಯಾ ತಂದೆಯು ತನ್ನ ಮಗಳನ್ನು ಯೋಗ್ಯ ವರನಿಗೆ ನೀಡಿ ಕನ್ಯಾದಾನ ಮಾಡಿ ನೀವಿಬ್ಬರೂ ಸಹ ಜೀವನವನ್ನು ಮಾಡುತ್ತಾ ನಿಮ್ಮ ಧರ್ಮವನ್ನು ಆಚರಣೆಗೆ ತನ್ನಿ ಎಂದು ಆಶೀರ್ವಚನ ನೀಡುತ್ತಾನೆ. ಇಲ್ಲಿಗೆ ಪ್ರಜಾಪತ್ಯ ವಿವಾಹ ಮುಗಿಯಿತು.

೫. ಅಸುರ ವಿವಾಹ : ಈ ವಿವಾಹದಲ್ಲಿ ವರನ ಪಾತ್ರ ಪ್ರಮುಖವಾಗಿರುತ್ತದೆ. ವರನಾದವನು ವಧುವಿನ ತಂದೆಗೆ ಅಥವಾ ಆಕೆಯ ಸಂಬಂಧಿಕರಿಗೆ ತನ್ನ ಕೈಲಾದಷ್ಟು ಕನ್ಯಾ ಶುಲ್ಕ ಅಥವಾ ವರದಕ್ಷಿಣೆಯನ್ನು ನೀಡಿ ಆಕೆಯನ್ನು ವಿವಾಹವಾಗುತ್ತಾನೆ. ಈ ವಿವಾಹದಲ್ಲಿ ವರನು ವಧುವನ್ನು ಕೊಂಡುಕೊಂಡಂತಾಗುತ್ತದೆ. ಹಾಗಾಗಿ ಈ ವಿವಾಹಕ್ಕೆ ಒಳಗಾದ ಮಹಿಳೆಯರು ಯಜ್ಞಯಾಗಾದಿಗಳಲ್ಲಿ ಪಾಲ್ಗೊಳ್ಳುವಂತಿರಲಿಲ್ಲ.

೬. ಗಾಂಧರ್ವ ವಿವಾಹ : ಈ ವಿವಾಹದಲ್ಲಿ ವಧು ವರರು ಬೇರೆಯವರ ಒತ್ತಡವಿಲ್ಲದೇ ಪರಸ್ಪರ ಪ್ರೇಮಿಸಿ ಒಬ್ಬರನ್ನೊಬ್ಬರು ವಿವಾಹವಾಗುತ್ತಾರೆ. ಇಂತಹ ವಿವಾಹಕ್ಕೆ ತಂದೆ ತಾಯಿಯರ ಪೂರ್ವಾನುಮತಿ ಬೇಕಿದ್ದಿಲ್ಲ.

೭. ರಾಕ್ಷಸ ವಿವಾಹ : ಕನ್ಯೆಯನ್ನು ಅವಳ ಅನುಮತಿಯ ಸಹಿತವಾಗಿ ಅಥವಾ ಅನುಮತಿ ರಹಿತವಾಗಿ ಅಪಹರಿಸಿಕೊಂಡು ಹೋಗಿ ವಿವಾಹವಾಗುವುದು.

೮. ಪೈಶಾಚ ವಿವಾಹ : ಇದು ಅತ್ಯಂತ ನಿಕೃಷ್ಟವಾದ ವಿವಾಹ. ನಿದ್ರೆ ಮಾಡುತ್ತಿರುವ, ಪ್ರಜ್ಞೆ ತಪ್ಪಿರುವ, ಮಾನಸಿಕವಾಗಿ ಸ್ವಸ್ಥಳಿಲ್ಲದ ಕನ್ಯೆಯನ್ನು ಮೋಸದಿಂದ ಕೂಡಿ ಆ ನಂತರ ಆಕೆಯನ್ನು ವಿವಾಹವಾದಲ್ಲಿ ಅದನ್ನು ಪೈಶಾಚ ವಿವಾಹ" (ಪೂರ್ವಾಚಾರ್ ಎಂ, ೨೦೦೨, ಪು–೧೧೪) ಎನ್ನುವರು. ಹೀಗೆ ವೇದಗಳ ಕಾಲದಲ್ಲಿ ವಿವಾಹ ಪದ್ಧತಿಯಲ್ಲಿ ಎಂಟು ಪ್ರಕಾರಗಳಿರುವುದನ್ನು ಗುರುತಿಸಲಾಗಿದೆ.

ವಿವಾಹವು ಮಾನವ ಜೀವನದ ಅತ್ಯಂತ ಪ್ರಮುಖ ಘಟ್ಟವಾಗಿದೆ. ವಿವಾಹವು ಸಂತಾನೋತ್ಪತ್ತಿಯ ಮುಂದುವರಿಕೆಯ ಸಂಸ್ಥೆಯಾಗಿದೆ. ಮಹಿಳೆಯನ್ನು ಸಂರಕ್ಷಿಸಬೇಕು, ಅವಳು ಯಾವಾಗಲೂ ಗಂಡಿನ ಆಶ್ರಯದಲ್ಲಿಯೇ ಇರಬೇಕು ಎಂಬ ನಿಲುವುಗಳು ಈ ವ್ಯವಸ್ಥೆಯದ್ದಾಗಿದೆ. ಮಹಿಳೆಯನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವ ಸಲುವಾಗಿಯೇ ಅವಳಿಗೆ ಬಹು ಬೇಗನೇ ವಿವಾಹ ಮಾಡುವುದು ಸೂಕ್ತ ಎಂಬ ನಿಲುವುಗಳು ಬಹಳ ಹಿಂದೆಯೇ ರೂಪಿಸಲ್ಪಟ್ಟಿತ್ತು. ಆ ಕಾರಣಕ್ಕಾಗಿ  ಮದುವೆಗೆ ಮುಂಚೆ ಹೆಣ್ಣು ಮಗುವಿನ ಸಂರಕ್ಷಣೆಯ ಜವಾಬ್ದಾರಿ ತಂದೆಗೆ ಇರುತ್ತದೆ. ಮದುವೆಯ ನಂತರ ಅದು ತಂದೆಯಿಂದ ಗಂಡನಿಗೆ ವರ್ಗಾಯಿಸಲ್ಪಡುತ್ತದೆ. 'ಸಂರಕ್ಷಿಸುವುದು' ಅಥವಾ 'ರಕ್ಷಣೆ ನೀಡುವುದು' ಎಂಬ ಹಣೆಪಟ್ಟಿಯ ಕೆಳಗೆ ಚಿಕ್ಕ ಮಕ್ಕಳಿಗೆ ವಿವಾಹ ಮಾಡಲಾಯಿತು. ವಿವಾಹ ಎಂದರೆ ಏನು ಎಂದು ಅರಿಯದ ವಯಸ್ಸಿನಲ್ಲಿಯೇ ಮದುವೆ ಮಾಡಿಬಿಡುವಂತಹ ಪದ್ಧತಿ ರೂಢಿಯಲ್ಲಿತ್ತು. ಇದೊಂದು ಅಮಾನವೀಯ ಸಂಗತಿ. ಈ ಮೂಲಕ ಮಹಿಳೆ ತನ್ನೆಲ್ಲಾ ಸ್ವಾತಂತ್ರ್ಯವನ್ನು ಕಳೆದುಕೊಂಡಳು. ಇಂದು ಬಾಲ್ಯ ವಿವಾಹಗಳು ಎಂದು ಗುರುತಿಸಲ್ಪಡುತ್ತಿರುವ ವಿವಾಹಗಳಿಗೆ ಹಲವಾರು ವರ್ಷಗಳ ಇತಿಹಾಸವೇ ಇದೆ. ಆದರೆ ಇದು ಯಾವಾಗ ಆರಂಭವಾಯಿತು ಎಂದು ಖಚಿತವಾಗಿ ಹೇಳುವುದು ತುಂಬಾ ಕಷ್ಟದ ಕೆಲಸವೇ ಸರಿ. ಆದರೆ ಈ ಬಗೆಯ ಬಾಲ್ಯ

ವಿವಾಹಗಳ ಕುರಿತಂತೆ ಹಲವು ಕುರುಹುಗಳನ್ನು ಚರಿತ್ರೆಯ ಮೂಲಕ ಕಂಡುಕೊಳ್ಳಬಹುದು. ಅವುಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**೧. ಬಾಲ್ಯ ವಿವಾಹ ಪದ್ಧತಿಯ ಚಾರಿತ್ರಿಕ ಅಂಶಗಳು**

ಬಾಲ್ಯ ವಿವಾಹ ಪದ್ಧತಿಯು ಯಾವಾಗ ಆರಂಭವಾಯಿತು ಎಂಬುದನ್ನು ಖಚಿತವಾಗಿ ಹೇಳುವುದು ತುಂಬಾ ಕಷ್ಟಕರವಾದದ್ದು. ಆದರೆ ಈ ಪದ್ದತಿಯು ವ್ಯವಸ್ಥೆಯಲ್ಲಿ ಜಾರಿಯಲ್ಲಿರುವುದನ್ನು ನಾವು ಚರಿತ್ರೆಯ ಪುಟಗಳಿಂದ ತಿಳಿಯಬಹುದು. ಮುಖ್ಯವಾಗಿ ಈ ಪದ್ಧತಿಯು ಜಾರಿಯಾಗಲು ಒಂದು ನಿರ್ಧಿಷ್ಟವಾದ ಕಾರಣವಿರುತ್ತದೆ. ಆದರೆ ಈ ಕಾರಣ ಏನೆಂಬುದು ಇಂದಿಗೂ ನಿಗೂಢವಾಗಿಯೇ ಇದೆ. ಇವುಗಳ ಮಧ್ಯೆಯೇ ಕೆಲವು ಹೇಳಿಕೆಗಳ ಪ್ರಕಾರ ಈ ಪದ್ದತಿಯು ಕ್ರಿ.ಪೂ.ದಿಂದಲೇ ಜಾರಿಯಲ್ಲಿತ್ತು ಎಂಬುದಾಗಿ ತಿಳಿದುಬರುತ್ತದೆ. ಅಂದರೆ ಕ್ರಿ.ಪೂ. ೬ನೇ ಶತಮಾನದಿಂದ ಕ್ರಿ.ಪೂ. ೧ನೇ ಶತಮಾನದವರೆಗಿನ ಯುಗವನ್ನು ಸೂತ್ರಗಳ ಕಾಲ ಎಂದು ಕರೆಯಲಾಗುತ್ತದೆ. ಇದು ಬುದ್ಧನ ಕಾಲದಿಂದ ಆರಂಭಗೊಂಡು ಶಕರ ಆಕ್ರಮಣದ ಕಾಲದವರೆಗಿನ ಅವಧಿಯಾಗಿದೆ. ಈ ಯುಗವು ಬೌಧಾಯನ ಮತ್ತು ಆಪಸ್ಥಂಭರ ಯುಗವಾಗಿತ್ತು. ವಶಿಷ್ಟ ಮತ್ತು ಪಾಣಿನೀಯ, ಮನು ಮತ್ತು ಪತಂಜಲಿಗಳ, ಚಾಣಕ್ಯ ಮತ್ತು ಪುಷ್ಯಮಿತ್ರರ ಹಾಗೂ ಧರ್ಮಶಾಸ್ತ್ರಗಳ ಯುಗವೂ ಆಗಿತ್ತು. ಈ ಅವಧಿಯಲ್ಲಿನ ಗಾರ್ಗಿ ಸಂಹಿತೆಯ ಯುಗ ಪುರಾಣವು ಹೀಗೆ ಹೇಳುತ್ತದೆ. ಪುಷ್ಯ ನಗರದ ಶಕರಾಜನು ಕೊನೆಯುಸಿರನ್ನೆಳೆದನು. ಆ ನಂತರ ಪೃಥ್ವಿ ಶೂನ್ಯವಾಗುತ್ತದೆ. ಆ ಸಂಧರ್ಭದಲ್ಲಿ ವಿದೇಶ ಅರಸನಾದ ಮ್ಲೇಚ ಆಮ್ಲಾಟನೆಂಬುವವನು ಪುಶ್ಯ ನಗರದ ಮೇಲೆ ಧಾಳಿಮಾಡಿ ಪಾಟಲೀಪುತ್ರವನ್ನು ಆಕ್ರಮಿಸಿದನು. ಇವನು ಪ್ರಜೆಗಳಿಗೆ ತೊಂದರೆ ಕೊಡುವುದಷ್ಟೇ ಅಲ್ಲದೇ ಚತುರ್ವರ್ಣಗಳನ್ನು ಹಾಳುಮಾಡುತ್ತಾನೆ. ಆ ಸಂದರ್ಭದಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಾಗಿರುತ್ತದೆ. ಈ ಸಂದರ್ಭದಲ್ಲಿ ಶಕ ಯೋಧರು ಪ್ರಜೆಗಳನ್ನು ಆಚಾರ ಭ್ರಷ್ಟರನ್ನಾಗಿಸಿದರು ಮತ್ತು ಕುಕರ್ಮಗಳಲ್ಲಿ ತೊಡಗುವಂತೆ ಮಾಡುತ್ತಾರೆ. ಅಲ್ಲಿನ ಜನ ಸಂಖ್ಯೆಯ ಕಾಲು ಭಾಗವನ್ನು ಶಕರು ಕೊಲ್ಲುತ್ತಾರೆ. ಇನ್ನೊಂದು ಕಾಲುಭಾಗವನ್ನು ತಮ್ಮ ರಾಜಧಾನಿಗೆ ಎಳೆದೊಯ್ಯುತ್ತಾರೆ. ಈ ಸಂದರ್ಭದಲ್ಲಿ ಇಡೀ ನಾಡು ನಾಶದ ಹಂತವನ್ನು ತಲುಪಿದಾಗ ಭಾರತೀಯ ಸಮಾಜಶಾಸ್ತ್ರಜ್ಞರು ಸಾಮಾಜಿಕ ಕ್ರಾಂತಿಯ ಮುಂಚೂಣಿಯನ್ನು ವಹಿಸಿಕೊಂಡರು. ಈ ಸಂದರ್ಭದಲ್ಲಿ ಸಮಾಜಕ್ಕೆ ಮತ್ತೆ ನೀತಿ ನಿಯಮಗಳನ್ನು ಹಾಕಿಕೊಡುವತ್ತ ಗೃಹ ಸೂತ್ರಗಳು ಗಮನಹರಿಸಿದವು. ಈ ಹಂತದಲ್ಲಿ ನಾರಿಯರ ಸ್ಥಿತಿಗತಿಗಳು ತುಂಬಾ ಕೆಳ ಮಟ್ಟಕ್ಕೆ ಇಳಿದಿದ್ದವು. ಅವರಿಗೆ ಆದ ಆಪತ್ತು ನಾಡಿಗೆ ಮತ್ತು ಸಮಾಜಕ್ಕೆ ಒದಗಿದ ಆಪತ್ತು ಎಂದು ಭಾವಿಸಿ ಸೂತ್ರಕಾರರು ಅವರನ್ನು ಪುನರ್ ವ್ಯವಸ್ಥೆಗೊಳಿಸುವ ಕಾರ್ಯವನ್ನು ಕೈಗೊಂಡರು. ಆದರೆ ಅವರು ಕಲ್ಪಿಸಿದ ವ್ಯವಸ್ಥೆ ಮಹಿಳೆಯರ ಬಗೆಗಿನ ಅತಿಯಾದ ಕಟ್ಟುಪಾಡುಗಳಿಗೆ ಕಾರಣವಾಯಿತು. "ಯತ್ರ ನಾರ್ಯಸ್ತು ಪುಜ್ಯಂತೇ ರಮಂತೇ ತತ್ರ ದೇವತಾ" (ನಾರಿಯರಿಗೆ ಗೌರವ ತೋರಿರುವ ಎಡೆಯಲ್ಲಿ ದೇವತೆಗಳು ವಿಹರಿಸುತ್ತಿರುತ್ತಾರೆ) ಎಂದೇನೋ ಮನು ಹೇಳಿದ; "ಸ್ತ್ರೀರತ್ನಂದುಷ್ಕುಲಾದಪಿ" (ಕೆಟ್ಟ ಕುಲದಿಂದಲೇ ಬಂದವಳಾದರೂ ಸ್ತ್ರೀಯು ರತ್ನಪ್ರಾಯಳಾಗಿಯೇ ಇರುತ್ತಾಳೆ) ಎಂದು ಕೂಡ ಹೇಳಲಾಯಿತು. ಆದರೆ ಹೆಣ್ಣಿನ

ಅಧಿಕಾರಗಳನ್ನು ಕುರಿತು ಚರ್ಚೆ ಮಾಡುವಾಗ, ಅವರನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದರು. ಅವರ ವೈಯಕ್ತಿಕ ಅಧಿಕಾರಗಳೂ ಇಲ್ಲವಾಗಿಬಿಟ್ಟವು. ಅವರ ಹಕ್ಕುಗಳೆಲ್ಲವನ್ನೂ ಕಸಿದುಕೊಂಡು ಬಿಟ್ಟದ್ದರಿಂದ ಅವರ ಆರ್ಥಿಕ ಸ್ಥಿತಿ ತುಂಬಾ ಚಿಂತಾಜನಕವಾಗಿಬಿಟ್ಟಿತು. ಅವರ ಸಾಮಾಜಿಕ ಸ್ಥಿತಿ ಇದಕ್ಕಿಂತಲೂ ಹೀನಾಯವಾಗಿ ಪರಿಣಮಿಸಿತು. ಕಷ್ಟಕಾಲದಲ್ಲಿ ಪತಿ ತನ್ನ ಪತ್ನಿಯನ್ನು ಎಷ್ಟು ಚೆನ್ನಾಗಿ ರಕ್ಷಿಸಬಲ್ಲನೋ, ಅಷ್ಟು ಚೆನ್ನಾಗಿ ಅನೇಕ ಪುತ್ರ ಪುತ್ರಿಯರ ಹೊಣೆಯ ಭಾರದಿಂದ ಕುಸಿದಿರುವ ತಂದೆ ತನ್ನ ಮಗಳನ್ನು ರಕ್ಷಿಸಲಾರ ಎಂಬುದನ್ನು ಸೂತ್ರಕಾರರು ಕಂಡುಕೊಂಡರು. ಆದ್ದರಿಂದ ಆದಷ್ಟು ಬೇಗ ಕನ್ಯೆಯನ್ನು ಪತ್ನಿಯಾಗಿಸಿಬಿಡುವುದೇ ಉತ್ತಮವೆಂದು ಅವರು ಭಾವಿಸಿದರು. ಇದರ ಪರಿಣಾಮವಾಗಿ ಬಾಲ್ಯ ವಿವಾಹ ಪದ್ಧತಿಗೆ ಬುನಾದಿಯನ್ನು ಹಾಕಿದಂತಾಯಿತು; "ಅಷ್ಟಾವರ್ಷಾ ಭವೇದ್ಗೌರೀ" (ಎಂಟು ವರ್ಷಕ್ಕೆ ಹೆಣ್ಣು ಸುಮಂಗಲಿಯಾಗಬೇಕು) ಎಂಬ ಪರಂಪರೆ ರೂಪು ತಳೆಯಿತು. ವೈದಿಕ ಯುಗದಲ್ಲಿ ಋತುಮತಿಯಾಗುವುದಕ್ಕೆ ಮುನ್ನ ಹೆಣ್ಣಿನ ಮದುವೆ ಮಾಡುವುದು ಯಾರೂ ಕಂಡಿರದ ಹಾಗೂ ಕೇಳಿರದ ಸಂಗತಿಯಾಗಿತ್ತು. ರಜಸ್ವಲೆಯಾದ ಮೇಲೆ ಮೂವತ್ತಾರು ಋತುಸ್ರಾವಗಳನ್ನು ಕಂಡ ಬಳಿಕವೇ (ಅಂದರೆ ಹದಿನಾರು ವರ್ಷ ವಯಸ್ಸಾದ ಬಳಿಕ) ಮದುವೆ ಮಾಡಿಕೊಡುವ ಸಂಪ್ರದಾಯ ಅಂದು ರೂಢಿಯಲ್ಲಿತ್ತು. ಆದರೆ ಈಗ ಎಂಟೆಂಟು ವರ್ಷದ ಪುಟ್ಟ ಪುಟ್ಟ ಹುಡುಗಿಯರನ್ನು ಮದುವೆಯೆಂಬ ಬೆಂಕಿಗೆ ದೂಡತೊಡಗಿದರು. ರಜಸ್ವಲೆಯಾಗುವವರೆಗೂ ತನ್ನ ಮಗಳಿಗೆ ಮದುವೆ ಮಾಡದೇ ಇರುವಂತಹ ತಂದೆಗೆ ನರಕ ಭಾಜನವಾಗುವ ಭಯವನ್ನು ತೋರಲಾಯಿತು. ಕೆಲವು ಸಮುದಾಯಗಳಲ್ಲಂತೂ ಹಾಲುಗಲ್ಲದ ಮಕ್ಕಳ ಕೈಗೂ ಕೌತುಕದ ಸೂತ್ರವನ್ನು ಕಟ್ಟಲಾಯಿತು. ಹೀಗೆ ಬಾಲ್ಯ ವಿವಾಹ ಹುಟ್ಟಿಕೊಳ್ಳಲು ಪ್ರಾರಂಭಿಸಿತು" (ಭಗವತ್ ೨೦೦೮, ಪು– ೯೯, ೨೦೦) ಹೀಗೆ ಬಾಲ್ಯ ವಿವಾಹ ಪದ್ಧತಿಯ ಹುಟ್ಟಿನ ಬಗೆಗಿನ ಹಲವು ಚಾರಿತ್ರಿಕ ಅಂಶಗಳು ಗೋಚರಿಸುತ್ತವೆ.

ಋಗ್ವೇದ ಮತ್ತು ಯಜುರ್ವೇದ ಕಾಲದಲ್ಲಿ ಹುಡುಗಿ ತಾರುಣ್ಯಾವಸ್ಥೆಗೆ ಬಂದ ಮೇಲೆಯೇ ವಿವಾಹವಾಗುವುದು ಸಾಧಾರಣವಾಗಿ ರೂಢಿಯಲ್ಲಿತ್ತು. ಹಾಗಾಗಿ ಆ ಸಂದರ್ಭದಲ್ಲಿ ಬಾಲ್ಯ ವಿವಾಹ ರೂಢಿಯಲ್ಲಿತ್ತು ಎಂಬುದರ ಬಗೆಗೆ ಯಾವ ದಾಖಲೆಗಳೂ ಇಲ್ಲ. ಒಂದುವೇಳೆ ಹುಡುಗಿಗೆ ಯೋಗ್ಯನಾದ ವರ ಸಿಗದಿದ್ದರೆ ಕಡೆಯವರೆಗೂ ತನ್ನ ತಂದೆಯ ಮನೆಯಲ್ಲಿ ಕನ್ಯೆಯಾಗಿಯೇ ಉಳಿಯುತ್ತಿದ್ದಳು. ನಂತರದ ಧರ್ಮ ಸೂತ್ರಗಳ ಕಾಲದಲ್ಲಿ ಮಹಿಳೆಯರ ಪಾತಿವ್ರತ್ಯವನ್ನು ಕಾಪಾಡುವ ಉದ್ದೇಶದಿಂದ ಚಿಕ್ಕ ವಯಸ್ಸಿನಲ್ಲಿಯೇ ವಿವಾಹವಾಗುವಂತಹ ನಿಯಮಗಳನ್ನು ಜಾರಿಗೆ ತರಲಾಯಿತು. ಮುಖ್ಯವಾಗಿ ಬ್ರಾಹ್ಮಣರ ಕನ್ಯೆಯರು ಋತುಮತಿಯರಾಗುವುದಕ್ಕೆ ಮುಂಚೆಯೇ ವಿವಾಹವಾಗಬೇಕೆಂಬ ನಿರ್ಬಂಧ ಸ್ಮೃತಿಗಳಲ್ಲಿ ಕಂಡುಬರುತ್ತದೆ. ಹಾಗಾಗಿ ದಾಂಪತ್ಯದ ಜೀವನವನ್ನಾಗಲೀ ಅಥವಾ ವಿವಾಹದ ಬಗೆಗಿನ ಕಲ್ಪನೆಯಾಗಲೀ ಇರದೇ ಇರುವಂತಹ ಸ್ಥಿತಿಯಲ್ಲಿ ಅಂದರೆ ಎಳೆಯ ವಯಸ್ಸಿನಲ್ಲಿ ವಿವಾಹಗಳನ್ನು ಮಾಡಲಾಯಿತು. "ಕೆಲವು ಹಿಂದುಳಿದ ಪಂಗಡಗಳಲ್ಲಿ ತೊಟ್ಟಿಲಿನ ಮಕ್ಕಳಿಗೇ ಬಾಸಿಂಗವನ್ನು ಕಟ್ಟುವ ಪದ್ಧತಿಯೂ, ಶಿಶು ಗರ್ಭದಲ್ಲಿರುವಾಗಲೇ ವಿವಾಹಗಳು

ನಿಶ್ಚಯವಾಗುವುದೂ ಉಂಟು. ವಿವಾಹವಾಗದ ಸ್ತ್ರೀ ಶೂದ್ರರಿಗೆ ಸಮಾನಳೆಂಬ ಭಾವನೆ ಕೆಲವರಲ್ಲಿದೆ. ವಿವಾಹಕ್ಕೆ ಮುಂಚೆ ಸ್ತ್ರೀ ಮೃತಳಾದರೆ ಶವಕ್ಕೆ ವಿವಾಹ ಮಾಡಿ ಅನಂತರ ಅಂತ್ಯಕ್ರಿಯೆ ನಡೆಸಿರುವ ಪ್ರಸಂಗಗಳೂ ಎಷ್ಟೋ ಇವೆ." (ನಂಜಮ್ಮಣ್ಣಿ ಎಂ, ೨೦೦೩, ಪು– ೧೫೬) ಶವಕ್ಕೆ ವಿವಾಹ ಮಾಡುವುದೊಂದು ಪೈಶಾಚಿಕ ಕ್ರಮವಾಗಿದೆ. ಇದು ಪಿತೃಪ್ರಧಾನ ವ್ಯವಸ್ಥೆಯ ನೀಚ ಆಲೋಚನೆಯ ಭಾಗವಾಗಿದೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಧರ್ಮ ಸೂತ್ರಗಳಲ್ಲಿ, ಅರ್ಥ ನಿಯಂತ್ರಣದಲ್ಲಿ, ಧರ್ಮಶಾಸ್ತ್ರಗಳ ಕಟ್ಟುಪಾಡುಗಳಲ್ಲಿ ಬಾಲ್ಯವಿವಾಹಗಳ ಮೂಲಕ ಹೆಣ್ಣನ್ನು ಬಂಧಿಸಲಾಯಿತು. ಮನು ಮತ್ತು ಯಜ್ಞಾವಲ್ಕ್ಯರು ಬರೆದಂತಹ ಗ್ರಂಥಗಳಲ್ಲಿ ಹೆಣ್ಣಿನ ವಿವಾಹದ ವಯಸ್ಸನ್ನು ಕುರಿತಂತೆ ಖಚಿತವಾದಂತಹ ಧೋರಣೆಯನ್ನು ಹೊಂದಿದ್ದರು ಮತ್ತು ಆ ನಿಯಮಗಳನ್ನು ಜನರು ಕಡ್ಡಾಯವಾಗಿ ಪಾಲಿಸುವಂತೆ ವ್ಯವಸ್ಥೆಗೊಳಿಸಿದ್ದರು. ಹಲವು ಬಗೆಯ ಧರ್ಮಶಾಸ್ತ್ರಕಾರರು ವಿವಾಹದ ಕುರಿತಂತೆ ತಮ್ಮದೇ ಆದ ಹೇಳಿಕೆಗಳನ್ನು ನೀಡಿದ್ದಾರೆ. ಅವುಗಳನ್ನು ಕೆಳಗಿನಂತೆ ವಿವರಿಸಲಾಗಿದೆ.

"ಯಜ್ಞಾವಲ್ಕ್ಯನು " ಯಾವ ತಂದೆ ತನ್ನ ಮಗಳನ್ನು ಋತುಮತಿಯಾಗುವುದರೊಳಗೆ ಮದುವೆ ಮಾಡಿಕೊಡುವುದಿಲ್ಲವೋ ಆತ ಪಾಪವನ್ನು ಅನುಭವಿಸಬೇಕಾಗುತ್ತದೆಂದು ಹೇಳಿದ್ದಾನೆ. ಆಕೆ ಋತುಮತಿಯಾದ ಸಲಕ್ಕೊಮ್ಮೆ ಶಿಶು ಹತ್ಯೆ ಮಾಡಿದ ಪಾಪ ತಗಲುತ್ತದೆಂದು" ಹೇಳಿದ್ದಾನೆ.

ಯಮನು " ತನ್ನ ಮಗಳು ಮದುವೆಯ ಮೊದಲು ಋತುಮತಿಯಾಗುವುದನ್ನು ನೋಡಿದ ತಾಯಿ–ತಂದೆ ಮತ್ತು ಹಿರಿಯ ಅಣ್ಣ ಮೂರೂ ಜನವೂ ನರಕಕ್ಕೆ ಹೋಗುವುದು ಖಂಡಿತವೆಂದು" ಹೇಳಿದ್ದಾನೆ.

ಮಾರೀಚಿಯು " ಎಂಟು ವರ್ಷದ ಕನ್ಯೆಯನ್ನು ಮದುವೆಯಲ್ಲಿ ದಾನವಾಗಿ ಕೊಡುವ ತಂದೆ ಸ್ವರ್ಗಕ್ಕೆ ಹೋಗುತ್ತಾನೆ. ಒಂಭತ್ತು ವರ್ಷದವಳನ್ನು ಕೊಡುವವನು ವೈಕುಂಠಕ್ಕೆ, ಹತ್ತು ವರ್ಷದವಳನ್ನು ಕೊಡುವವನು ಬ್ರಹ್ಮಲೋಕಕ್ಕೆ ಮತ್ತು ಋತುಮತಿಯಾದ ಮೇಲೆ ಕೊಡುವವನು ನರಕಕ್ಕೆ ಹೋಗುವುದು ಖಂಡಿತ ಎನ್ನುತ್ತಾನೆ. ಅಷ್ಟೇ ಅಲ್ಲ ಋತುಮತಿಯಾದ ಮೇಲೆ ಮದುವೆಯಾಗುವ ಕನ್ಯೆಯನ್ನು ಕೈ ಹಿಡಿದ ಬ್ರಾಹ್ಮಣ ಶೂದ್ರಳನ್ನು ವರಿಸಿದಂತೆ"(ಹಾಲತಿ ಸೋಮಶೇಖರ್,೨೦೦೭, ಪು– ೧೦೧) ಎಂದಿದ್ದಾನೆ. ಇವುಗಳ ಜೊತೆಗೆ ಪರಾಶರ ಸ್ಮೃತಿ ಮತ್ತು ಶೀಗ್ರಭೋಧ ಸ್ಮೃತಿಗಳು ವಿವಾಹವಾಗುವ ಹುಡುಗಿಯರನ್ನು ಐದು ವಿಭಾಗಗಳನ್ನಾಗಿ ವಿಂಗಡಿಸಿದ್ದಾರೆ.

೧. ನಗ್ನಿಕ : ಹುಡುಗಿಯು ಏಳು ವರ್ಷದವಳಾಗಿದ್ದಾಗ ವಿವಾಹ ಮಾಡುವುದು. ಈ ವಯಸ್ಸಿನಲ್ಲಿ ವಿವಾಹವಾಗುವುದು ಅತ್ಯಂತ ಉತ್ತಮವೆಂದು ಹೇಳಲಾಗಿದೆ.

೨. ಗೌರಿ : ಹುಡುಗಿಯ ವಿವಾಹದ ವಯಸ್ಸು ಎಂಟು.

೩. ರೋಹಿಣಿ : ಹುಡುಗಿಯ ವಿವಾಹದ ವಯಸ್ಸು ಒಂಬತ್ತು.

೪. ಕನ್ಯಾ : ಹುಡುಗಿಯ ವಿವಾಹದ ವಯಸ್ಸು ಹತ್ತು.

೫. ರಜಸ್ವಲೆ : ಹುಡುಗಿಯ ವಯಸ್ಸು ಹತ್ತು ವರ್ಷಗಳ ಮೇಲ್ಪಟ್ಟು".( Kakkar A.K, 2009, pg-12 )

ಹೀಗೆ ಸ್ಮೃತಿಕಾರರು ಹುಡುಗಿಯ ವಿವಾಹದ ವಯಸ್ಸಿನ ಬಗೆಗೆ ಹೇಳಿದ್ದಾರೆ. ಆ ಸಂದರ್ಭದಲ್ಲಿ ಇವುಗಳನ್ನು ಪಾಲಿಸುತ್ತಲೂ ಇದ್ದರು. ಮುಖ್ಯವಾಗಿ ಮನುಸ್ಮೃತಿಯು ಹಾಕಿಕೊಟ್ಟ ಬುನಾದಿಯ ಮೇಲೆ ಸ್ಮೃತಿಕಾರರು ತಮ್ಮದೇ ಹೇಳಿಕೆಗಳನ್ನು ನಿಯಮಗಳೆಂಬಂತೆ ರೂಪಿಸಿ ಸಮಾಜದ ಮೇಲೆ ಹೇರುತ್ತಲೇ ಸಾಗಿದರು. ಹೀಗೆ ಭಾರತೀಯ ಸಮಾಜದಲ್ಲಿ ವರ್ಣಾಶ್ರಮ ಧರ್ಮಗಳು ಬೃಹತ್ ಕೋಟೆಗಳನ್ನು ನಿರ್ಮಿಸಿ ಮಹಿಳೆಯರಿಗೆ ಸಮಾಜಿಕವಾಗಿ ಮಾಡಿರುವಂತಹ ಅನ್ಯಾಯ ಅತ್ಯಂತ ಘೋರವಾದುದು. ಧರ್ಮ ಸೂತ್ರಗಳನ್ನೇ ಆಧಾರವಾಗಿಟ್ಟುಕೊಂಡು ರಚಿತವಾದ ಧರ್ಮಶಾಸ್ತ್ರಗಳು ಮಹಿಳೆಯರಿಗೆ ದಾಸ್ಯತ್ವದ ದಾರಿಯನ್ನು ತೋರಿಸಿದವು. ಹೀಗೆ ಬಾಲ್ಯ ವಿವಾಹ ಪದ್ಧತಿಯು ಸಮಾಜದಲ್ಲಿ ಗಟ್ಟಿಯಾಗಿ ನೆಲೆಯೂರಲು ಮನು ಧರ್ಮಶಾಸ್ತ್ರ ತುಂಬಾ ಕಾಣಿಕೆಯನ್ನು ನೀಡಿದೆ. ಈ ಕೊಡುಗೆ ಮಹಿಳೆಯರ ಪಾಲಿಗೆ ನರಕ ಸದೃಶವಾದಂತಹ ಪರಿಸ್ಥಿಯನ್ನು ನಿರ್ಮಿಸಿರುವುದಂತೂ ಸತ್ಯ. ಇಂದಿಗೂ ಮನುವಾದಿಗಳ ಕೈಯಲ್ಲಿ ಸಿಲುಕಿರುವ ಮಹಿಳೆ ಸ್ವಾತಂತ್ರ್ಯವಿಲ್ಲದೇ, ಸ್ವಂತ ವ್ಯಕ್ತಿತ್ವವಿಲ್ಲದೇ ಪುರುಷನ ದಾಸಿಯಾಗಿ ಜೀವಿಸುತ್ತಿದ್ದಾಳೆ. ವಿವಾಹವು ಮಹಿಳೆಗೆ ಯಾವುದೇ ಬಗೆಯ ಸ್ವಾತಂತ್ರ್ಯವನ್ನಾಗಲೀ ಅಥವಾ ಸ್ವಂತ ಅಸ್ಮಿತೆಯನ್ನು ರೂಪಿಸಿಕೊಳ್ಳುವ ಅವಕಾಶವನ್ನಾಗಲೀ ನೀಡಲೇ ಇಲ್ಲ. ಹೀಗೆ ಬಾಲ್ಯವಿವಾಹಗಳ ಕುರಿತಾಗಿ ಹಲವು ಕುರುಹುಗಳು ಧರ್ಮಶಾಸ್ತ್ರಗಳಲ್ಲಿ ಕಂಡುಬರುತ್ತವೆ. ಮುಖ್ಯವಾಗಿ ಮನುಷ್ಯ ವಿರೋಧಿ ನೀತಿಯನ್ನು ಸಾರುವ ಮನುಸ್ಮೃತಿ ಮತ್ತು ಯಜ್ಞಾವಲ್ಕ್ಯ ಸ್ಮೃತಿಗಳೇ ಇಂದಿಗೂ ನಮ್ಮನ್ನು ಆಳುತ್ತಲೇ ಇವೆ.

ಬಾಲ್ಯ ವಿವಾಹ ಪದ್ಧತಿಯು ವ್ಯವಸ್ಥೆಯಲ್ಲಿ ಆಚರಣೆಗೆ ಬಂದು ನಿರಂತರವಾಗಿ ತನ್ನ ಚಲನಶೀಲತೆಯನ್ನು ಹೆಚ್ಚಿಸತೊಡಗಿತ್ತು. ರಾಜ ಮಹಾರಾಜರುಗಳ ಕಾಲದಲ್ಲಿ ಈ ಪದ್ಧತಿಯು ಹೆಚ್ಚು ಆಚರಣೆಯಲ್ಲಿ ಬಂದಿತ್ತು. ಮಧ್ಯಯುಗೀನ ಕಾಲದ ಸಂದರ್ಭವು ರಾಜ ಮಹಾರಾಜರುಗಳ ಸಂದರ್ಭವಾಗಿತ್ತು. ಈ ಅವಧಿಯು ಕ್ರಿ.ಶ. ಸುಮಾರು ಆರನೇ ಶತಮಾನದಿಂದ ೧೭ನೇ ಶತಮಾನದವರೆಗೆ ವಿಸ್ತರಿಸಿಕೊಳ್ಳುತ್ತದೆ. ಅಂದರೆ ಗುಪ್ತರ ಕಾಲದಿಂದ ಹಿಡಿದು ವಿಜಯನಗರ ಅರಸರ ಕಾಲದವರೆಗೆ ಎಂದು ಹೇಳಬಹುದು. ಮುಖ್ಯವಾಗಿ "ಮುಸ್ಲಿಂರು ಭಾರತದ ಮೇಲೆ ತಮ್ಮ ಆಡಳಿತವನ್ನು ಸ್ಥಾಪಿಸಿದ ಮೇಲೆ ಭಾರತೀಯರು ಮುಸ್ಲಿಂರು ಅನುಸರಿಸುತ್ತಿದ್ದ ಪರ್ಷಿಯನ್ ಮಾದರಿಯ ವಿಲಾಸಿ ಜೀವನ ಕ್ರಮವನ್ನು ಅಳವಡಿಸಿಕೊಂಡರು. ಪರಿಣಾಮವಾಗಿ ಹೆಣ್ಣು ಭೋಗ ವಿಲಾಸದ ವಸ್ತುವಾದಳು. ಪರದಾ ಪದ್ಧತಿಯನ್ನು ಹಿಂದೂಗಳು ಪರಕೀಯರ ದೃಷ್ಟಿಗೆ ತಮ್ಮ ಹೆಣ್ಣು ಮಕ್ಕಳು ಬೀಳದಿರಲೆಂದೇ ರಕ್ಷಣಾ ಪರದೆ ಮಾಡಿಕೊಂಡರು. ಮುಸ್ಲಿಮರಲ್ಲಿ ಶ್ರೇಷ್ಠರೆನಿಸಿಕೊಂಡವರು ಹಿಂದೂ ಸ್ತ್ರೀಯರನ್ನು ವಿವಾಹವಾಗುವ ಪದ್ಧತಿ ಬಂತು. ಕೆಲವರು ಬಲವಂತವಾಗಿ ಹಿಂದೂ ಸ್ತ್ರೀಯರನ್ನು

ಮದುವೆಯಾಗುತ್ತಿದ್ದರು. ಇದರಿಂದ ಮೊದಲೇ ಪ್ರಚಲಿತದಲ್ಲಿದ್ದ ಬಾಲ್ಯ ವಿವಾಹವು ಹೆಚ್ಚು ಪ್ರಚಲಿತವಾಯಿತು. ಹಿಂದೂ ಮುಖಂಡರ ಶ್ರೀಮಂತ ಹೆಣ್ಣು ಮಕ್ಕಳನ್ನು ತಮಗೆ ಮದುವೆ ಮಾಡಿಕೊಡುವಂತೆ ಬಲವಂತಪಡಿಸುವುದು ಸರ್ವೇಸಾಮಾನ್ಯವಾಯಿತು. ಈ ಎಲ್ಲಾ ಕಾರಣಗಳಿಂದ ಸ್ತ್ರೀಯರ ಮೇಲೆ ಅನೇಕ ನಿರ್ಬಂಧಗಳು ಹೇರಲ್ಪಟ್ಟವು."(ಹಾಲತಿ ಸೋಮಶೇಖರ್, ೨೦೦೭, ಪು- ೧೪೫.) ಹೀಗೆ ಸಮಾಜದಲ್ಲಿ ಬಾಲ್ಯ ವಿವಾಹವು ಗಟ್ಟಿಗೊಳ್ಳುತ್ತಾ ಸಾಗಿತು. ಹೀಗೆ ಗಟ್ಟಿಗೊಂಡಂತಹ ವಿವಾಹ ಬಂಧನಗಳು ಇಂದಿಗೂ ವ್ಯವಸ್ಥೆಯಲ್ಲಿ ಚಾಲ್ತಿಯಲ್ಲಿರುವುದು ಕಂಡುಬರುತ್ತದೆ. ಮುಖ್ಯವಾಗಿ ಬಾಲ್ಯ ವಿವಾಹಗಳು ಇಂದಿಗೂ ನಡೆಯುತ್ತಿವೆ ಎಂದಾದರೆ ಅದಕ್ಕೆ ಹಿನ್ನೆಲೆಯಾಗಿ ಮೇಲಿನ ಎಲ್ಲಾ ಚಾರಿತ್ರಿಕ ಅಂಶಗಳು ಗಟ್ಟಿಯಾದ ಬುನಾದಿಯನ್ನು ಹಾಕಿದವು. ಈ ವಿವಾಹ ಪದ್ಧತಿಯು ಮಹಿಳೆಯರ ಮೇಲೆ ಅನೇಕ ಬಗೆಯ ದುಷ್ಪರಿಣಾಮಗಳನ್ನು ಉಂಟುಮಾಡಿತು. ವಸಾಹತು ಸಂದರ್ಭದಿಂದ ಹಿಡಿದು ಇತ್ತೀಚಿನ ಆಧುನಿಕೋತ್ತರ ಸಂದರ್ಭದವರೆಗೂ ಬಾಲ್ಯ ವಿವಾಹಗಳನ್ನು ನಿಷೇಧಿಸಲು ಅನೇಕ ಪ್ರಯತ್ನಗಳು ನಡೆಯುತ್ತಾ ಬಂದವು. ಕಾನೂನುಗಳನ್ನು ಜಾರಿಗೆ ತರುವ ಮೂಲಕ ಸಮಾಜದಿಂದ ಬೇರು ಸಹಿತ ಕಿತ್ತುಹಾಕುವಂತಹ ಪ್ರಯತ್ನಗಳು ನಡೆದವು. ಬಾಲ್ಯ ವಿವಾಹ ಪದ್ಧತಿಯು ಕೇವಲ ಒಂದು ಪ್ರದೇಶಕ್ಕೆ, ರಾಜ್ಯಕ್ಕೆ, ದೇಶಕ್ಕೆ ಸೀಮಿತವಾದುದಲ್ಲ. ಇದು ಪ್ರಪಂಚದಾದ್ಯಂತ ವಿಸ್ತರಿಸಿಕೊಂಡಿದೆ. ಜಗತ್ತಿನ ಹಲವಾರು ದೇಶಗಳಲ್ಲಿ ಬಾಲ್ಯ ವಿವಾಹ ಪದ್ಧತಿಯು ಜಾರಿಯಲ್ಲಿದ್ದು, ಇವುಗಳ ಶೇಕಡಾವಾರು ಪ್ರಮಾಣ ಎಷ್ಟಿದೆ ಎಂಬುದನ್ನು ಅಂಕಿ ಸಂಖ್ಯೆಗಳ ರೂಪದಲ್ಲಿ ಮುಂದಿನ ಅಧ್ಯಾಯದಲ್ಲಿ ಸವಿವರವಾಗಿ ವಿವರಿಸಲಾಗಿದೆ.

**ಉಲ್ಲೇಖಗಳು**

೧. ನಂಜಮ್ಮಣ್ಣಿ ಎಂ, ೨೦೦೩, ಭಾರತೀಯ ಸಾಮಾಜಿಕ ಸಂಸ್ಥೆಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨. ಪೂರ್ವಾಚಾರ್ ಎಂ, ೨೦೦೨, ಭಾರತೀಯ ಸಮಾಜ ಮತ್ತು ಸಂಸ್ಕೃತಿ, ವಿಶ್ವಕರ್ಮ ಪ್ರಕಾಶನ, ಶಿವಮೊಗ್ಗ.

೩. ಭಗವತ್ ಶರಣ ಉಪಾಧ್ಯಾಯ, ೨೦೦೮, ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೪. ಹಾಲತಿ ಸೋಮಶೇಖರ್, ೨೦೦೭, ಮಹಿಳಾ ಚಳವಳಿ ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು.

೫. Kakkar A.K, 2009, Child Marriage in India: Issues and Challenges, Cyber Tech Publications, New Delhi.

# ಅಧ್ಯಾಯ ನಾಲ್ಕು

# ಬಾಲ್ಯ ವಿವಾಹ ಪದ್ಧತಿ : ಜಾಗತಿಕದಿಂದ ಸ್ಥಳೀಯ ನೆಲೆಗಳವರೆಗೆ

೪.೧. ಬಾಲ್ಯ ವಿವಾಹ ಪದ್ಧತಿ : ಅಂತರಾಷ್ಟ್ರೀಯ ಮಟ್ಟದಲ್ಲಿ

೪.೨. ಭಾರತದಲ್ಲಿ ಬಾಲ್ಯ ವಿವಾಹ ಪದ್ಧತಿ

೪.೩. ಕರ್ನಾಟಕದಲ್ಲಿ ಬಾಲ್ಯ ವಿವಾಹ ಪದ್ಧತಿ

## ಅಧ್ಯಾಯ ನಾಲ್ಕು
## ಬಾಲ್ಯ ವಿವಾಹ ಪದ್ಧತಿ : ಜಾಗತಿಕದಿಂದ ಸ್ಥಳೀಯ ನೆಲೆಗಳವರೆಗೆ

ವಿವಾಹ ಎಂಬ ಸಂಸ್ಥೆಯು ವ್ಯಕ್ತಿಗಳ ಬದುಕಿಗೆ ತುಂಬಾ ಅನಿವಾರ್ಯವಾದ ಸಂಸ್ಥೆಯಾಗಿ ರೂಪಿಸಲ್ಪಟ್ಟಿದೆ. ಮುಂದಿನ ಸಂತಾನೋತ್ಪತ್ತಿಯ ಅಥವಾ ಮುಂದಿನ ಪೀಳಿಗೆಗೆ ವಿವಾಹವು ಗಟ್ಟಿಯಾದ ಬುನಾದಿಯನ್ನು ಹಾಕುತ್ತದೆ ಎಂಬ ನಂಬಿಕೆ ಬಲಿಷ್ಠವಾಗಿದೆ. ಮುಖ್ಯವಾಗಿ ವ್ಯಕ್ತಿಗಳು ವಿವಾಹದ ಮೂಲಕ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಶೈಕ್ಷಣಿಕ ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಾರೆ. ವಿವಾಹವು ಮಹಿಳೆಯರ ಪಾತಿವ್ರತ್ಯದ ನಿಲುವುಗಳನ್ನು ರೂಪಿಸುತ್ತದೆ. ಹಾಗೆಯೇ ಹಲವಾರು ನಿರ್ಬಂಧಗಳನ್ನು ಮಹಿಳೆಯರ ಮೇಲೆ ಹೇರುತ್ತದೆ. ಹಾಗಾಗಿ ಮಹಿಳೆಯರು ಇಂದಿಗೂ ತಮ್ಮ ನೈಜವಾದ ಸ್ವಾತಂತ್ರ್ಯವನ್ನು ಪಡೆದಿಲ್ಲದಿರುವುದು ಕಂಡುಬರುತ್ತದೆ. ಈ ನಿರ್ಬಂಧಗಳನ್ನು ಹೆಣ್ಣುಮಕ್ಕಳು ಚಿಕ್ಕ ವಯಸ್ಸಿನವರಾಗಿದ್ದಾಗಲೇ ಅವರ ಮೇಲೆ ಹೇರುತ್ತಿದ್ದುದು ಐತಿಹಾಸಿಕ ಸತ್ಯ. ಹೆಣ್ಣುಮಕ್ಕಳ ರಕ್ಷಣೆಯ ಹೆಸರಿನಲ್ಲಿ ಬಾಲ್ಯ ವಿವಾಹಗಳನ್ನು ಮಾಡುತ್ತಿದ್ದರು. ಇದು ಇಂದಿಗೂ ಜಾರಿಯಲ್ಲಿದೆ. ಮುಖ್ಯವಾಗಿ ಮಹಿಳೆ ತಾನು ಹುಟ್ಟಿದ ಸ್ಥಳದಲ್ಲಿ ಈ ಮೊದಲೇ ಹೆಣ್ಣು ಎಂಬ ಕಾರಣಕ್ಕೆ ಹಲವು ಅವಕಾಶಗಳಿಂದ ವಂಚಿತಳಾಗಿರುತ್ತಾಳೆ. ಜೊತೆಗೆ ಕುಟುಂಬಕ್ಕೆ ಹೊರೆಯಾಗಿರುತ್ತಾಳೆ. ಇದು ವ್ಯವಸ್ಥೆಯ ಆಲೋಚನೆ. ಈ ಆಲೋಚನೆಯ ಕಾರಣವಾಗಿ ಮಹಿಳೆಯರನ್ನು ಆದಷ್ಟು ಬೇಗನೇ ಕುಟುಂಬದಿಂದಾಚೆ ಕಳುಹಿಸಬೇಕು ಎಂಬ ನಿಲುವು ಕುಟುಂಬದ ಹಿರಿಯರಲ್ಲಿರುತ್ತದೆ. ಹಾಗಾಗಿ ಮಹಿಳೆ ತಾನು ಹುಟ್ಟಿದ ಸ್ಥಳದಲ್ಲಿ ಹೊರೆಯಾಗಿರುತ್ತಾಳೆ. ಹಾಗೆಯೇ ವಿವಾಹದ ನಂತರವೂ ಅನ್ಯ ಮನೆಗೆ ತೆರಳುವ ಮಹಿಳೆ ಅಲ್ಲಿಯೂ ಹಲವಾರು ಸಮಸ್ಯೆಗಳಿಗೆ ಗುರಿಯಾಗುತ್ತಾಳೆ.

### ೪.೧. ಬಾಲ್ಯ ವಿವಾಹ ಪದ್ಧತಿ : ಅಂತಾರಾಷ್ಟ್ರೀಯ ಮಟ್ಟದಲ್ಲಿ

ಬಾಲ್ಯ ವಿವಾಹಗಳು ಕೇವಲ ಭಾರತದಲ್ಲಿಯಷ್ಟೇ ಅಲ್ಲದೇ, ಇಡೀ ಪ್ರಪಂಚದಾದ್ಯಂತ ನಡೆಯುತ್ತಿವೆ. ಹಾಗೆಯೇ ಇವುಗಳನ್ನು ತಡೆಯಲು ಹಲವಾರು ಪ್ರಯತ್ನಗಳೂ ನಡೆದಿವೆ; ನಡೆಯುತ್ತಲಿವೆ. ಆದರೂ ಬಾಲ್ಯ ವಿವಾಹಗಳು ಮಕ್ಕಳ ಹಕ್ಕುಗಳನ್ನು ಕಿತ್ತುಕೊಳ್ಳುತ್ತವೆ. ಹಾಗಾಗಿ ಅದೊಂದು ಸಮಾಜಕ್ಕೆ ಪಿಡುಗಾಗಿದೆ. ಜಗತ್ತಿನ ಹಲವಾರು ದೇಶಗಳಲ್ಲಿ ಬಾಲ್ಯ ವಿವಾಹಗಳು

ಅವ್ಯಾಹತವಾಗಿ ನಡೆಯುತ್ತಲೇ ಇವೆ. ಹಲವು ದೇಶಗಳಲ್ಲಿ ನಡೆಯುತ್ತಿರುವ ಬಾಲ್ಯ ವಿವಾಹಗಳ ಕುರಿತು ತಿಳಿಯುವುದು ಮುಖ್ಯವಾಗಿದೆ. ಆ ಕಾರಣಕ್ಕಾಗಿ ಕೆಳಗಿನ ಕೋಷ್ಟಕದಲ್ಲಿ ಬಾಲ್ಯ ವಿವಾಹಗಳು ನಡೆಯುತ್ತಿರುವ ಪ್ರಪಂಚದ ಮೊದಲ ಇಪ್ಪತ್ತು ದೇಶಗಳ ಪಟ್ಟಿಯನ್ನು ಕೊಡಲಾಗಿದೆ.

**ಕೋಷ್ಟಕ– ೪.೧**

**ಬಾಲ್ಯ ವಿವಾಹ ಪದ್ಧತಿ ಹೆಚ್ಚು ಜಾರಿಯಲ್ಲಿರುವ ಜಗತ್ತಿನ ೨೦ ದೇಶಗಳು**

| ದೇಶದ ಹೆಸರು (ರ‍್ಯಾಂಕ್) | ೧೮ ವರ್ಷಕ್ಕಿಂತ ಕಡಿಮೆ ವಯಸ್ಸಿನಲ್ಲಿ ವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳ ಶೇಕಡಾವಾರು – ೨೦೦೦ |
|---|---|
| ೧. ನೈಜರ್/ ನೈಜೀರಿಯಾ | ೭೬.೬ |
| ೨. ಚಾಡ್ | ೭೧.೫ |
| ೩. ಬಾಂಗ್ಲಾದೇಶ | ೬೮.೭ |
| ೪. ಮಾಲಿ | ೬೫.೪ |
| ೫. ಗೈನಾ | ೬೪.೫ |
| ೬. ಸೆಂಟ್ರಲ್ ಆಫ್ರಿಕನ್ ರಿಪಬ್ಲಿಕ್ | ೫೭.೦ |
| ೭. ನೇಪಾಳ | ೫೬.೧ |
| ೮. ಮೊಜಂಬಿಕ್ | ೫೫.೯ |
| ೯. ಉಗಾಂಡ | ೫೪.೧ |
| ೧೦. ಬುರ್ಕಿನ್ ಫಾಸೋ | ೫೧.೯ |
| ೧೧. ಭಾರತ | ೫೦.೦ |
| ೧೨. ಇಥೋಪಿಯಾ | ೪೯.೧ |
| ೧೩. ಲಿಬೇರಿಯಾ | ೪೮.೪ |
| ೧೪. ಯೆಮನ್ | ೪೮.೪ |
| ೧೫. ಕ್ಯಮರೋನ್ | ೪೭.೨ |
| ೧೬. ಯೆರಿಟ್ರಿಯಾ | ೪೭.೦ |
| ೧೭. ಮಾಲ್ವಿ | ೪೬.೯ |
| ೧೮. ನಿಕರಗೋ | ೪೩.೩ |
| ೧೯. ನೈಜೀರಿಯಾ | ೪೩.೩ |
| ೨೦. ಜಾಂಬಿಯಾ | ೪೨.೧ |

**ಮೂಲ : ಯುನೈಟೆಡ್ ನೇಷನ್ಸ್ ಪಾಪುಲೇಷನ್ ಡಿವಿಷನ್, ೨೦೦೦**




**ರೇಖಾಚಿತ್ರ ೪.೧ ಬಾಲ್ಯ ವಿವಾಹ ಪದ್ಧತಿ ಹೆಚ್ಚು ಜಾರಿಯಲ್ಲಿರುವ ಜಗತ್ತಿನ ೨೦ ದೇಶಗಳು**

೨೦೦೦ರಲ್ಲಿ ಯುನೈಟೆಡ್ ನೇಷನ್ಸ್ ಪಾಪುಲೇಷನ್ ಡಿವಿಷನ್‌ನವರು ನೀಡಿದ ವರದಿಯ ಅಂಕಿಸಂಖ್ಯೆಗಳ ಪ್ರಕಾರ ನೈಜೀರಿಯಾ ದೇಶವು ಪ್ರಪಂಚದಲ್ಲಿಯೇ ಮೊದಲ ಸ್ಥಾನದಲ್ಲಿದೆ. ಇಲ್ಲಿ ಶೇಕಡಾ ೭೬.೬ರಷ್ಟು ಪ್ರಮಾಣದಲ್ಲಿ ವಿವಾಹಗಳು ಮಹಿಳೆಯರಿಗೆ ೧೮ ವರ್ಷ ತುಂಬುವ ಮೊದಲೇ ವಿವಾಹವಾಗುತ್ತಿವೆ. ನಂತರದ ಸ್ಥಾನ ಚಾದ್ ದೇಶದ್ದು. ಈ ಪಟ್ಟಿಯಲ್ಲಿ ಭಾರತದ ಸ್ಥಾನ ೧೧. ಅಂದರೆ ಶೇಕಡಾ ೫೦ರಷ್ಟಿದೆ. ನಂತರದಲ್ಲಿ ೨೦೦೦-೨೦೧೦ರ ಮಧ್ಯದಲ್ಲಿ ಹೌಸ್ ಹೋಲ್ಡ್ ಸರ್ವೆ ಯು.ಎನ್.ಎಫ್.ಪಿ.ಎ. ( ಡಿ.ಎಚ್.ಎಸ್. ಮತ್ತು ಎಮ್.ಐ.ಸಿ.ಎಸ್.) ಮತ್ತು ಯುನಿಸೆಫ್ ಸಂಸ್ಥೆಗಳು (www.childinfo.org) ಒಂದು ವರದಿಯನ್ನು ಬಿಡುಗಡೆ ಮಾಡಿತು. ಈ ವರದಿಯ ಪ್ರಕಾರ ೧೮ ವರ್ಷಕ್ಕಿಂತ ಕಡಿಮೆ ವಯಸ್ಸಿನಲ್ಲಿ ವಿವಾಹಕ್ಕೆ ಒಳಗಾದ ೨೦-೨೪ ವರ್ಷದ ಹೆಣ್ಣುಮಕ್ಕಳ ಶೇಕಡಾವಾರು ಪ್ರಮಾಣದಲ್ಲಿ ಬದಲಾವಣೆಗಳು ಆಗಿರುವುದನ್ನು ಗುರುತಿಸಲಾಗಿದೆ. ಇದು ಮುಖ್ಯವಾಗಿ ಹೌಸ್ ಹೋಲ್ಡ್ ಸರ್ವೆ ಆಗಿದ್ದು. ಇದರ ಪ್ರಕಾರ ದೇಶದ ಮೊದಲ ೨೫ ದೇಶಗಳಲ್ಲಿನ ಶೇಕಡಾವಾರು ಪ್ರಮಾಣ ಈ ಕೆಳಗಿನಂತಿದೆ.

**ಕೋಷ್ಟಕ – ೪.೨**

**೧೮ ವರ್ಷಕ್ಕಿಂತ ಕಡಿಮೆ ವಯಸ್ಸಿನಲ್ಲಿ ವಿವಾಹಕ್ಕೆ ಒಳಗಾದ ೨೦-೨೪ ವರ್ಷದ ಹೆಣ್ಣುಮಕ್ಕಳ ಶೇಕಡಾವಾರು**

| **ದೇಶ** | **ಶೇಕಡಾವಾರು** |
|---|---|
| ನೈಜರ್/ನೈಜೀರಿಯಾ | ೭೪.೫ |
| ಚಾದ್ | ೭೧.೫ |
| ಬಾಂಗ್ಲಾದೇಶ | ೬೬.೨ |
| ಗೈನಾ | ೬೩.೧ |
| ಸೆಂಟ್ರಲ್ ಆಫ್ರಿಕನ್ ರಿಪಬ್ಲಿಕ್ | ೬೦.೬ |

| | |
|---|---|
| ಮಾಲಿ | ೫೫.೦ |
| ಮೊಜಾಂಬಿಕ್ | ೫೧.೮ |
| ಮಾಲ್ವಿ | ೪೯.೬ |
| ಮದಗಸ್ಕರ್ | ೪೮.೨ |
| ಸಿಯೆರಾಲಿಯೋನ್ | ೪೭.೯ |
| ಬುರ್ಕಿನಾ ಫಾಸೋ | ೪೭.೮ |
| ಭಾರತ | ೪೭.೪ |
| ಯೆರಿಟ್ರಾ | ೪೭.೦ |
| ಉಗಾಂಡ | ೪೬.೩ |
| ಸೋಮಾಲಿಯಾ | ೪೫.೩ |
| ಜಾಂಬಿಯ | ೪೧.೬ |
| ಇಥಿಯೋಪಿಯಾ | ೪೧.೨ |
| ನೇಪಾಳ | ೪೦.೭ |
| ನಿಕರಗೋವಾ | ೪೦.೬ |
| ಡೊಮಿನಿಕ್ ರಿಪಬ್ಲಿಕ್ | ೩೯.೬ |
| ಅಫಘಾನಿಸ್ತಾನ್ | ೩೯.೦ |
| ಡೆಮೊಕ್ರೆಟಿಕ್ ರಿಪಬ್ಲಿಕ್ ಆಫ್ ಕಾಂಗೋ | ೩೯.೦ |
| ಹೊಂಡುರಸ್ | ೩೮.೮ |
| ನೈಜೀರಿಯಾ | ೩೯.೪ |
| ಲಿಬೇರಿಯಾ | ೩೭.೯ |

ಮೂಲ : ೨೦೦೦–೨೦೧೦ರ ಮಧ್ಯದ ಹೌಸ್ ಹೋಲ್ಡ್ ಸರ್ವೆ ಯು.ಎನ್.ಎಫ್.ಪಿ.ಎ. (ಡಿ.ಎಚ್.ಎಸ್. ಮತ್ತು ಎಮ್.ಐ.ಸಿ.ಎಸ್.) ಮತ್ತು ಯುನಿಸೆಫ್ ಅಂಕಿ ಅಂಶಗಳು (www.childinfo.org)




ರೇಖಾ ಚಿತ್ರ ೪.೨: ೧೮ ವರ್ಷಕ್ಕಿಂತ ಕಡಿಮೆ ವಯಸ್ಸಿನಲ್ಲಿ ವಿವಾಹಕ್ಕೆ ಒಳಗಾದ ೨೦–೨೪ ವರ್ಷದ ಹೆಣ್ಣುಮಕ್ಕಳ ಶೇಕಡಾವಾರು

೨೦೦೦ರಲ್ಲಿ ಬಾಲ್ಯ ವಿವಾಹಗಳು ಅತಿಹೆಚ್ಚು ನಡೆಯುತ್ತಿದ್ದ ದೇಶಗಳಲ್ಲಿ ೨೦೦೦ ರಿಂದ ೨೦೧೧ರ ಮಧ್ಯದಲ್ಲಿ ನಡೆದ ಹೌಸ್ ಹೋಲ್ಡ್ ಸರ್ವೆಯ ಪ್ರಕಾರ ೧೮ ವರ್ಷಕ್ಕಿಂತ ಮುಂಚೆ ವಿವಾಹವಾದ ೨೦-೨೪ ವರ್ಷದ ಮಹಿಳೆಯರ ಶೇಕಡಾವಾರು ಪ್ರಮಾಣದಲ್ಲಿಯೂ ನೈಜೀರಿಯಾ ದೇಶವೇ ಮೊದಲ ಸ್ಥಾನದಲ್ಲಿರುವುದು ಕಂಡುಬರುತ್ತದೆ. ಜೊತೆಗೆ ಮೊದಲ ಮೂರು ಸ್ಥಾನಗಳಲ್ಲಿ ಯಾವುದೇ ಬದಲಾವಣೆಗಳು ಆಗಿಲ್ಲ. ಆದರೆ ನಂತರದ ಸ್ಥಾನಗಳಲ್ಲಿನ ದೇಶಗಳಲ್ಲಿ ಏರು ಪೇರಾಗಿರುವುದು ಕಂಡುಬರುತ್ತದೆ. ಈ ಸಾಲಿನಲ್ಲಿ ಭಾರತ ದೇಶ ೧೨ನೆಯ ಸ್ಥಾನವನ್ನು ಪಡೆದಿದೆ. ಹೀಗೆ ಪ್ರತೀ ದೇಶದಲ್ಲಿಯೂ ಸಹ ಈ ವಿವಾಹ ಪದ್ದತಿ ಅವ್ಯಾಹತವಾಗಿ ಸಾಗುತ್ತಲೇ ಇದೆ. ಇದಕ್ಕೆ ಹಲವಾರು ಕಾರಣಗಳಿವೆ. ಇವು ಪ್ರಾದೇಶಿಕವಾಗಿ ಭಿನ್ನವಾಗಿದ್ದು, ಆ ದೇಶದ ಸಂಪ್ರದಾಯ ಆಚರಣೆಗಳು ಈ ವಿವಾಹಗಳಿಗೆ ಕಾರಣವಾಗುತ್ತಿವೆ. ಇದೊಂದು ಬಹುದೊಡ್ಡ ಸಾಮಾಜಿಕ ಪಿಡುಗಾಗಿದೆ. ೨೦೦೦ರಲ್ಲಿ United Nations Population Division ಸಂಗ್ರಹಿಸಿದ ವರದಿಯ ಪ್ರಕಾರ ಶೇಕಡಾ ೯.೫ರಷ್ಟು ಹುಡುಗರು ಮತ್ತು ಶೇಕಡಾ ೩೫.೭ರಷ್ಟು ಹುಡುಗಿಯರು ತಮ್ಮ ೧೫ರಿಂದ ೧೯ ವರ್ಷದೊಳಗೆ ವಿವಾಹವಾಗುತ್ತಿದ್ದಾರೆ.

### ೪.೨. ಭಾರತದಲ್ಲಿ ಬಾಲ್ಯ ವಿವಾಹ ಪದ್ಧತಿ

ಬಾಲ್ಯ ವಿವಾಹ ಪದ್ಧತಿಗೆ ಒಳಗಾದ ದೇಶಗಳಲ್ಲಿ ಭಾರತವೂ ಒಂದು. ಇಲ್ಲಿ ಬಹಳಷ್ಟು ವಿವಾಹಗಳು ವಿವಾಹ ವಯಸ್ಸಿಗಿಂತ ಪೂರ್ವದಲ್ಲಿಯೇ ನಡೆಯುತ್ತಿವೆ. ಮುಖ್ಯವಾಗಿ ಅಪ್ರಾಪ್ತ ವಯಸ್ಸಿನ ಹೆಣ್ಣುಮಕ್ಕಳು ಈ ಬಂಧನಕ್ಕೆ ಬಹು ಬೇಗನೇ ಸಿಲುಕಿಕೊಳ್ಳುತ್ತಾರೆ. ಅದು ಅವರ ಸ್ವಂತ ನಿರ್ಧಾರವಾಗಿರುವುದಿಲ್ಲ. ಬದಲಾಗಿ ಕುಟುಂಬದಲ್ಲಿನ ತಂದೆ ತಾಯಂದಿರ ಒತ್ತಾಯದ ಮೇರೆಗೆ ವಿವಾಹಕ್ಕೆ ಒಳಗಾಗುತ್ತಾರೆ. ಗಂಡು ಮಕ್ಕಳೂ ಬಾಲ್ಯದಲ್ಲಿಯೇ ವಿವಾಹವಾಗುತ್ತಾರಾದರೂ, ಅವರ ಪ್ರಮಾಣ ತುಂಬಾನೇ ಕಡಿಮೆ. ಒಟ್ಟಾರೆಯಾಗಿ ಬಾಲ್ಯ ವಿವಾಹಗಳ ಸಂಖ್ಯೆ ದೇಶದಲ್ಲಿ ಅಧಿಕವಾಗಿದ್ದು, ಬಾಲ್ಯ ವಿವಾಹಗಳ ಶೇಕಡಾವಾರು ಪ್ರಮಾಣ ೨೨%ರಷ್ಟಿದೆ. DLHS III (2007-08) ( District Level Household Survey) ಪ್ರಕಾರ ಶೇಕಡಾ ೨೩.೪ರಷ್ಟು ಹುಡುಗರು ಮತ್ತು ಶೇಕಡಾ ೨೨.೧ರಷ್ಟು ಹುಡುಗಿಯರು ಕಾನೂನು ನಿಗಧಿಪಡಿಸಿದ ವಿವಾಹ ವಯಸ್ಸಿಗಿಂತ ಮುಂಚಿತವಾಗಿ ಅಂದರೆ ಕಾನೂನುಬಾಹೀರವಾಗಿ ವಿವಾಹವಾಗುತ್ತಿದ್ದಾರೆ. ೨೧ ವರ್ಷಕ್ಕಿಂತ ಕಡಿಮೆ ವಯಸ್ಸಿನಲ್ಲಿ ವಿವಾಹವಾಗುವ ಹುಡುಗರ ಶೇಕಡಾವಾರು ಪ್ರಮಾಣದಲ್ಲಿ ಕಡಿಮೆ ಇರುವ ರಾಜ್ಯವೆಂದರೆ ಕೇರಳ. ಇಲ್ಲಿ ಶೇಕಡಾ ೧.೨ರಷ್ಟು ಮಾತ್ರ ಇದೆ. ಹಾಗೆಯೇ ಹುಡುಗಿಯರ ಪ್ರಮಾಣದಲ್ಲಿ ಹಿಮಾಚಲಪ್ರದೇಶ ಶೇಕಡಾ ೧.೬ರಷ್ಟು ಅತ್ಯಂತ ಕಡಿಮೆ ಪ್ರಮಾಣವನ್ನು ಹೊಂದಿದೆ. ಒಟ್ಟಾರೆಯಾಗಿ ಭಾರತ ದೇಶದಲ್ಲಿ ಪ್ರತಿಯೊಂದು ರಾಜ್ಯದಲ್ಲಿಯೂ ಬಾಲ್ಯ ವಿವಾಹಗಳು ನಡೆಯುತ್ತಿವೆ. ಹಾಗಾಗಿ ದೇಶದ ಯಾವ ಯಾವ

ರಾಜ್ಯಗಳಲ್ಲಿ ಬಾಲ್ಯ ವಿವಾಹಗಳ ಸಂಖ್ಯೆಯ ಶೇಕಡಾವಾರು ಪ್ರಮಾಣ ಎಷ್ಟಿದೆ ಎಂಬುದನ್ನು ಕೆಳಗಿನಂತೆ ಗುರುತಿಸಲಾಗಿದೆ.

**ಕೋಷ್ಟಕ – ೪.೩**

**೧೮ ವರ್ಷ ವಯಸ್ಸಿಗಿಂತ ಮುಂಚೆ ವಿವಾಹಕ್ಕೆ ಒಳಗಾಗುತ್ತಿರುವ ಹೆಣ್ಣುಮಕ್ಕಳು**

| ರಾಜ್ಯ | ಶೇಕಡಾವಾರು |
|---|---|
| ಹಿಮಾಚಲ ಪ್ರದೇಶ | ೨ |
| ಲಕ್ಷದ್ವೀಪ | ೩ |
| ಗೋವಾ | ೩ |
| ಛಂದೀಗಢ | ೩ |
| ಪುದುಚೆರಿ | ೪ |
| ದಮನ್ ಮತ್ತು ದೀಯು | ೫ |
| ಉತ್ತರಾಖಂಡ್ | ೬ |
| ಪಂಜಾಬ್ | ೬ |
| ದೆಹಲಿ | ೬ |
| ಅಂಡಮಾನ್ ಮತ್ತು ನಿಕೋಬಾರ್ | ೬ |
| ಮಣಿಪುರ | ೬ |
| ಕೇರಳ | ೭ |
| ಜಮ್ಮು ಮತ್ತು ಕಾಶ್ಮೀರ | ೭ |
| ಅರುಣಾಚಲ ಪ್ರದೇಶ | ೮ |
| ತಮಿಳುನಾಡು | ೯ |
| ಮಿಜೋರಾಮ್ | ೧೦ |
| ಮೇಘಾಲಯ | ೧೫ |
| ಹರಿಯಾಣ | ೧೬ |
| ಸಿಕ್ಕಿಂ | ೧೬ |
| ಮಹಾರಾಷ್ಟ್ರ | ೧೮ |
| ಗುಜರಾತ್ | ೧೯ |
| ಒರಿಸ್ಸಾ | ೧೯ |
| ಅಸ್ಸಾಂ | ೨೧ |
| ತ್ರಿಪುರಾ | ೨೧ |
| ಛತ್ತೀಸ್‌ಗಢ | ೨೧ |
| ಕರ್ನಾಟಕ | ೨೨ |
| ಆಂಧ್ರಪ್ರದೇಶ | ೨೯ |
| ದಾದರ್ ಮತ್ತು ನಗರ್ ಹವೇಲಿ | ೨೯ |
| ಮಧ್ಯಪ್ರದೇಶ | ೨೯ |
| ಉತ್ತರ ಪ್ರದಶ | ೩೩ |

| | |
|---|---|
| ಜಾರ್ಕಂಡ್ | ೩೬ |
| ರಾಜಸ್ಥಾನ | ೪೦ |
| ಪಶ್ಚಿಮ ಬಂಗಾಳ | ೪೧ |
| ಬಿಹಾರ | ೪೬ |

**ಮೂಲ** : DLHS-RCH III ( 2007-08)




**ರೇಖಾಚಿತ್ರ ೪.೩ ೧೮ ವರ್ಷ ವಯಸ್ಸಿಗಿಂತ ಮುಂಚೆ ವಿವಾಹಕ್ಕೆ ಒಳಗಾಗುತ್ತಿರುವ ಹೆಣ್ಣುಮಕ್ಕಳು**

ಬಿಹಾರ ರಾಜ್ಯವು ಬಾಲ್ಯ ವಿವಾಹದ ಶೇಕಡಾವಾರು ಪ್ರಮಾಣದಲ್ಲಿ ದೇಶದಲ್ಲಿಯೇ ಪ್ರಥಮ ಸ್ಥಾನದಲ್ಲಿದೆ. ಅಂದರೆ ಈ ರಾಜ್ಯದಲ್ಲಿ ಶೇ.೪೬ರಷ್ಟು ಮಹಿಳೆಯರು ೧೮ ವರ್ಷಕ್ಕಿಂತಲೂ ಪೂರ್ವದಲ್ಲಿ ವಿವಾಹ ಬಂಧನಕ್ಕೆ ಒಳಗಾಗುತ್ತಿದ್ದಾರೆ. ಹಾಗೆಯೇ ಇದರ ನಂತರದ ಸ್ಥಾನ ಪಶ್ಚಿಮ ಬಂಗಾಳ ರಾಜ್ಯದ್ದು, ಇಲ್ಲಿ ಬಾಲ್ಯ ವಿವಾಹಗಳ ಪ್ರಮಾಣ ಶೇ.೪೧ರಷ್ಟಿದೆ. ಬಾಲ್ಯ ವಿವಾಹಕ್ಕೆ ಒಳಗಾಗುವ ಮಹಿಳೆಯರ ಪ್ರಮಾಣದಲ್ಲಿ ಅತ್ಯಂತ ಕಡಿಮೆ ಇರುವ ರಾಜ್ಯವೆಂದರೆ ಹಿಮಾಚಲ ಪ್ರದೇಶ. ಇಲ್ಲಿ ಶೇ.೨ರಷ್ಟು ಮಹಿಳೆಯರು ಬಾಲ್ಯ ವಿವಾಹಕ್ಕೆ ಒಳಗಾಗುತ್ತಿದ್ದಾರೆ. ಮುಖ್ಯವಾಗಿ ಬಿಹಾರ(೪೬%), ಪಶ್ಚಿಮ ಬಂಗಾಳ (೪೧%), ರಾಜಾಸ್ಥಾನ (೪೦%), ಜಾರ್ಖಂಡ್ (೩೬%), ಉತ್ತರ ಪ್ರದೇಶ (೩೩%), ಮಧ್ಯಪ್ರದೇಶ, ದಾದರ್ ಮತ್ತು ನಗರ ಹವೇಲಿ ಮತ್ತು ಆಂದ್ರಪ್ರದೇಶ (೨೯%) ಈ ರಾಜ್ಯಗಳು ಬಾಲ್ಯ ವಿವಾಹಕ್ಕೆ ಒಳಪಡುವ ಭಾರತದ ಎಲ್ಲಾ ರಾಜ್ಯಗಳ ಪೈಕಿ ಮೊದಲ ಎಂಟು ಸ್ಥಾನಗಳಲ್ಲಿ ಕಂಡುಬರುತ್ತವೆ. ಇನ್ನು ಉಳಿದಂತೆ ಕರ್ನಾಟಕದಲ್ಲಿ ಶೇ.೨೨ರಷ್ಟು ಬಾಲ್ಯವಿವಾಹಗಳು ನಡೆಯುತ್ತವೆ. ಇದು ದೇಶದ ಪ್ರಮಾಣಕ್ಕೆ ಸರಿಸಮಾನವಾಗಿದೆ.

**೪.೩. ಕರ್ನಾಟಕದಲ್ಲಿ ಬಾಲ್ಯ ವಿವಾಹ ಪದ್ಧತಿ**

ಇಂದಿನ ಕರ್ನಾಟಕವು ೩೦ ಜಿಲ್ಲೆಗಳನ್ನು ಒಳಗೊಂಡಿದೆ. ಪ್ರತಿಯೊಂದು ಜಿಲ್ಲೆಯಲ್ಲಿಯೂ ಬಾಲ್ಯವಿವಾಹಗಳು ನಡೆಯುತ್ತಲೇ ಇವೆ. ಆದರೆ ಇವುಗಳ ಶೇಕಡಾವಾರು ಪ್ರಮಾಣದಲ್ಲಿ ಸ್ವಲ್ಪ ಮಟ್ಟಗಿನ ವ್ಯತ್ಯಾಸವಿರುವುದು ಕಂಡುಬರುತ್ತದೆ. ಮುಖ್ಯವಾಗಿ ಕರ್ನಾಟಕದ ಉತ್ತರ ಭಾಗದಲ್ಲಿನ ಜಿಲ್ಲೆಗಳಲ್ಲಿ ಬಾಲ್ಯವಿವಾಹಗಳ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ. ಕರ್ನಾಟಕ ರಾಜ್ಯದಲ್ಲಿ ಪ್ರತೀ ೫ ಹುಡುಗಿಯರಲ್ಲಿ ಇಬ್ಬರು ಹುಡುಗಿಯರು ೧೮ ವರ್ಷಕ್ಕಿಂತ ಮುಂಚಿತವಾಗಿ ವಿವಾಹಕ್ಕೆ ಒಳಗಾಗುತ್ತಿದ್ದಾರೆ. ೨೦೧೧ರ ಜನಸಂಖ್ಯೆಯ ಪ್ರಕಾರ ೦–೧೮ ವರ್ಷದ ಮಕ್ಕಳ ಸಂಖ್ಯೆ ರಾಜ್ಯದ ಒಟ್ಟು ಜನಸಂಖ್ಯೆಯ ಶೇ.೪೧ರಷ್ಟಿದೆ. ಅದೇ ರೀತಿಯಲ್ಲಿ ೧೦–೧೮ ವರ್ಷ ವಯಸ್ಸಿನ ಒಳಗಿನ ಹದಿಹರೆಯದ ಹೆಣ್ಣು ಮಕ್ಕಳ ಸಂಖ್ಯೆ ೫,೨೦೨,೯೫೪ ರಷ್ಟಿದೆ. ಹಾಗೆಯೇ ೧೦–೨೧ ವರ್ಷ ವಯಸ್ಸಿನ ಹದಿಹರೆಯದ ಹುಡುಗರ ಸಂಖ್ಯೆ ೭,೨೦೦,೯೮೯ರಷ್ಟಿದೆ. ಎರಡನ್ನೂ ಒಟ್ಟು ಸೇರಿಸಿ ರಾಜ್ಯದ ಒಟ್ಟು ಜನಸಂಖ್ಯೆಗೆ ಹೋಲಿಸಿದಾಗ ಶೇ. ೨೩ರಷ್ಟು ಹದಿಹರೆಯದವರಿದ್ದಾರೆ. ೨೦೧೧ರ ಜನಗಣತಿಯ ಪ್ರಕಾರ ಹದಿಹರೆಯದವರ ಪ್ರಮಾಣ ಒಟ್ಟು ಜನಸಂಖ್ಯೆಯ ಶೇ.೨೬ರಷ್ಟಿದೆ. ಕರ್ನಾಟಕ ರಾಜ್ಯದಲ್ಲಿನ ಪ್ರತಿಯೊಂದು ಜಿಲ್ಲೆಯಲ್ಲಿಯೂ ಬಾಲ್ಯ ವಿವಾಹಗಳು ನಡೆಯುತ್ತಲೇ ಇವೆ. ಪ್ರತೀ ಜಿಲ್ಲೆಯಲ್ಲಿ ೧೮ ವರ್ಷಕ್ಕಿಂತ ಪೂರ್ವದಲ್ಲಿ ವಿವಾಹಕ್ಕೆ ಒಳಗಾಗುವ ಹೆಣ್ಣುಮಕ್ಕಳ ಶೇಕಡಾವಾರು ಪ್ರಮಾಣ ಈ ಕೆಳಗಿನಂತಿದೆ.

**ಕೋಷ್ಟಕ– ೪.೪**

**ಕರ್ನಾಟಕದಲ್ಲಿ ೧೮ ವರ್ಷಕ್ಕೂ ಮುನ್ನ ವಿವಾಹ ಬಂಧನಕ್ಕೆ ಒಳಗಾದ ಹೆಣ್ಣುಮಕ್ಕಳ ಶೇಕಡಾವಾರು**

| ಜಿಲ್ಲೆ | ೨೦೦೭–೦೮ | ೨೦೧೨–೧೩ |
|---|---|---|
| ಉತ್ತರ ಕನ್ನಡ | ೧.೬ | ೫.೩ |
| ಉಡುಪಿ | ೨.೭ | ೦.೯ |
| ಹಾಸನ | ೩.೨ | ೩.೩ |
| ಚಿಕ್ಕಮಗಳೂರು | ೩.೫ | ೪.೭ |
| ದಕ್ಷಿಣಕನ್ನಡ | ೫.೭ | ೧.೧ |
| ಕೊಡಗು | ೭.೧ | ೧.೧ |
| ಶಿವಮೊಗ್ಗ | ೮.೯ | ೪.೦ |
| ಬೆಂಗಳೂರು ಪಟ್ಟಣ | ೧೦.೧ | ೧೧.೮ |
| ಮೈಸೂರು | ೧೪.೩ | ೧೦.೩ |
| ಬೆಂಗಳೂರು ಗ್ರಾಮಾಂತರ | ೧೪.೮ | ೬.೭ |
| ದಾವಣಗೆರೆ | ೧೬.೪ | ೭.೦ |
| ಕೋಲಾರ | ೧೮.೪ | ೧೩.೧ |
| ತುಮಕೂರು | ೧೮.೪ | ೧೧.೦ |

| | | |
|---|---|---|
| ಹಾವೇರಿ | ೧೯.೭ | ೧೦.೫ |
| ಧಾರವಾಡ | ೨೧.೩ | ೧೩.೧ |
| ಮಂಡ್ಯ | ೨೧.೭ | ೧೧.೦ |
| ಚಾಮರಾಜನಗರ | ೨೪.೪ | ೧೭.೦ |
| ಬೀದರ್ | ೨೭.೪ | ೧೭.೨ |
| ಚಿತ್ರದುರ್ಗ | ೨೭.೬ | ೧೦.೨ |
| ಗದಗ | ೩೨.೪ | ೧೮.೪ |
| ಬಳ್ಳಾರಿ | ೩೬.೩ | ೨೧.೯ |
| ರಾಯಚೂರು | ೩೮.೭ | ೨೨.೬ |
| ಗುಲ್ಬರ್ಗಾ | ೪೧.೬ | ೨೮.೮ |
| ಬಿಜಾಪುರ | ೪೩.೧ | ೨೪.೧ |
| ಬೆಳಗಾಂ | ೪೪.೨ | ೨೬.೭ |
| ಕೊಪ್ಪಳ | ೪೪.೭ | ೧೪.೨ |
| ಬಾಗಲಕೋಟೆ | ೪೭.೫ | ೨೫.೨ |
| ರಾಮನಗರ | | ೧೦.೨ |
| ಚಿಕ್ಕಬಳ್ಳಾಪುರ | | ೧೦.೭ |
| ಯಾದಗಿರ | | ೩೬.೪ |

ಮೂಲ : ಡಿ.ಎಲ್.ಎಚ್.ಎಸ್.–ಆರ್.ಸಿ.ಎಚ್ ೨೦೦೭–೦೮ ಮತ್ತು ಡಿ.ಎಲ್.ಎಚ್.ಎಸ್.– ೪ ( ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಭಾರತ ಸರ್ಕಾರ–೨೦೧೨–೧೩).




**ರೇಖಾ ಚಿತ್ರ ೪.೪ ಕರ್ನಾಟಕದಲ್ಲಿ ೧೮ ವರ್ಷಕ್ಕೂ ಮುನ್ನ ವಿವಾಹ ಬಂಧನಕ್ಕೆ ಒಳಗಾದ ಹೆಣ್ಣುಮಕ್ಕಳ ಶೇಕಡಾವಾರು**

ಕರ್ನಾಟಕ ರಾಜ್ಯದಲ್ಲಿನ ಮೂವತ್ತು ಜಿಲ್ಲೆಗಳಲ್ಲಿ ಬಾಗಲಕೋಟೆ ಜಿಲ್ಲೆಯಲ್ಲಿ ಅತ್ಯಂತ ಹೆಚ್ಚು ಬಾಲ್ಯ ವಿವಾಹಗಳು ನಡೆಯುತ್ತಿರುವುದು ಕಂಡುಬರುತ್ತದೆ. ಮುಖ್ಯವಾಗಿ ೨೦೦೭-೦೮ರ ವರದಿಯ ಪ್ರಕಾರ ಬಾಗಲಕೋಟೆ ಜಿಲ್ಲೆಯಲ್ಲಿ ಶೇಕಡಾ ೪೭.೫ರಷ್ಟು ಪ್ರಮಾಣದಲ್ಲಿ ಬಾಲ್ಯ ವಿವಾಹಗಳು ನಡೆಯುತ್ತಿವೆ. ಹಾಗೆಯೇ ನಂತರದ ಸ್ಥಾನ ಕೊಪ್ಪಳದ್ದಾಗಿದೆ. ಇಲ್ಲಿ ಶೇ.೪೪.೭ರಷ್ಟು ಪ್ರಮಾಣದಲ್ಲಿ ನಡೆಯುತ್ತಿವೆ. ರಾಜ್ಯದಲ್ಲಿ ೧/೪ ಭಾಗದಷ್ಟು ಹೆಣ್ಣುಮಕ್ಕಳು ೧೮ ವರ್ಷಕ್ಕಿಂತ ಮುಂಚಿತವಾಗಿ ವಿವಾಹಕ್ಕೆ ಒಳಗಾಗುತ್ತಿದ್ದಾರೆ. ಅತ್ಯಂತ ಕಡಿಮೆ ಪ್ರಮಾಣವನ್ನು ಹೊಂದಿರುವ ಜಿಲ್ಲೆಯೆಂದರೆ ಉತ್ತರ ಕನ್ನಡ (೧.೬%). ಈ ಎಲ್ಲಾ ಶೇಕಡಾವಾರು ಪ್ರಮಾಣವನ್ನು ಗಮನಿಸಿದರೆ ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿಯೇ ಅತೀ ಹೆಚ್ಚು ಬಾಲ್ಯ ವಿವಾಹಗಳು ನಡೆಯುತ್ತಿವೆ. ಇದು ದಕ್ಷಿಣ ಕರ್ನಾಟಕಕ್ಕೆ ಹೋಲಿಸಿದರೆ ಈ ಭಾಗದಲ್ಲಿ ಅತೀ ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಭಾರತ ಸರ್ಕಾರ-೨೦೧೨-೧೩ರ ವರದಿಯ ಪ್ರಕಾರ ಬಾಗಲಕೋಟೆ ಜಿಲ್ಲೆಯ ಸ್ಥಾನದಲ್ಲಿ ಗುಲ್ಬರ್ಗಾ ಜಿಲ್ಲೆಯು ಮೊದಲ ಸ್ಥಾನದಲ್ಲಿರುವುದು ಕಂಡುಬರುತ್ತದೆ. ಪ್ರತಿಯೊಂದು ಜಿಲ್ಲೆಯಲ್ಲಿಯೂ ಇದರ ಪ್ರಮಾಣದಲ್ಲಿ ವ್ಯತ್ಯಾಸಗಳಾಗಿದೆ. ಇನ್ನು ೨೧ ವರ್ಷ ವಯಸ್ಸಿಗೂ ಪೂರ್ವದಲ್ಲಿ ವಿವಾಹವಾಗುವ ಹುಡುಗರ ಪ್ರಮಾಣವೂ ಕೂಡ ಉತ್ತರ ಕರ್ನಾಟಕದಲ್ಲಿ ಅಧಿಕವಾಗಿದೆ. ಕರ್ನಾಟಕದಲ್ಲಿ ೧೦ ಹುಡುಗರಲ್ಲಿ ಒಬ್ಬ ಹುಡುಗ ೨೧ ವರ್ಷ ವಯಸ್ಸಿಗಿಂತ ಪೂರ್ವದಲ್ಲಿ ವಿವಾಹಕ್ಕೆ ಒಳಗಾಗುತ್ತಾನೆ. ಇವರ ಪ್ರಮಾಣ ಶೇಕಡಾ ೧೧ರಷ್ಟಿದೆ. ರಾಜ್ಯದಲ್ಲಿನ ಪ್ರತೀ ಜಿಲ್ಲೆಗಳಲ್ಲಿ ೨೧ ವರ್ಷ ವಯಸ್ಸಿಗೂ ಮುನ್ನ ವಿವಾಹಕ್ಕೆ ಒಳಗಾದಂತಹ ಹುಡುಗರ ಶೇಕಡಾವಾರು ಪ್ರಮಾಣವನ್ನು ಗಮನಿಸುವುದಾದರೆ,

**ಕೋಷ್ಟಕ ೪.೫**

**ಕರ್ನಾಟಕದಲ್ಲಿ ೨೧ ವರ್ಷಕ್ಕೂ ಮುನ್ನ ವಿವಾಹ ಬಂಧನಕ್ಕೆ ಒಳಗಾದ ಹುಡುಗರ ಶೇಕಡಾವಾರು**

| ಜಿಲ್ಲೆ | ೨೦೦೭-೦೮ | ೨೦೧೨-೧೩ |
|---|---|---|
| ಉಡುಪಿ | ೦ | ೦ |
| ಉತ್ತರಕನ್ನಡ | ೨.೭ | ೨.೧ |
| ಚಿಕ್ಕಮಗಳೂರು | ೩.೪ | ೬.೧ |
| ಮಂಡ್ಯ | ೪.೮ | ೧.೩ |
| ಧಾರವಾಡ | ೫.೧ | ೩.೦ |
| ಬೆಂಗಳೂರು ಗ್ರಾಮಾಂತರ | ೬.೨ | ೩.೬ |
| ತುಮಕೂರು | ೬.೪ | ೩.೧ |
| ದಕ್ಷಿಣಕನ್ನಡ | ೬.೮ | ೨.೨ |
| ಶಿವಮೊಗ್ಗ | ೭.೩ | ೪.೦ |
| ಮೈಸೂರು | ೭.೪ | ೫.೩ |
| ಹಾವೇರಿ | ೭.೬ | ೩.೪ |
| ಗದಗ | ೭.೭ | ೬.೭ |
| ಬೆಂಗಳೂರು ನಗರ | ೭.೯ | ೪.೧ |

| | | |
|---|---|---|
| ಕೊಡಗು | ೭.೯ | ೪.೦ |
| ಚಾಮರಾಜನಗರ | ೭.೯ | ೫.೦ |
| ಚಿತ್ರದುರ್ಗ | ೧೧ | ೮.೪ |
| ಕೋಲಾರ | ೧೨.೫ | ೬.೩ |
| ಬೆಳಗಾಂ | ೧೩.೧ | ೭.೪ |
| ಹಾಸನ | ೧೩.೪ | ೩.೬ |
| ಬೀದರ್ | ೧೩.೯ | ೯.೩ |
| ದಾವಣಗೆರೆ | ೧೩.೯ | ೫.೪ |
| ಬಾಗಲಕೋಟೆ | ೧೬.೩ | ೧೦.೧ |
| ಬಿಜಾಪುರ | ೧೬.೫ | ೧೧.೫ |
| ಬಳ್ಳಾರಿ | ೧೮.೨ | ೧೦.೨ |
| ಕೊಪ್ಪಳ | ೧೮.೪ | ೯.೯ |
| ಗುಲ್ಬರ್ಗಾ | ೧೮.೫ | ೧೨.೯ |
| ರಾಯಚೂರು | ೨೮.೨ | ೧೫.೦ |
| ರಾಮನಗರ | | ೨.೮ |
| ಚಿಕ್ಕಬಳ್ಳಾಪುರ | | ೬.೮ |
| ಯಾದಗಿರ | | ೧೯.೯ |

ಮೂಲ : ಡಿ.ಎಲ್.ಎಚ್.ಎಸ್.–ಆರ್.ಸಿ.ಎಚ್ ೨೦೦೭–೦೮ ಮತ್ತು ಡಿ.ಎಲ್.ಎಚ್.ಎಸ್.–೪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಭಾರತ ಸರ್ಕಾರ–೨೦೧೨–೧೩).




ರೇಖಾ ಚಿತ್ರ ೪.೫ ಕರ್ನಾಟಕದಲ್ಲಿ ೨೧ ವರ್ಷಕ್ಕೂ ಮುನ್ನ ವಿವಾಹ ಬಂಧನಕ್ಕೆ ಒಳಗಾದ ಹುಡುಗರ ಶೇಕಡಾವಾರು

೨೦೦೭-೦೮ರ ಡಿ.ಎಲ್.ಎಚ್.ಎಸ್.-ಆರ್.ಸಿ.ಎಚ್ ವರದಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ೨೧ ವರ್ಷಕ್ಕಿಂತ ಮುಂಚಿತವಾಗಿ ಪಿವಾಹ ಬಂಧನಕ್ಕೆ ಒಳಗಾಗುವ ಹುಡುಗರ ಪ್ರಮಾಣದಲ್ಲಿ ರಾಯಚೂರು ಜಿಲ್ಲೆಯೇ ಪ್ರಥಮ ಸ್ಥಾನದಲ್ಲಿರುವುದು ಕಂಡುಬರುತ್ತದೆ. ಈ ಜಿಲ್ಲೆಯಲ್ಲಿ ಶೇ.೨೮.೨ರಷ್ಟು ವಿವಾಹಗಳು ನಡೆದಿವೆ. ಇದರ ನಂತರದ ಸ್ಥಾನಗಳಲ್ಲಿ ಗುಲ್ಬರ್ಗಾ (೧೮.೫%), ಕೊಪ್ಪಳ (೧೮.೪%), ಬಳ್ಳಾರಿ (೧೮.೨%), ಬಿಜಾಪುರ (೧೬.೫%) ಮತ್ತು ಬಾಗಲಕೋಟೆ (೧೬.೩%) ಜಿಲ್ಲೆಗಳು ಕಂಡುಬರುತ್ತವೆ. ಇಲ್ಲಿಯೂ ಸಹ ಕರ್ನಾಟಕದ ದಕ್ಷಿಣ ಭಾಗಕ್ಕೆ ಹೋಲಿಸಿದರೆ ಉತ್ತರ ಕರ್ನಾಟಕದಲ್ಲಿಯೇ ಇದರ ಪ್ರಮಾಣ ಹೆಚ್ಚಿರುವುದು ಕಂಡುಬರುತ್ತದೆ. ಹಾಗೆಯೇ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಭಾರತ ಸರ್ಕಾರ-೨೦೧೨-೧೩ರ ವರದಿಯ ಪ್ರಕಾರ ೨೧ ವರ್ಷಕ್ಕೂ ಪೂರ್ವದಲ್ಲಿ ವಿವಾಹಕ್ಕೆ ಒಳಗಾಗುವ ಹುಡುಗರ ಪ್ರಮಾಣವನ್ನು ಗಮನಿಸಿದರೆ ಯಾದಗಿರಿ ಜಿಲ್ಲೆಯೇ ಪ್ರಥಮ ಸ್ಥಾನದಲ್ಲಿರುವುದು ಮತ್ತು ರಾಯಚೂರು ಜಿಲ್ಲೆಯು ಎರಡನೇ ಸ್ಥಾನದಲ್ಲಿರುವುದು ತಿಳಿದುಬರುತ್ತದೆ. ಆದರೆ ಕೊಪ್ಪಳದಲ್ಲಿ ಇದರ ಪ್ರಮಾಣ ತುಂಬಾ ಕಡಿಮೆ ಇದೆ. ಅಂದರೆ ಶೇ. ೯.೯ ರಷ್ಟು ಮಾತ್ರ ಇದೆ. ಒಟ್ಟಾರೆಯಾಗಿ ಮೇಲಿನ ಎಲ್ಲಾ ಶೇಕಡಾವಾರು ಪ್ರಮಾಣಗಳನ್ನು ಗಮನಿಸಿದರೆ ಹುಡುಗರಿಗಿಂತ ಹುಡುಗಿಯರೇ ಅತೀ ಹೆಚ್ಚಿನ ರೀತಿಯಲ್ಲಿ ಬಾಲ್ಯ ವಿವಾಹಕ್ಕೆ ಒಳಗಾಗುತ್ತಿರುವುದು ತಿಳಿದುಬರುತ್ತದೆ. ಅದರಲ್ಲಿಯೂ ಉತ್ತರ ಕರ್ನಾಟಕದಲ್ಲಿಯೇ ಇದರ ಪ್ರಮಾಣ ಅಧಿಕವಾಗಿರುವುದನ್ನು ಅಂಕಿ ಸಂಖ್ಯೆಗಳೇ ತಿಳಿಸುತ್ತವೆ. “ಕರ್ನಾಟಕದಲ್ಲಿ ವಿವಾಹಿತರ ಒಟ್ಟು ಸಂಖ್ಯೆ ಹಾಗೂ ಆ ಸಂದರ್ಭದಲ್ಲಿ ಅವರ ವಯಸ್ಸು” ಎಂಬ ವರದಿಯ ಪ್ರಕಾರ ರಾಜ್ಯದಲ್ಲಿರುವ ೩.೪ ಕೋಟಿ ವಿವಾಹಿತರಲ್ಲಿ ೮.೨೬ ಲಕ್ಷ ಮಂದಿ ೧೦ ವರ್ಷ ತುಂಬುವ ಮುಂಚೆಯೇ ವಿವಾಹವಾಗಿರುವ ಸಂಗತಿ ಬೆಳಕಿಗೆ ಬಂದಿದೆ. ೧೮ ವರ್ಷ ತುಂಬುವ ಮುನ್ನ ೨೩.೩ ಲಕ್ಷ ಮಂದಿ ಸಪ್ತಪದಿ ತುಳಿದಿದ್ದಾರೆ. ೧.೮೬ ಕೋಟಿ ವಿವಾಹಿತ ಮಹಿಳೆಯರಲ್ಲಿ ಇನ್ನೂ ೧೦ ವರ್ಷ ತುಂಬುದ ೫.೭೫ ಲಕ್ಷ ಮಂದಿ ವಿವಾಹ ಜೀವನಕ್ಕೆ ಕಾಲಿಟ್ಟಿರುವುದು ವರದಿಯಲ್ಲಿ ನಮೂದಾಗಿದೆ. ಒಟ್ಟಾರೆಯಾಗಿ ಮೇಲಿನ ಎಲ್ಲಾ ಅಂಕಿ ಅಂಶಗಳು ಕರ್ನಾಟಕದಲ್ಲಿ ಬಾಲ್ಯವಿವಾಹಗಳ ಸ್ಥಿತಿಗತಿಯ ಬಗೆಗೆ ತಿಳಿಸುತ್ತವೆ. ಅಂದರೆ ಆಧುನಿಕ ಕಾಲದಲ್ಲಿ ಜೀವಿಸುತ್ತಿರುವ ಇಂದಿನ ಸಮಾಜದಲ್ಲಿ ಬಾಲ್ಯವಿವಾಹಗಳು ನಡೆದೇ ಇರುವುದು ವಿಪರ್ಯಾಸದ ಸಂಗತಿಯೇ ಸರಿ.

## ಅಧ್ಯಾಯ ಐದು

# ಬಾಲ್ಯ ವಿವಾಹ ಪದ್ಧತಿ : ಪರಿಣಾಮಗಳ ಶೋಧ

ಬಾಲ್ಯ ವಿವಾಹದಿಂದಾಗುವ ಪರಿಣಾಮಗಳು ತುಂಬಾ ಸಂಕೀರ್ಣವೂ ಮತ್ತು ಭಯಾನಕವೂ ಆಗಿವೆ. ಮುಖ್ಯವಾಗಿ ಬಾಲ್ಯವಿವಾಹವು ಮಕ್ಕಳ ಬೆಳವಣಿಗೆಯನ್ನು ಅಂದರೆ ದೈಹಿಕ ಮತ್ತು ಮಾನಸಿಕ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ. ಜೊತೆಗೆ ಸ್ವಾಭಾವಿಕವಾಗಿ ಮಕ್ಕಳ ಹಕ್ಕುಗಳನ್ನು ಕಿತ್ತುಕೊಳ್ಳುತ್ತದೆ. ಹೀಗಾಗುವುದರಿಂದ ಇದು ಮಾನವ ಹಕ್ಕುಗಳಲ್ಲಿ ತಿಳಿಸಿರುವಂತೆ ಮಕ್ಕಳ ಹಕ್ಕುಗಳಿಗೂ ಧಕ್ಕೆಯನ್ನುಂಟುಮಾಡುತ್ತಿದೆ. ಕುಟುಂಬದಲ್ಲಿನ ಹಿರಿಯರು ಆದಷ್ಟು ಬೇಗ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳುವುದರ ಸಲುವಾಗಿ ತಮ್ಮ ಮಕ್ಕಳು ಚಿಕ್ಕವರಿದ್ದಾರೆ ಎಂಬುದನ್ನೂ ಯೋಚಿಸದೆ ಬಹು ಬೇಗನೇ ವಿವಾಹ ಬಂಧನಕ್ಕೆ ತಳ್ಳುತ್ತಾರೆ. ಹೀಗೆ ಬಹು ಬೇಗನೇ ವಿವಾಹ ಬಂಧನಕ್ಕೆ ಒಳಗಾದ ಮಕ್ಕಳು ಯಾವ ರೀತಿಯ ಜೀವನವನ್ನು ನಡೆಸುತ್ತಿದ್ದಾರೆ ಅಥವಾ ಅವರಿಗೆ ಆಗುತ್ತಿರುವ ತೊಂದರೆಗಳಾವುವು? ಅಥವಾ ಹಾಗೆ ತೊಂದರೆಗಳಾಗುತ್ತಿದ್ದರೆ ಅದಕ್ಕೆ ಕಾರಣಗಳೇನು? ಎಂಬುದನ್ನು ಯೋಚಿಸಲೂ ತಂದೆ ತಾಯಂದಿರು ಮುಂದಾಗುವುದಿಲ್ಲ. ವಾಸ್ತವದಲ್ಲಿ ಬಾಲ್ಯ ವಿವಾಹಕ್ಕೆ ಒಳಗಾದ ಮಕ್ಕಳು ಅನೇಕ ಬಗೆಯ ತೊಂದರೆಗಳನ್ನು ಅನುಭವಿಸುತ್ತಿದ್ದಾರೆ. ಅದರಲ್ಲಿಯೂ ಮುಖ್ಯವಾಗಿ ಹೆಣ್ಣು ಮಕ್ಕಳು ಗಂಡು ಮಕ್ಕಳಿಗಿಂತ ಹೆಚ್ಚಿನ ರೀತಿಯಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅವುಗಳನ್ನು ಕೆಳಗಿನಂತೆ ಗುರುತಿಸುವುದರ ಜೊತೆಗೆ ಸ್ತ್ರೀವಾದಿ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

೧. ರಕ್ತಹೀನತೆ ಉಂಟಾಗುತ್ತದೆ ಜೊತೆಗೆ ಕಡಿಮೆ ತೂಕದ ಮಕ್ಕಳ ಜನನವಾಗುತ್ತದೆ

೨. ಶಿಶು ಮರಣ ಮತ್ತು ಮಕ್ಕಳ ಮರಣಗಳು ಸಂಭವಿಸುತ್ತವೆ

೩. ಹೆಣ್ಣುಮಕ್ಕಳು ವಯಸ್ಸಿಗೆ ಮೀರಿದ ಜವಾಬ್ದಾರಿಯನ್ನು ಹೊರುವುದರಿಂದ ಮಾನಸಿಕ ಖಿನ್ನತೆಗೆ ಒಳಗಾಗುತ್ತಾರೆ

೪. ಹೆಣ್ಣುಮಕ್ಕಳು ಕೌಟುಂಬಿಕ ದೌರ್ಜನ್ಯಕ್ಕೆ ಒಳಗಾಗುತ್ತಾರೆ

೫. ಅಪ್ರಾಪ್ತ ವಯಸ್ಸಿನಲ್ಲಿ ಗರ್ಭಿಣಿಯಾಗುವುದರಿಂದ ಗರ್ಭಕೋಶದ ತೊಂದರೆಯಿಂದಾಗಿ ಹೆರಿಗೆ ಸಮಯದಲ್ಲಿ ಅಕಾಲಿಕ ಮರಣಕ್ಕೆ ತುತ್ತಾಗುತ್ತಿದ್ದಾರೆ.

೬. ವಿಧವಾ ಸಮಸ್ಯೆ.

೭. ಇತರೆ ಕಾರಣಗಳು. ಈ ಎಲ್ಲಾ ದುಷ್ಪರಿಣಾಮಗಳು ಮಹಿಳೆಯರ ಮೇಲೆಯೇ ಆಗುತ್ತಿವೆ. ಪುರುಷರ ಮೇಲೆ ದೈಹಿಕವಾಗಿ ಯಾವುದೇ ದುಷ್ಪರಿಣಾಮಗಳು ಸಂಭವಿಸುವುದಿಲ್ಲ. ಇವುಗಳನ್ನು ಒಂದೊಂದಾಗಿ ವಕ್ತೃಗಳ ಹೇಳಿಕೆಗಳಿಂದ ಕೆಳಗಿನಂತೆ ಸ್ತ್ರೀವಾದಿ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

**೧. ರಕ್ತಹೀನತೆ ಉಂಟಾಗುತ್ತದೆ ಜೊತೆಗೆ ಕಡಿಮೆ ತೂಕದ ಮಕ್ಕಳ ಜನನ**

ಬಾಲ್ಯ ವಿವಾಹಗಳಿಂದಾಗಿ ಹೆಣ್ಣು ಮಕ್ಕಳಲ್ಲಿ ರಕ್ತ ಹೀನತೆಯು ಕಾಣಿಸಿಕೊಳ್ಳುತ್ತಿದೆ. ಇದು ಆಕೆಗೆ ಸಾವು ತಂದುಕೊಡುವಂತಹ ಮಟ್ಟಕ್ಕೆ ಕೊಂಡೊಯ್ಯುತ್ತದೆ. ಉತ್ತರ ಕರ್ನಾಟಕದಲ್ಲಿ ಅಪೌಷ್ಟಿಕತೆಯಿಂದ ಬಳಲುವವರ ಸಂಖ್ಯೆಯೇ ಅಧಿಕವಾಗಿದೆ. ಹಾಗಾಗಿಯೇ ಮಕ್ಕಳ ಬೆಳವಣಿಗೆ ತುಂಬಾ ಕುಂಠಿತಗೊಂಡಿರುತ್ತದೆ. ಕುಟುಂಬದ ಒಳಗೆ ಹೆಣ್ಣುಮಕ್ಕಳು ಗಂಡು ಮಕ್ಕಳಿಗಿಂತ ಹೆಚ್ಚಿನ ಹೊರೆಯನ್ನು ಹೊತ್ತಿರುತ್ತಾರೆ. ಹಾಗಾಗಿ ಅವರಿಗೆ ಒತ್ತಡಗಳು ಹೆಚ್ಚಾಗಿರುತ್ತವೆ. ಈ ಒತ್ತಡಗಳ ನಡುವೆ ತಮ್ಮ ಆಹಾರದ ಕಡೆಗೆ ಗಮನ ಹರಿಸುವುದು ತುಂಬಾ ಕಷ್ಟಕರ ಸಂಗತಿಯಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಅವರಿಗೆ ವಿವಾಹ ಮಾಡಿಕೊಟ್ಟರೆ, ಅಂದರೆ ಅವರ ಶರೀರ ಇನ್ನೂ ಬೆಳವಣಿಗೆ ಹೊಂದುವ ಸಂದರ್ಭದಲ್ಲಿ ಅವರನ್ನು ವಿವಾಹದ ಕೂಪಕ್ಕೆ ತಳ್ಳಿದರೆ, ಅವರು ತುಂಬಾನೇ ಸಮಸ್ಯೆಗಳನ್ನು ಎದುರಿಸುವ ಸಂದರ್ಭಗಳು ಅಧಿಕವಾಗಿರುತ್ತವೆ. ಮುಖ್ಯವಾಗಿ ಅನೇಮಿಕ್ ರೋಗಿಗಳಾಗಿ ಮಾರ್ಪಡುತ್ತಾರೆ. ಈ ಸಮಸ್ಯೆ ಹೆಣ್ಣುಮಕ್ಕಳು ಗರ್ಭಧರಿಸಿದಾಗ ತುಂಬಾ ತೊಂದರೆಯನ್ನು ಉಂಟುಮಾಡುತ್ತದೆ. ಅಂತಹ ಸಮಯದಲ್ಲಿ ಒಳ್ಳೆಯ ಚಿಕಿತ್ಸೆ ಮತ್ತು ಆರೈಕೆ ದೊರೆತರೆ ಅವರು ಯಾವ ಆತಂಕವಿಲ್ಲದೇ ಜೀವಿಸುತ್ತಾರೆ. ಇಲ್ಲದಿದ್ದರೆ ಸಾವಿಗೆ ಹತ್ತಿರವಾಗುತ್ತಾರೆ. ಈ ರಕ್ತಹೀನತೆಯು ಕಂಡುಬರುವುದಕ್ಕೆ ಬಾಲ್ಯ ವಿವಾಹವೂ ಒಂದು ಕಾರಣವಾಗಿದೆ. ಅಂದರೆ ಅಧ್ಯಯನ ಕ್ಷೇತ್ರ ವ್ಯಾಪ್ತಿಯಲ್ಲಿ ಬಾಲ್ಯ ವಿವಾಹಕ್ಕೆ ಒಳಗಾದಂತಹ ಮಹಿಳೆಯರನ್ನು ಗುರುತಿಸಿ ಮಾತನಾಡಿಸಿದಾಗ ಅವರಲ್ಲಿ ಹೆಚ್ಚಿನ ಮಹಿಳೆಯರು ರಕ್ತ ಹೀನತೆಯಿಂದ ಬಳಲುತ್ತಿದ್ದು, ತಮ್ಮ ಹೆರಿಗೆ ಸಂದರ್ಭದಲ್ಲಿ ಅನೇಕ ಬಗೆಯ ತೊಂದರೆಗಳನ್ನು ಅನುಭವಿಸಿರುವುದನ್ನು ತಿಳಿಸಿದರು. ಬಾಗಲಕೋಟೆ ತಾಲೂಕಿನ ಹೊಸೂರು ಗ್ರಾಮದ ರಾಮಣ್ಣ ಮತ್ತು ಚಂದ್ರಮ್ಮ ದಂಪತಿಗಳು ತಮ್ಮ ಮಗಳಾದ ಶಕುಂತಲಾ ಇನ್ನು ಚಿಕ್ಕವಳಿರುವಾಗಲೇ ಅವಳನ್ನು ಶಾಲೆಯಿಂದ ಬಿಡಿಸಿ, ಕೆಸನೂರು ಗ್ರಾಮದಲ್ಲಿನ ತಮ್ಮ ಸಂಬಂಧಿಕರ ಹುಡುಗನಿಗೆ ಕೊಟ್ಟು ಮದುವೆ ಮಾಡಿದ್ದಾರೆ. ಆದರೆ ಮದುವೆಯ ಸಮಯದಲ್ಲಿ ಶಕುಂತಲಾಳಿಗಿನ್ನು ೧೮ ವರ್ಷ ಪೂರ್ಣಗೊಂಡಿದ್ದಿಲ್ಲ ಎಂಬುದು ತಿಳಿದು ಬಂದಿತು. ಅವರು ಅದಾಗಲೇ ವಿವಾಹ ಮಾಡಿದ್ದರು. ಹೀಗೆ ವಿವಾಹ ಮಾಡಿರುವುದರಿಂದಾಗಿ ಶಕುಂತಲಾಳು ತನ್ನ ಹೆರಿಗೆ ಸಮಯದಲ್ಲಿ

ರಕ್ತ ಹೀನತೆಯಿಂದ ಬಳಲಿ, ಬೇರೆಯವರಿಂದ ರಕ್ತವನ್ನು ಪಡೆದಂತಹ ಘಟನೆ ನಡೆದಿದೆ. ಅವರೇ ಹೇಳುವಂತೆ "ನಾನು ಇನ್ನ ಎಂಟನೇ ತರಗತಿ ಓದುತ್ತಿದ್ದೆ, ಆವಾಗ್ಲೇ ನನಿಗೆ ಮದುವಿ ಮಾಡಿದ್ರು. ಮದುವಿ ಆಗಿ ಒಂದು ವರ್ಸ ಆತು. ಮೊದ್ಲನೇ ಸಲ ಹೊಟ್ಟೀಲಿದ್ದಾಗ, ನಾನು ಆಸ್ಪತ್ರಿಗಿ ತೋರಿಸ್ತಿದ್ದೆ, ಆದ್ರೆ ರಕ್ತ ಬಾಳ ಕಡಿಮಿ ಐತಿ ಅಂತ ಪೋಲಿಕ್ ಗುಳಿಗಿ ಕೊಟ್ಟಿದ್ರು. ಅದನ್ನೆಲ್ಲಾ ತಗಂತಿದ್ದೆ. ಆದ್ರೆ ಮನ್ಯಾಗಿನ ಕೆಲ್ಸಗೋಳು ಜಾಸ್ತಿ ಇರ್ತಿದ್ವು, ಹಂಗಾಗಿ ಒಂದೊಂದ್ ಸಲ ಗುಳಿಗಿ ತಗಳ್ಳಾದು ಮರೀತಿತ್ತು. ಮತ್ತೆ ಟೈಮಿಗಿ ಸರಿಗಿ ಊಟ ಮಾಡಿದ್ರೆ ಎಲ್ಲಾನೂ ಸರಿಗಿರ್ತೈತಿ. ಆದ್ರೆ ನಮ್ದು ಹಂಗಲ್ಲ. ಎಲ್ಲಾರೂ ಊಟ ಮಾಡಿದ್ ಮೇಲೆ ನಾವು ಮಾಡ್ಬೇಕು. ಅಲ್ಲಿತನ ಬರೀ ಕೆಲ್ಸ ಮಾಡಿಕೆಂಡು ಇರ್ಬೇಕು. ಹಿಂಗಾದ್ರೆ ಎಲ್ಲಿ ಚೆನ್ನಾಗಿರ್ತೀವಿ. ಹಂಗಾಗೇ ಮೈಯಾಗ ರಕ್ತ ಇಲ್ದಂಗಾಗಿತ್ತು. ಹೆರಿಗಿ ಟೈಮ್ ಬಂದಾಗಂತೂ ಬಾಳ ತ್ರಾಸ ಆತು. ಆ ಟೈಮ್‌ದಾಗ ಎರ್ಡು ಬಾಟ್ಲಿ ರಕ್ತ ಹಾಕಿದ್ರು ಎಂದರು. 

ಕೊಪ್ಪಳ ಜಿಲ್ಲೆಯ ಬೂದಿಹಾಳ್ ಗ್ರಾಮದ ಚಂದ್ರಮ್ಮನವರೂ ಸಹ ರಕ್ತ ಹೀನತೆಯಿಂದ ಬಳಲಿದ್ದು, ತಮಗೆ ಜನಿಸಿದ ಮಗುವು ಕಡಿಮೆ ತೂಕದ್ದಾಗಿತ್ತು. ಇದಕ್ಕೆ ಕಾರಣ ಅವರನ್ನು ಬಹು ಬೇಗನೇ ವಿವಾಹ ಬಂಧನಕ್ಕೆ ಒಳಪಡಿಸಿದ್ದಾಗಿದೆ. ಅವರನ್ನು ಭೇಟಿಯಾದಾಗ ಅವರು ಹೇಳಿದ್ದು ಹೀಗೆ "ನಾನು ಇನ್ನು ೯ನೇ ಕ್ಲಾಸು ಓದ್‌ತಿದ್ದೆ, ಆವಾಗ್ಲೇ ನನಿಗೆ ಮದುವಿ ಮಾಡಿ ಬಿಟ್ರು. ಏನ್ ಮಾಡೋದು ಮನ್ಯಾಗಿನ ಅಪ್ಪ ಅಮ್ಮನೋರಿಗಿ ಎದುರು ಮಾತಾಡಂಗಿಲ್ಲ. ಹಂಗಾಗಿ ಮದುವಿ ಮಾಡಿಕೆಂಡೆ. ಆದ್ರೆ ಗಂಡನ ಮನ್ಯಾಗ ಎಷ್ಟು ಕಷ್ಟ ಐತಿ ಅಂದ್ರೆ ಹೇಳಾಕಾಗಂಗಿಲ್ಲ. ಯಾಕಂದ್ರ ನನ ಗಂಡಾನೇ ಆ ಮನಿಗಿ ಹಿರಿಮಗ. ನಾನು ಹಿರಿಸೊಸಿ, ಹಂಗಾಗಿ ಮನ್ಯಾಗಿನ ಎಲ್ಲಾ ಕೆಲ್ಸಾನೂ ನಾನೇ ಮಾಡ್ಬೇಕು. ಇಲ್ಲಾಂದ್ರೆ ಬೈಯ್ಸಿಕ್ಯಾಬೇಕು. ಈ ಕೆಲ್ಸಗಳ್ನ ಮಾಡಿ ಮಾಡಿ ಟೈಮ್ ಸರೀಗಿ ಊಟ ಮಾಡೋದನ್ನೇ ಮರ್ತು ಬಿಟ್ಟೇನಿ. ಹಂಗಾಗಿ ನನಿಗೆ ಆವಾಗಾವಾಗ ನಿಶ್ಯಕ್ತಿ ಆಗೋದು. ಹಂಗ ಆದಾಗ ನಿಂಬೆಣ್ಣಿನ ಜೂಸ್ ಮಾಡಿಕೆಂಡು ಕುಡೀತಿದ್ದೆ. ನನಿಗಿ ಮದುವಿ ಮಾಡಿಲ್ಲ ಅಂದಿದ್ರೆ, ಇಷ್ಟೊತ್ತಿಗೆ ಯಾವದಾದ್ರೂ ಗೌರ್ಮೆಂಟ್ ಕೆಲ್ಸ ತಗಂತಿದ್ದೆ. ಆದ್ರೆ ನನ್ ಹಣೇ ಬರದಾಗ ೯ನೇ ಕ್ಲಾಸು ಓದ್ಬೇಕು ಅಂತ ಬರದೈತಿ. ಹಂಗಾಗಿ ಅಷ್ಟಕ್ಕೆ ಕೊನಿ ಆತು. ಮದುವಿ ಆಗಿ ಒಂದು ವರ್ಸಕ್ಕ ನನಿಗಿ ಒಬ್ಬ ಮಗ ಹುಟ್ಟಿದ. ಆದ್ರ ಏನ್ ಮಾಡಾದು ಮಗ ಹುಟ್ಟಿದಾಗಿಂದ ತೂಕ ಬಾಳ ಕಡಿಮಿ ಐತಿ. ಹುಟ್ಟಿದಾಗ್ಲೂ ಹಂಗೆ ಇತ್ತು. ನನಿಗೆ ರಕ್ತ ಕಡಿಮಿ ಆಗಿತ್ತು. ಆದ್ರೂ ಗುಳಿಗಿ ತಗಂಡು ಸರಿ ಮಾಡ್ಕೆಂಡೆ. ಆದ್ರೆ ಮಗ ಈವಾಗ್ಲೂ ಆರೋಗ್ಯವಾಗಿಲ್ಲ. ಅವ್ನಿಗಿ ತಿಂಗ್ಳಾ ತಿಂಗ್ಳಾ ಡಾಕ್ಟ್ರಿಗಿ ತೋರಿಸ್ಬೇಕು. ತಿಂಗ್ಳಾ ಏನಿಲ್ಲಾಂದ್ರೂ ಸಾವಿರ ರೂಪಾಯಿ ಮೇಲೆ ಖರ್ಚು ಆಗತೈತಿ. ಯಾಕ ಹಿಂಗ ಅಂತ ಡಾಕ್ಟ್ರಿಗೆ ಕೇಳಿದ್ರೆ, ಅವ್ರು ನೀವು ಮದುವಿ ಆಗಿರೋದು ಬಾಳ ಚಿಕ್ಕ ವಯಸ್ಸಿಗಿ, ಹಂಗ ಮದುವಿ ಆದೋರ್ದೆಲ್ಲಾ ಇದೇ ಕಂಪ್ಲೇಂಟ್. ಅವ್ರಿಗಿ ರಕ್ತ ಕಡಿಮಿ ಇರ್ತೈತಿ. ಇಲ್ಲಾಂದ್ರೆ ಹುಟ್ಟೋ ಮಕ್ಳು ತೂಕ ಕಡಿಮಿ ಆಗಿ ಹುಟ್ತಾವ ಅಂತ ಹೇಳಿದ್ರು. ಇನ್ನ ಒಂದು ವರ್ಸ ಮಕ್ಳು ಬೇಕಂತ ಅನ್ನಬ್ಯಾಡ್ರಿ. ಯಾಕಂದ್ರ ನೀವು ಸತೆ ಬಾಳ ವೀಕ್ ಐದೀರಿ. ಒಂದು ವರ್ಸದ ತನ ಚೆನ್ನಾಗಿ ತಿನ್ರಿ. ಅಂತ ಹೇಳಿದ್ರು. ಈಗ ನೋಡ್ರಿ ನನಿಗಿ

ಓದಿಸಿದ್ರೆ ಇಷ್ಟೆಲ್ಲಾ ಕಷ್ಟಗಳ್ನ ಅನುಭೋಸೋದು ತಪ್ಪಿತ್ತಾ. ಈಗ ನಮ್ ಅಪ್ಪ ಅಮ್ಮ ಇಬ್ರೂ ಅಷ್ಟೇ ನೋವು ತಿನ್ತಾರ. ಅವ್ರಿಗಿ ಇದನ್ನೆಲ್ಲಾ ಹೇಳಿದ್ರೆ ಕೇಳಂಗಿಲ್ಲ. ಏನ್ ಮಾಡೋದು ಹಣೇಬರ್ದಾಗ ಇದ್ದಂಗ ಆಗತೈತಿ ಅಂತ ಸುಮ್ನಾಗಿ ಬಿಟ್ಟೇನಿ" ಎಂದರು.

ಈ ಮೇಲಿನ ಎರಡೂ ಪ್ರಕರಣಗಳನ್ನು ಗಮನಿಸಿದರೆ ಮುಖ್ಯವಾಗಿ ಮಹಿಳೆಯರು ಸಮಾಜದಲ್ಲಿ ಎರಡನೇ ದರ್ಜೆಯ ಪ್ರಜೆಯಾಗಿದ್ದಾಳೆ ಎಂಬುದು ಈಗಾಗಲೇ ತಿಳಿದಿರುವ ವಿಷಯ. ಅಂತಹ ಸಂದರ್ಭದಲ್ಲಿ ವ್ಯವಸ್ಥೆಯಲ್ಲಿ ಮಹಿಳೆಗೆ ಯಾವುದೇ ಆಯ್ಕೆಯ ಸ್ವಾತಂತ್ರ್ಯವಿಲ್ಲದಿರುವುದು ಮತ್ತು ಪುರುಷನ ಅಧೀನದಲ್ಲಿಯೇ ಜೀವಿಸುವಂತಹ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡುವುದರಿಂದ ಹೆಣ್ಣುಮಕ್ಕಳಲ್ಲಿ ರಕ್ತ ಹೀನತೆ ಹೆಚ್ಚಾಗಿ ಕಂಡುಬರುತ್ತದೆ. ಅಷ್ಟೇ ಅಲ್ಲದೇ ಅವರಿಗೆ ಜನಿಸುವಂತಹ ಮಕ್ಕಳೂ ಆರೋಗ್ಯಕರವಾಗಿ ಜನಿಸದೇ, ಕಡಿಮೆ ತೂಕದವರಾಗಿ, ಅನಾರೋಗ್ಯಕರವಾಗಿ ಜನಿಸುತ್ತಾರೆ. ಇವುಗಳಿಗೆ ಮುಖ್ಯ ಕಾರಣ ಬಾಲ್ಯ ವಿವಾಹ. ಅಂದರೆ ಕಾನೂನು ಬದ್ಧ ವಯಸ್ಸಿಗೆ ಅನುಗುಣವಾಗಿ ವಿವಾಹವಾದ ಮಹಿಳೆಯರಲ್ಲಿಯೂ ಈ ರಕ್ತ ಹೀನತೆ ಎಂಬುದು ಕಂಡುಬರುತ್ತದೆ. ಆದರೆ ಅದರ ಪ್ರಮಾಣ ತುಂಬಾನೇ ಕಡಿಮೆ. ರಕ್ತ ಹೀನತೆ ಎಂಬುದು ಒಂದು ಬಗೆಯ ಮಾರಣಾಂತಿಕ ರೋಗವಾಗಿದೆ. ಇದು ಹೆಣ್ಣುಮಕ್ಕಳನ್ನು ಸಾವಿನಂಚಿಗೆ ದೂಡುತ್ತದೆ. "ರಕ್ತಹೀನತೆಯಿಂದ ಬಳಲುತ್ತಿರುವವರನ್ನು ಮೂರು ಮುಖ್ಯ ಗುಂಪುಗಳನ್ನಾಗಿ ವರ್ಗೀಕರಿಸಬಹುದು. ಇವರೆಂದರೆ ಗರ್ಭಿಣಿಯರು, ಇನ್ನು ಮಕ್ಕಳನ್ನು ಹೆರಬಲ್ಲ ವಯೋಮಿತಿಯಲ್ಲಿರುವವರು ಹಾಗೂ ಕೂಸುಗಳು ಮತ್ತು ಎರಡರಿಂದ ಆರು ವರ್ಷದೊಳಗಿನ ಮಕ್ಕಳು. ಕೆಂಪುರಕ್ತ ಕಣಗಳಲ್ಲಿರುವ ಹಿಮೋಗ್ಲೋಬಿನ್ ಎಂಬ ವಸ್ತುವು ಮುಖ್ಯವಾಗಿ ಕಬ್ಬಿಣ, ವರ್ಣಧಾತು ಹಾಗೂ ಪ್ರೋಟೀನುಗಳಿಂದ ನಿರ್ಮಿತವಾಗಿದ್ದು, ಇದು ದೇಹದ ಪ್ರತೀ ಜೀವಕಣಕ್ಕೂ ಆಮ್ಲಜನಕವನ್ನು ಸರಬರಾಜು ಮಾಡುತ್ತದೆ. ರಕ್ತ ಹೀನತೆಯಲ್ಲಿ ರಕ್ತಕಣಗಳಲ್ಲಿರುವ ಹಿಮೋಗ್ಲೋಬಿನ್ ಪ್ರಮಾಣ ಗಣನೀಯ ಕುಗ್ಗುತ್ತದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಕೆಂಪುರಕ್ತ ಕಣಗಳ ಜೀವಿತಾವಧಿ ಬರೀ ನಾಲ್ಕು ತಿಂಗಳುಗಳು ಮಾತ್ರವಾಗಿದ್ದು, ಈ ಅವಧಿ ಮುಗಿದ ನಂತರ ಅವು ನಾಶವಾಗುತ್ತವೆ. ಮೂಳೆಯ ಸಾರದಿಂದ ನಿರ್ಮಿತವಾಗುವ ಹೊಸ ರಕ್ತಕಣಗಳು ರಕ್ತ ಪ್ರವಾಹಕ್ಕೆ ಬಿಡುಗಡೆಗೊಳ್ಳುತ್ತಲೇ ಇರುತ್ತವೆ. ಈ ನಿಲ್ಲದ ಪ್ರಕ್ರಿಯೆಗೆ ಅಂದರೆ ರಕ್ತಕಣಗಳ ನಿರ್ಮಾಣಕ್ಕೆ ಸರಿಯಾದ ಪ್ರಮಾಣದಲ್ಲಿ ಕೆಲವು ಜೀವಸತ್ವಗಳು, ಪ್ರೋಟೀನುಗಳು ಹಾಗೂ ಬಹುಮುಖ್ಯವಾಗಿ ಕಬ್ಬಿಣದ ಅಗತ್ಯವಿದ್ದು, ಇವೆಲ್ಲಾ ಪೋಷಕಾಂಶಗಳನ್ನು ನಾವು ಸೇವಿಸುವ ಆಹಾರದ ಮೂಲಕವೇ ಪೂರೈಸಬೇಕಾಗುತ್ತದೆ. ಮುಖ್ಯವಾಗಿ ಕಬ್ಬಿಣಾಂಶದ ಕೊರತೆಯಿಂದ ಬರುವ ರಕ್ತಹೀನತೆಯೇ ಅಧಿಕವಾಗಿದೆ" (ಸರೋಜ ಕೆ.,೨೦೦೧,ಪು–೨೨,೭೩). ಹೀಗೆ ರಕ್ತಹೀನತೆ ಎಂಬುದು ಆಹಾರದಲ್ಲಿನ ಪೋಷಕಾಂಶಗಳ ಕೊರತೆಯಿಂದಾಗಿ ಕಂಡುಬರುವಂತಹದ್ದಾಗಿದೆ. ವಾಸ್ತವದಲ್ಲಿ ಮಹಿಳೆಯರು ಸರಿಯಾದ ಸಮಯದಲ್ಲಿ ಆಹಾರವನ್ನು ಸೇವಿಸುವುದೇ ಕಷ್ಟಕರವಾಗಿರುತ್ತದೆ. ಅಂತಹದ್ದರಲ್ಲಿ ಪೋಷಕಾಂಶಗಳಿಂದ

ಕೂಡಿದ ಆಹಾರವನ್ನು ಸೇವಿಸುವುದು ಕಷ್ಟವೇ ಸರಿ. ಮೇಲಿನ ಎರಡೂ ಪ್ರಕರಣಗಳಲ್ಲಿ ಹೇಳುವಂತೆ ಬಹು ಬೇಗನೇ ವಿವಾಹಕ್ಕೆ ಒಳಗಾದಂತಹ ಹೆಣ್ಣುಮಕ್ಕಳು ಗಂಡನ ಮನೆಯಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾದರೆ ಯಾರಿಗೂ ಎದುರಾಡದಂತೆ ಮನೆಯ ಕೆಲಸ ಕಾರ್ಯಗಳನ್ನು ನೋಡಿಕೊಂಡು ಹೋಗಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಅವರು ತಮ್ಮ ಆರೋಗ್ಯದ ಬಗೆಗೆ ಕಾಳಜಿಯನ್ನು ವಹಿಸುವುದು ತುಂಬಾ ಕಡಿಮೆಯೇ ಎಂದು ಹೇಳಬಹುದು. ಹಾಗಾಗಿಯೇ ಬಾಲ್ಯ ವಿವಾಹಕ್ಕೆ ಒಳಗಾದ ಮೇಲಿನ ಎರಡು ಪ್ರಕರಣಗಳು ಹೇಳುವುದು ಅದೇ ಆಗಿದೆ. ಹೀಗೆ ರಕ್ತಹೀನತೆಯಿಂದ ಬಳಲುವಂತಹ ಮಹಿಳೆಯರು ತಮ್ಮ ಹೆರಿಗೆಯ ಸಮಯದಲ್ಲಿ ಬಹಳಷ್ಟು ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ. ಒಂದು ವೇಳೆ ಹೆರಿಗೆಗೆ ಮುಂಚೆಯೇ ಸರಿಯಾದ ಚಿಕಿತ್ಸೆಯನ್ನು ಅಥವಾ ಔಷಧಗಳನ್ನು ತೆಗೆದುಕೊಳ್ಳುವ ಹಾಗಿದ್ದರೆ ಅಂತಹ ಸಂದರ್ಭಗಳಲ್ಲೂ ಸಹ ಆ ಔಷಧಗಳನ್ನು ಸರಿಯಾದ ಸಮಯಕ್ಕೆ ತೆಗೆದುಕೊಳ್ಳುವುದೂ ಕಷ್ಟಕರವಾಗಿರುತ್ತದೆ. ಏಕೆಂದರೆ ಕುಟುಂಬದಲ್ಲಿ ಪುರುಷರು ಆಹಾರವನ್ನು ಸೇವಿಸಿದ ನಂತರವೇ ಮಹಿಳೆಯರು ಸೇವಿಸಬೇಕು ಎಂಬ ನಿಯಮ ರೂಢಿಗತಗೊಂಡಿದ್ದರಿಂದ ಪುರುಷರ ನಂತರ ಆಹಾರವನ್ನು ಸೇವಿಸುವ ಮಹಿಳೆಯರು ಪೌಷ್ಟಿಕಾಂಶಗಳಿಂದ ಕೂಡಿದ ಆಹಾರವನ್ನು ಸೇವಿಸುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಅವರಿಗೆ ಸಾಕಾಗುವಷ್ಟು ಆಹಾರ ಉಳಿಯುವುದೂ ಕಷ್ಟಕರವಾಗಿರುತ್ತದೆ. ಹಾಗಾಗಿಯೇ ಈ ಎಲ್ಲಾ ಕಾರಣಗಳಿಂದ ಹೆಣ್ಣುಮಕ್ಕಳಲ್ಲಿ ರಕ್ತಹೀನತೆಯ ಕೊರತೆ ಕಂಡುಬರುತ್ತದೆ. ಇನ್ನು ಹೀಗೆ ರಕ್ತಹೀನತೆಯಿಂದ ಬಳಲುವಂತಹ ಮಹಿಳೆಯರಿಗೆ ಜನಿಸುವ ಮಕ್ಕಳೂ ಕಡಿಮೆ ತೂಕದ ಮಕ್ಕಳಾಗಿರುತ್ತವೆ. ಹೀಗೆ ಜನಿಸಿದ ಮಕ್ಕಳು ಅಪೌಷ್ಟಿಕತೆಯಿಂದ ಕೂಡಿರುತ್ತವೆ. ಹಾಗಾಗಿ ಬಾಲ್ಯದಲ್ಲಿಯೇ ವಿವಾಹ ಮಾಡುವುದರಿಂದ ಇಷ್ಟೆಲ್ಲಾ ಕಷ್ಟಗಳನ್ನು ಹೆಣ್ಣುಮಕ್ಕಳು ಅನುಭವಿಸಬೇಕಾಗುತ್ತದೆ. ಇವುಗಳು ವೈಜ್ಞಾನಿಕವಾಗಿ ಸರಿಯಾಗಿದ್ದರೂ, ಇವುಗಳನ್ನು ಗ್ರಾಮೀಣ ಭಾಗದ ಜನರು ನಂಬುವುದು ಕಷ್ಟದ ಸಂಗತಿ. ಏಕೆಂದರೆ ಗ್ರಾಮಿಣ ಭಾಗದ ಜನರಲ್ಲಿ ಮೂಢನಂಬಿಕೆಗಳಲ್ಲಿ ಹೆಚ್ಚಿನ ನಂಬಿಕೆಯಿರುತ್ತದೆ. ಅವರು ವೈಜ್ಞಾನಿಕವಾಗಿ ಆಲೋಚಿಸುವುದೇ ಇಲ್ಲ. ಹಾಗಾಗಿಯೇ ಜನರು ಈ ಬಗೆಯ ಸಾಹಸಕ್ಕೆ ಕೈ ಹಾಕುತ್ತಾರೆ. ಒಟ್ಟಾರೆಯಾಗಿ ಬಾಲ್ಯ ವಿವಾಹಕ್ಕೆ ಒಳಗಾದಂತಹ ಹೆಣ್ಣುಮಕ್ಕಳಲ್ಲಿ ರಕ್ತಹೀನತೆಯ ಕೊರತೆ ಮತ್ತು ತಮಗೆ ಹುಟ್ಟುವಂತಹ ಮಕ್ಕಳು ಕಡಿಮೆ ತೂಕದ ಮಕ್ಕಳು ಜನಿಸುವಂತಹದ್ದನ್ನು ಕಾಣಬಹುದು. ಹೀಗೆ ಹುಟ್ಟುವ ಮಕ್ಕಳು ಅಪೌಷ್ಟಿಕತೆಯಿಂದ ಬಳಲುತ್ತಿರುತ್ತಾರೆ.

**೨. ಶಿಶು ಮರಣ ಮತ್ತು ಮಕ್ಕಳ ಮರಣಗಳು ಸಂಭವಿಸುತ್ತಿವೆ**

ಬಾಲ್ಯ ವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳು ಗರ್ಭಿಣಿಯರಾಗಿದ್ದಾಗ, ತಾಯಿಯ ಗರ್ಭದಲ್ಲಿಯೇ ಅಥವಾ ಹೆರಿಗೆಯ ನಂತರದ ಸಮಯದಲ್ಲಿ ಮಕ್ಕಳು ಸಾವನ್ನಪ್ಪುವಂತಹ ಘಟನೆಗಳು ನಡೆದಿರುವುದು ಕಂಡುಬರುತ್ತದೆ. ಮುಖ್ಯವಾಗಿ ಶಿಶು ಮರಣ, ನವಜಾತ ಶಿಶು ಮರಣ ಮತ್ತು ಮಕ್ಕಳ ಮರಣ ಪ್ರಮಾಣಗಳು ಹೆಚ್ಚಾಗಿರುವುದನ್ನು ಕಾಣಬಹುದು. "ಶಿಶು

ಮರಣ ಪ್ರಮಾಣ ಎಂದರೆ  ಒಂದು ವರ್ಷದ ಅವಧಿಯಲ್ಲಿ ಹುಟ್ಟುವ ಸಾವಿರ ಶಿಶುಗಳಲ್ಲಿ ಒಂದು ವರ್ಷ ವಯಸ್ಸಾಗುವುದರೊಳಗೆ ಸಾಯುವ ಮಕ್ಕಳ ಸಂಖ್ಯೆಯೇ ಶಿಶು ಮರಣ ಸಂಖ್ಯಾ ಪ್ರಮಾಣವಾಗಿರುತ್ತದೆ. ಇನ್ನು ನವಜಾತ ಶಿಶು ಮರಣಗಳ ಸಂಖ್ಯೆ ಎಂದರೆ ಹುಟ್ಟಿದ ನಾಲ್ಕು ವಾರಗಳೊಳಗೆ (೨೮ ದಿನಗಳೊಳಗೆ) ಸಾಯುವ ಶಿಶುಗಳ ಸಂಖ್ಯೆ. ಹಾಗೆಯೇ ಮಕ್ಕಳ ಮರಣ ಪ್ರಮಾಣ ಎಂದರೆ ಮಕ್ಕಳು ಹುಟ್ಟಿದ ನಂತರ ೫ ವರ್ಷದೊಳಗೆ ಮಕ್ಕಳ ಸಾವು ಸಂಭವಿಸುವುದು ಎಂಬುದಾಗಿದೆ" (ಸರೋಜ ಕೆ. ,೨೦೦೧, ಪು-೧೨, ೧೩). ಹೀಗೆ ವಿಂಗಡಿಸಿಕೊಂಡು ನೋಡುವುದಾದರೆ ಬಾಲ್ಯವಿವಾಹಕ್ಕೆ ಒಳಗಾದಂತಹ ಹೆಣ್ಣುಮಕ್ಕಳಿಗೆ ಜನಿಸಿದ ಮಕ್ಕಳ ಪ್ರಮಾಣದಲ್ಲಿ ಸಾವನ್ನಪ್ಪಿದ ಮಕ್ಕಳ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ. ಅಧ್ಯಯನ ಕ್ಷೇತ್ರ ವ್ಯಾಪ್ತಿಯಲ್ಲಿ ಬಾಲ್ಯ ವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳಿಂದ ಜನಿಸಿದಂತಹ ಮಕ್ಕಳು ಜನಿಸಿ ಕೆಲವೇ ವಾರಗಳಲ್ಲಿ ಹಾಗೆಯೇ ಕೆಲವೇ ತಿಂಗಳುಗಳಲ್ಲಿ ಸಾವನ್ನಪ್ಪಿದ ಪ್ರಕರಣಗಳು ಕಂಡುಬಂದಿವೆ. ಇವನ್ನು ಪ್ರಕರಣಗಳ ಸಮೇತವಾಗಿ ವಿವರಿಸುವುದಾದರೆ,

ಬಳ್ಳಾರಿ ಜಿಲ್ಲೆಯ ವಣೇನೂರು ಗ್ರಾಮದ ಗೋವಿಂದಪ್ಪ ಮತ್ತು ಪಾಪಮ್ಮ ಇವರಿಗೆ ರಾಮಕೃಷ್ಣ ಎನ್ನುವ ಒಬ್ಬನೇ ಮಗ. ರಾಮಕೃಷ್ಣನಿಗೆ ಇನ್ನು ೧೪ ವರ್ಷಗಳು. ಅದಾಗಲೇ ಮದುವೆಯನ್ನು ಮಾಡಿದ್ದಾರೆ. ಗೋವಿಂದಪ್ಪನ ಸೊಸೆ ಹೆರಿಗೆ ಸಮಯದಲ್ಲಿ ಬಹಳಷ್ಟು ನೋವನ್ನು ಅನುಭವಿಸಿ ಒಂದು ಗಂಡು ಮಗುವಿಗೆ ಜನನವನ್ನು ನೀಡಿದ್ದಾಳೆ. ಆದರೆ ಈ ಮಗು ಜನಿಸಿ ಮೂರು ವಾರಕ್ಕೆ ಸಾವನ್ನಪ್ಪಿರುವ ಸಂಗತಿ ತಿಳಿದು ಅವರನ್ನು ಭೇಟಿಯಾದಾಗ, ಪಾಪಮ್ಮ ಹೇಳಿದ್ದು ಹೀಗೆ "ಮಗಗ ಮದುವಿ ಮಾಡಿ ಸ್ವಲ್ಪ ದಿನಕ್ಕ ಸೊಸಿ ಹೊಟ್ಟೇಲಿ ಐದಾಳ ಅಂತ ಗೊತ್ತಾತು. ಆವಾಗ್ಲಿಂದ ಅಕಿ ಮನಿ ಕೆಲ್ಸ ಮಾಡೋದು ಸ್ವಲ್ಪು ಕಡಿಮೆ ಆತು. ನಾನೇ ಮನ್ಯಾಗಿನ ಕೆಲ್ಸ ಮಾಡಾಕ್ಹತ್ತಿದೆ. ಅಕಿಗೆ ಒಂಬತ್ತು ತಿಂಗ್ಳು ಆಗೋವರ್ಗೂ ಎಲ್ಲಾನೂ ಚೆನ್ನಾಗೇ ಇತ್ತು. ಆದ್ರೆ ಹೆರಿಗೆ ಆಗ್ಬೇಕಾದ್ರೆ ಬಾಳ ತ್ರಾಸಾತು. ಯಾಕಂದ್ರೆ ಹೆರಿಗಿ ನೋವು ಕಾಣಿಸಿಕೊಂಡಾಗ ಮನ್ಯಾಗೇ ಇದ್ಲು. ಹೆರಿಗಿ ಇಲ್ಲೇ ಆಗಿಬಿಡ್ಲಿ ಅಂತ ತಿಳ್ದು ಹೆರಿಗಿ ಮಾಡ್ಸಾಕ ಪಕ್ಕದ್ ಮನೇರ್ನ ಕರ್ಕಂಡು ಬಂದಿದ್ದೆ. ಆದ್ರೆ ಅದು ಹಂಗಾಗ್ಲಿಲ್ಲ. ರಕ್ತ ಬಾಳ ಹೋಗಾಕತ್ತಿತು. ಹಂಗಾಗಿ ನಾವು ಬಳ್ಳಾರಿಗೆ ಕರ್ಕಂಡು ಬಂದು ಅಡ್ಮಿಟ್ ಮಾಡಿದ್ವಿ, ಅಲ್ಲಿ ಡಾಕ್ಟ್ರು ಆಪರೇಶನ್ ಮಾಡಿ ಹೆರಿಗಿ ಮಾಡಿಸಿದ್ರು. ಸೊಸಿಗೆ ರಕ್ತ ಕಡಿಮಿ ಐತಿ ಚೆನ್ನಾಗಿ ನೋಡಿಕೆಳ್ರಿ, ಮಗುದು ತೂಕ ಸತೆ ಬಾಳ ಕಡಿಮೆ ಐತಿ ಅಂತ ಡಾಕ್ಟ್ರು ಹೀಳಿದ್ರು. ಗಂಡು ಹುಡುಗ ಹುಟ್ಟಿದ್ದ. ಮೊಮ್ಮಗ ಹುಟ್ಟಿದ ಅಂತ ಬಾಳ ಖುಸಿ ಆಗಿತ್ತು. ಆದ್ರೆ ಹುಟ್ಟಿ ಮೂರು ವಾರಕ್ಕ ತೀರ್ಕೆಂಡು ಬಿಡ್ತು. ಹುಟ್ಟಿದಾಗ್ನಿಂದ ಹುಡುಗ ಒಣಗಿಕೆಂಡು ಒಣಿಕ್ಕೆಂಡು ಹೋಗ್ತಿತ್ತು. ಕಣ್ಣೇ ಸರಿಗೇ ತೆಗಿತಿದ್ದಿಲ್ಲ. ಕಣ್ಣನ್ನ ಎಕ್ಕಡೆಕ್ಕಡಿಗೋ ಮಾಡ್ತಿತ್ತು. ಮೈ ಬ್ಯಾರೇ ಬೆಚ್ಚಗ ಇತ್ತು. ಇದನ್ನ ನೋಡಿ ನಮ್ ಊರಾಗಿನ ಮಂದಿ ನಿಮ್ ಮೊಮ್ಮಗಗ ಏನೋ ದೋಷ ಐತಿ ಇಲ್ಲೆ ಎಲ್ಲಾದ್ರೂ ಚೆನ್ನಾಗಿ ನೋಡೋ ಸ್ವಾಮಿತಾಗ ಹೋಗಿ ತೊರ್ಸರಿ ಅಂದ್ರು. ಅದರಂಗ ನಾವು ಸ್ವಾಮಿತಾಗ ಹೋಗಿ ತೋರಿಸಿದ್ವಿ. ನಿಮ್ ಮೊಮ್ಮಗ ಹುಟ್ಟಿದ್ದ ಟೈಮು ಸರಿಗಿಲ್ಲ.

ಅದಕ್ಕ ಅವ್ನಿಗೆ ದೋಷ ಆಗೇತಿ ಅಂತ ಅಂದು, ಒಂದು ತಾಯ್ತ ಕೊಟ್ರು. ಸ್ವಾಮಿತಾಗ ಹೋಗಿ ಬಂದ್ ಮ್ಯಾಲ ಒಂದೆರ್ಡು ದಿನ ಚೆನ್ನಾಗೇ ಆಡ್ತು. ಆಮ್ಯಾಲೆ ಮತ್ತೆ ಮೊದ್ಲಿನಂಗೆ ಮಾಡಾಕ್ಹತ್ತಿತ್ತು. ಅದಕ್ಕ ಈ ಸಾರಿ ಏನೇ ಆಗ್ಲಿ ಅಂತ ಬಳ್ಳಾರಿಗೆ ಹೋಗಿ ಡಾಕ್ಟ್ರಿಗೆ ತೋರಿಸಿದ್ವಿ. ಡಾಕ್ಟ್ರು ಚೆನ್ನಾಗಿ ಬೈದ್ರು. ಮಗುವಿನ್ ಮ್ಯಾಲೆ ಇದ್ ತಾಯ್ತಾನೆಲ್ಲಾ ಕಿತ್ತಾಕಿ ಬಿಟ್ರು. ಮಗುವಿಗೆ ಜಾಂಡೀಸ್ ಆಗೇತಿ, ಜ್ವರ ಬಂದೇತಿ. ಹಿಂಗಾದಾಗ ಮೊದ್ಲು ಡಾಕ್ಟ್ರ ಹತ್ರ ಕರ್ಕಂಡು ಬರ್ಬೇಕು. ಅದನ್ನ ಬಿಟ್ಟು ಸ್ವಾಮಿಗಳ್ತಾಗ ತೋರಿಸಿದ್ರೆ ಜ್ವರ ಕಡಿಮಿ ಆಗತೈತೇನು? ಅಂತ ಬೈದ್ರು. ಈಗ ನೋಡ್ತಿ ನಿಮ್ ಮೊಮ್ಮಗ ಬದುಕ್ತಾನೋ ಇಲ್ಲೋ ಅಂತ ಹೇಳೋದೇ ಕಷ್ಟ. ನಾವು ಪ್ರಯತ್ನ ಮಾಡ್ತಿವಿ ಅಂದ್ರು. ಅಲ್ಲಿ ಆಸ್ಪತ್ರ್ಯಾಗ ಏನಿಲ್ಲಾಂದ್ರೂ ಒಂದು ತಿಂಗ್ಳ ಇದ್ವಿ. ಅದಾಗಿ ತೋರ್ಸಿಕೆಂಡು ಮನಿಗೆ ಬಂದ್ವಿ, ಒಂದೆರಡ್ ದಿನ ಚೆನ್ನಾಗಿತ್ತು ಆಮ್ಯಾಲೆ ಸತ್ತೋಯ್ತು. ಏನ್ ಮಾಡೋದು ದೇವ್ರಿಟ್ಟಂಗ ಆಗತೈತಿ ಅಂತ ತಿಳ್ಕಂಡು ಸುಮ್ನಾದ್ವಿ" ಎಂದರು.

ಗದಗ ತಾಲೂಕಿನ ಮಾದಗನೂರು ಗ್ರಾಮದ ವೀರೇಶಪ್ಪ ಮತ್ತು ದಾಕ್ಷಾಯಿಣವ್ವ ದಂಪತಿಗಳು ತಮ್ಮ ಮಗಳಾದ ಮಂಜುಳಾಳಿಗೆ ವಿವಾಹ ಮಾಡಿದ್ದು ಅದು ಕಾನೂನು ಬಾಹಿರವಾಗಿದ್ದಾಗಿದೆ. ಅಂದರೆ ಬಾಲ್ಯ ವಿವಾಹವಾಗಿದೆ. ಅದು ಅವರಿಗೆ ತಿಳಿದಿಲ್ಲ. ವಿವಾಹವಾಗಿ ಕೆಲವು ದಿನಗಳ ನಂತರ ಮಂಜುಳ ಗರ್ಭಿಣಿ ಎಂಬ ಸುದ್ದಿ ತಿಳಿದು ತುಂಬಾ ಖುಷಿಯಾಗಿದೆ. ನಂತರ ಆಕೆಯನ್ನು ಗಂಡನ ಮನೆಯಿಂದ ಕರೆದುಕೊಂಡು ಬಂದು ತಮ್ಮಲ್ಲಿಯೇ ಉಳಿಸಿಕೊಂಡಿದ್ದಾರೆ. ಅಲ್ಲಿಯೇ ಆರೈಕೆ ಮಾಡಿದ್ದಾರೆ. ಮೊದಲ ಹೆರಿಗೆ ತಾಯಿಯ ಮನೆಯಲ್ಲಿ ಅಂದರೆ ತವರು ಮನೆಯಲ್ಲಿಯೇ ಆಗಬೇಕು ಎಂಬುದೊಂದು ನಂಬಿಕೆ ಇದೆ. ಕೆಲವು ಕುಟುಂಬಗಳಲ್ಲಿ ಗಂಡನ ಮನೆಯವರು ಮತ್ತು ತವರು ಮನೆಯವರ ಒಪ್ಪಂದದ ಮೇಲೆ ನಡೆದು ಹೋಗುತ್ತದೆ. ಇಲ್ಲಿ ಮಂಜುಳಾಳ ಹೆರಿಗೆ ತವರು ಮನೆಯಲ್ಲಿಯೇ ಆಗಬೇಕೆಂಬ ಕಾರಣಕ್ಕಾಗಿ ಅವರನ್ನು ತವರು ಮನೆಗೆ ಕರೆತಂದು ಆರೈಕೆ ಮಾಡಿದ್ದಾರೆ. ಹೆರಿಗೆ ಸಮಯ ಹತ್ತಿರವಾಗುತ್ತಿದ್ದಂತೆ ವೈದ್ಯರ ಹತ್ತಿರ ತೋರಿಸಿದ್ದಾರೆ. ಆಗ ಮಗು ತಾಯಿಯ ಗರ್ಭದಲ್ಲಿಯೇ ಸಾವನ್ನಪ್ಪಿರುವುದು ತಿಳಿದು ಬಂದಿದೆ. ಈ ವಿಷಯ ತಿಳಿದು ಮಂಜುಳಾ ಮತ್ತು ಅವರ ತಾಯಿ ಮತ್ತು ತಂದೆಯವರು ತುಂಬಾ ನೋವನ್ನು ಅನುಭವಿಸಿದ್ದಾರೆ. ದಾಕ್ಷಾಯಿಣಮ್ಮ ಹೇಳುವ ಹಾಗೆ "ನನ್ನ ಮಗ್ಳು ಬಾಳ ಚೆನ್ನಾಗೇ ಇದ್ಲು. ಆದ್ರೆ ಇದ್ದಕ್ಕಿದ್ದಂಗ ಏನು ಆತೋ ಗೊತ್ತಿಲ್ಲ. ಕೂಸು ಹೊಟ್ಯಾಗೇ ಸತ್ತು ಹೋಗೇತಿ. ಅದನ್ನ ಕೇಳಿ ಬಾಳ ದುಃಖ ಆತು. ಅದಕ್ಕಿಂತ ಮೊದ್ಲು ತಿಂಗ್ಳ ತಿಂಗ್ಳ ಡಾಕ್ಟ್ರ ಚೆಕಪ್ಪು ಮಾಡಸ್ತಿದ್ವಿ, ಒಂದ್ಸಾರಿ ರಕ್ತ ಕಡಿಮಿ ಐತಿ ಅಂತ ಒಂದು ಬಾಟ್ಲಿ ರಕ್ತ ಹಾಕಿದ್ರು, ಆಮ್ಯಾಲೆ ಚೆಕ್ ಮಾಡಿಸಿದ್ದಿಲ್ಲ. ಒಂದೇ ಸಾರಿ ಎಂಟ್ನೇ ತಿಂಗ್ಳಿಗೆ ಚೆಕ್ ಮಾಡಿಸಿದ್ವಿ ಆಗ ಕ್ಯಾನಿಂಗ್ ಮಾಡಿದ ಡಾಕ್ಟ್ರು, ಕೂಸು ಒಳಗೇ ಸತ್ತು ಹೋಗೇತಿ ಅಂತ ಹೇಳಿದ್ರು. ಏನ್ ಮಾಡಾಕಾಗತೈತಿ ಅಂತ ಅದನ್ನ ತಗಿಸಿದ್ವಿ, ಹಂಗ ತೆಗಿಸ್ಬೇಕಾದ್ರೂ ಬಾಳ ಕಷ್ಟ ಪಟ್ಟುಬಿಟ್ಲು ನನ ಮಗ್ಳು ಎಂದು ಹೇಳಿ ಕಣ್ಣೀರಿಟ್ಟರು".

ಬಾಲ್ಯ ವಿವಾಹಕ್ಕೆ ಒಳಗಾದಂತಹ ಇಬ್ಬರೂ ಹೆಣ್ಣುಮಕ್ಕಳು ತಮ್ಮ ಮಕ್ಕಳನ್ನು ಕಳೆದುಕೊಂಡಂತಹದ್ದನ್ನು ಗಮನಿಸಿದರೆ, ಇವರು ದೈಹಿಕವಾಗಿ ಸರಿಯಾಗಿ ಬೆಳವಣಿಗೆ ಹೊಂದಿಲ್ಲದೇ ಇರುವುದು ಮತ್ತು ಅದೇ ರೀತಿಯಲ್ಲಿ ಗರ್ಭಕೋಶದ ಬೆಳವಣಿಗೆ ಸರಿಯಾಗಿ ಆಗಿಲ್ಲದಿರುವುದು ತಿಳಿದು ಬರುತ್ತದೆ. ಅಂದರೆ ಇನ್ನು ಚಿಕ್ಕ ಮಕ್ಕಳಿರುವಾಗಲೇ ಹಲವು ಕಾರಣಗಳಿಗಾಗಿ ವಿವಾಹ ಮಾಡಿದರೆ ಅವರು ಮುಂದೆ ಹಲವಾರು ತೊಂದರೆಗಳನ್ನು ಅನುಭವಿಸುವಂತಹ ಪ್ರಸಂಗಗಳು ಕಂಡುಬರುತ್ತವೆ. ಗ್ರಾಮೀಣ ಭಾಗಗಳಲ್ಲಿ ಹಲವಾರು ಮೂಢನಂಬಿಕೆಗಳು ತಾಂಡವವಾಡುತ್ತಿರುತ್ತವೆ. ಆ ಕಾರಣಕ್ಕಾಗಿ ಜನರು ಇವುಗಳಿಗೆ ಮೊರೆಹೋಗುವ ಮತ್ತು ಬಲಿಯಾಗುವುದನ್ನು ಕಾಣಬಹುದು. ಅಂದರೆ ವಣೇನೂರಿನ ಪಾಪಮ್ಮನವರು ತಮಗೆ ಮೊಮ್ಮಗ ಜನಿಸಿದ್ದಾನೆ ಎಂದು ಖುಷಿಯಿದ್ದರೂ, ಆ ಖುಷಿ ಸ್ವಲ್ಪ ಸಮಯದವರೆಗೆ ಮಾತ್ರ ಉಳಿದಿತ್ತು. ಮಗುವಿಗೆ ತೊಂದರೆಯಾಗಿದೆ ಎಂಬುದು ತಿಳಿದಿದ್ದರೂ ಅವರು ವೈದ್ಯರ ಹತ್ತಿರ ಹೋಗುವ ಬದಲಿಗೆ ಸ್ವಾಮಿಯ ಹತ್ತಿರ ಹೋಗುವುದು ಮತ್ತು ಮಗುವು ಹುಟ್ಟಿದ ಸಮಯ ಸರಿಯಿಲ್ಲ ಎಂದು ಹೇಳಿ ತಾಯತವನ್ನು ಕಟ್ಟಿಸಿಕೊಂಡು ಬರುವುದು. ಹೀಗೆ ಈ ಬಗೆಯ ಮೂಢನಂಬಿಕೆಗಳಿಗೆ ಗ್ರಾಮೀಣ ಭಾಗಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮೊರೆಹೋಗುವುದು ಕಂಡುಬರುತ್ತದೆ. ಪಾಪಮ್ಮನವರು ಮಾಡಿದ್ದೂ ಅದನ್ನೇ. ಅವರು ಸ್ವಾಮೀಜಿಯ ಹತ್ತಿರ ಹೋಗುವುದರ ಬದಲಿಗೆ ವೈದ್ಯರ ಹತ್ತಿರ ಹೋಗಿದ್ದಿದ್ದರೆ, ಅವರ ಮೊಮ್ಮಗ ಬದುಕುಳಿಯುತ್ತಿದ್ದನೋ ಏನೋ? ಆದರೆ ಅದು ಹಾಗಾಗಿಲ್ಲ. ಸಾಮಾಜಿಕವಾಗಿ ರೂಢಿಯಲ್ಲಿರುವಂತಹ ಮೂಢನಂಬಿಕೆಗಳು ಮಹಿಳೆಯರನ್ನು ಇನ್ನಿಲ್ಲದಂತೆ ಹಿಂಸಿಸುತ್ತಿವೆ. ಆದರೆ ಅವುಗಳಾವುವೂ ಅವರಿಗೆ ಹಿಂಸೆಯ ಪ್ರತಿರೂಪಗಳಾಗಿ ಕಂಡುಬರುತ್ತಿಲ್ಲ. ಇದಕ್ಕೆ ಕಾರಣ ಅವರ ಭೌದ್ಧಿಕ ವಲಯವನ್ನು ಆವರಿಸಿದಂತಹ ಪಿತೃಪ್ರಧಾನ ಮೌಲ್ಯಗಳು. ಇವುಗಳ ಕಾರಣವಾಗಿ ಪ್ರತೀ ಹಂತದಲ್ಲಿಯೂ ಮಹಿಳೆಯರು ಗ್ರಾಮೀಣ ಭಾಗದಲ್ಲಿನ ಜ್ಯೋತಿಷ್ಯ ಹೇಳುವಂತಹ ಸ್ವಾಮಿಗಳನ್ನು ನಂಬುವಂತಹ ಮತ್ತು ಅವರನ್ನೇ ಅವಲಂಬಿಸುವಂತಹ ಸ್ಥಿತಿ ಇರುವುದನ್ನು ಕಾಣಬಹುದು. ಚಿಕ್ಕ ಮಕ್ಕಳಿಗೆ ಆರೋಗ್ಯದಲ್ಲಿ ಏನಾದರೂ ವ್ಯತ್ಯಾಸಗಳು ಅಥವಾ ತೊಂದರೆಗಳು ಕಂಡುಬಂದರೆ ಅವರು ತಕ್ಷಣ ಮೊರೆ ಹೋಗುವುದು ಗ್ರಾಮದಲ್ಲಿನ ದೇಸೀ ವೈದ್ಯರ ಬಳಿ, ಅದರ ಜೊತೆಗೆ ಜ್ಯೋತಿಷ್ಯ ಹೇಳುವಂತಹ ಸ್ವಾಮೀಜಿಗಳ ಹತ್ತಿರ. ಇವೆರಡಕ್ಕೂ ಮೀರಿದರೆ ಕೊನೆಗೆ ವೈದ್ಯರ ಹತ್ತಿರ ಕರೆತರುತ್ತಾರೆ. ಈ ಬಗೆಯ ಕಾರ್ಯಚಟುವಟಿಕೆಗಳಿಂದ ಮತ್ತು ಆಲೋಚನೆಗಳು ರೂಢಿಯಲ್ಲಿರುವುದರಿಂದ ಚಿಕ್ಕ ಮಕ್ಕಳ ಮರಣಗಳ ಸಂಖ್ಯೆಯೂ ಬೆಳೆಯುತ್ತಲೇ ಇದೆ. ಬಾಲ್ಯವಿವಾಹದಿಂದ ತಮ್ಮ ಮೊಮ್ಮಗನನ್ನು ಕಳೆದುಕೊಂಡಿರುವ ಪಾಪಮ್ಮನವರು ಇದೇ ಮೂಢನಂಬಿಕೆಗೆ ಬಲಿಯಾಗಿರುವುದನ್ನು ಕಾಣಬಹುದು. ಇದು ಆ ಮಗುವಿನ ತಾಯಿಯ ಮನಸ್ಸಿನ ಮೇಲೆ ವ್ಯತಿರಿಕ್ತ ಪರಿಣಾಮವನ್ನುಂಟು ಮಾಡುತ್ತದೆ. ಮುಖ್ಯವಾಗಿ ಬಾಲ್ಯ ವಿವಾಹಕ್ಕೆ ಒಳಗಾಗದೇ ಕಾನೂನು ರೂಪಿಸಿದ ವಯಸ್ಸಿಗೆ ಅನುಗುಣವಾಗಿ ವಿವಾಹವಾಗಿರುವಂತಹ ಮಹಿಳೆಯರಲ್ಲಿಯೂ ಈ ಬಗೆಯ ಸಮಸ್ಯೆಗಳು

ಕಂಡುಬರುತ್ತವೆಯಾದರೂ, ಅದರ ತೀವ್ರತೆ ತುಂಬಾನೇ ಕಡಿಮೆ ಇರುತ್ತದೆ. ಏಕೆಂದರೆ ಆ ವಯಸ್ಸಿಗಾಗಲೇ ಮಹಿಳೆಯರಲ್ಲಿ ನೋವನ್ನು ಸಹಿಸಿಕೊಳ್ಳುವಂತಹ ಶಕ್ತಿ ಬಂದಿರುತ್ತದೆ. ಅಂದರೆ ಇದು ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳಿಗೆ ಒಳಗಾದಂತಹ ಮಹಿಳೆ ಆ ನೋವುಗಳನ್ನು ಸಹಿಸಿಕೊಳ್ಳುವಂತಹ ಸಾಮರ್ಥ್ಯವನ್ನು ಪಡೆದುಕೊಂಡಿರುತ್ತಾಳೆ. ಆದರೆ ಬಾಲ್ಯ ವಿವಾಹಕ್ಕೆ ಒಳಗಾದಂತಹ ಮಹಿಳೆಯ ವಿಷಯದಲ್ಲಿ ಹಾಗೆ ಹೇಳಲು ಬರುವುದಿಲ್ಲ. ಏಕೆಂದರೆ ಇನ್ನು ಶಾಲೆಗೆ ಹೋಗಿ ಸ್ನೇಹಿತರೊಂದಿಗೆ ಆಟವಾಡಿಕೊಂಡು ಇರುವಂತಹ ವಯಸ್ಸಲ್ಲಿ ವಿವಾಹ ಮಾಡಿದರೆ ಅವರು ವಿವಾಹಕ್ಕಿನ್ನು ಮಾನಸಿಕವಾಗಿ ಸಿದ್ಧರಿರುವುದಿಲ್ಲ. ಅಂತಹ ಸಂದರ್ಭದಲ್ಲಿ ಅವರು ಹಲವು ತೊಂದರೆಗಳಿಗೆ ಒಳಗಾಗುತ್ತಾರೆ. ಹಾಗೆಯೇ ಎರಡನೇ ಪ್ರಕರಣದಲ್ಲಿನ ಮಂಜುಳಾ ಅವರು ತಮ್ಮ ಗರ್ಭದಲ್ಲಿಯೇ ಮಗುವು ಸಾವನ್ನಪ್ಪಿದ ವಿಷಯ ತಿಳಿದು ತುಂಬಾನೇ ನೋವನ್ನು ಅನುಭವಿಸಿರುವುದು ಕಂಡುಬರುತ್ತದೆ. ಹೀಗೆ ಮೇಲಿನ ಎರಡೂ ಪ್ರಕರಣಗಳಲ್ಲಿ ಈ ಬಗೆಯ ಸಂಕಷ್ಟಗಳಿಗೆ ಒಳಗಾದ ಹೆಣ್ಣುಮಕ್ಕಳನ್ನು ಕಾಣಬಹುದಾಗಿದೆ. ಒಟ್ಟಾರೆಯಾಗಿ ಬಾಲ್ಯವಿವಾಹಕ್ಕೆ ಒಳಗಾದಂತಹ ಮಕ್ಕಳಲ್ಲಿ ಜನಿಸುವಂತಹ ಮಕ್ಕಳೂ ಸಹ ಒಂದಲ್ಲಾ ಒಂದು ಕಾರಣಕ್ಕೆ ಸಾವನ್ನಪ್ಪುವುದು ಕಂಡುಬರುತ್ತದೆ.

**೩. ಹೆಣ್ಣುಮಕ್ಕಳು ವಯಸ್ಸಿಗೆ ಮೀರಿದ ಜವಾಬ್ದಾರಿಯನ್ನು ಹೊರುವುದರಿಂದ ಮಾನಸಿಕ ಖಿನ್ನತೆಗೆ ಒಳಗಾಗುತ್ತಾರೆ**

ಬಾಲ್ಯ ವಿವಾಹದಿಂದಾಗಿ ಹೆಣ್ಣುಮಕ್ಕಳು ಮಾನಸಿಕವಾಗಿ ಖಿನ್ನತೆಗೆ ಒಳಗಾಗುವಂತಹದ್ದು ಕಂಡುಬರುತ್ತದೆ. ಅಧ್ಯಯನ ಕ್ಷೇತ್ರ ವ್ಯಾಪ್ತಿಯಲ್ಲಿ ಹೀಗೆ ಮಾನಸಿಕ ಖಿನ್ನತೆಗೆ ಒಳಗಾದಂತಹ ಪ್ರಕರಣಗಳು ದೊರೆತಿವೆ. ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳೇ ಹೆಚ್ಚಾಗಿ ಈ ಖಿನ್ನತೆಗೆ ಒಳಗಾಗುವುದಿದೆ. ತಾವು ವಾಸಿಸುವ ಪರಿಸರದಲ್ಲಿ ಕೆಲಸದ ಒತ್ತಡಗಳು ಹೆಚ್ಚಾದಂತೆಲ್ಲಾ, ಅದು ನೇರವಾಗಿ ಮನಸ್ಸಿನ ಮೇಲೆ ಪರಿಣಾಮ ಬೀರುತ್ತದೆ. ಅದರಿಂದಾಗಿ ಯಾವ ಕೆಲಸಗಳನ್ನೂ ಮಾಡದಂತಹ ಸ್ಥಿತಿಗೆ ತಲುಪಿಬಿಡುವ ಸಾಧ್ಯತೆ ಹೆಚ್ಚಾಗಿರುತ್ತದೆ. ಹೀಗೆ ಗಂಡನ ಮನೆಯಲ್ಲಿ ಹೆಚ್ಚಿನ ಕೆಲಸಗಳ ಒತ್ತಡ ಮತ್ತು ಭಯದ ವಾತಾವರಣದ ಕಾರಣವಾಗಿ ಹೆಣ್ಣುಮಕ್ಕಳು ಮಾನಸಿಕ ಖಿನ್ನತೆಗೆ ಒಳಗಾದ ಪ್ರಕರಣಗಳು ಕಂಡುಬಂದಿವೆ. ಬಾಲ್ಯ ವಿವಾಹವಾದ ಹೆಣ್ಣುಮಕ್ಕಳ ಸ್ಥಿತಿ ತುಂಬಾ ಚಿಂತಾಜನಕವಾಗಿದೆ. ಈ ಅಂಶಗಳನ್ನು ವಕ್ತೃಗಳ ಹೇಳಿಕೆಗಳಿಂದ ವಿಶ್ಲೇಷಿಸುವುದು ಉತ್ತಮವೆನಿಸುತ್ತದೆ.

ಬಳ್ಳಾರಿ ತಾಲೂಕಿನ ಗೋಟೂರು ಗ್ರಾಮದ ಯಂಕಮ್ಮನವರಿಗೆ ಇದ್ದ ಒಬ್ಬೇ ಮಗಳನ್ನು ಅದೇ ತಾಲೂಕಿನ ಯರ್ರಗುಡಿ ಗ್ರಾಮದ ಸಂಬಂಧಿಕರಿಗೆ ಕೊಟ್ಟು ವಿವಾಹ ಮಾಡಿದ್ದಾರೆ. ಇವರ ಮಗಳ ಹೆಸರು ಸರೋಜ. ಈಕೆ ಇನ್ನು ೧೦ನೇ ತರಗತಿ ಓದುತ್ತಿರುವಾಗಲೇ ಆಕೆಯನ್ನು ಶಾಲೆಯಿಂದ ಬಿಡಿಸಿ ವಿವಾಹ ಮಾಡಿದ್ದಾರೆ. ಸರೋಜ ಹತ್ತನೇ ತರಗತಿ ಓದಿದ್ದರಿಂದ ಆಕೆಗೆ ಮನೆಯ ಕೆಲಸದ ಬಗೆಗೆ ಅಷ್ಟೊಂದು ಆಸಕ್ತಿ ಇದ್ದಿಲ್ಲ. ಹಾಗಾಗಿ ಒಮ್ಮೆಂದೊಮ್ಮೆಲೇ ವಿವಾಹ

ಮಾಡಲಾಗಿದೆ. ಗಂಡನ ಮನೆಯಲ್ಲಿ ಮನೆಗೆಲಸಗಳು ಹೆಚ್ಚಾಗಿದ್ದರಿಂದಾಗಿ ಸರೋಜಾಳಿಗೆ ಅವುಗಳನ್ನು ನಿಭಾಯಿಸುವುದು ಕಷ್ಟವಾಗಿದ್ದು, ಗಂಡನ ಮನೆಯಿಂದ ತವರು ಮನೆಗೆ ವಾಪಾಸು ಬಂದು ಬಿಟ್ಟಿದ್ದಾರೆ. ತಾಯಿ ಯಂಕಮ್ಮನವರು ಹೇಳುವಂತೆ "ನನ್ ಮಗ್ಳಿಗೆ ಮನಿ ಕೆಲ್ಸ ಏನು ಅಂತ ಗೊತ್ತಿರ್ಲಾರ್ದಂಗ ನೋಡಿಕೆಂಡೀವಿ. ಯಾಕಂದ್ರ ಇರೋದು ಒಬ್ಬೇ ಮಗ್ಳು. ಅಕಿ ಚೆನ್ನಾಗಿ ಓದಿ ಒಂದು ಕೆಲ್ಸ ತಗಳ್ಳಿ ಅಂತ ಅನ್ಕಂಡಿದ್ವಿ. ಆದ್ರೆ ಏನ್ ಮಾಡಾದು ಒಳ್ಳೆ ಸಂಬಂಧ ಬಂದುಬಿಡ್ತು. ಹಂಗಾಗಿ ಮದುವಿ ಮಾಡಿ ಕೊಟ್ವಿ. ಆದ್ರೆ ಗಂಡನ ಮನಿಯಾಗ ಬಾಳ ಕೆಲ್ಸಗೋಳು ಆಗಿಬಿಟ್ಟಾವ. ಹಂಗಾಗಿ ಆ ಕೆಲ್ಸಗಳ್ನ ಮಾಡಾದು ಬಾಳ ಕಷ್ಟ ಆಗಿಬಿಟ್ಟೇತಿ. ಮನ್ಯಾಗ ಅತ್ತಿ ಮಾವ ನೋಡಿದ್ರ ಏನು ಕೆಲ್ಸ ಮಾಡಂಗಿಲ್ಲ, ಬರೀ ತಿನ್ನೋದು ಮಲಗಾದು ಮಾಡ್ತಾಳ. ನೀವಾದ್ರೂ ಹೇಳ್ರಿ, ಗಂಡನ ಮನಿಯಾಗ ಯಂಗ ಇರ್ಬೇಕು ಅಂತ ಅಂತಂದು ನಮಿಗೆ ಹೇಳಿ ಕಳ್ಸೋರು. ನಾವು ಸತೆ ಅಕಿಗಿ ಬಾಳ ಹೇಳಿದ್ವಿ. ಆದ್ರೆ ಅಕಿದೇನೂ ತಪ್ಪಿಲ್ಲ. ಮೊದ್ಲಿಂದ ಮನಿ ಕೆಲ್ಸ ಮಾಡಿಕೆಂಡು ಬಂದಿದ್ರೆ ಗೊತ್ತಾಗ್ತಿತ್ತು. ಆದ್ರೆ ನಾವು ಸತೆ ಕೆಲ್ಸ ಮಾಡಾಕೇ ಬಿಟ್ಟಿಲ್ಲ. ಹಂಗಾಗಿ ನಿಧಾನಿಕಿಲೆ ಹೆಳ್ತಿದ್ವಿ. ಆಗಿನ್ ಪೂರ್ತಿಗಿ ಸರಿ ಮನಿ ಕೆಲ್ಸ ಮಾಡ್ತೀನಿ ಅಂತ ಹೇಳ್ತಿದ್ಲು. ಆದ್ರೆ ಕೆಲ್ಸ ಮಾಡ್ಲಾರ್ದಂಗ ಹಂಗೆ ಇರೋದು. ಮತ್ತೆ ಅತ್ತಿ ಮಾವನೋರ್ತೇಲಿ ಬೈಸಿಕೆಳ್ಳಾದು. ಅದನ್ನ ಮಾಡಾಕಾಗ್ಲಾರ್ದೆ ಮನಿ ಬಿಟ್ಟು ಬಂದು ಬಿಟ್ಟಾಳ. ಈಗ ನೋಡಿದ್ರೆ ಈಕಡಿಗಿ ಮನಿ ಕೆಲ್ಸ ಸತೆ ನನಿಗಿ ಕಲಿಸ್ಲಿಲ್ಲ, ಆಕಡಿಗಿ ಸಾಲಿಗಿ ಸತೆ ಕಳಿಸ್ಲಿಲ್ಲ. ಈಗ ನೋಡ್ರಿ ನನ್ ಪರಿಸ್ಥಿತಿ ಯಂಗ ಆಗೇತಿ ಅಂತ. ನನಿಗಂತೂ ಆ ಮನ್ಯಾಗ ಬೈಸಿಕೆಂಡು ಬೈಸಿಕೆಂಡು ಸಾಕಾಗಿ ಹೋಗೇತಿ. ಏನು ಮಾಡಾಕೂ ತಿಳಿವಲ್ದು. ಅಂತ ಹೇಳಾಕತ್ಯಾಳ. ಮತ್ತೆ ಮದುವಿಗಿನ್ನ ಮೊದ್ಲು ಸಾಲಿಗಿ ಹೋಗ್ಬೇಕಾದ್ರೆ ಬಾಳ ಚೆನ್ನಾಗಿ ನಕ್ಕಂತ ಇರ್ತಿದ್ಲು. ಆದ್ರೆ ಈಗ ಯಾವ ಕೆಲ್ಸಾನೂ ಮಾಡ್ಲಾರ್ದಂಗ ಒಂದ್ಕಡಿಗಿ ಸುಮ್ನೆ ಕುಂತ್ಗಂಡು ಬಿಡ್ತಾಳ. ಏನೋ ದೊಡ್ಡ ಗುಡ್ಡಾನೇ ನೆತ್ತಿ ಮ್ಯಾಲೆ ಬಿದ್ದೈತಿ ಅನ್ನಂಗ. ಹಿಂಗಿರಾದ್ನ ನೋಡಿ ಡಾಕಟ್ರಿಗೆ ತೋರಿಸಿದ್ವಿ. ಅವ್ರ ನಿಮ್ ಮಗ್ಳು ಬಾಳ ಯೋಚ್ನೆ ಮಾಡ್ತಾಳ. ಸ್ವಲ್ಪ ದಿನ ಅವ್ರ ಪಾಡಿಗಿ ಅವ್ರನ್ನ ಬಿಟ್ಟು ಬಿಡ್ರಿ. ಮಾನಸಿಕವಾಗಿ ಬಾಳ ಕುಗ್ಗಿಬಿಟ್ಟಾಳ. ನೀವೇ ದೀನಾಲು ಧೈರ್ಯ ಹೇಳ್ಕಾಂತ ಇರ್ಬೇಕು. ಇಲ್ಲಾಂದ್ರೆ ಬಾಳ ಕಷ್ಟ ಆಗತೈತಿ ಅಂತ ಹೇಳಿ ಗುಳಿಗಿ ಬರ್ದು ಕೊಟ್ರು. ಹಂಗಾಗಿ ಮಗ್ಳು ಹಂಗಿರಾದ್ನ ನೋಡಿ ದಿನಾಲೂ ಚಿಂತಿ ಆಗಿಬಿಟ್ಟೇತಿ. ಯಾಕಾದ್ರೂ ಮದುವಿ ಮಾಡಿದ್ವಿ ಅಂತ ಈಗ ಅನ್ಸಾಕತ್ತೇತಿ" ಎಂದು ಹೇಳಿದರು.

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಚಿತ್ತಾಪುರ ಗ್ರಾಮದ ಮುದುಕಪ್ಪ ಮಂಜುಳಾ ದಂಪತಿಗಳು ತಮ್ಮ ಮಗಳಾದ ಹನುಮವ್ವಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡಿದ್ದಾರೆ. ಆದರೆ ಗಂಡನ ಮನೆಯಲ್ಲಿನ ಒತ್ತಡಗಳನ್ನು ನಿಭಾಯಿಸಲಾಗದೆ ಪುನಃ ತವರು ಮನೆಗೆ ಬಂದು ನೆಲೆಸಿದ್ದಾರೆ. ಮಂಜುಳಾ ಅವರು ಹೇಳುವಂತೆ "ನನ್ ಮಗ್ಳು ಇಲ್ಲಿ ಇದ್ದಾಗ ಮನಿ ಕೆಲ್ಸಾನೆಲ್ಲಾ ಬಾಳ ಚಂದ ಮಾಡ್ತಿದ್ಲು. ಹಂಗ ಕೆಲ್ಸ ಮಾಡಾದನ್ನ ನೋಡೇ ಮದುವಿ ಮಾಡ್ಕೆಂಡು ಹೋಗ್ಯಾರ. ಆದ್ರೆ ಅಲ್ಲಿ ಏನಾತೋ ಏನೋ ಗೊತ್ತಿಲ್ಲ. ಮಗ್ಳು ಯಾವ ಕೆಲ್ಸಾನೂ ಮಾಡ್ಲಾರ್ದಂಗ ಆಗಿ ಬಿಟ್ಟಾಳ. ಇಲ್ಲಿ ಮನ್ಯಾಗ ನೋಡಿದ್ರೆ ಅಡಿಗಿ, ಕಸ ಮುಸುರಿ ತೊಳಿಯಾದು

ಈವೇ ಕೆಲ್ಸಾನಾ ಬಾಳ ನೀಟಾಗಿ ಮಾಡಿ ಇಡ್ತಿದ್ಲು. ಆದ್ರೆ ಗಂಡನ ಮನಿಗಿ ಹೋದ್ ಮೇಲೆ ಏನೂ ಕೆಲ್ಸ ಮಾಡ್ಲಾರ್ದಂಗ ಆಗ್ಯಾಳ. ಇಲ್ಲಿ ನಮ್ ಮನಿ ಪಕ್ಕದೋರಿಗಿ ಹೇಳಿದ್ರೆ ಅವ್ರು ಯಾವದಾದ್ರೂ ಸ್ವಾಮಿತಾಗ ಕರ್ಕಂಡು ಹೋಗಿ ತೊರಿಸ್ರಿ. ಏನಾದ್ರೂ ನೋಡಿ ಹೆದ್ರಿಕೆಂಡಾಳೇನೋ? ಅಂತ ಅಂದ್ರು ಅದಕ್ಕೆ ನಮ್ ಊರಾಗೇ ಇರೋ ಸ್ವಾಮಿತಾಗ ಕರ್ಕಂಡು ಹೋಗಿದ್ವಿ. ಅವ್ರು ಇಲ್ಲ ಗಂಡನ ಮನ್ಯಾಗ ಏನೋ ನೋಡಿ ಹೆದ್ರಿಕೆಂಡಾಳ ಅಂತ ಒಂದು ತಾಯ್ತ ಕೊಟ್ರು. ಮತ್ತೆ ಮೂರು ಶನಿವಾರ ಹನುಮಪ್ಪಗ ನಡ್ಕಳ್ಳಾಕ ಹೇಳಿದ್ರು. ಮನಿಗಿ ಕರ್ಕಂಡು ಬಂದ್ವಿ. ಆಮ್ಯಾಲೆ ಮೂರು ಶನಿವಾರ ಹನುಮಪ್ಪಗ ನಡ್ಕಂಡ್ಲು. ಆದ್ರೆ ಆಕಿಗಿ ಏನಾಗೇತಿ ಅಂತ ಗೊತ್ತಾಗ್ಲಿಲ್ಲ. ಕೊನಿಗಿ ಡಾಕಟ್ರತಾಗ ಕರ್ಕಂಡು ಹೋಗಿ ತೋರಿಸಿದ್ವಿ. ಅಲ್ಲಿ ಎಲ್ಲಾನೂ ಹೇಳಿದ್ವಿ ಡಾಕ್ಟ್ರು ನಮ್ಮನ್ನೆಲ್ಲಾ ಹೊರ್ಗ ಕಳಿಸಿ, ಮಗ್ಳ ಜತಿಗಿ ಬಾಳ ಹೊತ್ತು ಮಾತಾಡಿದ್ರು. ಆಮ್ಯಾಲೆ, ಅವ್ರಿದ್ದು, ನಿಮ್ ಮಗ್ಳಿಗಿ ಏನೂ ಆಗಿಲ್ಲ. ಬಾಳ ಚೆನ್ನಾಗಿ ಐದಾಳ. ಆದ್ರೆ ಗಂಡನ ಮನ್ಯಾಗ ಕೆಲ್ಸ ಜಾಸ್ತಿ ಆಗ್ಯಾವ. ಮತ್ತೆ ಅತ್ತಿ ಮಾವಂದ್ರು ಬಾಳ ಹೆದ್ರಿಸಿದ್ದಂಗ ಐದಾರ. ಅದಕ್ಕೆ ಅಕಿಗಿ ಏನು ಮಾಡ್ಬೇಕು ಅಂತ ಗೊತ್ತಾಗ್ದೆ ಹಿಂಗ ಸುಮ್ನಾಗಿ ಬಿಟ್ಟಾಳ ಅಂತ ಹೇಳಿದ್ರು. ಸಣ್ ವಯಸ್ಸಿಗಿ ಮದುವಿ ಮಾಡಿದ್ರೆ ಹಿಂಗ ಆಗಿಬಿಡ್ತಾವ ಮಕ್ಳು. ಸ್ವಲ್ಪ ದಿನ ಹಿಂಗ ಇರಾಕ ಬಿಡ್ರಿ, ಆಮ್ಯಾಲೆ ತಾನಾಗೇ ಸರಿ ಹೋಗ್ತಾಳ ಅಂದ್ರು. ಹಂಗಾಗಿ ಅಕಿ ಪಾಡಿಗಿ ಅಕಿನ್ನ ಬಿಟ್ಟು ಸುಮ್ನಾಗೇವಿ" ಎಂದರು.

ಕೊಪ್ಪಳ ತಾಲೂಕಿನ ಯತ್ನಟ್ಟಿ ಗ್ರಾಮದ ಹುಲುಗಪ್ಪ ಮತ್ತು ಪಾರ್ವತವ್ವ ದಂಪತಿಗಳು ತಮ್ಮ ಮಗಳಾದ ರೇಣಮ್ಮಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಡಿದ್ದಾರೆ. ಆದರೆ ಮಗಳು ಮದುವೆಯಾಗಿ ಕೆಲವೇ ತಿಂಗಳುಗಳ ಕಾಲ ಗಂಡನ ಮನೆಯಲ್ಲಿದ್ದು, ನಂತರ ತವರು ಮನೆಗೆ ಬಂದು ಬಿಟ್ಟಿದ್ದಾಳೆ. ಕಾರಣ ಕೆಲಸದ ಒತ್ತಡ ತಾಳಲಾರದೇ ಹೀಗೆ ಮಾಡಿದ್ದಾರೆ. ರೇಣಮ್ಮ ಹೇಳುವ ಹಾಗೆ "ನನಿಗಿ ಮದುವಿ ಆಗಿ ಸ್ವಲ್ಪ ದಿನಕ್ಕೇನೇ, ಗಂಡನ ಮನ್ಯಾಗಿನ ಜವಾಬ್ದಾರಿನ ನೋಡಿ ಸಾಕಾಗಿ ಹೋಗಿತ್ತು. ಯಾಕಂದ್ರೆ ನಾನೇ ದೊಡ್ಡ ಸೊಸಿ. ಅದಕ್ಕೆ ಮನ್ಯಾಗಿನ ಎಲ್ಲಾ ಯವಾರಾನೂ ನಾನೇ ನೋಡ್ಕಬೇಕು ಅಂತ ನನ ಗಂಡ ಹೇಳಿದ್ದ. ನಾನು ಸತೆ ಆಗ್ಲಿ ಅಂತ ಹೇಳಿದ್ದೆ. ಆದ್ರೆ ದಿನಾಲೂ ಮನ್ಯಾಗ ಏನಾದ್ರೂ ಕಡಿಮಿ ಆದ್ರೆ, ಯಾರಿಗಾದ್ರೂ ತೊಂದ್ರಿ ಆದ್ರೆ ನನಿಗೇ ಬೈಯೋದಕ್ಕ ಸುರು ಮಾಡಿಕೆಂಡ್ರು. ಮತ್ತೆ ಮನಿ ಕೆಲ್ಸಾನೆಲ್ಲಾ ನಾನೇ ಮಾಡ್ತಿದ್ದೆ. ಹೊಲಕ್ಕ ಸತಿಗಿ ಹೋಗಿ ಬರ್ತಿದ್ದೆ. ಮನ್ಯಾಗ ನಾನೇನೇ ಮಾಡಿದ್ರೂ ಗಂಡಗ ಸಮಾಧಾನಾನೇ ಆಗ್ತಿರ್ಲಿಲ್ಲ. ಹಂಗಾಗಿ ನನಿಗೆ ಸಾಕಾಗಿ ಹೋಗಿತ್ತು. ಮತ್ತೆ ಯಾರಾದ್ರೂ ಬಂದಾಗ್ಲೂ ಸತೆ ಅವ್ರೆದ್ರುಗೇ ಬೈಯೋದು ಮಾಡ್ತಿದ್ರು. ಮನ್ಯಾಗ ಎಷ್ಟು ಕೆಲ್ಸ ಅಂದ್ರ ಅದನ್ನ ಹೇಳಾಕೇ ಆಗಂಗಿಲ್ಲ. ಮತ್ತೆ ಹೊಲಕ್ಕ ಬಂದ ಕೂಲಿ ಆಳುಗಳ್ಗೂ ಸತೆ ನಾನೇ ಅಡುಗಿ ಮಾಡಿ ಹಾಕ್ಬೇಕಿತ್ತು. ನನಿಗಂತೂ ಬಾಳ ತ್ರಾಸ್ ಆಗೋದು. ಹಂಗಾಗಿ ಒಂದಿನ ನನ ಗಂಡಗ ಹೇಳಿದೆ. ಹಿಂಗಾದ್ರೆ ನನಿಗಿ ಕೆಲ್ಸ ಮಾಡಾಕ ಆಗಂಗಿಲ್ಲ ಅಂತ. ಆದ್ರೆ ಆತ ನನಿಗೇ ಬೈದು ಬಿಟ್ಟ. ನಾನು ಹೊಟ್ಟೀಲಿ ಇದ್ದಾಗ್ಲೂ ಸತೆ ಕೆಲ್ಸ ಮಾಡ್ಸಿಕೆಳ್ಳಾದನ್ನ ಬಿಡ್ಲಿಲ್ಲ. ಮದುವಿಗಿನ್ನ ಮೊದ್ಲು ಬಾಳ ಚೆನ್ನಾಗಿದ್ದೆ. ಆದ್ರೆ ಈಗ ನೋಡಿದ್ರೆ

ಅಜ್ಜಿಯಂಗ ಆಗಿಬಿಟ್ಟೇನಿ. ಒಂದೊಂದ್ಸಾರಿ ಏನೂ ಮಾಡ್ಲಾರ್ದಂಗ ಸುಮ್ನೆ ಕುಂತು ಬಿಟ್ಟರ್ತೀನಿ" ಎಂದರು.

ಮೇಲಿನ ಮೂರೂ ಪ್ರಕರಣಗಳನ್ನು ಗಮನಿಸಿದರೆ ಚಿಕ್ಕ ವಯಸ್ಸಿನಲ್ಲಿ ವಿವಾಹ ಮಾಡುವುದರಿಂದಾಗಿ ಗಂಡನ ಮನೆಗೆ ತೆರಳುವಂತಹ ಹುಡುಗಿಯರ ಮೇಲೆ ಕೆಲಸಗಳ ಅಧಿಕ ಒತ್ತಡ ಹೇರುವುದರಿಂದ ಅವರು ಮಾನಸಿಕ ಖಿನ್ನತೆಗೆ ಒಳಗಾಗುವಂತಹದ್ದನ್ನ ಕಾಣಬಹುದು. ಅಂದರೆ ಇನ್ನು ಶಾಲೆಗೆ ಹೋಗುವ ಮತ್ತು ತಮ್ಮ ಬಾಲ್ಯ ಜೀವನವನ್ನು ಸುಖವಾಗಿ ಕಳೆಯುಂತಹ ಸಮಯದಲ್ಲಿ ಮದುವೆಯೆಂಬ ಕೂಪಕ್ಕೆ ತಳ್ಳುವುದರಿಂದ ಈ ಬಗೆಯ ಮಾನಸಿಕ ತಾಕಲಾಟಗಳಿಗೆ ಒಳಗಾಗುತ್ತಾರೆ. ಮೊದಲನೆಯ ಪ್ರಕರಣದಲ್ಲಿ ಯಂಕಮ್ಮನವರು ಹೇಳುವ ಹಾಗೆ ತಮ್ಮ ಮಗಳನ್ನು ಶಾಲೆಗೆ ಕಳುಹಿಸುವ ಮತ್ತು ಒಂದು ಒಳ್ಳೆಯ ಸರಕಾರಿ ಹುದ್ಧೆಗೆ ಸೇರಿಸುವ ಆಸೆಯನ್ನು ಹೊಂದಿದ್ದರೂ ಸಹ, ಗಂಡನ ಮತ್ತು ತಮ್ಮ ಸಂಬಂಧಿಕರ ಒತ್ತಾಯಕ್ಕೆ ಮಣಿದು ಮಗಳಿಗೆ ಒಂದು ಒಳ್ಳೆಯ ಸಂಬಂಧ ಬಂದಿದೆ ಎಂದು ತಿಳಿದು ವಿವಾಹ ಮಾಡಿ ಕೊಟ್ಟಿದ್ದಾರೆ. ಆದರೆ ಮದುವೆಯಾಗಿ ಕೆಲವೇ ದಿನಗಳಲ್ಲಿಯೇ ಮಗಳು ಗಂಡನ ಮನೆಯಿಂದ ವಾಪಾಸ್ ಬಂದಿರುವುದು ಮತ್ತು ಆಕೆ ಮಾನಸಿಕ ಖಿನ್ನತೆಗೆ ಒಳಗಾಗಿರುವುದು ಕಂಡು ದಿಗಿಲುಗೊಂಡಿರುವುದನ್ನು ಕಾಣಬಹುದು. ವಿವಾಹದ ಬಗೆಗೆ ಏನೂ ಅರಿಯದ ವಯಸ್ಸಿನಲ್ಲಿ ಮದುವೆಯನ್ನು ಮಾಡಿದರೆ ಈ ಬಗೆಯ ಸಮಸ್ಯೆಗಳು ಎದುರಾಗುತ್ತವೆ. ಅಂದರೆ ಹೀಗೆ ಬಾಲ್ಯದಲ್ಲಿಯೇ ವಿವಾಹವಾದಂತಹ ಹೆಣ್ಣುಮಕ್ಕಳ ಮೇಲೆ ಕುಟುಂಬದ ಜವಾಬ್ದಾರಿಯೆಲ್ಲವನ್ನೂ ಹೇರಿದರೆ ಅವರು ಅವುಗಳನ್ನು ನಿಭಾಯಿಸಲು ಸಾಧ್ಯವಾಗುವುದಿಲ್ಲ. ಹಾಗೆಂದು ಇಲ್ಲಿ ಮಹಿಳೆಯರು ಗಂಡನ ಮನೆಯಲ್ಲಿ ಮನೆಗೆಲಸಗಳನ್ನಷ್ಟೇ ಮಾಡಿಕೊಂಡಿರಲಿ ಎಂದು ಹೇಳುವುದು ಇಲ್ಲಿನ ಉದ್ದೇಶವಲ್ಲ. ಬದಲಾಗಿ ಕುಟುಂಬದಲ್ಲಿನ ಕೆಲಸಗಳನ್ನು ಕುಟುಂಬದ ಇತರೆ ಸದಸ್ಯರೆಲ್ಲರೂ ಹಂಚಿಕೊಂಡು ಮಾಡಬೇಕು. ಕಾನೂನು ಪ್ರಕಾರ ವಯಸ್ಸಿಗೆ ಅನುಗುಣವಾಗಿ ವಿವಾಹವಾದ ಮಹಿಳೆಯರಲ್ಲಿಯೂ ಈ ಬಗೆಯ ಮಾನಸಿಕ ಖಿನ್ನತೆ ಉಂಟಾಗುವುದು ಕಂಡುಬರುತ್ತದೆ. ಆದರೆ ಇದರ ತೀವ್ರತೆ ಮಾತ್ರ ಕಡಿಮೆ ಇರುತ್ತದೆ. ಆ ವಯಸ್ಸಿನಲ್ಲಿ ಸ್ವಲ್ಪ ಮಟ್ಟಿಗಾದರೂ, ಒತ್ತಡಗಳನ್ನು ನಿಭಾಯಿಸಬಲ್ಲೆ ಎಂಬ ಆತ್ಮಸ್ಥೈರ್ಯ ಮಹಿಳೆಯರಲ್ಲಿರುತ್ತದೆ. ಆದರೆ ಎಳೆಯ ಮಕ್ಕಳಲ್ಲಿ ಹಾಗಾಗುವುದಿಲ್ಲ. ಏಕೆಂದರೆ ಅವರೇ ತಮ್ಮ ತಂದೆ ತಾಯಿಯನ್ನು ಅವಲಂಬಿಸಿರುತ್ತಾರೆ. ಅಂತಹ ಸಂದರ್ಭದಲ್ಲಿ ಅವರ ಮೇಲೆ ಕೌಟುಂಬಿಕ ಜವಾಬ್ದಾರಿಗಳನ್ನು ಹೇರಿದರೆ ಅವರು ಮಾನಸಿಕವಾಗಿ ಕುಗ್ಗಿಹೋಗುತ್ತಾರೆ. ಸ್ವಲ್ಪ ಧೈರ್ಯದಿಂದಿರುವ ಮಹಿಳೆಯರು ಅದನ್ನು ನಿಭಾಯಿಸುತ್ತಾರಾದರೂ ಅದರ ತೀವ್ರತೆ ಹೆಚ್ಚಾದರೆ ಅವರೂ ಸಹ ನಿಸ್ಸಾಹಾಯಕರಾಗುತ್ತಾರೆ. ಗ್ರಾಮೀಣ ಭಾಗಗಳಲ್ಲಿ ಮೂಢನಂಬಿಕೆಗಳನ್ನು ಹೆಚ್ಚಾಗಿ ನಂಬುತ್ತಾರೆ. ಅವುಗಳು ಜನರ ನರ ನಾಡಿಗಳಲ್ಲಿ ಹಾಸುಹೊಕ್ಕಾಗಿರುತ್ತವೆ. ಮೇಲಿನ ಎರಡನೇ ಪ್ರಕರಣದಲ್ಲಿ ಚಿತ್ತಾಪುರ ಗ್ರಾಮದ ಮಂಜುಳಾ ಅವರು ತಮ್ಮ ಮಗಳು ಏನೂ ಕೆಲಸ ಮಾಡಲಾರದೇ ಸುಮ್ಮನೇ ಕೂಡುತ್ತಾಳೆ ಎಂಬ ಕಾರಣಕ್ಕೆ ಅವರು ಅದನ್ನು ಸರಿಪಡಿಸಲು

ಸ್ವಾಮಿಯ ಮೊರೆ ಹೋಗಿರುವುದು ಮತ್ತು ಆ ಸ್ವಾಮಿಯು ತಾಯತ ಮತ್ತು ಆಂಜನೇಯ ದೇವಸ್ಥಾನಕ್ಕೆ ಮೂರು ವಾರಗಳ ಕಾಲ ನಡೆದುಕೊಳ್ಳಲು ಹೇಳುವುದು. ಇವುಗಳನ್ನು ಗಮನಿಸಿದರೆ, ಆಧುನಿಕತೆಯ ಈ ಸಂದರ್ಭದಲ್ಲಿಯೂ ಗ್ರಾಮೀಣ ಭಾಗದ ಜನರು ಸ್ವಾಮಿಗಳ ಹತ್ತಿರ ಯಂತ್ರಗಳನ್ನು ಕಟ್ಟಿಸಿಕೊಂಡು ಬರುವುದನ್ನು ಬಿಟ್ಟಿಲ್ಲ. ಮುಖ್ಯವಾಗಿ ಹೇಳುವುದೇನೆಂದರೆ ಮಂಜುಳಾ ಅವರು ಸಮಸ್ಯೆಯ ಮೂಲವನ್ನು ಹುಡುಕದೇ ತಮ್ಮ ಮಗಳನ್ನೇ ತಿದ್ದಲು ಪ್ರಯತ್ನಿಸುವುದನ್ನು ಕಾಣಬಹುದು. ಅಂದರೆ ಸಮಸ್ಯೆ ಇರುವುದು ಗಂಡನ ಮನೆಯಲ್ಲಿನ ಕೆಲಸಗಳ ಒತ್ತಡ. ಅವುಗಳನ್ನು ನಿಭಾಯಿಸುವಲ್ಲಿ ಗಂಡನ ಮತ್ತು ಆಕೆಯ ಪಾತ್ರ ಏನಾಗಿರಬೇಕು ಎಂಬುದನ್ನು ತಿಳಿಸಿ ಹೇಳಬೇಕು. ಅದನ್ನು ಬಿಟ್ಟು ಮಗಳನ್ನೇ ಹೊಂದಿಕೊಳ್ಳಲು ಹೇಳುತ್ತಿರುವುದು ಕಂಡುಬರುತ್ತದೆ. ಅಂದರೆ ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳು ಮಹಿಳೆಯರಲ್ಲಿ ಎಷ್ಟೊಂದು ಹಾಸು ಹೊಕ್ಕಾಗಿದೆ ಎಂದರೆ ಮಹಿಳೆಯಿಂದಲೇ ಮಹಿಳೆಗೆ ವ್ಯವಸ್ಥೆಗೆ ಹೊಂದಿಕೊಂಡು ಹೋಗುವುದನ್ನು ಹೇಳಿಸುತ್ತದೆ. ವಿವಾಹವಾದ ಹೆಣ್ಣುಮಕ್ಕಳು ಗಂಡನ ಮನೆಯಲ್ಲಿ ಗಂಡನಿಗೆ ಮತ್ತು ಅತ್ತೆ ಮಾವಂದಿರಿಗೆ ವಿಧೇಯರಾಗಿ ಇರಬೇಕು. ಇಲ್ಲವಾದರೆ ಹುಟ್ಟಿದ ಮನೆಗೆ ಕೆಡುಕನ್ನು ಮಾಡಿದಂತಾಗುತ್ತದೆ. ಹಾಗೆಯೇ ಹುಟ್ಟಿದ ಮನೆಯ ಕೀರ್ತಿಯನ್ನು ಗಂಡನ ಮನೆಯಲ್ಲಿ ಬೆಳಗಿಸಬೇಕಾದರೆ, ಅವಳು ಎಲ್ಲರಿಗೂ ವಿಧೇಯಳಾಗಿ ಇರಲೇಬೇಕು. ಇಲ್ಲವಾದರೆ ಹುಟ್ಟಿದ ಮನೆಗೆ ಕೆಟ್ಟ ಹೆಸರನ್ನು ತಂದವಳು ಎಂಬ ನಿಂದನೆಗೆ ಒಳಗಾಗಬೇಕಾಗುತ್ತದೆ. ಈ ಬಗೆಯ ಮೌಲ್ಯಗಳು ಹೆಣ್ಣುಮಕ್ಕಳಿಗೆ ದಿನನಿತ್ಯಲೂ ಪಾಠ ಬೋಧನೆಯಾಗುತ್ತಿರುತ್ತದೆ. ಅಂದರೆ ಸಾಮಾಜೀಕರಣದ ಪ್ರಕ್ರಿಯೆಯ ಮೂಲಕ ಈ ಬಗೆಯ ಮೌಲ್ಯಗಳನ್ನು ಬಿತ್ತಲಾಗುತ್ತದೆ. ಹಾಗಾಗಿಯೇ ವಿವಾಹವಾದ ಹೆಣ್ಣುಮಕ್ಕಳಿಂದ ಆ ಬಗೆಯ ನಿರೀಕ್ಷೆಗಳನ್ನು ವ್ಯವಸ್ಥೆ ಇಟ್ಟುಕೊಂಡಿರುತ್ತದೆ. ಒಟ್ಟಾರೆಯಾಗಿ ಬಾಲ್ಯ ವಿವಾಹದಿಂದಾಗಿ ಚಿಕ್ಕ ವಯಸ್ಸಿನಲ್ಲಿಯೇ ಹೆಚ್ಚಿನ ಹೊರೆಯನ್ನು ಹೊರುತ್ತಾರೆ. ಅದನ್ನು ನಿಭಾಯಿಸಲು ಸಾಧ್ಯವಾಗದಿದ್ದಾಗ, ಅವರು ಮಾನಸಿಕ ಖಿನ್ನತೆಗೆ ಒಳಗಾಗುವಂತಹದ್ದು ಕಂಡುಬರುತ್ತದೆ. ಪುರುಷ ನಿರ್ಮಿತ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಯಾವಾಗಲೂ ಸಮಸ್ಯೆಗಳು ಇದ್ದದ್ದೇ. ಅವುಗಳನ್ನು ಧಿಟ್ಟತನದಿಂದ ಎದುರಿಸುವುದೂ ಕಷ್ಟಕರವಾಗಿದೆ. ಚಿಕ್ಕ ವಯಸ್ಸಿನಲ್ಲಿ ವಿವಾಹ ಮಾಡಿದ ಕಾರಣಕ್ಕಾಗಿ ತಮ್ಮ ಮಗಳು ಮಾನಸಿಕವಾಗಿ ಕುಗ್ಗಿಹೋಗುತ್ತಿದ್ದಾಳಲ್ಲಾ ಎಂಬ ಆತಂಕದ ಅರಿವು ಯಂಕಮ್ಮಳಿಗೆ ಆಗಿರುವುದು ಮಗಳ ಪರಿಸ್ಥಿತಿಯನ್ನು ನೋಡಿ ಅವರಲ್ಲಿಯೇ ಪಶ್ಚಾತ್ತಾಪ ಪಟ್ಟುಕೊಂಡಿರುವುದು ಕಂಡುಬರುತ್ತದೆ.

**೪. ಹೆಣ್ಣುಮಕ್ಕಳು ಕೌಟುಂಬಿಕ ಹಿಂಸೆಗೆ ಒಳಗಾಗುತ್ತಾರೆ**

ಬಾಲ್ಯ ವಿವಾಹದಿಂದಾಗಿ ಮಹಿಳೆಯರು ಕೌಟುಂಬಿಕ ಹಿಂಸೆಗೆ ಒಳಗಾಗುವ ಸಂಭವ ಹೆಚ್ಚಾಗಿರುವುದು ಪ್ರಕರಣಗಳಿಂದ ತಿಳಿದುಬರುತ್ತದೆ. ಕೌಟುಂಬಿಕ ಹಿಂಸೆ ಎಂಬುದು ವಿವಾಹವಾದ ಎಲ್ಲಾ ಮಹಿಳೆಯರ ಮೇಲೆಯೂ ನಡೆಯುತ್ತದೆ. ಈ ಹಿಂಸೆ ಮಾನಸಿಕವಾಗಿ, ದೈಹಿಕವಾಗಿ ಎಲ್ಲ ಬಗೆಯಲ್ಲೂ ಕಾಣಿಸಿಕೊಳ್ಳುತ್ತದೆ. ಬಾಲ್ಯ ವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳ

ಮೇಲೆ ಕುಟುಂಬಗಳಲ್ಲಿ ಯಾವ ರೀತಿಯ ಹಿಂಸೆಗಳು ನಡೆಯುತ್ತವೆ ಎಂಬುದನ್ನು ವಿಶ್ಲೇಷಿಸುವುದಾಗಿದೆ. ಅಧ್ಯಯನ ಕ್ಷೇತ್ರ ವ್ಯಾಪ್ತಿಯಲ್ಲಿ ಈ ಬಗೆಯ ಹಿಂಸೆಗೆ ಹೆಣ್ಣುಮಕ್ಕಳು ಒಳಗಾದ ಪ್ರಕರಣಗಳು ಸಾಕಷ್ಟಿವೆ. ಅವುಗಳೆಲ್ಲವನ್ನೂ ಇಲ್ಲಿ ಹೆಸರಿಸಲು ಆಗದಿದ್ದರೂ ಮಹಿಳೆಯರ ಮೇಲಿನ ಹಿಂಸೆಯ ಸ್ವರೂಪ ಹೆಚ್ಚಾಗಿರುವ ಕೆಲವು ಪ್ರಕರಣಗಳನ್ನು ವಿಶ್ಲೇಷಿಸಲಾಗುವುದು. ಮುಖ್ಯವಾಗಿ ಕುಟುಂಬದಲ್ಲಿನ ಹಿರಿಯರ ಆಲೋಚನೆಗಳು ಯಾವಾಗಲೂ ಕಠಿಣವಾಗಿರುತ್ತವೆ. ಹೊಸದಾಗಿ ಮನೆಗೆ ಬಂದ ಸದಸ್ಯರನ್ನು ತಮ್ಮ ಅಧೀನದಲ್ಲಿಯೇ ಇಟ್ಟುಕೊಳ್ಳಲು ಹವಣಿಸುತ್ತಿರುತ್ತಾರೆ. ಇಲ್ಲಿ ಅಧಿಕಾರದ ಪ್ರಶ್ನೆ ಉದ್ಭವಿಸುತ್ತದೆ. ಕುಟುಂಬದಲ್ಲಿ ಹಿರಿಯರಾದವರು ಚಿಕ್ಕವರ ಮೇಲೆ ಯಾವಾಗಲೂ ಹಕ್ಕನ್ನು ಚಲಾಯಿಸುತ್ತಿರುತ್ತಾರೆ. ಅದು ಅವರ ಮೂಲಭೂತ ಹಕ್ಕು ಎಂಬಂತೆ ವರ್ತಿಸುತ್ತಿರುತ್ತಾರೆ. ಬಹಳಷ್ಟು ಸಂದರ್ಭಗಳಲ್ಲಿ ಮಹಿಳೆಗಿಂತ ಪುರುಷ ಚಿಕ್ಕವನಿದ್ದರೂ ಆಕೆಯ ಮೇಲೆ ಹಕ್ಕನ್ನು ಚಲಾಯಿಸುವ ಅಧಿಕಾರವನ್ನು ಪಡೆದಿರುತ್ತಾನೆ. ಅದನ್ನು ಪ್ರಶ್ನಿಸುವ ಅಧಿಕಾರ ಮಾತ್ರ ಮಹಿಳೆಯರಿಗಿರುವುದಿಲ್ಲ. ಇದು ವ್ಯವಸ್ಥೆಯ ಅಘೋಷಿತ ನಿಯಮ. ಈ ನಿಯಮಕ್ಕೆ ಎಲ್ಲರೂ ಬದ್ಧರಾಗಿರಬೇಕಾಗಿರುತ್ತದೆ. ಈ ಕಾರಣಕ್ಕಾಗಿ ಕುಟುಂಬದಲ್ಲಿ ಯಾವಾಗಲೂ ಮಹಿಳೆಯರ ಮೇಲೆಯೇ ಹಿಂಸೆ ನಡೆಯುತ್ತಿರುತ್ತದೆ. ಬಾಲ್ಯ ವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳು ಯಾವ ಬಗೆಯ ಹಿಂಸೆಯನ್ನು ಅನುಭವಿಸಿದ್ದಾರೆ ಎಂಬುದನ್ನು ಅವರ ಮಾತಿನಲ್ಲಿಯೇ ಕೆಳಗಿನಂತೆ ವಿವರಿಸಿಕೊಳ್ಳುವುದರ ಜೊತೆಗೆ ಸ್ತ್ರೀವಾದಿ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಗಾದಿಗನೂರು ಗ್ರಾಮದ ಪಾರ್ವತಮ್ಮ, ಹುಲುಗಪ್ಪ ದಂತಿಗಳ ಮಗಳಾದ ಪ್ರೇಮಾ ಎಂಬುವವರು ಗಂಡನ ಮನೆಯಲ್ಲಿನ ಹಿಂಸೆಯನ್ನು ತಾಳಲಾರದೇ ತಾಯಿಯ ಮನೆಗೆ ಬಂದು ಬಿಟ್ಟಿದ್ದಾಳೆ. ಇವರೇ ಹೇಳುವಂತೆ "ನನಿಗೆ ಮದುವಿ ಆದಾಗ ೧೪ ವರ್ಸ ವಯಸ್ಸು, ಆವಾಗ ನನಿಗೆ ಮದುವಿ ಅಂದ್ರೆ ಏನು ಅಂತ ಗೊತ್ತಿರ್ಲಿಲ್ಲ. ಮನ್ಯಾಗ ಅಪ್ಪ ಅಮ್ಮ ಹೇಳಿದ್ರು ಅಂತೇಳಿ ಮದುವಿ ಆಗಿ ಬಿಟ್ಟೆ. ಆಮ್ಯಾಲೆ ಗಂಡನ ಮನಿಗಿ ಹೋದ್ಮೇಲೆ ಗೊತ್ತಾತು. ಇಲ್ಲಿ ಎಷ್ಟೊಂದು ಕಷ್ಟಗೋಳು ಇರ್ತಾವ ಅಂತ. ಈಗ ನನಿಗಿ ಒಂದು ಮಗು ಆಗೇತಿ. ನನ್ನ ನೋಡಿದೋರು ಎಷ್ಟೊಂದು ಸೊರ್ಗಿ ಹೋಗಿಯಲ್ಲಾ. ಗಂಡನ ಮನ್ಯಾಗ ಊಟಕ್ಕ ಹಾಕ್ತಾರ ಇಲ್ಲಾ ಅಂತ ಬೈತಾರ. ಅಷ್ಟೊಂದು ಸೊರ್ಗಿ ಹೋಗೇನಿ. ಗಂಡನ ಮನ್ಯಾಗಿನ ಕಷ್ಟ ಯಾರ್ಮುಂದೆ ಹೇಳಾದು. ಮದುವಿ ಆಗಿ ಮೂರು ನಾಕು ವರ್ಸ ಆದ್ರೂ ನನಿಗಿ ಮಕ್ಳೇ ಆಗಿರ್ಲಿಲ್ಲ. ಆ ದೇವ್ರಿಗಿ, ಈ ದೇವ್ರಿಗಿ ಅಂತ ಬಾಳ ತಿರುಗಾಡಿದ್ವಿ, ಆದ್ರೂ ಮಕ್ಳು ಆಗ್ಲಿಲ್ಲ. ಕೊನಿಗಿ ಡಾಕ್ಟ್ರತಾಗ ಹೋಗಿ ಚೆಕ್ ಮಾಡಿಸಿದ್ವಿ, ಅಲ್ಲಿ ಇಬ್ರನ್ನೂ ಚೆಕ್ ಮಾಡ್ಬೇಕು ಅಂತ ಹೇಳಿದ್ರು. ನಾನು ಚೆಕ್ ಮಾಡ್ಸಿದೆ. ನನ್ ಗರ್ಭಕೋಷ ಬಾಳ ಸಣ್ಣದೈತಿ ಅಂತ ಡಾಕ್ಟ್ರು ಹೇಳಿದ್ರು. ಮಕ್ಕಳಾಗಾದಕ್ಕ ಇನ್ನ ಸ್ವಲ್ಪದಿನ ಕಾಯ್ಬೇಕು ಅಂತಾನೂ ಹೇಳಿದ್ರು. ಜೊತಿಗಿ ನನ ಗಂಡಗ ಸತೆ ಚೆಕ್ ಮಾಡ್ಸಾಕ ಹೇಳಿದ್ರು. ಆದ್ರೆ ನನ ಗಂಡ ಚೆಕ್ ಮಾಡ್ಸಾಕ ಬರ್ಲಿಲ್ಲ. ಅತ್ಗ ಹೇಳಿದ್ರೆ ನನಿಗೇ ಹೊಡಿಯಾಕ ಬಂದ. ಹೋಗ್ಲಿ ಬಿಡು ಅಂತ ನಾನೊಬ್ಬೇ ಗುಳಿಗಿಗಳ್ನ ನುಂಗಾಕತ್ತಿದ್ದೆ. ಆದ್ರೂ ಮಕ್ಳಾಗ್ಲಿಲ್ಲ.

ಮನ್ಯಾಗ ನೋಡಿದ್ರ ನಮ್ ಅತ್ತಿ ದಿನಾಲೂ ಬೈಯೋದೇ ಬೈಯೋದು. ಮದುಪಿ ಆಗಿ ಇಷ್ಟು ವರ್ಸ ಆದ್ರೂ ಮಕ್ಕು ಆಗ್ಲಿಲ್ಲ. ಗೊಡ್ಡಿ ಇದ್ದಂಗ ಐದೀಯಿ. ನನ್ ಮಗನ್ ಮ್ಯಾಲೇನೇ ಅನುಮಾನ ಪಡ್ತೀಯಾ. ಅವ್ನಿಗೇನ್ ಆಗೇತಿ ರಾಜ ಇದ್ದಂಗ ಐದಾನ. ನೀನು ಮೊದ್ಲು ತೋರ್ಸ್ಕ್ಯಾ ಗೊತ್ತಾಗ್ತೈತಿ ಅಂತ ದಿನಾಲೂ ಬೈತಿದ್ಲು. ಎಷ್ಟು ಕಷ್ಟ ಕೊಟ್ಟಾರ ಅಂದ್ರ ಹೇಳಾದೇ ಕಷ್ಟ. ಕೊನಿಗಿ ನಮ್ ಅಣ್ಣ ಹೇಳಿದ್ ಮ್ಯಾಲೆ ಇಬ್ರೂ ಸತೆ ತೋರ್ಸಿದ್ವಿ. ಡಾಕ್ಟ್ರು ಇಬ್ರಿಗೂ ಗುಳಿಗಿ ಬರ್ದು ಕೊಟ್ರು. ಅದನ್ನೆಲ್ಲಾ ಮೂರು ತಿಂಗ್ಳು ಸರೀಗಿ ತಗಂಡೆ. ಆಮ್ಯಾಲೆ ಮಗ್ಳು ಹುಟ್ಟದ್ಲು. ಯಾವ್ದೋ ಒಂದು ಆತಲ್ಲಾ ಅಂತ ಸುಮ್ನಿದ್ರೆ, ನಮ್ ಅತ್ತಿಗಿ ಗಂಡು ಹುಡುಗೇ ಬೇಕಂತೆ. ಅದಕ್ಕ ಸತೆ ರಾಮಾಯಣ ಮಾಡಿಬಿಟ್ಲು ಒಂದಿನ. ಯಾವ ಯಾವ್ದೋ ಗುಡಿಗುಳ್ಗಿ ಹೋಗಿ ಬಂದ್ರೂ ಸತೆ ಒಂದು ಗಂಡು ಹುಡುಗನ್ನ ಹಡಿಯಾಕ ಆಗ್ಲಿಲ್ಲ ಅಂತ ಬೈತಿದ್ಲು. ನನ ಗಂಡಗ ಸತೆ ಹೆಣ್ಮಗ್ಳು ಹುಟ್ಟಿದ್ದು ಇಷ್ಟ ಇರ್ಲಿಲ್ಲ. ನಾನೇನ್ ಮಾಡಾದು ದೇವ್ರು ಇಟ್ಟಂಗ ಆಗತೈತಿ ಅಂತ ಸುಮ್ನೆ ಇರ್ತಿದ್ದೆ. ಆದ್ರೆ ಮನ್ಯಾಗ ಗಂಡನ್ದು ಮತ್ತೆ ಅತ್ತಿದು ಕಾಟ ಜಾಸ್ತಿ ಆಗಾಕತ್ತಿತ್ತು. ನನಿಗಿ ಸಾಕಾಗಿ ನಾನು ತವ್ರ ಮನಿಗಿ ಹೋಗ್ತೀನಿ ಅಂತ ಹೇಳಿ ಮಗಳ್ನ ಎತ್ತಿಕೆಂಡು ಬಂದ್ಬಿಟ್ಟೆ. ಇಲ್ಲಿ ನಮ್ ಅಪ್ಪ ಅಮ್ಮ ಮತ್ತೆ ವಾಪಾಸ್ ಗಂಡನ ಮನಿಗೇ ಕಳಿಸಾಕ ನೋಡಾಕತ್ಯಾರ. ನಾನಂತು ಗಂಡನ ಮನಿಗಿ ಹೋಗಂಗಿಲ್ಲ ಅಂತ ಕಡಾಕಂಡಿತಾವಾಗಿ ಹೇಳಿಬಿಟ್ಟೇನಿ" ಎಂದು ಹೇಳಿದರು.

ಯಲಬುರ್ಗಾ ತಾಲೂಕಿನ ವೀರಾಪುರ ಗ್ರಾಮದ ಗಿಡ್ಡಪ್ಪ ಮತ್ತು ನಾಗವ್ವ ದಂಪತಿಗಳ ಮಗಳಾದ ಕೆಂಚವ್ವ ಎಂಬುವವರು ಗಂಡನ ಮನೆಯಲ್ಲಿನ ಹಿಂಸೆಯನ್ನು ತಾಳಲಾರದೇ, ತವರು ಮನೆಗೆ  ಬಂದು ನೆಲೆಸಿದ್ದಾರೆ. ಇದಕ್ಕೆ ಕಾರಣ ಗಂಡನ ಮನೆಯಲ್ಲಿನ ಕೆಲಸಗಳ ಒತ್ತಡ ಮತ್ತು ಅತ್ತೆ,ಮಾವ ಮತ್ತು ಗಂಡನಿಂದಾದ ಕಿರುಕುಳಗಳು. ಗಿಡ್ಡಪ್ಪನವರ ಕುಟುಂಬ ತುಂಬಾ ಬಡತನದಿಂದಿದೆ. ಹಾಗಾಗಿಯೇ ಅವರ ಮಗಳ ಮದುವೆಯನ್ನು ಬಹು ಬೇಗನೇ ಮಾಡಿ ಮುಗಿಸಿದ್ದಾರೆ. ಆದರೆ ಗಂಡನ ಮನೆಯಲ್ಲಿ ತಮ್ಮ ಮಗಳು ಹಿಂಸೆಯನ್ನು ಅನುಭವಿಸುತ್ತಿರುವುದನ್ನು ಕಂಡು ಈಗ ಮರಗುತ್ತಿದ್ದಾರೆ. ಕೆಂಚವ್ವನವರನ್ನು ಮಾತನಾಡಿಸಿದಾಗ ಅವರು ಹೇಳಿದ್ದು ಹೀಗೆ "ನನಿಗೆ ಮದುವಿ ಮಾಡಿ ಗಂಡನ ಮನಿಗಿ ಬಾಳ ಜಲ್ದಿ ಕಳಿಸಿದ್ರು. ಅಲ್ಲಿ ಎಷ್ಟೊಂದು ಕಷ್ಟಗೋಳು ಅಂದ್ರೆ ಅವನ್ನ ಹೇಳಾಕಾಗಲ್ಲ. ಮನ್ಯಾಗಿನ ಎಲ್ಲಾ ಕೆಲ್ಸಗಳ್ನ ಮಾಡಿದ್ರು ಸತೆ ಅತ್ತಿ ಮಾವನೋರು ಬೈಯೋದು ತಪ್ತಿದ್ದಿಲ್ಲ. ಮುಂಜಾನೆ ಎದ್ದಾಗಿಂದ ರಾತ್ರಿ ಮಲಗೋತನ ಕೆಲ್ಸ ಮಾಡ್ತಿರಬೇಕು. ಅತ್ತಿ ಒಂದಿನ ಬಾಳ ಕೆಟ್ಟಾಗಿ ಬೈದು ಬಿಟ್ಲು. ಅದನ್ನ ನನ ಗಂಡಗ ಹೇಳಿದ್ರೆ, ಆತ ಸತೆ ಅವ್ರ ಅಮ್ಮನ ಪರ ವಹಿಸಿಕೆಂಡು ನನ್ನೇ ಹೊಡ್ದಬಿಟ್ಟ. ಕುಡ್ದು ಬರೋದು ಏನೇನೋ ಕೇಳೋದು ಹೊಡಿಯೋದು, ವಾರ್ದಾಗ ಏನಿಲ್ಲಾಂದ್ರೂ ಎರ್ಡ ಸಲನಾದ್ರೂ ಹೊಡಿತಿದ್ದ. ರಾತ್ರಿ ಹೊಡಿಸಿಕೆಂಡು ಮತ್ತೆ ಮುಂಜಾನೆ ಮನಿ ಕೆಲ್ಸಗಳ್ನ ಮಾಡ್ಬೇಕು. ಇಲ್ಲಾಂದ್ರೆ ಅತ್ತಿ ಬೈಯೋದು. ಜೀವ್ನ ಸಾಕಾಗಿ ಹೋಗಿತ್ತು. ಮತ್ತೆ ಒಂದಿನ ಭಾಮ್ಯೆದ ಸತೆ ನನ್ನ ಹೊಡ್ದಬಿಟ್ಟ. ಅದಕ್ಕೆ ಇವ್ರಿಗೆ ಎಷ್ಟು ಮಾಡಿ ಹಾಕಿದ್ರು ಅಷ್ಟೆ ಅಂತ ತಿಳ್ದು. ಅಲ್ಲಿಂದ ನಮ್ ಅಪ್ಪನ ಮನಿಗೆ ಬಂದುಬಿಟ್ಟೆ. ಇಲ್ಲಿನೂ ಬಾಳ ಕಷ್ಟ ಐತಿ. ಆದ್ರೆ ನಾನು ಇಲ್ಲಿ ಹೆಂಗ ಬೇಕಾದ್ರು ಇರ್ಬೋದು. ನಾನು ಮಾತ್ರ

ಗಂಡನ ಮನಿಗಿ ಹೋಗಂಗಿಲ್ಲ ಅಂತ ಕಡಾಖಂಡಿತ್ವಾಗಿ ಹೇಳಿಬಿಟ್ಟೇನಿ. ಅದಕ್ಕ ನನಿಗೆ ಅಪ್ಪ, ಅಮ್ಮ ಇಬ್ರೂ ಏನೂ ಹೇಳೋದಿಲ್ಲ. ಮತ್ತೆ ಈಗ ನಾನು ಹೊಲದ್ ಕೆಲ್ಸಕ್ಕ ಹೋಗಾಕತ್ತೇನಿ. ಬಂದ ದುಡ್ಡನ್ನ ಅಪ್ಪನಿಗಿ ಕೊಡ್ತೀನಿ. ಗಂಡ ಒಂದಿನ ಬಂದಿದ್ದ, ಅದೂ ಕುಡ್ಕಂಡು ಬಂದು ನಮ್ ಅಪ್ಪಂತಾಗ ಹೆಂಗ ಬೇಕಾದ್ರೆ ಹಂಗ ಮಾತಾಡಿ ಹೋಗ್ಯಾನ. ಹಂಗಾಗಿ ಅವ್ರು ಹೆಂಗ ಐದಾರ ಅಂತ ನಮ್ ಅಪ್ಪಗ ಗೊತ್ತಾಗೇತಿ. ಅದಕ್ಕ ನನಿಗೆ ಗಂಡನ ಮನಿಗಿ ಹೋಗು ಅಂತ ಇಲ್ಲಿತನ ಹೇಳೇ ಇಲ್ಲ. ನಾನು ಸತೆ ಅಲ್ಲಿಗೆ ಹೋಗಂಗಿಲ್ಲ" ಎಂದರು.

ಮೇಲಿನ ಎರಡೂ ಪ್ರಕರಣಗಳಲ್ಲಿ ಹೆಣ್ಣುಮಕ್ಕಳು ಬಾಲ್ಯವಿವಾಹಕ್ಕೆ ಒಳಗಾಗಿ ಗಂಡನ ಮನೆಗಳಲ್ಲಿ ಹಲವಾರು ಕಷ್ಟಗಳಿಗೆ ಒಳಗಾಗಿರುವುದು ಕಂಡುಬರುತ್ತದೆ. ಮೊದಲನೇ ಪ್ರಕರಣದಲ್ಲಿನ ಪ್ರೇಮಾ ಅವರು ತಮಗೆ ಮಕ್ಕಳಾಗದಿದ್ದಕ್ಕೆ ಅತ್ತೆ, ಮಾವನವರಿಂದ ಕಿರುಕುಳಗಳನ್ನು ಅನುಭವಿಸಿದ್ದಾರೆ. ಪ್ರೇಮ ಅವರಿಗೆ ಮಕ್ಕಳಾಗಲಿಲ್ಲವಲ್ಲ ಎಂಬ ಕೊರಗು ಒಂದುಕಡೆಯಾದರೆ ಇನ್ನೊಂದು ಕಡೆ ಕುಟುಂಬದ ಸದಸ್ಯರಿಂದ ಉಂಟಾಗುತ್ತಿರುವ ಕಿರುಕುಳಗಳು. ಇವೆರೆಡೂ ಪ್ರೇಮ ಅವರನ್ನು ಮಾನಸಿಕವಾಗಿ ಮತ್ತು ದೈಹಿಕವಾಗಿ ಕುಗ್ಗಿಸಿಬಿಟ್ಟಿವೆ. ಈ ಕಿರುಕುಳದಿಂದ ತಪ್ಪಿಸಿಕೊಳ್ಳಲು ಅವರು ಹಲವು ದೇವರುಗಳ ಮೊರೆಹೋಗಿದ್ದಾರೆ. ಪೂಜೆ ಪುನಸ್ಕಾರದಿಂದಲಾದರೂ ಮಕ್ಕಳ ಭಾಗ್ಯ ದಕ್ಕುತ್ತದೆಯೇನೋ ಎಂಬ ಕಾರಣಕ್ಕೆ ದೇವರ ಮೊರೆಹೋದರೂ ಅವರಿಗೆ ಮಕ್ಕಳಾಗಲೇ ಇಲ್ಲ. ಇದರಿಂದ ತುಂಬಾ ನಿರಾಸೆಯೊಂದಿಗೆ ಮನಃ ನೊಂದಿದ್ದಾರೆ. ಕೊನೆಗೆ ವೈದ್ಯರ ಹತ್ತಿರ ಹೋಗಿದ್ದಾರೆ. ಅಲ್ಲಿ ಇವರಿಗೆ ಮಕ್ಕಳಾಗದೇ ಇರುವುದಕ್ಕೆ ಕಾರಣವೇನು ಎಂಬುದು ತಿಳಿದುಬಂದಿದೆ. ಮುಖ್ಯವಾಗಿ ವೈದ್ಯರು ಪ್ರೇಮ ಮತ್ತು ಆಕೆಯ ಗಂಡ ಇಬ್ಬರನ್ನೂ ಚಿಕಿತ್ಸೆಗೆ ಒಳಗಾಗುವಂತೆ ಸೂಚಿಸಿದ್ದಾರೆ. ಆದರೆ ಇದಕ್ಕೆ ಪ್ರೇಮಾ ಅವರ ಗಂಡ ಒಪ್ಪಿಲ್ಲ. ಈ ವಿಷಯ ಅವರ ಅತ್ತೆಗೆ ತಿಳಿದು ಅವರು ಮತ್ತೆ ಸೊಸೆಯನ್ನೇ ಬೈದಿರುವುದು ಕಂಡುಬರುತ್ತದೆ. ಅಂದರೆ ಮಕ್ಕಳಾಗದಿದ್ದಕ್ಕೆ ಮಹಿಳೆಯಲ್ಲಿಯೇ ಏನಾದರೂ ದೋಷವಿರುತ್ತದೆಯೇ ಹೊರತು ಗಂಡಿನಲ್ಲಲ್ಲ ಎಂಬುದು ಅವರ ನಂಬಿಕೆ. ಜೊತೆಗೆ ಸಮಾಜದಲ್ಲಿ ಗಂಡು ಎಂದರೆ ಅದೊಂದು ಅವನಿಗೆ ಅಹಮ್ಮಿನ ಸಂಕೇತವಾಗಿರುತ್ತದೆ. ವೈದ್ಯಕೀಯ ಪರೀಕ್ಷೆಗೆ ಒಳಪಟ್ಟರೆ ಎಲ್ಲಿ ಸಮಾಜದಿಂದ ದೂಷಿಸಲ್ಪಡುತ್ತೇನೋ ಎಂಬ ಆತಂಕ, ಗಂಡು ಎಂಬ ಅಹಮ್ಮಿಗೆ ಹೊಡೆತ ಬೀಳುತ್ತದೆ ಮತ್ತು ಸಮಾಜದಲ್ಲಿ ಎಲ್ಲಿ ತನ್ನ ಪ್ರತಿಷ್ಠೆ ಕಡಿಮೆಯಾಗುತ್ತದೆ ಎಂಬ ಆತಂಕ ಮತ್ತು ಗಂಡಸುತನಕ್ಕೆ ಎಲ್ಲಿ ಧಕ್ಕೆ ಒದಗಿಬಿಡುತ್ತದೆಯೋ ಎಂಬ ಭಯ ಅವನಲ್ಲಿ ಒಡಮೂಡಿದ ಪರಿಣಾಮವಾಗಿ ಪ್ರೇಮ ಅವರ ಗಂಡ ಚಿಕಿತ್ಸೆಗೆ ಒಪ್ಪದಿರುವುದು ಕಂಡುಬರುತ್ತದೆ. ಈ ಬಗೆಯ ಮನಸ್ಥಿತಿ ಎಲ್ಲ ಪುರುಷರಲ್ಲಿಯೂ ಜಾಗೃತಗೊಂಡಿರುತ್ತದೆ. ಮಕ್ಕಳಾಗದಿದ್ದರೆ ಅದಕ್ಕೆ ಮಹಿಳೆಯೇ ಕಾರಣ ಎಂದು ವ್ಯವಸ್ಥೆ ನಂಬಿದ ಕಾರಣಕ್ಕಾಗಿ ಹೆಣ್ಣುಮಕ್ಕಳೇ ಸಮಾಜದಿಂದ ದೂಷಿಸಲ್ಪಡುತ್ತಿದ್ದಾರೆ. ಕುಟುಂಬದಲ್ಲಿ ಹಲವು ಹಿಂಸೆಗಳಿಗೆ ಒಳಗಾಗುತ್ತಿದ್ದಾರೆ. ಈ ಬಗೆಯ ಹಿಂಸೆಗಳನ್ನು ಅಪ್ರಾಪ್ತ ಹೆಣ್ಣುಮಕ್ಕಳು ಸಹಿಸಿಕೊಳ್ಳುವುದು ತುಂಬಾ ಕಷ್ಟ. ಪ್ರೇಮ ಅವರಿಗೆ ಒಂದು ಹೆಣ್ಣುಮಗು ಜನಿಸಿದೆ. ಆದರೂ

ಅತ್ತೆ ಮಾವಂದಿರಿಗೆ ಸಮಾಧಾನವಿಲ್ಲ. ಏಕೆಂದರೆ ಅವರು ಗಂಡು ಮಗುವನ್ನು ಬಯಸ್ಸಿದ್ದರು. ಆದರೆ ಹೆಣ್ಣುಮಗು ಜನಿಸಿದ ಕಾರಣಕ್ಕೆ ಮತ್ತೆ ಹಲವು ಬಗೆಯ ಹಿಂಸೆಗಳನ್ನು ಪ್ರೇಮ ಅನುಭವಿಸಿದ್ದಾರೆ. ಚಿಕ್ಕ ವಯಸ್ಸಿನಲ್ಲಿ ವಿವಾಹ ಬಂಧನಕ್ಕೆ ಸಿಲುಕಿದ ಪ್ರೇಮ ಈ ಎಲ್ಲಾ ಹಿಂಸೆಗಳಿಂದ ಮುಕ್ತಿಯನ್ನು ಪಡೆಯಲು ಗಂಡನ ಮನೆಯನ್ನು ಬಿಟ್ಟು ತವರು ಮನೆಗೆ ಬಂದಿದ್ದಾರೆ. ಹಾಗೆಯೇ ಇನ್ನೊಂದು ಪ್ರಕರಣದಲ್ಲಿಯೂ ಕೆಂಚವ್ವನವರು ಗಂಡನ ಮನೆಯ ಹಿಂಸೆಗಳನ್ನು ತಾಳಲಾರದೇ ಆ ಮನೆಯನ್ನು ಬಿಟ್ಟು ತವರು ಮನೆಗೆ ಬಂದು ನೆಲೆಸಿದ್ದಾರೆ.

ವಿವಾಹ ಎನ್ನುವುದರ ಮೂಲಕ ತಮ್ಮ ತವರು ಮನೆಗೆ ವಿದಾಯ ಹೇಳಿ ಗಂಡನ ಮನೆಗೆ ಪ್ರವೇಶ ಪಡೆಯುವ ಹೆಣ್ಣುಮಕ್ಕಳು ಕೌಟುಂಬಿಕ ಹಿಂಸೆಯ ಪರಿಧಿಯೊಳಗೆ ಸಿಲುಕಿಕೊಳ್ಳುತ್ತಾರೆ. ಮಹಿಳೆ ತಾನು ಹುಟ್ಟಿದ ಕುಟುಂಬದಲ್ಲಿನ ತಾರತಮ್ಯ ಮನೋಭಾವನೆಯ ಕಾರಣವಾಗಿ ಹಲವು ಬಗೆಯ ಹಿಂಸೆಗಳಿಗೆ ಕಾರಣವಾದರೆ, ವಿವಾಹದ ನಂತರ ಗಂಡನ ಮನೆಯಲ್ಲಿನ ಕೌಟುಂಬಿಕ ಹಿಂಸೆಯ ಇನ್ನೊಂದು ಮುಖವನ್ನು ಕಾಣುತ್ತಾಳೆ. ದೈಹಿಕವಾಗಿ, ಮಾನಸಿಕವಾಗಿ ಅಪ್ರಾಪ್ತರಾದ ಹೆಣ್ಣುಮಕ್ಕಳು ಈ ಎರಡೂ ಬಗೆಗಳಲ್ಲಿಯೂ ಹೆಚ್ಚಿನ ಹಿಂಸೆಗೆ ಒಳಗಾಗುತ್ತಾರೆ. ಕೌಟುಂಬಿಕ ಜವಾಬ್ದಾರಿಗಳನ್ನು ಗ್ರಹಿಸಲಾರದ, ಗ್ರಹಿಸಿದರೂ ಅವುಗಳನ್ನು ಹೊರಲಾರದ ಬಾಲ್ಯವು ಗಂಡನ ಮನೆಯ ಹಿಂಸೆಗೆ ವಿಶೇಷವಾದ ಪರವಾನಗಿಯನ್ನು ಒದಗಿಸಿಕೊಡುತ್ತದೆ. ಗಂಡನಿಗೆ ಸರಿಸಮಾನವಾಗಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಸಹಕರಿಸದೇ ಇರುವಂತಹ ಅಪ್ರಾಪ್ತ ವಯಸ್ಸಿನ ಪತ್ನಿಯರು ಹಲವು ಹಿಂಸೆಗಳಿಗೆ ಗುರಿಯಾಗುತ್ತಾರೆ. ಕುಟುಂಬದಲ್ಲಿ ಹೆಣ್ಣುಮಗುವಿನ ಜನನವಾದರೂ ಕುಟುಂಬದ ಸದಸ್ಯರ ಅವಜ್ಞೆಗೆ ಒಳಗಾಗುತ್ತಾರೆ. ಗಂಡು ಮಗುವನ್ನು ಪಡೆಯಬೇಕೆಂಬ ಹೆಬ್ಬಯಕೆ ಇನ್ನು ಹೆಚ್ಚುತ್ತಲೇ ಇದೆ. ವಿವಾಹವಾದ ಹೆಣ್ಣುಮಕ್ಕಳಿಗೆ ಮಕ್ಕಳಾಗದಿದ್ದರೆ, ಹೆಣ್ಣುಮಗು ಹುಟ್ಟಿದರೆ ಇವುಗಳಿಗೆ ಸಂಬಂಧಿಸಿದಂತೆ ಜನಪದರಲ್ಲಿ ಹಲವು ಹಾಡುಗಳಿರುವುದು ಕಂಡುಬರುತ್ತದೆ. ಮುಖ್ಯವಾಗಿ ವಿವಾಹಿತ ಹೆಣ್ಣುಮಗುವಿಗೆ ಮಕ್ಕಳಾಗದಿದ್ದರೆ ಸಮಾಜದಿಂದ ಬಂಜೆ, ಗೊಡ್ಡಿ ಎಂದು ಅವಮಾನಿತಳಾಗುತ್ತಾಳೆ. ಇದರಿಂದ ಹೊರಬರಲು,

"ಬಾಲಕರಿಲ್ಲದ ಬಾಲಿದ್ಯಾತರ ಜನ್ಮ।
ಬಾಡೀಗಿ ಎತ್ತು ದುಡಿದಂಗ । ಬಾಳೆಲೆಯ ।
ಹಾಸ್ಯುಂಡು ಬೀಸಿ ಒಗೆದಂಗ ॥

ಕಂದನ ಕುಡು ಶಿವನೆ ಬಂಧನ ಬಿಡಲಾರೆ ।
ಹಂಗೀನ ಬಾನ ಉಣಲಾರೆ । ಮರ್ತ್ಯದಾಗ ।
ಬಂಜೆಂಬ ಶಬುದ ಹೊರಲಾರೆ" ॥ (ಹಲಸಂಗಿಯ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ ಇತರರು,೨೦೧೦,ಪು-೧೦೭)

ಹೀಗೆ ಹಾಡುಗಳ ಮೂಲಕ ತಮ್ಮ ನಿವೇದನೆಯನ್ನು ದೇವರಲ್ಲಿ ಮೊರೆಯಿಡುವಂತಹದ್ದನ್ನು ಜನಪದರಲ್ಲಿ ಕಾಣಬಹುದಾಗಿದೆ. ಅಂದರೆ ಮಕ್ಕಳಾಗದೇ

ಇರುವಂತಹ ಹೆಣ್ಣುಮಕ್ಕಳನ್ನು ಸಮಾಜ ಓಂಸಿಸುವ ಬಗೆಯನ್ನು ಮತ್ತು ಇವರ ಸ್ಥಿತಿ ಸಮಾಜದಲ್ಲಿ ಹೇಗಿರುತ್ತದೆ ಎಂಬುದನ್ನು ಸೂಚ್ಯವಾಗಿ ತಿಳಿಸುತ್ತದೆ. ವ್ಯವಸ್ಥೆಯಲ್ಲಿ ಹೆಣ್ಣಿಗಿಂತ ಗಂಡಿಗೇ ಹೆಚ್ಚಿನ ಪ್ರಾಶಸ್ತ್ಯ. ಈ ಬಗೆಯ ಧೋರಣೆಯನ್ನು ನಿರೂಪಿಸುವುದಕ್ಕೂ ಹಲವು ಹಾಡುಗಳು ಜನಪದರಲ್ಲಿವೆ.

"ಹೆಣ್ಣು ಹುಟ್ಟಿದ ಮನಿ ಹೆಗ್ಗಣ್ಣತ್ತೀದಾಂಗ ।
ಗಂಡಸಮಗ ಗಜಭೀಮ। ಹುಟ್ಟಿದರ।
ಚಿಲಕ ಚಿತ್ತರ ನಗತಾವ" ॥(ಹಲಸಂಗಿಯ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ ಇತರರು,೨೦೧೦,ಪು-೯೧)

ಎಂದು ಹೇಳುವ ಮೂಲಕ ಹೆಣ್ಣನ್ನು ಹೆಗ್ಗಣಕ್ಕೆ ಮತ್ತು ಗಂಡು ಮಗುವನ್ನು ಗಜಭೀಮನಿಗೆ ಹೋಲಿಸಿರುವುದು, ಗಂಡಿನ ಪ್ರಾಶಸ್ತ್ಯವನ್ನು ಎತ್ತಿತೋರಿಸುತ್ತದೆ. ಇದರ ಜೊತೆಗೆ ಹೆಣ್ಣುಮಗು ಹುಟ್ಟಿದರೆ ಹೆದರದೇ ಇರಬೇಕೆಂಬುದನ್ನೂ ಜನಪದರು ಹೇಳುತ್ತಾರೆ.

"ಹೆಣ್ಣು ಹುಟ್ಟ್ಯಾದಂತ ಹೇಳಿ ಖಳುವಲಿ ಬ್ಯಾಡ।
ಹೆಣ್ಣಂದರವರು ಹೆದರ್ಯಾರ । ಕಂದವ್ವ ।
ಹೆಣ್ಣಲ್ಲ ನಮಗ ರವಿಚಿನ್ನ" ॥(ಹಲಸಂಗಿಯ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ ಇತರರು, ೨೦೧೦, ಪು-೯೧)

ಎಂದು ಹೇಳುವ ಮೂಲಕ ಹೆಣ್ಣಿನ ಬಗೆಗಿನ ಅಭಿಪ್ರಾಯವನ್ನು ತೆರೆದಿಡುತ್ತಾರೆ. ಕುಟುಂಬದಲ್ಲಿ ಹೆಣ್ಣು ಮಗು ಜನಿಸಿತೆಂದರೆ ಆ ಕುಟುಂಬ ಚಿಂತಾಕ್ರಾಂತವಾಗಿಬಿಡುತ್ತದೆ. ಅದನ್ನು ನಿವಾರಿಸಲೆಂದೇ ಈ ಬಗೆಯ ಹಾಡುಗಳು ರಚಿತಗೊಂಡಿವೆ. ಅಂದರೆ ಹೆಣ್ಣು ಹುಟ್ಟಿತು ಎಂದು ಕಳವಳ ಪಡುವುದು ಬೇಡ. ಅವಳೇ ನಮಗೆ ಚಿನ್ನ ಇದ್ದಹಾಗೆ ಎಂಬ ಸಮಾಧಾನಕರವಾದ ಮಾತುಗಳೂ ಜನಪದರಿಂದ ಬಂದಿರುವುದನ್ನು ಕಾಣಬಹುದು. ಹೀಗೆ ಯಾವ ಯಾವ ಕಾರಣಕ್ಕಾಗಿ ಕೌಟುಂಬಿಕ ಹಿಂಸೆಗೆ ಒಳಗಾಗುತ್ತಿದ್ದಾರೆ ಮತ್ತು ಅವುಗಳಿಂದ ಹೊರಬರಲು ಹೆಣ್ಣುಮಕ್ಕಳು ಯಾವ ಬಗೆಯ ಮಾರ್ಗಗಳನ್ನು ಅನುಸರಿಸಿದ್ದಾರೆ ಎಂಬುದು ತಿಳಿದು ಬರುತ್ತದೆ. ಮುಖ್ಯವಾಗಿ ಬಾಲ್ಯ ವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳು ಕೌಟುಂಬಿಕ ಹಿಂಸೆಗೆ ಒಳಗಾಗುತ್ತಿದ್ದಾರೆ. "ಗಂಡನ ಮನೆಯವರು ತಮ್ಮ ಜಾತಿ ಹಾಗೂ ವರ್ಗದ ಯಜಮಾನಿಕೆಯ ನೆಲೆಗಳನ್ನು ಮುನ್ನೆಲೆಗೆ ತಂದು ಆಕೆ ಸೃಷ್ಟಿಸಿಕೊಂಡ ಬದುಕುವ ಅವಕಾಶಗಳನ್ನು ಕಿತ್ತುಕೊಳ್ಳುತ್ತಿದ್ದಾರೆ. ತವರಿನವರು ಆಕೆಯ ಬೆಂಬಲಕ್ಕಿಲ್ಲ. ಜಾತಿಯೊಳಗಿನ ಪಿತೃಪ್ರಧಾನತೆಯು ಮದುವೆಯಾದ ನಂತರ ಮಗಳ ತವರಿನ ಆಶ್ರಯವನ್ನು ಕಿತ್ತುಕೊಂಡಿದೆ. ಹಾಗೆಯೇ ಮಗಳಿಗೆ ಆಶ್ರಯ

ಕೊಡಕೂಡದು ಎನ್ನುವ ಬೆದರಿಕೆಯನ್ನು ಗಂಡನ ಮನೆಯವರು ಹಾಕಿದ್ದಾರೆ. ಹಾಗಾಗಿ ಪದೇ ಪದೇ ತವರಿಗೆ ಬರುವ ಮಗಳನ್ನು ತವರಿನವರು ಒಮ್ಮೊಮ್ಮೆ ನಿಸ್ಸಾಹಾಯಕರಾಗಿ, ಮತ್ತೊಮ್ಮೆ ಪೀಡೆಯಾಗಿ ನೋಡುತ್ತಾರೆ. ನಿಸ್ಸಾಹಾಯಕರಾಗಿ ನೋಡುವಾಗ ವರ್ಗ, ಪ್ರದೇಶ ಹಾಗೂ ಜಾತಿಯೊಳಗಿನ ಪಿತೃಪ್ರಧಾನತೆಯ ಬಿಗಿಬಂಧನಕ್ಕೆ ಒಳಗಾದವರಂತೆ ಕಂಡುಬರುತ್ತಾರೆ; ಪೀಡೆಯಾಗಿ ನೋಡುವಾಗ ಪ್ರದೇಶ ಹಾಗೂ ಜಾತಿಯೊಳಗಿನ ಪಿತೃಪ್ರಧಾನತೆಯ ವಕ್ತಾರರಂತೆ ಕಾಣುತ್ತಾರೆ. ಇನ್ನು ಗಂಡನ ಮನೆಯವರಿಗೆ ವೈವಾಹಿಕ ಚೌಕಟ್ಟು ವಿಶೇಷ ಅಧಿಕಾರವನ್ನು ನೀಡಿದೆ. ಇದರ ಜೊತೆಗೆ ಜಾತಿ, ವರ್ಗ ಹಾಗೂ ಪ್ರದೇಶದೊಳಗಿನ ಪಿತೃಪ್ರಧಾನತೆಯ ಬೆಂಬಲವು ಇವರಿಗಿದೆ. ಈ ಎಲ್ಲಾ ಸಂಗತಿಗಳು ಇಂತಹ ಮಹಿಳೆಯರ ಮೇಲಿನ ಹಿಂಸೆಯನ್ನು ಮತ್ತಷ್ಟು ಕ್ರೂರಗೊಳಿಸುತ್ತದೆ. ಸೊಸೆಯನ್ನು ಮನೆಯ ಸದಸ್ಯಳಾಗಿ ನೋಡದೆ 'ಅವಳು ನಮ್ಮ ಜೀತದಾಳು' ಎಂದೇ ಪರಿಗಣಿಸುವ ಗಂಡನ ಮನೆಯ ಯಜಮಾನಿಕೆಯ ದೃಷ್ಟಿಕೋನ; 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎನ್ನುವ ತವರಿನ ನಿರ್ಧಯ ಧೋರಣೆ ಮೇಲ್ವರ್ಗದ ಕುಟುಂಬದ ಮಹಿಳೆಯರನ್ನು ಅತ್ಯಂತ ನಿಸ್ಸಾಹಯಕರನ್ನಾಗಿಸುತ್ತವೆ; ಅವರನ್ನು ಪಾತಾಳಕ್ಕೆ ತಳ್ಳುತ್ತವೆ. ಹೀಗಾಗಿಯೇ ಮೇಲ್ಜಾತಿ ಹಾಗೂ ಮೇಲ್ವರ್ಗಕ್ಕೆ ಸೇರಿದ ವಿವಾಹಿತ ಮಹಿಳೆಯರ ಮೇಲಿನ ಕೌಟುಂಬಿಕ ದೌರ್ಜನ್ಯವು ವಿವರಣೆಗೆ ಸಿಕ್ಕಲಾರದಷ್ಟು, ವಿಶ್ಲೇಷಣೆಗೆ ಒಳಪಡಲಾರದಷ್ಟು ಸಂಕೀರ್ಣವಾಗಿರುತ್ತದೆ"(ಶೈಲಜ ಹಿರೇಮಠ, ಮೇ ೨೦೧೬). ಬಾಲ್ಯ ವಿವಾಹಕ್ಕೆ ಒಳಗಾದ ಮಹಿಳೆಯರು ಈ ಬಗೆಯ ಎಲ್ಲ ಹಿಂಸೆಗಳನ್ನು ಅನುಭವಿಸುತ್ತಲೇ ಇದ್ದಾರೆ. ಚಿಕ್ಕ ವಯಸ್ಸಿನಲ್ಲಿ ವಿವಾಹಕ್ಕೆ ಸಿಲುಕಿದ ಹೆಣ್ಣುಮಕ್ಕಳು ಅನುಭವಿಸುವ ಹಿಂಸೆ ತುಂಬಾ ತೀವ್ರವಾಗಿರುತ್ತದೆ. ಅದರಿಂದ ಹೊರಬರಲಾಗದೇ ನರಳುತ್ತಿರುತ್ತಾರೆ. ಇದು ಪುರುಷಪ್ರಧಾನ ವ್ಯವಸ್ಥೆಗೆ ತಿಳಿದರೂ ಅದು ಅವರ ಕರ್ತವ್ಯವೆಂದೇ ಪರಿಭಾವಿಸುತ್ತದೆ. ಹಾಗಾಗಿಯೇ ಬಾಲ್ಯ ವಿವಾಹಕ್ಕೆ ಒಳಗಾದ ಎಷ್ಟೋ ಹೆಣ್ಣು ಮಕ್ಕಳು ಗಂಡನ ಮನೆಯಲ್ಲಿನ ಹಿಂಸೆಯನ್ನು ತಾಳಲಾರದೆ ತವರು ಮನೆಗೆ ಬಂದಿರುವವರು ಕಾಣಸಿಗುತ್ತಾರೆ. ಹಾಗೆಯೇ ಕೆಲವು ಸಂದರ್ಭದಲ್ಲಿ ಗಂಡನ ಮನೆಯನ್ನು ಬಿಟ್ಟು ಬಂದ ಹೆಣ್ಣುಮಕ್ಕಳನ್ನು ತವರು ಮನೆಯವರು ಸೇರಿಸಿಕೊಳ್ಳದೇ ಇದ್ದಾಗ ಆತ್ಮಹತ್ಯೆಗೆ ಯತ್ನಿಸಿರುವವರೂ ಇದ್ದಾರೆ. ತವರಿನ ಮತ್ತು ಗಂಡನ ಮನೆಯವರು ಹೆಣ್ಣನ್ನು ಹೊರಗಿನವರೆಂದೇ ಭಾವಿಸುತ್ತಾರೆ. ಆಕೆಯನ್ನು ಎಂದಿಗೂ ಒಬ್ಬ ವ್ಯಕ್ತಿಯಂತೆ ಕಾಣುವುದೇ ಇಲ್ಲ. ಹೆಣ್ಣುಮಕ್ಕಳು ಕುಟುಂಬದಲ್ಲಿನ ಹಿಂಸೆಯಿಂದ ಹೊರ ಬರಲು ಕಾನೂನಾತ್ಮಕ ಮಾರ್ಗಗಳಿವೆಯಾದರೂ ಅವುಗಳನ್ನು ಉಪಯೋಗಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಬಾಲ್ಯ ವಿವಾಹವೇ ಕಾನೂನು ಬಾಹಿರವಾಗಿರುವುದರಿಂದ ವಿವಾಹವನ್ನು ಮಾಡಿದ ಮತ್ತು ವಿವಾಹಕ್ಕೆ ಒಳಗಾದ ಎಲ್ಲರೂ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ.

೨. **ಅಪ್ರಾಪ್ತ ವಯಸ್ಸಿನಲ್ಲಿ ಗರ್ಭಿಣಿಯಾಗುವುದರಿಂದ ಗರ್ಭಕೋಶದ ತೊಂದರೆ ಮತ್ತು ಹೆರಿಗೆ ಸಮಯದಲ್ಲಿ ಅಕಾಲಿಕ ಮರಣಕ್ಕೆ ತುತ್ತಾಗುತ್ತಾರೆ**

ಅಪ್ರಾಪ್ತ ವಯಸ್ಸಿನಲ್ಲಿ ವಿವಾಹವಾಗುವುದರಿಂದಾಗಿ ಹೆಣ್ಣು ಮಕ್ಕಳು ಅಕಾಲಿಕ ಮರಣಕ್ಕೆ ತುತ್ತಾಗುತ್ತಿದ್ದಾರೆ. ಮುಖ್ಯವಾಗಿ ಗರ್ಭಕೋಶದ ತೊಂದರೆಗಳು, ಪ್ರಸವ ಸಂದರ್ಭದಲ್ಲಿನ ಸಮಸ್ಯೆಗಳ ಕಾರಣವಾಗಿ ಹಲವು ಹೆಣ್ಣುಮಕ್ಕಳು ಸಾವನ್ನಪ್ಪಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿದೆ. ಕಮಲಾಪುರ ಗ್ರಾಮದಲ್ಲಿನ ನಾಗೇಂದ್ರಪ್ಪ ಮತ್ತು ಶಾರದಮ್ಮ ದಂಪತಿಗಳ ಮಗಳಾದ ಆಶಾ ಎಂಬುವವರಿಗೆ ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡಿದ್ದರಿಂದಾಗಿ ಆಶಾಳ ಹೆರಿಗೆ ಸಮಯದಲ್ಲಿ ಬಹಳಷ್ಟು ನೋವನ್ನು ಅನುಭವಿಸಿ ಸಾವನ್ನಪ್ಪಿರುವ ಸಂಗತಿ ತಿಳಿದು ಅವರ ಮನೆಗೆ ಭೇಟಿ ಕೊಟ್ಟಾಗ ಆಶಾಳ ತಾಯಿಯಾದ ಶಾರದಮ್ಮನವರು ಹೇಳಿದ್ದು ಹೀಗೆ "ನಮಿಗೆ ಇರೋದು ಇಬ್ರು ಮಕ್ಳು. ಅದ್ರಾಗ ಒಂದು ಗಂಡು, ಒಂದು ಹೆಣ್ಣು. ಆಶಾಳೇ ಸಣ್ಣ ಮಗ್ಳು. ಮನ್ಯಾಗ ನಾನು ನನ ಗಂಡ ಮತ್ತೆ ಮಗ ಎಲ್ಲಾರೂ ದುಡಿಯಾಕ ಹೋಗ್ತೀವಿ. ಎಲ್ಲಾರೂ ದುಡಿದ್ರೇನೇ ಮನ್ಯಾಗ ಸಂಸಾರ ನಡೀತೈತಿ. ಇಲ್ಲಾಂದ್ರೆ ಬಾಳ ಕಷ್ಟ ಆಗತೈತಿ. ಇರೋದು ಒಬ್ಬ ಮಗ್ಳಿಗಿ ಮದುವಿ ಬ್ಯಾರೇ ಮಾಡ್ಬೇಕು ಅದಕ್ಕ ರೊಕ್ಕ ಜೋಡಿಸ್ಬೇಕು. ಅವ್ಳ ಮದುವೀನೇ ನಮಿಗೆ ಬಾಳ ಚಿಂತಿ ಆಗಿತ್ತು. ಆದ್ರೆ ನಮ್ ಅಣ್ಣನ ಮಕ್ಳು ಮಗಳ್ನ ಮದುವಿ ಆಗಾಕ ರೆಡಿ ಇದ್ರು. ಹಂಗಾಗಿ ಅಣ್ಣಂತಾಗ ಮಾತಾಡಿ ಮದುವಿ ಮಾಡಿಬಿಟ್ವಿ. ಮದುವಿ ಆಗಿ ಸ್ವಲ್ಪು ತಿಂಗ್ಳಿಗೇ ಹೊಟ್ಟೀಲಿ ಐದಾಳ ಅಂತ ಗೊತ್ತಾತು. ಐದ್ನೇ ತಿಂಗ್ಳಿಗಿ ಮನಿಗಿ ಕರ್ಕಂಡು ಬಂದ್ವಿ. ಇಲ್ಲಿ ಚೆನ್ನಾಗೇ ಇದ್ಲು. ಅಕಿದು ಮನ್ಯಾಗೇ ಹೆರ್ಗಿ ಮಾಡಿಸ್ಬೇಕಂತ ಅನ್ಕಂಡಿದ್ವಿ. ಹಂಗಾಗಿ ಮಗ್ಳಿಗಿ ಹೆರಿಗಿ ನೋವು ಕಾಣಿಸಿಕೆಂಡುವು ಅಂತ ಗೊತ್ತಾತು. ಇಲ್ಲೇ ನಮ್ ಮನಿ ಪಕ್ಕದಾಗ ಹೆರಿಗಿ ಮಾಡ್ಸೋ ಅಜ್ಜಿ ಐದಾಳ. ಅಕಿನ್ನ ಕರ್ಕಂಡು ಬಂದ್ವಿ. ಮಗ್ಳು ಬಾಳ ಹೊತ್ತು ಒದ್ದಾಡಿದ್ಲು. ಕೊನಿಗಿ ಮಗುದು ಕಾಲು ಹೊರಗ ಬಂತು. ಅದಕ್ಕ ಅಜ್ಜಿ ಗಾಬ್ರಿ ಆಗಿ ಇದು ಇಲ್ಲಿ ಹೆರ್ಗಿ ಆಗಂಗಿಲ್ಲ. ಆಸ್ಪತ್ರಿಗಿ ಕರ್ಕಂಡು ಹೋಗ್ರಿ ಅಂತ ಹೇಳಿದ್ಲು. ನಮಿಗಿ ಬಾಳ ಭಯ ಆತು. ಮಗುದು ಅರ್ದ ಕಾಲು ಹೊರ್ಗ ಬಂದಿದ್ನ ಹಂಗೆ ಒಳ್ಗ ದಬ್ಬಿಬಿಟ್ಟಾರ. ಅದಕ್ಕ ಬಾಳ ನೋವು ಪಟ್ಟುಬಿಟ್ಲು ನನ್ ಮಗ್ಳು. ಅಕಿ ಅರ್ಸಾದು ಕೇಳಿದ್ರೆ ಜೀವ ಒಡ್ದೋದಂಗಾಗಿತ್ತು. ಮತ್ತೆ ಬಾಳ ರಕ್ತ ಹೋಗ್ತಿತ್ತು. ಹಂಗೆ ಡಾಕ್ಟ್ರತಾಗ ಕರ್ಕಂಡು ಹೋದ್ವಿ. ಅಲ್ಲಿಗಿ ಹೋಗಿ ಅಡ್ಮಿಟ್ ಮಾಡಿದ್ವಿ. ಆದ್ರೆ ಮಗ್ಳು ಬದುಕ್ಲಿಲ್ಲ. ಹೊಟ್ಯಾಗಿನ ಕೂಸು ಸತೆ ಇಲ್ದಂಗಾತು. ನಮ್ ಕಯ್ಯಾರೆ ಮಗಳ್ನ ಕಳ್ಕಂಡು ಬಿಟ್ವಿ" ಎಂದು ಹೇಳುತ್ತಾ ಅಳತೊಡಗಿದರು.

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಮಸಬ ಹಂಚಿನಾಳ ಗ್ರಾಮದ ಚಂದ್ರಪ್ಪ ಮತ್ತು ರಂಗಮ್ಮ ದಂಪತಿಗಳ ಕುಟುಂಬ ತುಂಬಾ ಬಡತನದ ಕುಟುಂಬವಾಗಿದೆ. ಇವರು ತಮಗೆ ಇರುವ ಒಬ್ಬಳೇ ಮಗಳಾದ ಮಲ್ಲಮ್ಮಳಿಗೆ ಬಹು ಬೇಗನೇ ವಿವಾಹ ಮಾಡಿದ್ದಾರೆ. ಆದರೆ ಇದು ಬಾಲ್ಯವಿವಾಹ ಎಂಬುದು ತಿಳಿದು ಆ ಊರಿನ ಸಾಮಾಜಿಕ ಕಾರ್ಯಕರ್ತನಾದ ಮತ್ತು ಗ್ರಾಮಪಂಚಾಯತಿ ಸದಸ್ಯರೂ ಆದ ನಿಂಗಪ್ಪ ಎಂಬುವವರು ಇದು ತಪ್ಪು. ಒಂದುವೇಳೆ

ವಿವಾಹ ಮಾಡಿದರೆ ಕಾನೂನಿನ ಪ್ರಕಾರ ಶಿಕ್ಷೆಗೆ ಒಳಪಡಿಸಲಾಗುತ್ತದೆ. ಹಾಗೆಯೇ ಮದುವಿ ಆದ್ ಮ್ಯಾಲೆ ನಿಮ್ಮ ಮಗಳು ತುಂಬಾ ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ ಎಂದು ತಿಳಿ ಹೇಳಿದ್ದಾರೆ. ಆದರೆ ಇದನ್ನು ಲೆಕ್ಕಿಸದೇ ಚಂದ್ರಪ್ಪನವರು ತಾವು ನಿಶ್ಚಯಿಸಿದ ದಿನಾಂಕದಂದೇ ಯಾರಿಗೂ ತಿಳಿಯದಂತೆ ಬೆಳಿಗ್ಗೆ ಸುಮಾರು ಐದು ಗಂಟೆಗೆ ಗುಡಿಯಲ್ಲಿ ವಿವಾಹ ಮಾಡಿ ಮುಗಿಸಿದ್ದಾರೆ. ಮದುವೆಯಾದ ನಂತರ ಮಲ್ಲಮ್ಮಳನ್ನು ಹಾಗೆಯೇ ಗಂಡನ ಮನೆಗೆ ಕಳುಹಿಸಿದ್ದಾರೆ. ಇದು ಊರಿನ ಜನಕ್ಕೆ ಗೊತ್ತಾಗಿದ್ದು, ಮಲ್ಲಮ್ಮ ಹೆರಿಗೆಗೆಂದು ತನ್ನ ತವರು ಮನೆಗೆ ಬಂದಾಗ. ಅಲ್ಲಿಯವರೆಗೆ ಯಾರಿಗೂ ತಿಳಿಯದಂತೆ ಗೌಪ್ಯವಾಗಿಟ್ಟದ್ದರು. ಈ ವಿಷಯ ಊರಿನ ಸಾಮಾಜಿಕ ಕಾರ್ಯಕರ್ತರಾದ ನಿಂಗಪ್ಪನವರಿಗೆ ತಿಳಿಯಿತಾದರೂ ಅವರು ಏನೂ ಮಾಡದ ಪರಿಸ್ಥಿತಿಯಲ್ಲಿದ್ದರು. ಏಕೆಂದರೆ ಅವರಿಗೆ ಶಿಕ್ಷೆ ಕೊಡಿಸಬೇಕೆಂದರೆ ಅವರು ತುಂಬಾ ಬಡವರು. ಹಾಗಾಗಿ ಸುಮ್ಮನಾಗಿದ್ದಾರೆ. ಆದರೆ ಹೆರಿಗೆಯ ಸಮಯದಲ್ಲಿ ಮಲ್ಲಮ್ಮ ಅನುಭವಿಸಿದ ಯಾತನೆ ಮತ್ತು ಆಕೆಯ ಈಗಿನ ಪರಿಸ್ಥಿತಿಯನ್ನು ನೋಡಿದರೇ ಎಂಥವರಿಗೂ ಭಯ ಹುಟ್ಟಿಸುತ್ತದೆ ಮತ್ತು ಮನಃ ಕರಗುತ್ತದೆ. ಯಾಕೆಂದರೆ ಮಲ್ಲಮ್ಮ ಈಗ ಜೀವಂತ ಶವವಾಗಿದ್ದಾಳೆ. ಆಕೆ ಮಲಗಿದ್ದಲ್ಲಿಯೇ ಮಲಗಿರುತ್ತಾಳೆ, ಶೌಚ ಕಾರ್ಯಗಳೆಲ್ಲವೂ ಅಲ್ಲಿಯೇ ನಡೆಯುತ್ತವೆ. ತಾನು ಏನೇ ಊಟ ಮಾಡಿದರೂ ಸಹ ಅದು ಯಾವುದೇ ಪಚನ ಕ್ರಿಯೆಗೆ ಒಳಗಾಗದೇ, ನೇರವಾಗಿ ಮಲ ಹೋಗುವ ಸ್ಥಳದಿಂದ ಬಂದುಬಿಡುತ್ತದೆ. ಹಾಗಾಗಿ ಅವಳಿಗೆ ಬರೀ ಎಳೆನೀರು ಆಹಾರವಾಗಿದೆ. ಇದು ಹೇಗೆ ಸಂಭವಿಸಿತು ಎಂದು ಮಲ್ಲಮ್ಮಳ ತಾಯಿಯಾದ ರಂಗಮ್ಮನನ್ನು ಕೇಳಿದರೆ ಅವರು ಏನೊಂದನ್ನೂ ಹೇಳಲಿಲ್ಲ. ಹಾಗೆಯೇ ಚಂದ್ರಪ್ಪನೂ ಏನೂ ಮಾತನಾಡದೇ ಸುಮ್ಮನಾದರು. ಇದರ ಕುರಿತಂತೆ ನಿಂಗಪ್ಪನವರು ಸಂಪೂರ್ಣವಾದ ಮಾಹಿತಿಯನ್ನು ನೀಡಿದರು. ಅವರು ಹೇಳುವಂತೆ "ಮಲ್ಲಮ್ಮನ ಹೆರಿಗಿ ಮಾಡಿಸ್ಬೇಕಂತ ಯಲಬುರ್ಗಕ್ಕ ಕರ್ಕಂಡು ಹೋಗ್ಯಾರ. ಅಲ್ಲಿ ಆಸ್ಪತ್ರಿಗಿ ಸೇರ್‍ಸ್ಯಾರ. ಇದು ನಾರ್ಮಲ್ ಹೆರಿಗಿ ಆಗಲ್ಲ ಆಪರೇಷನ್ ಮಾಡೇ ಮಗೂನ ಹೊರ್‍ಗ ತೆಗಿಬೇಕು ಅನ್ನೋದು ಡಾಕ್ಟ್ರಗಿ ಗೊತ್ತಾಗೇತಿ. ಆದ್ರೆ ಅದನ್ನ ಚಂದ್ರಪ್ಪಗ ಹೇಳಿಲ್ಲ. ಯಾಕಂದ್ರೆ ಅವ್ರು ಬಾಳ ಬಡವ್ರು ಐದಾರ ಆಪರೇಷನ್ ಮಾಡ್ಸುವಷ್ಟು ದುಡ್ಡು ಅವ್ರತಾಗ ಇಲ್ಲ ಅನ್ನೋದು ಗೊತ್ತಾಗೇತಿ. ಹಂಗಾಗೇ ನಾರ್ಮಲ್ ಡಿಲೆವರಿ ಮಾಡ್ಸಾನು ಅಂತ ಬಾಳ ಕಷ್ಟ ಪಟ್ಟಾರ. ಹೆರಿಗಿ ಟೈಮ್‌ದಾಗ ಮಲ್ಲಮ್ಮ ಒದರಾಡಿದ್ದು ಕೇಳಿದ್ರೆ ನಮ್ ಜೀವಾನೇ ಝುಲ್ ಅಂತಿತ್ತು. ನೋವಿಗೆ ಅಷ್ಟೊಂದು ಕೂಗಾಕತ್ತಿದ್ಲು. ಡಾಕ್ಟ್ರು ಪ್ರೆಜರ್ ಹಾಕಿ ಮಗುನಾ ಹೊರ್‍ಗ ತೆಗ್ದು ಬಿಟ್ಟಾನಾ. ಮಗೂನ ಹೆಂಗ ಹೊರ್‍ಗ ತಗ್ದಾನೋ ಹಂಗೇ ಅಕಿ ಹೊಟ್ಯಾಗಿಂದ ಕರ್‍ಳು ಸತೆ ಕಡೀಗಿ ಬಂದು ಬಿಟ್ಟಾವ. ರಕ್ತ ಬ್ಯಾರೇ ಬಾಳ ಹೋಗಿಬಿಟ್ಟಿತ್ತು. ಈ ವಿಚಾರ ತಿಳ್ದು ಡಾಕ್ಟ್ರಿಗಿ ಹೊಡಿಯಾಕ ಹೋಗಿದ್ವಿ. ಅಕೀನ ಹುಬ್ಬಳ್ಳಿಗಿ ಕರ್‍ಕಂಡು ಹೋಗಿ ತೋರ್‍ಸರೀ ಅದಕ್ಕ ಏನ್ ಖರ್ಚು ಆಗತೈತೋ ಅದನ್ನ ಕೊಡ್ತೀನಿ ಅಂತ ಹೇಳಿದ್ರು. ಹಂಗೇ ಅಕಿನ್ನಾ ಹುಬ್ಳಿಗಿ ಕರ್‍ಕಂಡು ಹೋದ್ವಿ ಅಲ್ಲಿ ಟ್ರೀಟ್ ಮೆಂಟ್ ನಡೀತು. ಏನೋ ಮಾಡಿ ಅಕಿನ್ನ ಉಳಿಸಿದ್ರು. ಈಗ ನೋಡ್ರಿ ಹಿಂಗ ಐದಾಳ ಎಂದರು. ನಾನು ಮೊದ್ಲೇ ಹೇಳಿದ್ದೆ ಜಲ್ದಿ ಮದುವಿ ಮಾಡ್ಬೇಡ್ರಿ ಅಂತ ಆದ್ರೂ ನಮ್

ಮಾತನ್ನ ಮೀರಿ ಮದುವಿ ಮಾಡಿದ್ರು. ಈಗ ಮಗ್ಳು ಜೀವಂತ ಹೆಣ ಆಗಿ ಬಿದ್ದಾಳ. ಅಕಿಗಿ ಹೆಣ್ಣಗು ಆಗೇತಿ. ಅದು ಚೆನ್ನಾಗೇ ಐತಿ. ಆದ್ರೆ ಅದಕ್ಕ ಕುಡಿಯಾಕ ತಾಯಿ ಹಾಲು ಇಲ್ಲ. ಹಂಗೆ ಸಾಕಾಕತ್ಯಾರ. ಮಲ್ಲಮ್ಮಗ ಹಿಂಗ ಆಗೇತಿ ಅಂತ ಗೊತ್ತಾಗಿ ಅಕಿ ಗಂಡ ಒಂದ್ಸಲಾನೂ ನೋಡಾಕ ಬಂದಿಲ್ಲ. ಮಲ್ಲಮ್ಮ ಹಾಸಿಗಿ ಹಿಡ್ಬು ಇಲ್ಲಿಗಿ ಒಂದು ವರ್ಸ ಮ್ಯಾಲಾತು ಒಂದ್ಸಲಾನೂ ಬಂದಿಲ್ಲ. ಅವ್ನು ಬ್ಯಾರೇ ಮದುವಿ ಆಗ್ಯಾನ ಅಂತ ಸುದ್ದಿ. ಏನ್ ಮಾಡಾದು ಅಕಿ ಹಣೇಬರ. ಮೊದ್ಲು ಅಕಿ ಇನ್ನ ಸಣ್ಣ ಹುಡುಗಿ ಇದ್ದಾಗ್ಲೇ ಮದುವಿ ಮಾಡಿದ್ದು ಮೊದಲ್ನೇ ತಪ್ಪು. ಆಮ್ಯಾಲೆ ಡಾಕ್ಟ್ರು ಮಾಡಿದ್ ಎಡವಟ್ಟಿನಿಂದ ಮಲ್ಲಮ್ಮ ಹಿಂಗ ಬಿದ್ದಾಳ" ಎಂದು ಹೇಳಿದರು.

ಮೇಲಿನ ಎರಡೂ ಪ್ರಕರಣಗಳಲ್ಲಿ ಬಾಲ್ಯ ವಿವಾಹದ ಕಾರಣದಿಂದ ಆಶಾಳು ತನ್ನ ಪ್ರಾಣವನ್ನು ಕಳೆದುಕೊಂಡಿದ್ದರೆ, ಮಲ್ಲಮ್ಮ ಜೀವಂತ ಶವವಾಗಿರುವುದು ತಿಳಿದು ಬರುತ್ತದೆ. ವ್ಯವಸ್ಥೆಯಲ್ಲಿ ವಿವಾಹ ಪದ್ದತಿಯು ಎಲ್ಲರಿಗೂ ಕಡ್ಡಾಯವಾಗಿರುವುದರಿಂದ ಕುಟುಂಬದಲ್ಲಿನ ಹಿರಿಯರ ಮುಖ್ಯ ಜವಾಬ್ದಾರಿ ತಮ್ಮ ಮಕ್ಕಳ ವಿವಾಹವನ್ನು ಮಾಡುವುದೇ ಆಗಿರುತ್ತದೆ. ಹೆಣ್ಣು ಮಕ್ಕಳು ಇದ್ದರಂತೂ ಆ ತಂದೆ ತಾಯಂದಿರ ಆತಂಕ ಹೇಳತೀರದು. ಬಹು ಬೇಗನೇ ಆ ಹೆಣ್ಣುಮಗುವಿನ ಮದುವೆಯನ್ನು ಮಾಡಿಬಿಡಬೇಕು ಎಂಬ ಆತುರದಲ್ಲಿರುತ್ತಾರೆ. ತಮ್ಮ ಮಗಳು ಯಾವಾಗ ಋತುಮತಿಯಾಗುತ್ತಾಳೋ ಅಲ್ಲಿಂದಲೇ ವಿವಾಹ ಮಾಡಲು ಗಂಡನ್ನು ಹುಡುಕಲು ಶುರು ಮಾಡುತ್ತಾರೆ. ಹೀಗೆ ಈ ಜವಾಬ್ದಾರಿಯಿಂದ ಮೊದಲು ಪಾರಾಗಬೇಕು ಎಂಬ ಆತಂಕದಿಂದಲೇ ಬಹು ಬೇಗನೇ ವಿವಾಹ ಮಾಡುತ್ತಾರೆ. ಹೀಗೆ ಬಹು ಬೇಗನೇ ವಿವಾಹ ಬಂಧನಕ್ಕೆ ಸಿಲುಕಿದಂತಹ ಆಶಾ ತನ್ನ ಹೆರಿಗೆ ಸಮಯದಲ್ಲಿ ಅನುಭವಿಸಿದ ನೋವು ಮತ್ತು ಆ ನೋವಿನ ಕಾರಣವಾಗಿ ಸಾವನ್ನಪ್ಪಿದ ಘಟನೆ ಮನಃ ಕಲಕುವಂತಿದೆ. ಜೊತೆಗೆ ಗ್ರಾಮೀಣ ಭಾಗಗಳಲ್ಲಿನ ಜನರಲ್ಲಿ ಹೆಣ್ಣುಮಕ್ಕಳ ಹೆರಿಗೆ ಮನೆಯಲ್ಲಿಯೇ ಮಾಡಿಸಬೇಕು ಎಂಬ ಆಸೆ ಬಹಳಷ್ಟಿರುತ್ತದೆ. ಈ ಆಸೆಯ ಕಾರಣಕ್ಕಾಗಿಯೇ ಆಸ್ಪತ್ರೆಗಳು ಪಕ್ಕದಲ್ಲಿಯೇ ಇದ್ದರೂ, ಅಲ್ಲಿಗೆ ಕರೆದುಕೊಂಡು ಹೋಗುವುದಿಲ್ಲ. ಒಂದುವೇಳೆ ಅವರ ಕೈ ಮೀರಿದರೆ ಆಸ್ಪತ್ರೆಯ ಕದ ತಟ್ಟುತ್ತಾರೆ. ಅಷ್ಟೊತ್ತಿಗಾಗಲೇ ಆ ಗರ್ಭಿಣಿಯು ಸಾವಿನಂಚಿನಲ್ಲಿರುತ್ತಾಳೆ. ಇದು ಆಶಾಳ ವಿಷಯದಲ್ಲಿ ವೇದ್ಯವಾಗುತ್ತದೆ. ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಹೆರಿಗೆ ಮಾಡಿಸುವ ಸೂಲಗಿತ್ತಿಯರು ಇರುತ್ತಾರೆ. ಅವರು ಹೆರಿಗೆ ಮಾಡಿಸುವುದರಲ್ಲಿ ಪ್ರವೀಣರಾಗಿರುತ್ತಾರೆ. ಆದರೆ ಹೆರಿಗೆಯ ಸಮಯದಲ್ಲಿ ಗರ್ಭಿಣಿ ಹೆಣ್ಣುಮಗುವಿಗೆ ಏನಾದರೂ ಆದರೆ ಅದನ್ನು ಹೇಗೆ ಸರಿ ಪಡಿಸಬೇಕು ಎಂಬುದು ತಿಳಿದಿರುವುದಿಲ್ಲ. ಅವರು ವೈಜ್ಞಾನಿಕವಾಗಿ ಏನನ್ನೂ ತಿಳಿದುಕೊಂಡಿರುವುದಿಲ್ಲ. ಹಾಗಾಗಿಯೇ ಕೆಲವೊಂದು ಸಂದರ್ಭದಲ್ಲಿ ಹೆಣ್ಣುಮಕ್ಕಳು ಸಾವಿನಂಚಿಗೆ ದೂಡಲ್ಪಡುತ್ತಾರೆ. ಮುಖ್ಯವಾಗಿ ಆಶಾಳ ವಿಷಯದಲ್ಲಿ ಆಗಿರುವುದು ಹಾಗೆಯೇ. ಹೆರಿಗೆಯ ಸಂದರ್ಭದಲ್ಲಿ ಮಗುವಿನ ತಲೆ ಮೊದಲು ಬರದೇ ಕಾಲುಗಳು ಹೊರ ಬಂದುದರ ಕಾರಣವಾಗಿ ಆತಂಕಗೊಂಡ ಹೆರಿಗೆ ಮಾಡಿಸುವ ಅಜ್ಜಿ, ಹೊರಗೆ ಬಂದಂತಹ ಮಗುವಿನ ಕಾಲುಗಳನ್ನು

ಹಾಗೆಯೇ ತಾಯಿಯ ಹೊಟ್ಟೆಯೊಳಗೆ ದಬ್ಬಿದ್ದಾರೆ. ಇದು ತುಂಬಾ ಅಪಾಯಕಾರ ಎಂಬುದು ಅವರಿಗೆ ತಿಳಿದಿಲ್ಲ. ಹಾಗಾಗಿಯೇ ಅದರಿಂದ ಬಹಳಷ್ಟು ರಕ್ತಸ್ರಾವವಾಗಿದೆ. ನಂತರದಲ್ಲಿ ಆಸ್ಪತ್ರೆಗೆ ಕರೆದುಕೊಂಡು ಹೋದರೂ ಅಲ್ಲಿ ಆಶಾ ಬದುಕುಳಿಯಲಿಲ್ಲ. ಜೊತೆಗೆ ಮಗುವೂ ಸಾವನ್ನಪ್ಪಿದೆ. ಹೀಗೆ ಕುಟುಂಬದಲ್ಲಿನ ಹಿರಿಯರು ತಮ್ಮ ಹೆಣ್ಣು ಮಕ್ಕಳಿಗೆ ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡಿಬಿಡುತ್ತಾರೆ. ಆದರೆ ವಿವಾಹದ ನಂತರ ಆ ಹೆಣ್ಣುಮಗು ಎದುರಿಸುವ ನೋವುಗಳು ಅಷ್ಟಿಷ್ಟಲ್ಲ. ಪ್ರಾಣಕ್ಕೆ ಅಪಾಯವನ್ನು ತಂದೊಡ್ಡುವಂತಹ ಪರಿಸ್ಥಿತಿಗಳು ಎದುರಾಗುತ್ತವೆ. ಮತ್ತು ಪ್ರಾಣವನ್ನೂ ಕಳೆದುಕೊಳ್ಳಬೇಕಾಗುತ್ತದೆ. ಇದಕ್ಕೆ ಆಶಾಳ ಪ್ರಕರಣ ಉದಾಹರಣೆಯಾಗಿ ನಿಲ್ಲುತ್ತದೆ. ಹಾಗೆಯೇ ಮಲ್ಲಮ್ಮಳೂ ಅದೇ ರೀತಿಯಲ್ಲಿ ಸಾವು ಬದುಕಿನ ನಡುವೆ ಇಂದಿಗೂ ಹೋರಾಡುತ್ತಿದ್ದಾಳೆ. ಮಕ್ಕಳಂತೆ ಆಟ ಆಡಿಕೊಂಡು ಇರಬೇಕಾದ ವಯಸ್ಸಿನಲ್ಲಿ, ತಂದೆ ತಾಯಿಯರ ಮಾತಿಗೆ ಮಣಿದು ಬಾಲ್ಯ ವಿವಾಹಕ್ಕೆ ಒಳಗಾಗಿ ಈಗ ಜೀವಂತ ಶವವಾಗಿರುವುದು ಕಂಡುಬರುತ್ತದೆ. ಈ ಎರಡೂ ಪ್ರಕರಣಗಳಲ್ಲಿನ ಆಶಾ ಮತ್ತು ಮಲ್ಲಮ್ಮನವರ ತಂದೆ ತಾಯಂದಿರು ಇಂದಿಗೂ ಪಶ್ಚಾತ್ತಾಪ ಪಡುತ್ತಿದ್ದಾರೆ. ಒಂದು ಕುಟುಂಬ ತಾವು ಮಾಡಿದ ತಪ್ಪಿಗಾಗಿ ತಮ್ಮ ಮಗಳನ್ನೇ ಕಳೆದುಕೊಂಡು ಪಶ್ಚಾತ್ತಾಪ ಪಡುತ್ತಿದ್ದರೆ, ಇನ್ನೊಂದು ಕುಟುಂಬ ತಮ್ಮ ಮಗಳ ಪರಿಸ್ಥಿತಿಯನ್ನು ದಿನವೂ ನೋಡುತ್ತಾ, ಕಣ್ಣೀರಿಡುತ್ತಿದ್ದಾರೆ. ಮಲ್ಲಮ್ಮಳ ಪ್ರಕರಣದಲ್ಲಿ ತಂದೆ ತಾಯಿ ಎಷ್ಟು ಕಾರಣವೋ ವೈದ್ಯರೂ ಅಷ್ಟೇ ಕಾರಣರಾಗಿದ್ದಾರೆ. ಮುಖ್ಯವಾಗಿ ಮಲ್ಲಮ್ಮಳ ಕುಟುಂಬದ ಬಡತನದ ಕಾರಣವಾಗಿ ವೈದ್ಯರು ಆಪರೇಷನ್ ಮಾಡಿ ಹೆರಿಗೆ ಮಾಡಿಸಿದ್ದಿದ್ದರೆ, ಮಲ್ಲಮ್ಮಳ ಸ್ಥಿತಿ ಬೇರೆಯೇ ಇರುತ್ತಿತ್ತು. ಆದರೆ ಅವರ ಬಡತನದ ಕಾರಣವಾಗಿ ನಾರ್ಮಲ್ ಡಿಲೆವರಿ ಮಾಡಿಸಲು ಮುಂದಾಗಿ ಮಲ್ಲಮ್ಮಳ ಜೀವಕ್ಕೆ ಅಪಾಯ ತಂದೊಡ್ಡಿದ್ದಾರೆ. ಇದು ವೈದ್ಯರ ಅಪಾಯಕಾರಿ ನಿಲುವಾಗಿದೆ. ಒಟ್ಟಾರೆಯಾಗಿ ಬಲಿಯಾದದ್ದಂತೂ ಅಪ್ರಾಪ್ತ ಬಾಲಕಿಯೇ ಹೊರತು ಬೇರಾರೂ ಅಲ್ಲ. ಹೀಗೆ ಬಾಲ್ಯ ವಿವಾಹದಿಂದಾಗಿ ಹಲವು ಹೆಣ್ಣುಮಕ್ಕಳು ಸಾವಿಗೀಡಾಗಿದ್ದಾರೆ ಹಾಗೆಯೇ ಇಂದಿಗೂ ಸಾವಿನಂಚಿನಲ್ಲಿರುವಂತಹವರೂ ಇರುವುದು ಕಂಡುಬರುತ್ತದೆ.

**೬. ವಿಧವಾ ಸಮಸ್ಯೆ**

ವೈಧವ್ಯ ಮಹಿಳೆಯರ ಪಾಲಿಗೆ ಬಹು ದೊಡ್ಡ ಶಾಪವಾಗಿದೆ. ವಿಧವಾ ಪುನರ್ ವಿವಾಹ ಕಾಯ್ದೆ ಜಾರಿಯಲ್ಲಿದೆಯಾದರೂ ವಿಧವೆಯರ ಪ್ರಮಾಣ ಮಾತ್ರ ಹಾಗೆಯೇ ಇದೆ. ವಿಧವೆಯಾದವರನ್ನು ಪುನಃ ಮದುವೆಯಾಗುವಂತಹ ಮನಸ್ಥಿತಿ ಇಂದಿಗೂ ಸೃಷ್ಟಿಯಾಗಿಲ್ಲ. ವಿಧವೆಯರನ್ನು ಸಮಾಜ ನೋಡುವ ಬಗೆಯೇ ಬೇರೆಯಾಗಿರುತ್ತದೆ. ಅವರು ಯಾವುದೇ ಶುಭ/ಮಂಗಳ ಕಾರ್ಯಗಳಲ್ಲಿ ಪಾಲ್ಗೊಳ್ಳುವ ಹಾಗಿಲ್ಲ. ಅವರು ಸಾಯುವವರೆಗೂ ವಿಧವೆಯರಾಗಿಯೇ ಇರಬೇಕು. ಎಂದಿಗೂ ಬೇರೊಂದು ವಿವಾಹ ಮಾಡಿಕೊಳ್ಳುವ ಯೋಚನೆಯೂ ಮಾಡಬಾರದು. ಒಂದುವೇಳೆ ಹಾಗೆ ಮಾಡಿದರೆ ಅವರು ಜಾತಿಯಿಂದ

ದೂಷಿಸಲ್ಪಡುತ್ತಾರೆ ಮತ್ತು ಧರ್ಮಭ್ರಷ್ಟರಾಗುತ್ತಾರೆ. ಕೆಲವು ಸಮುದಾಯಗಳಲ್ಲಿ ವಿಧವಾ ಪುನರ್ ವಿವಾಹ ನಡೆಯುತ್ತದೆ. ಅಂದರೆ ವಿಧವೆಯ ಪುನರ್ ವಿವಾಹ ಬಹಿರಂಗವಾಗಿ ನಡೆಯುವುದಿಲ್ಲ. ಬದಲಾಗಿ ಇದು ರಾತ್ರಿಯ ಸಮಯದಲ್ಲಿ ಸಮುದಾಯದ ಮುಖಂಡರ ಸಮ್ಮುಖದಲ್ಲಿ ನಡೆಯುತ್ತದೆ. ಆದರೆ ಬಹಳಷ್ಟು ಸಮುದಾಯಗಳಲ್ಲಿ ಮಹಿಳೆಯರಿಗೆ ಈ ಅವಕಾಶ ಇಲ್ಲದಾಗಿದೆ. ಇಲ್ಲಿ ಬಾಲ್ಯ ವಿವಾಹದಿಂದಾಗಿ ಬಾಲವಿಧವೆಯರ ಸಂಖ್ಯೆಯೂ ಹೆಚ್ಚಾಗುತ್ತಿದೆ. ಆಟವಾಡಿಕೊಂಡು ಇರಬೇಕಾದ ವಯಸ್ಸಿನಲ್ಲಿ ವಿವಾಹ ಬಂಧನಕ್ಕೆ ಸಿಲುಕಿ, ಯಾವ ಯಾವುದೋ ಕಾರಣಕ್ಕೆ ತಾಳಿ ಕಟ್ಟಿದ ಪತಿ ಮರಣಿಸಿ, ಅವರು ಬಾಲ್ಯದಲ್ಲಿಯೇ ವಿಧವೆಯರಾಗುತ್ತಿದ್ದಾರೆ. ಹೀಗೆ ಬಾಲ ವಿಧವೆಯರು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದ್ದಾರೆ.

ಸಂಗನಕಲ್ಲು ಗ್ರಾಮದ ತಿಪ್ಪೇಸ್ವಾಮಿ ಎಂಬುವವರಿಗೆ ಐದು ಜನ ಹೆಣ್ಣುಮಕ್ಕಳು ಮತ್ತು ಇಬ್ಬರು ಗಂಡು ಮಕ್ಕಳಿದ್ದಾರೆ. ಇವರು ಐದು ಜನ ಹೆಣ್ಣುಮಕ್ಕಳಿಗೆ ವಿವಾಹ ಮಾಡಿಕೊಟ್ಟಿದ್ದಾರೆ. ಇವರೆಲ್ಲರನ್ನೂ ಮದುವೆ ವಯಸ್ಸಿಗಿಂತ ಮುಂಚಿತವಾಗಿಯೇ ವಿವಾಹ ಮಾಡಿದ್ದಾರೆ. ವಿವಾಹವಾಗಿ ಗಂಡನ ಮನೆಯಲ್ಲಿರುವ ಎಲ್ಲಾ ಹೆಣ್ಣುಮಕ್ಕಳು ಒಂದಲ್ಲಾ ಒಂದು ಸಮಸ್ಯೆಗೆ ಒಳಗಾಗಿರುವುದು ತಿಳಿದು ಬಂದಿತು. ಅದರಲ್ಲಿಯೂ ಅವರ ಮೂರನೇ ಮಗಳಾದ ಶಿಲ್ಪ ಎಂಬುವವರು ಗಂಡನನ್ನು ಕಳೆದುಕೊಂಡು ವಿಧವೆಯರಾಗಿರುವುದು ತಿಳಿದು ಬಂದಿತು. ಹಾಗಾಗಿ ಇವರನ್ನು ಭೇಟಿಯಾದಾಗ ಶಿಲ್ಪ ಅವರು ಹೇಳಿದ್ದು ಹೀಗೆ "ನನಿಗೆ ಮದುವಿ ಮಾಡಿ ಮೂರು ವರ್ಸಕ್ಕೆ ಗಂಡಗ ಸಿಡ್ಲು ಹೊಡ್ದು ತೀರ್ಕೆಂಡು ಬಿಟ್ಟ. ಈಗ ನನಿಗೆ ಇಬ್ರು ಮಕ್ಳು ಐದಾರ. ಅವ್ರನ್ನ ಸಾಕೋದು ಬಾಳ ಕಷ್ಟ ಆಗೇತಿ. ಇಲ್ಲಿ ನಾನು, ನಮ್ ಅತ್ತಿ ಮಾತ್ರ ಇರೋದು. ಹೊಲ ಮನಿ ಕೆಲ್ಸಾನಾ ನಾವಿಬ್ರೇ ನೋಡ್ಕಬೇಕು. ನಮ್ಮ್ ಮಾವ ಇಲ್ಲ ತೀರ್ಕೆಂಡಾರ. ನಾನು ಇನ್ನ ಆರ್ನೇ ಕ್ಲಾಸು ಒದಕ್ಕತ್ತಿದ್ದೆ. ಆವಾಗ್ಲೆ ನನ್ನ ಸಾಲಿಲಿಂದ ಬಿಡ್ಸಿ ಮನ್ಯಾಗ ಇರಾಕ ಹೇಳಿದ್ರು. ಎರಡು ವರ್ಸ ಮನಿಯಾಗೇ ಇದ್ದೆ. ಆಮ್ಯಾಲ ನನ್ನ ಕಪ್ಪಗಲ್‌ನಾಗ ಇರೋ ನಮ್ ಸಂಬಂಧಿಕ್ರೀಗೆ ಕೊಟ್ಟು ಮದುವಿ ಮಾಡಿದ್ರು. ನನ ಗಂಡ ಸತೆ ಬಾಳ ಚೆನ್ನಾಗೇ ನೋಡ್ಕಂತಿದ್ದ. ಒಂದಿನ ಹೊಲಕ್ಕ ಹೋಗಿದ್ದ. ಆವಾಗ ಮಳಿ ಜೋರಾಗಿ ಬರ್ತಿತ್ತು. ಅದಕ್ಕ ಒಂದು ಮರ್ದ ಕೆಳಗ ನಿಂತಿದ್ನಂತೆ. ಆವಾಗ ಸಿಡ್ಲು ಜೋರಾಗಿ ಹೊಡ್ದ ಬಿಟ್ಟೇತಿ. ಎಡಗಡಿ ಭಾಗ ಎಲ್ಲಾನೂ ಕರ್ರಗ ಆಗಿಬಿಟ್ಟಿತ್ತು. ನಾವು ಬಳ್ಳಾರಿ ಆಸ್ಪತ್ರಿಗಿ ಹಾಕ್ಕೆಂಡು ಹೋದ್ವಿ. ಅಲ್ಲಿ ಎರ್ಡು ದಿನ ಇದ್ರು. ಆಮ್ಯಾಲೆ ನಮ್ಮನ್ನೆಲ್ಲಾ ಬಿಟ್ಟು ಹೋಗಿಬಿಟ್ಟ. ಈಗ ನಾನು ಒಳ್ಳೆ ಸೀರಿ ಕಟ್ಟಂಗಿಲ್ಲ. ಹಣ್ಯಾಗ ಕುಂಕುಮ ಇಟ್ಕಳಂಗಿಲ್ಲ, ಯಾವದಾದ್ರೂ ಮದುವಿಗಿ ಬಂಗಾರದ ಸಾಮಾನುಗಳ್ನ ಇಟ್ಗಂಡು ಹೋಗಾಂಗಿಲ್ಲ. ಎಲ್ಲಾನೂ ನನ ಗಂಡಾನೇ ತನ್ ಜತಿಗಿ ತಗಂಡು ಹೋಗಿಬಿಟ್ಟ. ನಾನು ಯಾರ್ಗಿ ಹೇಳ್ಬೇಕು ನನ್ ಕಷ್ಟಗಳ್ನ" ಎಂದು ಅಳ ತೊಡಗಿದರು.

ಶಾಗೋಟ ಗ್ರಾಮದ ಲಕ್ಷ್ಮಪ್ಪ ಎಂಬುವವರು ತಮ್ಮ ಮಗಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡಿದ್ದಾರೆ. ಅವರ ಮಗಳಿಗೆ ವಿವಾಹವಾಗಿ ಒಂದು ವರ್ಷಕ್ಕೆ ಗಂಡ ಆಕ್ಸಿಡೆಂಟಿನಲ್ಲಿ

ತೀರಿ ಹೋಗಿದ್ದಾನೆ. ಇವರ ಮಗಳಾದ ಗಂಗಮ್ಮ ವಿಧವೆ ಪಟ್ಟವನ್ನು ಕಟ್ಟಿಕೊಂಡು ತವರು ಮನೆಯಲ್ಲಿಯೇ ಉಳಿದಿದ್ದಾರೆ. ಗಂಗಮ್ಮನವರನ್ನು ಮಾತನಾಡಿಸಿದಾಗ "ನನಿಗಿ ಮದುವಿ ಮಾಡಿ ಒಂದು ವರ್ಸಕ್ಕ ನನ ಗಂಡಗ ಕೊಪ್ಪಳತ್ತಾಗ ಅಕ್ಸಿಡೆಂಟಾಗಿತ್ತು. ಅವ್ರನ್ನ ಕೊಪ್ಪಳ್ದ ಗೋರ್ಮೆಂಟ್ ಆಸ್ಪತ್ರ್ಯಾಗ ಅಡ್ಮಿಟ್ ಮಾಡಿದ್ವಿ. ಆದ್ರೆ ಬದುಕಿ ಉಳಿಲಿಲ್ಲ. ಗಂಡ ಏನೋ ಬಿಟ್ಟು ಹೋದ ಆದ್ರೆ ನನ ಕಷ್ಟ ಹೇಳ್ತಾರ್ರು. ಯಾಕಂದ್ರೆ ನನ ಕಾಳ್ಗುಣ ಸರಿಗಿಲ್ಲಾ ಅಂತ ಎಲ್ಲಾರೂ ಆಡಿಕೆಳ್ಳಾಕತ್ತಿದ್ರು. ನಾನೇನು ಮಾಡ್ಲಿ. ಆತ ಮಾಡಿಕೆಂಡಾನ ಅದಕ್ಕ ನಾನೆಂಗ ಕಾರಣ ಆಗ್ತೀನಿ. ಗಂಡನ ಮನ್ಯಾಗಿನ ಈ ತೊಂದ್ರಿ ಸಾಕಾಗಿ ಹೋಗಿತ್ತು. ಹಂಗಾಗಿ ನಾನು ನಮ್ ಅಮ್ಮನ ಮನಿಗಿ ಬಂದು ಬಿಟ್ವೆ. ಆದ್ರೆ ಇಲ್ಲಿ ನಮ್ ಅಪ್ಪ ಅಮ್ಮ ನನ್ನ ಮತ್ತೆ ಅಲ್ಲಿಗೇ ಹೋಗ್ಬೇಕು ಅಂತ ಹೇಕತ್ಯಾರ. ಆದ್ರೆ ನಾನು ಅಲ್ಲಿಗಿ ಹೋಗಂಗಿಲ್ಲ ಅಂತ ಹೇಳೇನಿ" ಎಂದರು.

ಇವರ ತಂದೆಯಾದ ಲಕ್ಷ್ಮಪ್ಪನವರನ್ನು ಮಾತನಾಡಿಸಿದಾಗ "ನಮ್ ಮಗಳ್ದು ಹಣೇಬರ ಚೆನ್ನಾಗಿಲ್ಲ. ನಾವು ಅವ್ಳು ಚೆನ್ನಾಗಿರ್ತಾಳ ಅಂತ ಮದುವಿ ಮಾಡಿ ಕೊಟ್ವಿ. ಆದ್ರೆ ಅಳಿಯ ಅಕ್ಸಿಡೆಂಟನಾಗ ತೀರ್ಕೆಂಡು ಬಿಟ್ಟ. ಯಾರೇನು ಮಾಡಾದು. ಅವ್ಳ ಹಣೇಬರದಾಗ ಯೆಂಗ ಬರದೈತೋ ಹಂಗ ಆಗ್ತೈತಿ. ಈಗ ಮಗ್ಳು ಇಲ್ಲಿಗೇ ಬಂದು ಬಿಟ್ಟಾಳ. ನಾವು ಸತೆ ಬಾಳ ಹೇಳಾಕತ್ತೇವಿ. ಅಲ್ಲಿಗೇ ಹೋಗು ಅಂತ. ಆದ್ರೆ ಕೇಳಂಗಿಲ್ಲ. ಯಾಕಂದ್ರೆ ಯಾವಾಗ ಮದುವಿ ಮಾಡಿ ಕೊಟ್ಟೇವೋ ಆವಾಗ್ಲೇ ಅಕಿ ಇನ್ನೊಂದು ಮನಿ ಮಗ್ಳು ಇದ್ದಂಗ. ಸಾಯೋವರ್ಗೂ ಅಲ್ಲೇ ಇರ್ಬೇಕು. ಏನೇ ಕಷ್ಟ ಬರ್ಲಿ ಅದನ್ನೆಲ್ಲಾ ಸಹಿಸ್ಕೆಂಡು ಹೋಗ್ಬೇಕು. ಅಲ್ಲಿ ಬೀಗ್ರು ಹೇಳಿ ಹೇಳಿ ಕಳ್ಸಾಕತ್ಯಾರ. ಏನ್ ಮಾಡಾದು" ಎಂದರು.

ಭಾರತೀಯ ಸಮಾಜ ಮಹಿಳೆಯರನ್ನು ಎಷ್ಟು ಹೀನಾಯವಾಗಿ ನಡೆಸಿಕೊಂಡಿದೆ ಎಂದರೆ ಸಮಾಜದಲ್ಲಿನ ವಿಧವೆಯ ಸ್ಥಾನಮಾನವನ್ನು ನೋಡಿದರೆ ತಿಳಿಯುತ್ತದೆ. ಆರ್ಥಿಕ, ಶೈಕ್ಷಣಿಕ, ರಾಜಕೀಯ ಹೀಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಮಹಿಳೆ ಪುರುಷನಿಗೆ ಸರಿಸಮಾನವಾದ ಹೆಜ್ಜೆಗಳನ್ನು ಇಡುತ್ತಿರುವ ಈ ಸಮಯದಲ್ಲಿಯೂ ವಿಧವೆಯರ ಕುರಿತಾದ ನಮ್ಮ ಧೋರಣೆ ಮಾತ್ರ ಬದಲಾಗಿಲ್ಲ. ಹಿಂದೆ ಇದ್ದಂತಹ ಸತಿ ಪದ್ದತಿ ಈಗಿಲ್ಲ. ಸತಿ ಹೋಗದೇ ಬದುಕುಳಿದರೆ ಅವರ ತಲೆ ಬೋಳಿಸುತ್ತಿದ್ದರು. ಆದರೆ ಇದು ಈಗಿಲ್ಲ. ಆದರೂ ವಿಧವೆಯಾದವಳು ಅಮಂಗಲಳೇ. ಮೇಲಿನ ಎರಡು ಪ್ರಕರಣಗಳನ್ನು ಗಮನಿಸಿದರೆ ಶಿಲ್ಪ ಮತ್ತು ಗಂಗಮ್ಮ ಇಬ್ಬರೂ ಬಾಲ್ಯ ವಿವಾಹಕ್ಕೆ ಒಳಗಾದವರು. ಹಾಗೆಯೇ ಬಾಲ್ಯದಲ್ಲಿಯೇ ತಮ್ಮ ಗಂಡಂದಿರನ್ನು ಕಳೆದುಕೊಂಡು ವಿಧವೆಯರಾಗಿದ್ದಾರೆ. ಇವರಿಗೆ ಯಾವುದೇ ಶುಭ ಕಾರ್ಯಕ್ರಮಗಳಲ್ಲಿ ಪ್ರವೇಶವಿಲ್ಲ. ಇವರು ಸಮಾಜದಿಂದ ಬಹು ದೂರ ಉಳಿದವರಾಗಿದ್ದಾರೆ. ಇವರ ಈ ಪರಿಸ್ಥಿತಿಗೆ ಇವರ ತಂದೆ ತಾಯಂದಿರೇ ಕಾರಣರಾಗಿದ್ದಾರೆ. ಈ ಹೆಣ್ಣುಮಕ್ಕಳು ಸಾಯುವವರೆಗೂ ವಿಧವೆ ಎಂಬ ಪಟ್ಟವನ್ನು ಕಟ್ಟಿಕೊಂಡೇ ಇರಬೇಕಾಗುತ್ತದೆ. ಜೊತೆಗೆ ಇವರಿಗೆ ಮರು ವಿವಾಹ ಮಾಡಬೇಕೆಂಬ ಆಲೋಚನೆ ಅವರ ಜಾತಿ ಸಮುದಾಯದವರಲ್ಲಿ ಬರುವುದೇ ಇಲ್ಲ. ಏಕೆಂದರೆ

ಒಂದು ಸಾರಿ ಮದುವೆಯಾದ ನಂತರ ಅವರಿಗೆ ಪತಿಯೇ ಎಲ್ಲ. ಅವನು ತೀರಿಹೋದರೂ ಅವಳು ಅವನಿಗಾಗಿಯೇ, ಅವನ ನೆನಪಲ್ಲಿಯೇ ಜೀವಿಸಬೇಕೇ ಹೊರತು, ಬೇರೊಂದು ಮದುವೆಯಾಗುವಂತಿಲ್ಲ. ಹಾಗೊಂದು ವೇಳೆ ಮದುವೆಯಾಗಲು ಇಚ್ಛಿಸಿದರೆ ಅವರು ಜಾತಿ ಭ್ರಷ್ಟರಾಗುತ್ತಾರೆ. ಜೊತೆಗೆ ಅವರ ಪಾತಿವ್ರತ್ಯಕ್ಕೆ ಹಾನಿಯುಂಟಾಗುತ್ತದೆ ಎಂಬ ಧೋರಣೆ ವ್ಯವಸ್ಥೆಯದ್ದು. ಬಾಲ್ಯದಲ್ಲಿಯೇ ವಿಧವೆಯರಾಗುವ ಹೆಣ್ಣುಮಕ್ಕಳು ಅಮಂಗಳೆಯರು ಎಂಬ ಹಣೆಪಟ್ಟಿಯನ್ನೂ ಕಟ್ಟಿಕೊಳ್ಳುತ್ತಾರೆ. ಗಂಗಮ್ಮನವರ ಪ್ರಕರಣದಲ್ಲಿ ಅವರ ಕಾಲ್ಗುಣ ಸರಿಯಿಲ್ಲ ಎಂದು ದೂಷಿಸಿರುವುದನ್ನು ಕಾಣಬಹುದು. ಗಂಗಮ್ಮಳ ಕಾಲ್ಗುಣಕ್ಕೂ ಮತ್ತು ಆಕೆಯ ಗಂಡನಿಗೆ ಆದ ಅಪಘಾತಕ್ಕೂ ಯಾವುದೇ ಸಂಬಂಧವಿಲ್ಲ. ಆದರೂ ಆಕೆಯನ್ನೇ ದೂಷಿಸಲಾಗುತ್ತಿದೆ. ಅಂದರೆ ಗಂಡನ ಮನೆಯಲ್ಲಿ ಏನೇ ಆದರೂ ಅದಕ್ಕೆ ಹೆಣ್ಣುಮಕ್ಕಳೇ ಹೊಣೆಗಾರರಾಗುತ್ತಾರೆ. ಇದು ವ್ಯವಸ್ಥೆ ನಡೆಸಿಕೊಂಡು ಬಂದಿರುವ ಧೋರಣೆಯಾಗಿದೆ.

ಒಂದು ಕಟಬದ್ಧ ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದ ಪೆರಿಯಾರರು ವಿಧವಾ ಪುನರ್ ವಿವಾಹಕ್ಕೆ ಸಂಬಂಧಿಸಿದಂತೆ ತಮ್ಮ ಅನುಭವವನ್ನು ಹೀಗೆ ಹೇಳಿಕೊಂಡಿದ್ದಾರೆ "ನಮ್ಮ ಜಾತಿಯ ಹೆಣ್ಣುಮಕ್ಕಳು ಮುಖಕ್ಕೆ ಮುಸುಕು ಹಾಕಿಕೊಂಡು ತಿರುಗಾಡಬೇಕಾದ ಸಂಪ್ರದಾಯವುಳ್ಳವರು. ವಿಧವಾ ವಿವಾಹವು ನಮ್ಮ ಜಾತಿಗೆ ಸಂಬಂಧವಿಲ್ಲದ ಹಾಗೂ ಪುರಾತನ ಪದ್ಧತಿಗಳಿಗೆ ವಿರೋಧವಾದ ವಿಷಯವೇ ಆಗಿತ್ತು. ಇಂಥ ಪರಿಸರದಲ್ಲಿ ನನ್ನ ತಂಗಿಯು ಎಳೆಯ ಒಂದು ಗಂಡು ಮತ್ತು ಒಂದು ಹೆಣ್ಣು ಮಗುವನ್ನು ಬಿಟ್ಟು ತೀರಿಕೊಂಡಿದ್ದಳು. ಆಕೆ ಬಿಟ್ಟು ಹೋದ ಹೆಣ್ಣು ಮಗುವಿಗೆ ೧೦ ವರ್ಷ ವಯಸ್ಸಾಗಿದ್ದಾಗ ವಿಜೃಂಭಣೆಯಿಂದ ಮದುವೆಯನ್ನು ಮಾಡಿದೆವು. ಮದುವೆಯಾದ ೬೦ ದಿನಗಳೊಳಗಾಗಿ ಆಕೆಯ ಗಂಡನು ತೀರಿಕೊಂಡನು. ಆಕೆಯ ಗಂಡನ ವಯಸ್ಸೆಷ್ಟು ಗೊತ್ತೇ? ಕೇವಲ ೧೩. ಗಂಡನು ಸತ್ತು ಹೋದನೆಂಬ ಸುದ್ಧಿ ತಿಳಿದ ಕೂಡಲೇ ಆ ಮಗುವು ಅಳುತ್ತಾ ಓಡೋಡಿ ಬಂದು ಮಾವಯ್ಯ ನನಗೆ ಮದುವೆಯನ್ನು ಮಾಡಿಸು ಎಂದು ನಾನು ಕೇಳಿದೆನೇ? ನನಗೇಕೆ ಮದುವೆ ಮಾಡಿಸಿದೆ? ನನಗೆ ಇಂಥ ಗತಿಯನ್ನು ಉಂಟು ಮಾಡಿದೆಯಲ್ಲಾ! ಎಂದು ಗೋಳಿಟ್ಟಳು. ಏನೂ ತಿಳಿಯದ ಮಗು ತನ್ನ ಹಣೆಯನ್ನು ನೆಲಕ್ಕೆ ಬಡಿದು ಅಳುತ್ತಿದ್ದರಿಂದ ಅವಳ ಹಣೆಯಿಂದ ರಕ್ತ ಸುರಿಯಿತು. ಸುತ್ತಲೂ ಸೇರಿಬಿಟ್ಟಿದ್ದ ಜನರು ಮಗುವಿನ ಗೋಳನ್ನು ಕಂಡು ಸಂತಾಪ ಪಟ್ಟುಕೊಂಡರು. ನನಗೂ ದುಃಖವನ್ನು ತಡೆಯಲಿಕ್ಕಾಗಲಿಲ್ಲ. ಮಗುವಿಗೆ ಸಮಾಧಾನ ಹೇಳಿ ಅವಳ ತಲೆಯನ್ನು ಮೇಲಕ್ಕೆತ್ತುವಾಗಲೇ ಏನಾದರೂ ಸಾಹಸಪಟ್ಟು ಇವಳಿಗೆ ಬೇರೆ ಒಂದು ಮದುವೆಯನ್ನು ಮಾಡಿಯೇ ತೀರಬೇಕೆಂದು ಸಂಕಲ್ಪ ಮಾಡಿಕೊಂಡೆ. ಆ ಹೆಣ್ಣುಮಗು ಋತುಮತಿಯಾಗಿ ಒಂದೆರಡು ವರ್ಷ ಕಳೆದ ನಂತರ ಮದುವೆ ಮಾಡಿಸುವ ಪ್ರಯತ್ನದಲ್ಲಿ ನಾನು ಮತ್ತು ನನ್ನ ಸಂಬಂಧಿಕರೊಬ್ಬರು ತೊಡಗಿದೆವು. ಈ ವಿಷಯ ನನ್ನ ತಂದೆ ತಾಯಿಗೆ ತಿಳಿದು ಅವರು ಸಂಪ್ರದಾಯ ಹಾಳಾಗುತ್ತದೆಂದು ಗೋಳಿಟ್ಟರು. ಮತ್ತು ಆಕೆಯನ್ನು

ಮದುವೆಯಾಗಲಿದ್ದ ಎರಡು ಸಂಬಂಧಗಳನ್ನು ತಪ್ಪಿಸಿದರು. ಕೊನೆಗೆ ಯಾರಿಗೂ ತಿಳಿಯದಂತೆ ಚಿದಂಬರಂದಲ್ಲಿ ಆ ಹೆಣ್ಣುಮಗಳಿಗೆ ಮದುವೆಯನ್ನು ಮಾಡಿಸಿದೆ"(ಪೆರಿಯಾರ ಉದ್ಧೃತ; ವಿರೂಪಾಕ್ಷ ಪೂಜಾರಹಳ್ಳಿ(ಸಂ),೨೦೦೭,ಪು-೨೯೯,೩೦೦) ಸಮಾಜ ಸುಧಾರಕರ ಸ್ಥಾನದಲ್ಲಿ ಗುರುತಿಸಿಕೊಳ್ಳುವ ಪೆರಿಯಾರರು ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದ್ದರೂ ಅವರು ಆ ಸಂಪ್ರದಾಯಗಳನ್ನು ಮೀರುವ ಕೆಲಸವನ್ನು ಮಾಡಿದರು. ವಿಧವೆಯಾದ ಚಿಕ್ಕ ಹುಡುಗಿಗೆ ಬೇರೊಂದು ವಿವಾಹ ಮಾಡಿದರು. ಅಂದಿನ ಸಂದರ್ಭದ ಒಂದು ಕ್ರಾಂತಿಕಾರಿ ನಡೆಯೇ ಆಗಿದೆ. ಜೊತೆಗೆ ಹೆಂಡತಿಯನ್ನು ಕಳೆದುಕೊಂಡ ಪುರುಷ ವಿಧುರನಾಗುತ್ತಾನೆ. ಅವನು ಮದುವೆಯಾಗುವುದಿದ್ದರೆ ವಿಧವೆಯನ್ನೇ ಆಗಲಿ ಎಂಬುದು ಅವರ ವಾದವಾಗಿತ್ತು. ಹಿಂದೂ ಸಂಪ್ರದಾಯ ನಿಂತಿರುವುದೇ ಮಹಿಳೆಯರಿಂದ ಎಂಬುದು ಸಂಪ್ರದಾಯವಾದಿಗಳ ಅಭಿಪ್ರಾಯವಾಗಿದೆ. ಹಾಗಾಗಿಯೇ ಮಹಿಳೆಯರ ಮೇಲೆ ಪಾತಿವ್ರತ್ಯದ ಭಾರವನ್ನು ಹಾಕಲಾಗಿದೆ. ವಿಧವೆಯಾಗಿದ್ದರೂ ವೈಧವ್ಯವನ್ನು ಪಾಲಿಸಲೇಬೇಕು ಎಂಬುದು ವ್ಯವಸ್ಥೆಯ ಆಶಯ. ಆದರೆ ಅವರು ಮರು ಮದುವೆಯಾಗುವಂತಿಲ್ಲ.

ವಿಧವೆಯರ ಪುನರ್ ವಿವಾಹಕ್ಕಾಗಿ ೧೯ನೆಯ ಶತಮಾನದಲ್ಲಿ ಬಹುದೊಡ್ಡ ಆಂದೋಲನವೇ ನಡೆಯಿತು. ಇದರ ಪ್ರಮುಖ ರೂವಾರಿಗಳಾದ ಈಶ್ವರಚಂದ್ರ ವಿದ್ಯಾಸಾಗರರಂತೂ ವಿಧವಾ ಪುನರ್ ವಿವಾಹಕ್ಕಾಗಿ ಅನೇಕ ರೀತಿಯಲ್ಲಿ ಶ್ರಮಿಸಿದರು. "ಭಾರತದಲ್ಲಿ ವಿಧವಾ ಆಚರಣೆಯನ್ನು ಒಂದು ಮಹಿಳಾ ವಿಷಯವಾಗಿ ಗುರುತಿಸಿಕೊಂಡಾಗ ಅದು ಹಿಂದೂ ಧರ್ಮದ ಮೇಲು ಸಮಾಜದ ಚೌಕಟ್ಟಿನಲ್ಲಿಯೇ ಇತ್ತು. ಈಶ್ವರಚಂದ್ರರು ಹಿಂದೂ ವಿಧವೆಯರ ವಿವಾಹ ಎಂಬುದಾಗಿ ಅದನ್ನು ಪ್ರಸ್ತಾಪಿಸಿದರು. ಆದರೆ ಸಮಕಾಲೀನ ಸಮಾಜವನ್ನು ನೋಡಿದರೆ ವಿಧವಾ ಸಮಸ್ಯೆ ಭಿನ್ನ ಭಿನ್ನ ರೂಪದಲ್ಲಿ ಎಲ್ಲಾ ಸಮಾಜದಲ್ಲೂ ಇದ್ದೇ ಇದೆ. ಅಂದರೆ ಯಾವೆಲ್ಲಾ ಸಮಾಜವು ಪಿತೃಪ್ರಧಾನತೆಯನ್ನು ಹೊಂದಿದ್ದು ಹುಟ್ಟಿನಿಂದಲೇ ಸ್ತ್ರೀಯ ಆರ್ಥಿಕ, ಶೈಕ್ಷಣಿಕ ಅಗತ್ಯಗಳನ್ನು ನಿರಾಕರಿಸುತ್ತವೆಯೋ, ಪಾತಿವ್ರತ್ಯವನ್ನು ಸ್ತ್ರೀಯ ಮೇಲೆ ಹೇರಲಾಗುತ್ತದೋ ಆ ಎಲ್ಲಾ ಸಮಾಜಗಳಲ್ಲಿ ಈ ಸಮಸ್ಯೆ ಒಂದಲ್ಲಾ ಒಂದು ಬಗೆಯಲ್ಲಿ ಕಾಣಬಹುದಾಗಿದೆ"(ಉಷಾ ಎಂ, ೨೦೦೪,ಪು-೮೧). ವಿಧವಾ ಸಮಸ್ಯೆಯ ಕೊಂಡಿಗಳು ಪಿತೃಪ್ರಧಾನ ಸಮಾಜದ ವ್ಯವಸ್ಥೆಯೊಂದಿಗೆ ಸೇರಿಕೊಂಡಿವೆ. ಮಹಿಳೆಯರ ಸಮಾಜೋ-ಆರ್ಥಿಕ ಸ್ಥಿತಿಯೊಂದಿಗೆ ಸಂಬಂಧಿಸಿದ್ದಾಗಿದೆ. ಕೆಲವು ಸಮುದಾಯಗಳಲ್ಲಿ ಮಹಿಳೆ ವಿಧವೆಯಾಗುವುದು ಆಕೆಗೆ ಸಮಸ್ಯೆಯೇ ಅಲ್ಲ. ಏಕೆಂದರೆ ವಿಧವೆಯರಿಗೆ ಪುನಃ ಮದುವೆ ಮಾಡುವ ಪದ್ಧತಿಗಳು ಜಾರಿಯಲ್ಲಿವೆ. ಮುಖ್ಯವಾಗಿ "ಹರಿಯಾಣದ ಜಾಟರಲ್ಲಿ, ಮರಾಠರಲ್ಲಿ ಹಾಗೂ ಭಾರತದಾದ್ಯಂತ ಕೆಲ ಮಧ್ಯಮ ಜಾತಿಗಳಲ್ಲಿ ಮೈದುನ ಅಥವಾ ಗಂಡನ ರಕ್ತ ಸಂಬಂಧಿಯ ಜೊತೆ ಮರು ವಿವಾಹಕ್ಕೆ ಅವಕಾಶವಿತ್ತು. ಜಾಟರಲ್ಲಿ ಗಂಡ ಸತ್ತರೆ ಅಂಥ

ದುರಂತವೇನೂ ಸಂಭವಿಸುವುದಿಲ್ಲ. ಮೇಲ್ಜಾತಿ ಮಹಿಳೆ ಸುಮಂಗಲಿಯಾಗೇ ಸಾಯಲು ಬಯಸಿದರೆ, ಜಾಟ್ ಅಮ್ಮ ಮಗಳಿಗೆ ಹೀಗೆ ಹೇಳುತ್ತಾಳೆ;

ಬಾ ಮಗಳೆ, ದಿಬ್ಬಣಕೆ ಹೊರಡು

ಒಬ್ಬ ಸತ್ತರೇನಂತೆ ಇದ್ದಾರೆ ಹಲವರು...

ಶ್ರಮಿಕ ಜಾತಿಗಳಲ್ಲಿ ಒಂದು ಕುಟುಂಬ ಒಂದು ಹೆಣ್ಣನ್ನು ಕಳೆದುಕೊಳ್ಳುವುದೆಂದರೆ ಆ ಹೆಣ್ಣು, ಅವಳಿಗೆ ಹುಟ್ಟಿದ, ಹುಟ್ಟಲಿರುವ ಮಕ್ಕಳ ಶ್ರಮದ ಸಹಾಯವನ್ನೂ ಬೇಡ ಎಂದಂತಾಗುತ್ತದೆ. ವಿಧವೆಯಾದ ಹೆಣ್ಣನ್ನು ಗಂಡನ ಸಂಬಂಧಿಗಳೇ ಮದುವೆಯಾದರೆ ಆಕೆಯ ಆಸ್ತಿಯೂ ಉಳಿಯುತ್ತದೆ ಎಂಬ ಮನೋಧೋರಣೆಯನ್ನು ಹೊಂದಿರುತ್ತಾರೆ"(ಅನುಪಮಾ ಎಚ್.ಎಸ್.೨೦೧೨, ಪು-೮೪) ಹೀಗೆ ಮಗಳು ವಿಧವೆಯಾದರೆ ಅವಳಿಗೆ ಮತ್ತೊಂದು ಮದುವೆ ಮಾಡಲಾಗುತ್ತದೆ. ಆದರೆ ಈ ಬಗೆಯ ಪದ್ಧತಿಗಳು ಹಲವು ಜಾತಿಗಳಲ್ಲಿ ಇಲ್ಲದಿರುವುದನ್ನು ಕಾಣಬಹುದು. ಕೆಳ ಜಾತಿಯ ಎಷ್ಟೋ ಸಮುದಾಯಗಳಲ್ಲಿ ವಿಧವೆಯರು ಸಾಯುವವರೆಗೆ ವಿಧವೆಯರಾಗಿಯೇ, ಪರಾವಲಂಬಿಗಳಾಗಿಯೇ ಇರಬೇಕಾದ ಸ್ಥಿತಿ ಇದೆ. ಮುಖ್ಯವಾಗಿ ಬಾಲ್ಯ ವಿವಾಹ ಪದ್ಧತಿಯ ಕಾರಣವಾಗಿ ಬಾಲವಿಧವೆಯರ ಸಂಖ್ಯೆ ಅಧಿಕವಾಗತೊಡಗಿದೆ. ಇವರು ಬಾಲ್ಯದಲ್ಲಿಯೇ ವೈಧವ್ಯದ ಆಚರಣೆಗೆ ಒಳಗಾಗಬೇಕಾಗಿದೆ. ಕುಟುಂಬದಲ್ಲಿ ಸ್ತ್ರೀ ಪುರುಷರ ಸ್ಥಾನಮಾನ, ಪಾತ್ರಗಳು ಮತ್ತು ಮೌಲ್ಯಗಳು ವಿಭಿನ್ನವಾಗಿ ಮತ್ತು ವಿರೋಧಾತ್ಮಕವಾಗಿ ಪ್ರತಿಪಾದಿಸಲ್ಪಟ್ಟಿರುವುದರಿಂದ, ಸಹಜವಾಗಿ ಸ್ತ್ರೀಯರು ಅನುಭವಿಸುವಂತಹ ಕಷ್ಟಗಳು ಪುರುಷನ ಸುಖಕ್ಕಾಗಿ ಅಥವಾ ಅವನ ಶ್ರೇಯಸ್ಸನ್ನು ಕಾಪಾಡುವ ಸಾಧನಗಳಾಗಿರುತ್ತವೆ. ಸ್ತ್ರೀಯರ ಜೀವನಾದರ್ಶವೇ ಪುರುಷನ ಸುಖವನ್ನು ಕಾಪಾಡುವುದೇ ಆಗಿರುತ್ತದೆ. ಇಂತಹ ಸ್ಥಿತಿಯು ಕುಟುಂಬದಲ್ಲಿ ಪುರುಷನಿಗೆ ಒಡೆತನವನ್ನು, ಅಧಿಕಾರವನ್ನು ಮತ್ತು ಮಹಿಳೆಯರಿಗೆ ದಾಸ್ಯವನ್ನು ಕಲ್ಪಿಸಿಕೊಡುತ್ತದೆ. ಈ ಎಲ್ಲಾ ಕಾರಣಕ್ಕಾಗಿಯೇ ಪುರುಷನ ಮರಣವೆನ್ನುವುದು ಮಹಿಳೆಗೆ ಹಲವು ಸಮಸ್ಯೆಗಳನ್ನು ತಂದೊಡ್ಡುತ್ತದೆ. ಆದರೆ ಪತ್ನಿಯನ್ನು ಕಳೆದುಕೊಂಡ ಪುರುಷನು ವೈಯಕ್ತಿಕವಾಗಿ ನೋವನ್ನು ಸ್ವಲ್ಪ ಕಾಲದವರೆಗೆ ಅನುಭವಿಸುತ್ತಾನೆ. ಆದರೆ ಮಹಿಳೆಯ ವಿಷಯ ಹಾಗಾಗುವುದಿಲ್ಲ. ಪತಿಯನ್ನು ಕಳೆದುಕೊಂಡ ಮಹಿಳೆ ವೈಯಕ್ತಿಕ ನೋವಿನ ಜೊತೆಗೆ ಸಾಮಾಜಿಕವಾಗಿ, ಆರ್ಥಿಕವಾಗಿ ತುಂಬಾ ಅಭದ್ರತೆಯನ್ನು ಅನುಭವಿಸುತ್ತಾಳೆ. ಜೊತೆಗೆ ಲೈಂಗಿಕ ಕಿರುಕುಳಗಳಿಗೂ ಒಳಗಾಗಬೇಕಾದ ಪ್ರಸಂಗಗಳೂ ಎದುರಾಗುತ್ತವೆ. ಅಂದರೆ ಇಲ್ಲಿ ಒಂದು ಅಂಶವನ್ನು ಗಮನಿಸಬೇಕಾಗುತ್ತದೆ. ಪತಿ ಇರುವವರೆಗೆ ಅವನ ಅಧೀನತೆಯನ್ನು ಮಾತ್ರ ಅನುಭವಿಸುತ್ತಿರುತ್ತಾಳೆ. ಆದರೆ ಪತಿಯ ಮರಣದ ನಂತರ ನೇರವಾಗಿ ಕುಟುಂಬದ/ಸಮಾಜದ ಅಧೀನಕ್ಕೆ ಒಳಪಡುತ್ತಾಳೆ. ಮೇಲಿನ ಎರಡೂ ಪ್ರಕರಣಗಳ ಜೊತೆಗೆ ಹಲವು ಹೆಣ್ಣುಮಕ್ಕಳು ಬಾಲ್ಯದಲ್ಲಿಯೇ ವಿವಾಹ ಬಂಧನಕ್ಕೆ ಸಿಲುಕಿಸಲ್ಪಟ್ಟು, ಬಾಲ ವಿಧವೆಯರಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಇವರು ಕುಟುಂಬದಲ್ಲಿಯೇ ಅನ್ಯಳಾಗಿ

ಮತ್ತು ಯಾವುದೇ ಪ್ರಾತಿನಿಧ್ಯವಿಲ್ಲದೇ ಕೇವಲ ದುಡಿಯುವ ಸದಸ್ಯಳಾಗಿರುತ್ತಾಳೆ. ಹೀಗೆ ಬಾಲ್ಯದಲ್ಲಿಯೇ ವಿಧವೆಯರಾಗಿ ಹಲವು ಸಮಸ್ಯೆಗಳಿಗೆ ಒಳಗಾಗಿರುವುದು ಕಂಡುಬರುತ್ತದೆ.

ಕರ್ನಾಟಕದಲ್ಲಿ ಪರಿಶಿಷ್ಟ ಜಾತಿ/ಪಂಗಡಗಳಲ್ಲಿ ವಿಧವೆಯರ ಸಂಖ್ಯೆ ಅಧಿಕವಾಗಿರುವುದನ್ನು ೨೦೧೧ರ ಜನಗಣತಿಯ ವರದಿಯಲ್ಲಿ ತಿಳಿದುಬಂದಿದೆ. ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳಲ್ಲಿ ಬಾಲ್ಯ ವಿವಾಹಗಳು ಅಧಿಕವಾಗಿರುವುದು ಕಂಡುಬರುತ್ತದೆ. ಅದರ ಜೊತೆಯಲ್ಲಿಯೇ ಬಾಲ್ಯ ವಿಚ್ಛೇದಿತರ ಸಂಖ್ಯೆಯೂ ಅಧಿಕವಾಗಿರುವುದು ವರದಿಯಿಂದ ತಿಳಿಯುತ್ತದೆ. "ಪರಿಶಿಷ್ಟ ಜಾತಿಗೆ ಸೇರಿದ ೧೦ರಿಂದ ೧೯ ವರ್ಷ ವಯಸ್ಸಿನ ೧.೪೯ ಲಕ್ಷ ವಿವಾಹಿತರಲ್ಲಿ ೨೮೩ ಜನ ವಿಚ್ಛೇದಿತರು , ೨೩೧೯ ಜನ ಪ್ರತ್ಯೇಕಗೊಂಡಿದ್ದಾರೆ ಹಾಗೆಯೇ ೧೯೧೭ ವಿಧವೆಯರು ಮತ್ತು ೫೪೯೨ ಜನ ವಿಧುರರು ಇರುವುದು ಕಂಡುಬಂದಿದೆ. ಇದರಂತೆಯೇ ಪರಿಶಿಷ್ಟ ಪಂಗಡಗಳಲ್ಲಿ ೧೦ರಿಂದ ೧೯ ವರ್ಷ ವಯಸ್ಸಿನ ೬೯,೭೦೬ ಜನ ವಿವಾಹಿತರು ಕಂಡುಬಂದರೆ, ಅದರಲ್ಲಿ ೯೯ ಜನ ವಿಚ್ಛೇದಿತರು, ೮೬೨ ಜನ ಪ್ರತ್ಯೇಕವಾದವರು, ೮೪೧ ಜನ ವಿಧವೆಯರು ಮತ್ತು ೨೪೯ ಜನ ವಿಧುರರು ಕಂಡುಬಂದಿದ್ದಾರೆ"(ಪ್ರಜಾವಾಣಿ, ೧ ಸೆಪ್ಟೆಂಬರ್ ೨೦೧೫). ಈ ಅಂಕಿಸಂಖ್ಯೆಗಳನ್ನು ಗಮನಿಸಿದರೆ, ವಿಧವೆಯರ ಸಂಖ್ಯೆ ಎಷ್ಟಿದೆ ಎಂಬುದು ತಿಳಿದು ಬರುತ್ತದೆ. ಹಾಗೆಯೇ ವಿಧುದರ ಸಂಖ್ಯೆಯಿಂದ ಬಾಲ್ಯದಲ್ಲಿಯೇ ವಿವಾಹ ಬಂಧನಕ್ಕೆ ಸಿಲುಕಿ ಮರಣಿಸಿದ ಹೆಣ್ಣುಮಕ್ಕಳ ಸಂಖ್ಯೆಯೂ ಅಧಿಕವಾಗಿರುವುದು ಕಂಡುಬರುತ್ತದೆ. ಅಂದರೆ ಬಾಲ್ಯ ವಿವಾಹಕ್ಕೆ ಬಲಿಯಾಗಿ ಒಟ್ಟು ೮೫೧ ಜನ ಹೆಣ್ಣುಮಕ್ಕಳು ಸಾವಿಗೀಡಾಗಿರುವುದು ಕಂಡುಬರುತ್ತದೆ. ಅಂದರೆ ಬಾಲ್ಯವಿವಾಹ ಮಕ್ಕಳ ಹಕ್ಕುಗಳನ್ನು ನಿರಾಯಾಸವಾಗಿ ಕಿತ್ತುಕೊಂಡಿರುವುದಂತೂ ಸತ್ಯದ ಸಂಗತಿಯಾಗಿದೆ. ಒಟ್ಟಾರೆ ಕರ್ನಾಟಕದಲ್ಲಿನ ಎಲ್ಲ ಜಾತಿ ಜನಾಂಗಳಲ್ಲಿನ ೨೧ವರ್ಷ ವಯಸ್ಸಿಗಿಂತ ಮುಂಚೆ ವಿವಾಹಿತರಾದ ಗಂಡು ಮಕ್ಕಳ ಸಂಖ್ಯೆ ೧,೩೦,೬೩೮ರಷ್ಟಿದೆ. ರಾಜ್ಯದಲ್ಲಿ ೧,೧೪,೨೦೬ ಜನ ಮಕ್ಕಳು ೧೪ ವರ್ಷದೊಳಗೇ ವಿವಾಹಿತರಾಗಿದ್ದಾರೆ. ಇದರಲ್ಲಿ ೧೧೬೪ ಮಂದಿ ಬಾಲ ವಿಧುರರಾಗಿದ್ದರೆ, ೨೯೧೧ ಮಂದಿ ಬಾಲ ವಿಧವೆಯರಾಗಿದ್ದಾರೆ. ಇನ್ನು ೧೯ ವರ್ಷ ತುಂಬುವ ಮುನ್ನವೇ ವಿಧವೆಯರಾದ ಹೆಣ್ಣುಮಕ್ಕಳ ಸಂಖ್ಯೆ ೯೭೩೫ರಷ್ಟಿದೆ. ಇನ್ನು ೬,೧೦೫ ಮಂದಿ ಪತಿಯಿಂದ ಬೇರ್ಪಟ್ಟು ಬದುಕುತ್ತಿದ್ದಾರೆ. ೮೧೮ ಮಂದಿಯ ಮದುವೆ ಮುರಿದು ಬಿದ್ದಿದೆ" (ಪ್ರಜಾವಾಣಿ ೨೯ನೇ ಆಗಸ್ಟ್ ೨೦೧೫). ಹೀಗೆ ಕರ್ನಾಟಕ ರಾಜ್ಯದಲ್ಲಿ ಬಾಲ ವಿಧವೆಯರು ಮತ್ತು ಬಾಲ ವಿಧುರರು ಇರುವುದನ್ನು ಕಾಣಬಹುದು. ಇಲ್ಲಿ ಮುಖ್ಯವಾಗಿ ಬಾಲ ವಿಧುರರಿಗೆ ವಿವಾಹವಾಗಲು ಅವಕಾಶವಿದೆ, ಆದರೆ ಬಾಲ ವಿಧವೆಯರಿಗೆ ಈ ಅವಕಾಶವಿಲ್ಲ. ಇದು ಹಿಂದೂ ಸಂಸ್ಕೃತಿಯ ಅಘೋಷಿತ ನಿಯಮ. ಹಾಗಾಗಿಯೇ ಚಿಕ್ಕ ವಯಸ್ಸಿನಲ್ಲಿ ವಿಧವೆಯಾದ ಹೆಣ್ಣುಮಗು ತಾನು ಸಾಯುವವರೆಗೂ ವಿಧವೆಯಾಗಿಯೇ ಸಾಯಬೇಕಾದ ಅನಿವಾರ್ಯತೆ ವ್ಯವಸ್ಥೆಯಲ್ಲಿದೆ. ಮುಖ್ಯವಾಗಿ ವಿಧವೆ ಇನ್ನೊಂದು ವಿವಾಹವನ್ನು ಮಾಡಿಕೊಳ್ಳುವುದನ್ನು ಅಪರಾಧವೆಂದೇ

ವ್ಯವಸ್ಥೆ ಪರಿಗಣಿಸುತ್ತದೆ. ಆದರೆ ಸಂವಿಧಾನದಲ್ಲಿ ವಿಧವಾ ಪುನರ್ ವಿವಾಹಕ್ಕೆ ಅವಕಾಶವಿದೆ. ಆದರೆ ವಾಸ್ತವದಲ್ಲಿ ಇದು ಜಾರಿಯಲ್ಲಿಲ್ಲ. "ಭಾರತದಲ್ಲಿ ವಿಧವಾ ಆಚರಣೆಯನ್ನು ಒಂದು ಮಹಿಳಾ ವಿಷಯವಾಗಿ ಗುರುತಿಸಿಕೊಂಡಾಗ ಅದು ಹಿಂದೂ ಧರ್ಮದ ಮೇಲು ಸಮಾಜದ ಚೌಕಟ್ಟಿನಲ್ಲಿಯೇ ಇತ್ತು. ಈಶ್ವರಚಂದ್ರರು 'ಹಿಂದೂ ವಿಧವೆಯ ವಿವಾಹ' ಎಂಬುದಾಗಿಯೇ ಅದನ್ನು ಪ್ರಸ್ತಾಪಿಸಿದರು. ಆದರೆ ಸಮಕಾಲೀನ ಸಮಾಜವನ್ನು ನೋಡಿದರೆ ವಿಧವಾ ಸಮಸ್ಯೆ ಭಿನ್ನ ಭಿನ್ನ ರೂಪದಲ್ಲಿ ಎಲ್ಲಾ ಸಮಾಜದಲ್ಲೂ ಇದ್ದೇ ಇದೆ. ಅಂದರೆ ಯಾವೆಲ್ಲಾ ಸಮಾಜವು ಪಿತೃಪ್ರಧಾನತೆಯನ್ನು ಹೊಂದಿದ್ದು, ಹುಟ್ಟಿನಿಂದಲೇ ಸ್ತ್ರೀಯ ಆರ್ಥಿಕ, ಶೈಕ್ಷಣಿಕ ಅಗತ್ಯಗಳನ್ನು ನಿರಾಕರಿಸುತ್ತವೆಯೋ, ಪಾವಿತ್ರ್ಯವನ್ನು ಸ್ತ್ರೀಯ ಮೇಲೆ ಹೇರಲಾಗಿರುತ್ತದೆಯೋ ಆ ಎಲ್ಲ ಸಮಾಜಗಳಲ್ಲಿ ಈ ಸಮಸ್ಯೆ ಒಂದಲ್ಲಾ ಒಂದು ಬಗೆಯಲ್ಲಿ ಕಾಣಬಹುದಾಗಿದೆ" (ಉಷಾ ಎಂ., ೨೦೦೪,ಪು-೮೧). ಹೀಗೆ ಕೇವಲ ಉನ್ನತ ಸಮಾಜದಲ್ಲಿ ಅತ್ಯಂತ ಹೆಚ್ಚು ಪಾಲಿತವಾಗುತ್ತಿದ್ದ ವಿಧವಾ ಪದ್ಧತಿ, ಕೆಳ ಹಂತದ ಸಮುದಾಯಗಳಲ್ಲಿ ಹೇಗೆ ಮೇಳೈಸಿಕೊಂಡಿತು ಎಂಬುದೇ ಚಿಂತನಾರ್ಹ. ಮುಖ್ಯವಾಗಿ ಪ್ರತಿಯೊಂದು ಜಾತಿ ಸಮುದಾಯಗಳು ಪಿತೃಪ್ರಧಾನ ಮೌಲ್ಯಗಳನ್ನು ಹೊಂದಿರುವುದರಿಂದ ಅವುಗಳೆಲ್ಲವೂ ಮಹಿಳೆಯರನ್ನು ತನ್ನ ಅಧೀನದಲ್ಲಿಯೇ ಇರಿಸಿಕೊಳ್ಳಲು ಮುಂದಾಗಿರುತ್ತವೆ. ಹಾಗಾಗಿಯೇ ವೈಧವ್ಯದ ಹೆಸರಿನಲ್ಲಿ ಮಹಿಳೆಯರ ಎಲ್ಲ ಬಗೆಯ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುತ್ತಿರುವುದು ಕಂಡುಬರುತ್ತದೆ.

ಬಾಲ್ಯ ವಿವಾಹಕ್ಕೆ ಒಳಗಾದ ಗಂಡು ಮಕ್ಕಳೂ ತೊಂದರೆಗಳಿಗೆ ಒಳಗಾಗುತ್ತಾರೆ. ಆದರೆ ಈ ಸಮಸ್ಯೆಗಳು ಹೆಣ್ಣುಮಕ್ಕಳು ಎದುರಿಸುತ್ತಿರುವುದಕ್ಕಿಂತ ತೀವ್ರವಾಗೇನೂ ಇರುವುದಿಲ್ಲ. ಕುಟುಂಬದಲ್ಲಿನ ಗಂಡುಮಕ್ಕಳಿಗೆ ಜವಾಬ್ದಾರಿ ಬರಲೆಂದು ಬಹು ಬೇಗನೇ ವಿವಾಹ ಮಾಡುತ್ತಾರೆ. ಆದರೆ ಕೆಲವು ಸಂದರ್ಭಗಳಲ್ಲಿ ಆ ಜವಾಬ್ದಾರಿಗಳಿಂದ ವಿಮುಖನಾಗಿರುತ್ತಾನೆ. ಆದರೆ ಇದನ್ನು ವ್ಯವಸ್ಥೆ ಸಹಿಸಿಕೊಳ್ಳುತ್ತದೆ. ಏಕೆಂದರೆ ಅವನೊಬ್ಬ ಪುರುಷ. ವ್ಯವಸ್ಥೆ ಇರುವುದೇ ಅವನ ಪರವಾಗಿ. ಅವನು ಏನೇ ಮಾಡಿದರೂ ಅದು ಸರಿಯಾಗೇ ಇರುತ್ತದೆ ಮತ್ತು ಮುಂದೊಂದು ದಿನ ಸರಿಯಾಗಬಹುದು ಎಂಬ ಧೋರಣೆ ತಂದೆ ತಾಯಂದಿರಲ್ಲಿರುತ್ತದೆ. ಬಾಲ್ಯ ವಿವಾಹಕ್ಕೆ ಒಳಗಾದ ಗಂಡುಮಕ್ಕಳು ಶಾಲೆಯಿಂದ ಅಂದರೆ ಶಿಕ್ಷಣದಿಂದ ವಂಚಿತರಾಗಿರುವಂತಹದ್ದು ಕಂಡುಬರುತ್ತದೆ. ಆದರೆ ಇದು ಅವರಿಗೆ ಗಂಭೀರ ಸಮಸ್ಯೆಯೇನೂ ಅಲ್ಲ. ಏಕೆಂದರೆ ಪುರುಷ ಮನೆಯಿಂದ ಹೊರ ಹೋಗಿ ದುಡಿಯಲು ಎಷ್ಟು ಶಿಕ್ಷಣ ಬೇಕೋ ಅಷ್ಟನ್ನು ಮಾತ್ರ ಪಡೆದಿದ್ದರೆ ಸಾಕು ಅಥವಾ ಕೂಲಿನಾಲಿ ಮಾಡಿಕೊಂಡು ಚೆನ್ನಾಗಿ ಜೀವನ ಸಾಗಿಸಿದರೆ ಸಾಕು ಎಂಬ ಮನೋಭಾವ ವ್ಯವಸ್ಥೆಯಲ್ಲಿದೆ. ಆದರೆ ಇವುಗಳು ಏನೇ ಇದ್ದರೂ ಬಾಲ್ಯ ವಿವಾಹಕ್ಕೆ ಒಳಗಾದ ಗಂಡು ಮಕ್ಕಳು ತಮ್ಮ ಬಾಲ್ಯವನ್ನು ಕಳೆದುಕೊಳ್ಳುತ್ತಾರೆ. ಹಾಗೆಯೇ ತಮಗೆ ಸಂವಿಧಾನ ಬದ್ಧವಾಗಿ ನೀಡಿರುವ ಹಕ್ಕುಗಳನ್ನೂ ಕಳೆದುಕೊಳ್ಳುತ್ತಾರೆ.

### ೭. ಇತರೆ ಸಮಸ್ಯೆಗಳು

ಬಾಲ್ಯ ವಿವಾಹಕ್ಕೆ ಒಳಗಾದಂತಹ ಹೆಣ್ಣುಮಕ್ಕಳು ಮೇಲಿನ ಎಲ್ಲ ಸಮಸ್ಯೆಗಳ ಜೊತೆಗೆ ಇತರೆ ಸಮಸ್ಯೆಗಳನ್ನೂ ಎದುರಿಸುತ್ತಿದ್ದಾರೆ. ಮುಖ್ಯವಾಗಿ ಅವುಗಳನ್ನು ಕೆಳಗಿನಂತೆ ಗುರುತಿಸಿ ವಿಶ್ಲೇಷಿಸಲಾಗಿದೆ. ಅ. ಹೆಣ್ಣುಮಕ್ಕಳ ಆತ್ಮಹತ್ಯೆಗೆ ಕಾರಣವಾಗುತ್ತಿದೆ ಆ. ಹೆಣ್ಣುಮಕ್ಕಳನ್ನು ವೇಶ್ಯಾವಾಟಿಕೆಗೆ ದೂಡುತ್ತದೆ.

**ಅ. ಹೆಣ್ಣುಮಕ್ಕಳ ಆತ್ಮಹತ್ಯೆಗೆ ಕಾರಣವಾಗುತ್ತಿದೆ** : ಬಾಲ್ಯ ವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳು ಗಂಡನ ಮನೆಯಲ್ಲಿನ ಹಿಂಸೆಯನ್ನು ತಾಳಲಾರದೇ ಆತ್ಮಹತ್ಯೆಗೆ ಯತ್ನಿಸುತ್ತಿರುವ ಪ್ರಕರಣಗಳು ಕಂಡುಬಂದಿವೆ. ಮುಖ್ಯವಾಗಿ ಕುಷ್ಟಗಿ ತಾಲೂಕಿನ ಎಸ್.ಗಂಗನಾಳ ಗ್ರಾಮದ ಯಮುನಮ್ಮ ಎಂಬ ಹೆಣ್ಣುಮಗು ಎಸ್.ಎಸ್.ಎಲ್.ಸಿ.ಯಲ್ಲಿ ಶೇ. ೭೨ ಅಂಕಗಳೊಂದಿಗೆ ಪಾಸಾಗಿದ್ದರೂ, ಆಕೆಯ ಮುಂದಿನ ವಿದ್ಯಾಭ್ಯಾಸಕ್ಕೆ ತೊಂದರೆಯಾಗಿದೆ. ಅದಕ್ಕೆ ಕಾರಣ ಬಾಲ್ಯ ವಿವಾಹ. ಯಮುನಮ್ಮಳಿಗೆ ಓದಬೇಕೆಂದಿದ್ದರೂ ಅವಳಿಗೆ ಶಿಕ್ಷಣವನ್ನು ಕೊಡಿಸದೇ ವಿವಾಹ ಮಾಡುವುದರ ಮೂಲಕ ವಿದ್ಯಾಭ್ಯಾಸವನ್ನು ಮೊಟುಕುಗೊಳಿಸಿದ್ದಾರೆ. ಇದನ್ನು ಸಹಿಸಿಕೊಳ್ಳದ ಯಮುನಮ್ಮ ಆತ್ಮಹತ್ಯೆಗೆ ಯತ್ನಿಸಿದ್ದಾಳೆ. ಈ ವಿಷಯ ತಿಳಿದು ಅವರನ್ನು ಭೇಟಿಯಾದಾಗ ಯಮುನಮ್ಮ ಹೇಳುವಂತೆ "ನನಿಗ ಓದ್ಬೇಕು ಅಂತ ಬಾಳ ಆಸಿ ಇತ್ತು. ಹಂಗಾಗೇ ೧೦ನೇ ಕ್ಲಾಸಿನಾಗ ಚೆನ್ನಾಗಿ ಓದಿದೆ. ಮುಂದೆ ಇನ್ನು ಓದಿ ಯಾವದಾದ್ರೂ ಸರ್ಕಾರಿ ನೌಕ್ರಿ ತಗಬೇಕು ಅಂತ ತಿಳ್ದಿದ್ದೆ. ಆದ್ರೆ ನಮ್ ಮನ್ಯಾಗ ಮದುವಿ ಮಾಡಾಕ ಎಲ್ಲಾ ರೆಡಿ ಮಾಡಿದ್ರು. ಇನ್ನ ನಂದು ೧೦ನೇ ಕ್ಲಾಸು ರಿಸಲ್ಟ್ ಬಂದು ಸ್ವಲ್ಪ ದಿನ ಆಗಿತ್ತು. ನನಿಗೆ ಮದುವಿ ಇಷ್ಟ ಇಲ್ಲ. ನಾನು ಓದ್ಬೇಕು ಅಂತ ಹಠ ಹಿಡ್ದೆ. ಆವಾಗ ನಮ್ ಅಪ್ಪ ಇದ್ದು, ನೀನು ಮೊದ್ಲು ಮದುವಿ ಮಾಡ್ಕ ಆಮ್ಯಾಲೆ ಓದಿಸ್ತೀವಿ. ಮದುವಿ ಆದ್ ಮ್ಯಾಲೂ ಓದ್ಬೋದು. ನಿನ ಗಂಡಗ ಮತ್ತೆ ಅತ್ತಿ ಮಾವನೋರಿಗೆ ಹೇಳ್ತೀವಿ. ಅಂತ ಹೇಳಿದ್ರು, ಹಂಗಾಗಿ ನಾನು ಮದುವಿ ಆಗಾಕ ಒಪ್ಪಿದೆ. ಆದ್ರೆ ಮದುವಿ ಆದ್ ಮ್ಯಾಲೆ ನನ್ ಓದಿನ್ ಬಗ್ಗಿ ಯಾರೂ ಮಾತಾಡಂಗಿಲ್ಲ. ಗಂಡಗ ಕೇಳಿದ್ರೆ ಇನ್ನೇನು ಓದೋದು ಮುಗೀತು. ನೀನು ಇಲ್ಲ ಮನ್ಯಾಗ ಕೆಲ್ಸ ಮಾಡಿಕೆಂಡು ಇರು. ಓದೋದು ಏನೂ ಬ್ಯಾಡ ಅಂತ ಹೇಳಿದ್ರು. ಅದನ್ನ ಕೇಳಿ ಬಾಳ ಬೇಜಾರಾತು. ಅದಕ್ಕ ನಾನು ನಮ್ ತವ್ರ ಮನಿಗಿ ಹೋಗ್ತೀನಿ ಅಂತ ಅಲ್ಲಿಂದ ಬಂದು ಬಿಟ್ಟೆ. ಇಲ್ಲಿ ನಮ್ ಅಪ್ಪ ಅಮ್ಮಗ ನಾನು ಓದ್ಬೇಕು. ನನ್ನ ಓದಿಸ್ರಿ, ದೊಡ್ಡೋಳಾದ ಮ್ಯಾಲೆ ಗಂಡನ ಮನಿಗೆ ಹೋಗ್ತೀನಿ ಅಂತ ಹೇಳಿದೆ. ಆದ್ರೆ ನನ್ ಮಾತನ್ನ ಕೇಳಾಕ ತೈಯಾರಿರ್ಲಿಲ್ಲ. ನಿನಿಗೆ ಮದುವಿ ಮಾಡಿ ಕೊಟ್ಟೇವಿ ಇನ್ನು ನೀನು ನಿನ್ ಗಂಡ ಹೇಳ್ದಂಗ ಕೇಳ್ಬೇಕು. ಅವ್ನು ಓದ್ಸಾಕ ಒಪಿಗಿ ಕೊಟ್ರ ಓದು. ಇಲ್ಲಾಂದ್ರ ಬ್ಯಾಡ. ಈಗ ನೀನು ನಿನ್ ಗಂಡನ ಮನಿಗಿ ಹೋಗು ಅಂತ ಮನಿಲಿಂದ ಹೊರ್ಗ ಹಾಕಿದ್ರು, ನಾನು ಏನ್ ಮಾಡ್ಬೇಕು ಅಂತ ಗೊತ್ತಾಗ್ದೆ ಬಸ್ಸ್ಯಾಂಡಿಗೆ ಬಂದು ಯೋಚ್ನೆ ಮಾಡ್ದೆ. ಇವ್ರು ನನ್ನ ಓದ್ಸಲ್ಲ ಅಂತ ಗೊತ್ತಾದ್ ಮ್ಯಾಲೆ ಸತ್ತೋಗಿಬಿಡಾನು ಅಂತ ತಿಳ್ದು ನಿರ್ಧಾರ ಮಾಡ್ದೆ. ಇದು ಅಲ್ಲೇ ಇರೋ ಪೋಲೀಸ್ರಿಗಿ

ಗೊತ್ತಾಗಿ ನನ್ನ ಮಕ್ಕಳ ಕಲ್ಯಾಣ ಸಮಿತಿಗೆ ಒಪ್ಪಿಸಿದ್ರು. ಇಲ್ಲಿ ನನ್ನ ಪಿಯುಸಿಗೆ ಸೇರಸ್ತೀವಿ ಅಂತ ಹೇಳ್ಯಾರ." ಎಂದು ಹೇಳಿದರು.

ಇನ್ನೊಂದು ಪ್ರಕರಣದಲ್ಲಿ ಅನಿತಾ ಎಂಬುವವರಿಗೆ ತನ್ನ ೧೩ನೇ ವಯಸ್ಸಿನಲ್ಲಿ ವಿವಾಹ ಮಾಡಿದ್ದು, ಇವರು ತನ್ನ ಗಂಡನ ಕಾಟವನ್ನು ತಾಳಲಾರದೇ ಆತ್ಮಹತ್ಯೆಗೆ ಯತ್ನಿಸಿರುವ ಘಟನೆ ನಡೆದಿದೆ. ಇವರನ್ನು ಭೇಟಿಯಾದಾಗ ಇವರು ಹೇಳಿದ್ದು ಹೀಗೆ "ನಮ್ ಮನ್ಯಾಗ ಬಾಳ ಕಷ್ಟ ಐತಿ. ಅದಕ್ಕ ನನಿಗೆ ಇನ್ನ ೧೩ ವರ್ಷ ದಾಟರ್ಲಿಲ್ಲ ಅಷ್ಟೊತ್ತಿಗೆ ಮದುವಿ ಮಾಡಿ ಕೊಟ್ರು. ಮದುವಿ ಆಗಿ ಒಂದೆರಡು ತಿಂಗ್ಳ ಚೆನ್ನಾಗೇ ಇದ್ವಿ. ಆದ್ರೆ ಯಾವಾಗ ಒಂದು ಹೆಣ್ಮಳ್ನನ್ನ ಹೆತ್ನೋ ಆವಾಗ್ಲಿಂದ ಕಾಟಗೋಳು ಸುರು ಆದ್ವು. ನನ ಗಂಡಗ ಹೆಣ್ಮಕ್ಳು ಅಂದ್ರೆ ಆಗಿ ಬರಂಗಿಲ್ಲ. ಅದಕ್ಕ ದಿನಾಲೂ ಕುಡುದು ಬರೋದು ಹೊಡಿಯೋದು ಮಾಡ್ತಿದ್ದ. ನನಿಗಿ ಹೆರಿಗಿ ಆಗಿ ಮೂರೇ ತಿಂಗ್ಳಿಗೆ ಹೊಡ್ದಬಿಟ್ಟ, ಯಾಕಂತ ಕೇಳಿದ್ರೆ ಹೆಣ್ಮಗಳನ್ನ ಯಾಕೆ ಹೆತ್ತಿ ಅಂತ ಹೇಳೋದು ಹೊಡಿಯೋದು ಮಾಡ್ದ. ಅಲ್ಲಿರೋದು ನನಿಗಂತೂ ಬಾಳ ಕಷ್ಟ ಆಗಿತ್ತು. ಅದಕ್ಕ ನಾನು ಮಗಳ್ನ ಕರ್‍ಕಂಡು ನಮ್ ತವ್ರ ಮನಿಗಿ ಬಂದುಬಿಟ್ಟೆ. ಇಲ್ಲಿ ನೋಡಿದ್ರೆ ಅಪ್ಪ ಅಮ್ಮ ಇಬ್ರೂ ಸತೆ ಮತ್ತೆ ನನ್ನ ಅಲ್ಲಿಗೇ ಕಳ್ಸಾಕ ನೋಡಾಕತ್ತಿದ್ರು. ನಾನು ಹೋಗಲ್ಲ ಅಂತ ಹಠ ಹಿಡ್ದು ಕುಂತೆ. ಒಂದಿನ ಗಂಡ ಬಂದು ಇನ್ನೊಂದ್ಸಾರಿ ಹಂಗಾಗಂಗಿಲ್ಲ. ನಿನ್ನ ಚೆನಾಗಿ ನೋಡ್ಕಂತೀನಿ ಅಂತ ಹೇಳ್ದ. ಆದ್ರೆ ನಾನು ಕುಡಿಯೋದು ಬಿಡ್ಬೇಕು ಹಂಗಾದ್ರೆ ಬರ್ತೀನಿ ಅಂತ ಹಠ ಹಿಡ್ದೆ. ಅದಕ್ಕ ಒಪ್ದ. ನಾನು ಅದನ್ನ ನಂಬಿ ಗಂಡನ ಮನಿಗೆ ಹೋದೆ. ಸ್ವಲ್ಪು ದಿನ ಚೆನ್ನಾಗೇ ಇದ್ದ. ಆಮ್ಯಾಲೆ ಕುಡಿಯೋದು, ಹೊಡಿಯೋದು ಸುರು ಮಾಡ್ದ. ನನಿಗೆ ಬಾಳ ಬ್ಯಾಸರ ಆಗಿತ್ತು. ಒಂದಿನಂತೂ ಮೈಮ್ಯಾಲೆ ರಕ್ತ ಬರಂಗ ಹೊಡ್ದುಬಿಟ್ಟ. ನನಿಗೆ ಸಿಟ್ಟು ಬಂದು ಇಲ್ಲಿ ಇವ್ನ ಕುಟು ಹೊಡಸ್ಕಂಡು ನೋವು ಪಡೋದಕ್ಕಿಂತ ಸಾಯೋದೇ ಮೇಲು ಅಂತ ತಿಳ್ದು ವಿಷ ತಗಂಡು ಬಿಟ್ಟೆ. ಈ ವಿಚಾರ ನಮ್ ಪಕ್ಕದ ಮನೇರಿಗೆ ಗೊತ್ತಾಗಿ ನನ್ನ ಆಸ್ಪತ್ರೆಗಿ ಕರ್‍ಕಂಡು ಹೋಗಿ ತೋರಿಸಿದ್ರು. ಈಗ ನಾನು ನಮ್ ತವ್ರ ಮನ್ಯಾಗ ಐದೀನಿ. ನನಿಗಿ ಓದಿಸಿದ್ರೆ ಚೆನ್ನಾಗಿ ಓದತಿದ್ದೆ. ನನ್ನ ವಾರಿಗೇರು ಇನ್ನ ಓದಾಕತ್ಯಾರ. ನನ್ ಬಾಳೇವು ನೋಡಿದ್ರೆ ಹಿಂಗ ಆಗೇತಿ. ಜೀವ್ನಂದಾಗ ಏನೇನು ಅನುಬೋವಿಸ್ಬಾರ್‍ದೋ ಅದನ್ನೆಲ್ಲಾ ಈ ವಯಸ್ಸಿಗೇ ಅನುಬೋಸಿಬಿಟ್ಟೆ. ಏನ್ ಮಾಡಾದು ನನ್ ಹಣೇಬರ" ಎಂದು ಹೇಳುತ್ತಾ ಸುಮ್ಮನಾದರು.

ವ್ಯವಸ್ಥೆಯಲ್ಲಿ ಹೆಣ್ಣುಮಕ್ಕಳಿಗೆ ಬಾಲ್ಯ ವಿವಾಹ ಎಂಬುದು ಸಾವಿನಂಚಿಗೆ ದೂಡುವ ಸ್ಥಿತಿಯನ್ನು ತಂದೊಡ್ಡುತ್ತದೆ. ಚಿಕ್ಕ ವಯಸ್ಸಿನಲ್ಲಿ ಆಟವಾಡಿಕೊಂಡು ಜೀವಿಸಬೇಕಾದ ವಯಸ್ಸಿನಲ್ಲಿ ವಿವಾಹ ಬಂಧನಕ್ಕೆ ಸಿಲುಕಿ ಕುಟುಂಬದ ಬೃಹತ್ ಜವಾಬ್ದಾರಿಯನ್ನು ಹೊರುವ ಹಾಗೆ ಮಾಡಲಾಗುತ್ತಿದೆ. ಹೀಗೆ ಮಾಡುತ್ತಿರುವುದರಿಂದ ಬಹಳಷ್ಟು ಹೆಣ್ಣುಮಕ್ಕಳು ತಮ್ಮ ಆಸೆಗಳನ್ನು ಈಡೇರಿಸಿಕೊಳ್ಳಲಾಗದೇ ಆತ್ಮಹತ್ಯೆಗೆ ಯತ್ನಿಸುತ್ತಿರುವುದು ಕಂಡುಬರುತ್ತದೆ. ಮುಖ್ಯವಾಗಿ ವ್ಯವಸ್ಥೆಗೆ ಹೆಣ್ಣುಮಕ್ಕಳ ಆಸೆ ಆಕಾಂಕ್ಷೆಗಳಾವುವೂ ಮುಖ್ಯವಾಗುವುದಿಲ್ಲ. ಬದಲಾಗಿ ಪಿತೃಪ್ರಧಾನ

ವ್ಯವಸ್ಥೆ ಯಾವ ನಿರೀಕ್ಷೆಯನ್ನು ಹೊಂದಿರುತ್ತದೆಯೋ ಅದರ ಈಡೇರಿಕೆಗಾಗಿ ಶ್ರಮಿಸುತ್ತದೆ. ಹಾಗಾಗಿಯೇ ಕುಟುಂಬಗಳಲ್ಲಿ ಮಹಿಳೆಯರ ಮೇಲೆ ಇನ್ನಿಲ್ಲದ ಕೆಲಸಗಳ ಭಾರವನ್ನು ಹಾಕುವುದರ ಮೂಲಕ ಪಿತೃಪ್ರಧಾನ ವ್ಯವಸ್ಥೆ ತಾನು ನಿರಾಳತೆಯನ್ನು ಹೊಂದುತ್ತಿರುತ್ತದೆ. ಇದು ಮಹಿಳೆಯರಿಗೆ ಹಿಂಸೆಯ ಪರಮಾವಧಿಯಾಗಿರುತ್ತದೆ. ಈ ಬಗೆಯ ಮಹಿಳೆಯರ ಮೇಲಿನ ಹಿಂಸೆ ಮಾನವ ಚರಿತ್ರೆಯಲ್ಲಿ ಅನಾದಿಕಾಲದಿಂದಲೂ ನಡೆದೇ ಬಂದಿದೆ. ಇದು ಕೇವಲ ಲಿಂಗದ ನೆಲೆಯಲ್ಲಲ್ಲದೇ ಸಮುದಾಯ, ಜಾತಿ, ಧರ್ಮಗಳಲ್ಲಿ ಎಲ್ಲದರಲ್ಲೂ ಒಂದು ವರ್ಗವನ್ನು ಇನ್ನೊಂದು ವರ್ಗ ಶೋಷಿಸುತ್ತಲಿವೆ. ಹಾಗಾಗಿಯೇ ಈ ಶೋಷಣೆಗೆ ನಿಲುಗಡೆಯೇ ಇಲ್ಲವಾಗಿದೆ. ವಿವಾಹವು ಮಾನವ ಕುಲದ ಮುಂದುವರಿಕೆಗೆ ತಳಹದಿಯಾಗಿದ್ದರೆ, ಬಾಲ್ಯ ವಿವಾಹವು ಹೆಣ್ಣುಮಕ್ಕಳಿಗೆ ಸಾವಿನ ಸಂಕೇತವಾಗಿದೆ. ಏಕೆಂದರೆ ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳಿಗೆ ವಿವಾಹ ಮಾಡುವುದರಿಂದ ಅವರು ತಾವು ಹೊಂದಬಹುದಾಗಿದ್ದ ಸ್ವತಂತ್ರ ಅಸ್ತಿತ್ವವನ್ನು ಬಹು ಬೇಗನೇ ಕಳೆದುಕೊಳ್ಳುತ್ತಾರೆ. ಹಾಗೆಯೇ ಸಾಯುವವರೆಗೂ ಪರಾವಲಂಬಿಯಾಗಿಯೇ ಜೀವಿಸುತ್ತಾರೆ. ಹಿಂಸೆಯನ್ನು ಮೌನವಾಗಿ ಸಹಿಸಿಕೊಳ್ಳುವ ಕೆಲವು ಹೆಣ್ಣುಮಕ್ಕಳು ವ್ಯವಸ್ಥೆಯ ವಿರುದ್ಧವಾಗಿ ನಡೆದುಕೊಂಡರೆ, ಆಗ ವ್ಯವಸ್ಥೆ ಮತ್ತೆ ಮತ್ತೆ ಆ ಹೆಣ್ಣುಮಗುವಿಗೆ ತನ್ನ ನಿರೀಕ್ಷೆ ಏನೆಂಬುದನ್ನು ತೋರ್ಪಡಿಸುವುದರ ಮೂಲಕ ಅವಳ ಸ್ವಂತ ಅಸ್ತಿತ್ವಕ್ಕೆ ಧಕ್ಕೆಯನ್ನುಂಟುಮಾಡುತ್ತದೆ. ಈ ನಿರೀಕ್ಷೆಯನ್ನು ಪೂರೈಸಲಾಗದ ಹೆಣ್ಣುಮಕ್ಕಳು ಅಸಹಾಯಕರಾಗಿ ಸಾವಿಗೆ ಮೊರೆಹೋಗುತ್ತಾರೆ. ಮೇಲಿನ ಮೊದಲ ಪ್ರಕರಣದಲ್ಲಿನ ಯಮುನಮ್ಮ ತಾನು ಚೆನ್ನಾಗಿ ಓದಬೇಕು, ಅದರ ಮೂಲಕ ಒಂದು ಸರ್ಕಾರಿ ಕೆಲಸವನ್ನು ಪಡೆದು ತನ್ನ ಸ್ವಂತ ಅಸ್ತಿತ್ವವನ್ನು ಹೊಂದಬೇಕು ಎಂಬ ಆಸೆಯನ್ನು ಹೊಂದಿದ್ದಳು. ಆದರೆ ಕುಟುಂಬದ ಸದಸ್ಯರು ಯಮುನಮ್ಮಳ ಆಸೆಯನ್ನು ನಿರಾಸೆಗೊಳಿಸಿದರು. ಒಂದು ಸಾರಿ ಹೆಣ್ಣಿನ ಕೊರಳಲ್ಲಿ ತಾಳಿ ಬಿದ್ದರೆ ಸಾಕು ತಮ್ಮ ಜವಾಬ್ದಾರಿ ಮುಗಿದಂತೆಯೇ ಎಂಬುದಾಗಿ ಕುಟುಂಬದ ಹಿರಿಯರು ಭಾವಿಸಿರುತ್ತಾರೆ. ಹಾಗಾಗಿಯೇ ಯಮುನಮ್ಮಳಿಗೆ ಸುಳ್ಳು ಹೇಳುವುದರ ಮೂಲಕ ಮದುವೆಗೆ ಒಪ್ಪಿಸಿದ್ದಾರೆ. ಅದನ್ನು ನಂಬಿದ ಯಮುನಮ್ಮ ವಿವಾಹವಾದೊಡನೆ ತನ್ನನ್ನು ಶಾಲೆಗೆ ಕಳುಹಿಸುವಂತೆ ಕೇಳುತ್ತಾಳೆ. ಆದರೆ ಗಂಡನಾದವನು ಒಪ್ಪದಿದ್ದಾಗ ಅಲ್ಲಿಂದ ವಾಪಾಸ್ ತವರು ಮನೆಗೆ ಬಂದಿದ್ದಾಳೆ. ಅಲ್ಲಿ ತಂದೆ ತಾಯಿಯ ಸಮ್ಮುಖದಲ್ಲಿ ತನ್ನ ಆಸೆಯನ್ನು ವ್ಯಕ್ತಪಡಿಸಿದಾಗ ಅವರೂ ಮಗಳ ಮಾತಿಗೆ ಏನನ್ನೂ ಹೇಳದೇ ನಿಸ್ಸಾಹಯಕರಾಗಿರುತ್ತಾರೆ. ಆ ಕಾರಣಕ್ಕಾಗಿ ಮನೆಯಿಂದ ಆಚೆ ಹೋಗುವಂತೆ ಮತ್ತು ಗಂಡನ ಮನೆಯನ್ನು ಪುನಃ ಸೇರಿಕೊಳ್ಳುವಂತೆ ತಾಕೀತು ಮಾಡಿದ್ದಾರೆ. ಇದರಿಂದ ಯಮುನಮ್ಮಳಿಗೆ ದಿಕ್ಕು ತೋಚದಂತಾಗಿ ಆತ್ಮಹತ್ಯೆಗೆ ಯತ್ನಿಸುವುದು ಕಂಡುಬರುತ್ತದೆ. ಇದು ವ್ಯವಸ್ಥೆ ಹೆಣ್ಣುಮಗುವನ್ನು ನಡೆಯಿಸಿಕೊಳ್ಳುವ ವಿಧಾನವಾಗಿದೆ. ಯಮುನಮ್ಮ ಏನನ್ನೂ ಮಾಡಲಾಗದೇ ಅಸಹಾಯಕಳಾಗಿ ತನ್ನನ್ನು ತಾನೇ ಶಿಕ್ಷಿಸಿಕೊಳ್ಳುವ ಮಟ್ಟಕ್ಕೆ ತಲುಪಿರುವುದು ಕಂಡುಬರುತ್ತದೆ. ವಿವಾಹದ ನಂತರ ಗಂಡನ ಮನೆಯನ್ನು ಬಿಟ್ಟು ಬಂದ ಯಮುನಮ್ಮಳನ್ನು ವ್ಯವಸ್ಥೆ ಆರೋಪಿಯನ್ನಾಗಿ, ಅಪರಾಧಿಯನ್ನಾಗಿ

ಪರಿಗಣಿಸುತ್ತದೆಯೇ ವಿನಃ ಯಮುನಮ್ಮಳ ಭವಿಷ್ಯ ಶಿಕ್ಷಣದಿಂದ ವಿಕಸನಗೊಳ್ಳುತ್ತದೆ ಎಂಬುದನ್ನು ಅರಿಯುವುದಿಲ್ಲ. ಹಾಗಾಗಿಯೇ ಆಕೆ ಪಿತೃಪ್ರಧಾನ ವ್ಯವಸ್ಥೆಯಿಂದ ನಿರಾಕರಿಸಲ್ಪಟ್ಟದ್ದಾಳೆ. ಹೀಗೆ ಬಾಲ್ಯದಲ್ಲಿ ವಿವಾಹ ಬಂಧನಕ್ಕೆ ಸಿಲುಕಿದ ಹಲವು ಹೆಣ್ಣುಮಕ್ಕಳು ತಮ್ಮ ಆಸೆಯನ್ನು ಈಡೇರಿಸಿಕೊಳ್ಳಲಾಗದೇ, ಪಿತೃಪ್ರಧಾನ ಮೌಲ್ಯಗಳಿಗೆ ಒಗ್ಗಿಕೊಳ್ಳಲಾಗದೇ ಬದುಕಿನಲ್ಲಿ ಅತಂತ್ರ ಸ್ಥಿತಿಯನ್ನು ಎದುರಿಸುತ್ತಿರುವುದು ಕಂಡುಬರುತ್ತದೆ. ಈ ಅತಂತ್ರ ಮನಸ್ಥಿತಿಯ ಕಾರಣದಿಂದ ಕೊನೆಗೊಂದು ದಿನ ಆತ್ಮಹತ್ಯೆಯಂತಹ ನಿರ್ಧಾರವನ್ನು ಕೈಗೊಳ್ಳುವುದಕ್ಕೆ ಮುಂದಾಗುತ್ತಿದ್ದಾರೆ. ಇದಕ್ಕೆ ವ್ಯವಸ್ಥೆಯಲ್ಲಿ ರೂಢಿಯಲ್ಲಿರುವ ಪಿತೃಪ್ರಧಾನ ಮೌಲ್ಯಗಳೇ ಕಾರಣವಾಗಿವೆ.

**ಆ. ಹೆಣ್ಣುಮಕ್ಕಳನ್ನು ವೇಶ್ಯಾವಾಟಿಕೆಗೆ ದೂಡುತ್ತದೆ :** ಬಾಲ್ಯ ವಿವಾಹಗಳು ಗ್ರಾಮೀಣ ಭಾಗಗಳಲ್ಲಿ ಹೆಚ್ಚಾಗಿ ನಡೆಯುತ್ತವೆಯಾದ್ದರಿಂದ, ಅಲ್ಲಿನ ಹೆಣ್ಣುಮಕ್ಕಳು ಶಿಕ್ಷಣದಿಂದ ವಂಚಿತರಾಗಿರುತ್ತಾರೆ. ಹಾಗಾಗಿ ಬಾಲ್ಯದಲ್ಲಿ ವಿವಾಹ ಬಂಧನಕ್ಕೆ ಒಳಗಾದ ಕೆಲವು ಹೆಣ್ಣುಮಕ್ಕಳು ಗಂಡನ ಮನೆಯಲ್ಲಿ ಸಂಸಾರದ ಜವಾಬ್ದಾರಿಯನ್ನು ನಿಭಾಯಿಸಲಾರದೇ ಮತ್ತು ಗಂಡನ ಮನೆಯ ಹಿಂಸೆಯನ್ನು ತಾಳಲಾರದೇ ಅಲ್ಲಿಂದ ಹೊರ ಬಂದು ಬದುಕನ್ನು ಅತಂತ್ರಗೊಳಿಸಿಕೊಳ್ಳುವುದರ ಮೂಲಕ ವೇಶ್ಯಾವಾಟಿಕೆಗೆ ಒಳಗಾಗುತ್ತಿರುವುದು ಕಂಡುಬರುತ್ತಿದೆ.

ಹೀಗೆ ಕುಟುಂಬದಲ್ಲಿ ಅತಂತ್ರಗೊಂಡ ಹೆಣ್ಣುಮಕ್ಕಳ ಜೀವನ ಮತ್ತೆ ವ್ಯವಸ್ಥೆಯ ಕಪಿಮುಷ್ಠಿಯಲ್ಲಿ ಸಿಲುಕಿಕೊಳ್ಳುತ್ತದೆ. ಅಂದರೆ ವಿವಾಹದ ನಂತರ ಒಂದು ಕುಟುಂಬಕ್ಕೆ ಸೀಮಿತವಾಗಿದ್ದ ಆಕೆಯ ಲೈಂಗಿಕತೆ ವೇಶ್ಯಾವಾಟಿಕೆಗೆ ಒಳಗಾದ ಮೇಲೆ ಸಮಾಜದ ಸ್ವತ್ತಾಗುತ್ತದೆ. ಹೆಣ್ಣನ್ನು ಒಂದು ವಸ್ತುವಾಗಿ ಪರಿಗಣಿಸಿರುವ ವ್ಯವಸ್ಥೆ ಆಕೆಯ ಲೈಂಗಿಕತೆಯ ಮೇಲೆ ಅಧಿಕಾರವನ್ನು ಚಲಾಯಿಸಬೇಕಾದರೆ, ಅದಕ್ಕೆ ಸಮಾಜದ ಒಪ್ಪಿಗೆ ಬೇಕಾಗುತ್ತದೆ. ಈ ಒಪ್ಪಿಗೆ ವಿವಾಹದ ಮೂಲಕ ದೊರೆತಾಗ, ಪುರುಷ ತನ್ನೆಲ್ಲಾ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಮಹಿಳೆಯನ್ನು ವಸ್ತುವಾಗಿ ಬಳಸಿಕೊಳ್ಳುತ್ತಾನೆ. ಒಂದುವೇಳೆ ಹೆಣ್ಣು ತನ್ನ ಆಸೆಗಳಿಗೆ ಅಡ್ಡಿಪಡಿಸಿದರೆ, ಅವಳನ್ನು ನಾನಾ ಬಗೆಯ ಹಿಂಸೆಗೆ ಒಳಗುಮಾಡಲಾಗುತ್ತದೆ. ಮುಖ್ಯವಾಗಿ ವಿವಾಹದ ಪೂರ್ವದಲ್ಲಿ ಮತ್ತು ವಿವಾಹದ ನಂತರದಲ್ಲಿ ಒಂದು ಹೆಣ್ಣು ಒಬ್ಬ ಪುರುಷನಿಗೆ ಮಾತ್ರ ಸೀಮಿತ ಎಂಬ ವಿಧಿನಿಯಮವನ್ನು ರೂಢಿಸಿಕೊಂಡು ಬರಲಾಗಿದೆ. ಆ ಕಾರಣಕ್ಕಾಗಿ ಮಹಿಳೆಯ ಲೈಂಗಿಕತೆಗೆ ಹೆಚ್ಚಿನ ಆಸ್ಥೆ ವಹಿಸಲಾಗಿರುತ್ತದೆ.

ಹೆಣ್ಣುಮಗುವಿಗೆ ವಿವಾಹವಾದ ನಂತರ ಆಕೆ ತಾಳಿ ಕಟ್ಟಿದ ಗಂಡನೊಂದಿಗೆ ಮಾತ್ರ ಲೈಂಗಿಕ ಕ್ರಿಯೆಯಲ್ಲಿ ತೊಡಗಬೇಕು ಎಂಬುದು ನಿಯಮ. ಅಲ್ಲಿ ಎಷ್ಟೇ ತೊಂದರೆಗಳಿದ್ದರೂ ಅವುಗಳನ್ನು ಸಹಿಸಿಕೊಂಡು ಜೀವಿಸಬೇಕು. ಇಲ್ಲವಾದರೆ ಆಕೆಯನ್ನು ಸಮಾಜ ನೋಡುವ ಕ್ರಮವೇ ಅತ್ಯಂತ ಹೀನಾಯವಾದುದು. ವಿವಾಹಕ್ಕೆ ಒಳಗಾದ ಗಂಡು ಹೆಣ್ಣಿನಲ್ಲಿ ವಯಸ್ಸಿನ ಅಂತರ ತುಂಬಾ ಇರುತ್ತದೆ. ಇದನ್ನು ಕಾನೂನೇ ಮಾನ್ಯ ಮಾಡಿದೆ. ಅಂದರೆ ಗಂಡಿನ

ವಯಸ್ಸಿಗಿಂತ ಹೆಣ್ಣಿನ ವಯಸ್ಸು ತುಂಬಾ ಕಡಿಮೆ ಇರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಬಾಲ್ಯ ವಿವಾಹಕ್ಕೆ ಒಳಗಾದವರಲ್ಲಿನ ವಿವಾಹ ವಯಸ್ಸು ಕೂಡ ತುಂಬಾ ಅಂತರದಿಂದ ಕೂಡಿರುತ್ತದೆ. ಹಾಗಾಗಿಯೇ ವಿವಾಹದ ನಂತರ ಹಲವಾರು ಸಮಸ್ಯೆಗಳಿಗೆ ಹೆಣ್ಣುಮಗು ಒಳಗಾಗುತ್ತದೆ. ಅಧ್ಯಯನದ ವ್ಯಾಪ್ತಿ ಪ್ರದೇಶದಲ್ಲಿ ಬಾಲ್ಯವಿವಾಹಕ್ಕೆ ಒಳಗಾಗಿ ಜೀವನವನ್ನು ನಡೆಸಲು ಕಷ್ಟವಾದ ಕಾರಣಕ್ಕಾಗಿ ಮುಂದೇನು ಮಾಡಬೇಕೆಂದು ತೋಚದೇ ವೇಶ್ಯಾವಾಟಿಕೆಗೆ ಇಳಿದಿರುವ ಪ್ರಕರಣಗಳು ಕಂಡುಬಂದಿವೆ. ಈ ಪ್ರಕರಣಗಳನ್ನು ಕೆಳಗಿನಂತೆ ವಿವರಿಸಿಕೊಳ್ಳಲಾಗಿದೆ.

ಹೊಸಪೇಟೆ ತಾಲೂಕಿನ ಗಾಳೆಮ್ಮನಗುಡಿ ಗ್ರಾಮದಲ್ಲಿ ವಾಸವಾಗಿರುವ ರಿಬ್ಬಕ್ಕ ಎಂಬ ಹೆಣ್ಣುಗುವಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡಿದ್ದಾರೆ. ವಿವಾಹವಾದ ಗಂಡಿನ ವಯಸ್ಸು ಮತ್ತು ರಿಬ್ಬಕ್ಕಳ ವಯಸ್ಸಿಗಿಂತ ತುಂಬಾ ವ್ಯತ್ಯಾಸವಿತ್ತು. ಹಾಗಾಗಿ ವಿವಾಹಕ್ಕೂ ಪೂರ್ವದಲ್ಲಿ ಆಕೆಗೆ ಈ ಮದುವೆ ಇಷ್ಟವಿರಲಿಲ್ಲ. ಆದರೂ ತಮ್ಮ ಮನೆಯಲ್ಲಿನ ಬಡತನದ ಕಾರಣವಾಗಿ ಅನಿವಾರ್ಯವಾಗಿ ವಿವಾಹಕ್ಕೆ ಒಪ್ಪಿಕೊಂಡಿದ್ದಾಳೆ. ವಿವಾಹದ ನಂತರ ಗಂಡನ ಮನೆಯನ್ನು ಸೇರಿದ ರಿಬ್ಬಕ್ಕ, ಕೆಲವು ತಿಂಗಳುಗಳ ಕಾಲ ಅಲ್ಲಿಯೇ ಜೀವಿಸಿದ್ದಾಳೆ. ಆದರೆ ಅವರಿಬ್ಬರ ನಡುವೆ ಅನ್ಯೋನ್ಯತೆ ಏರ್ಪಟ್ಟಿಲ್ಲ. ಕಾರಣ ಗಂಡ ತನಗೆ ಲೈಂಗಿಕ ಆಸಕ್ತಿ ಯಾವಾಗ ಮೂಡುತ್ತದೆಯೋ ಆವಾಗ ಆಕೆ ಅದಕ್ಕೆ ಸಹಕರಿಸಬೇಕು. ಇಲ್ಲವಾದರೆ ಆಕೆಯನ್ನು ಹೊಡೆಯುವುದು, ಬೈಯುವುದು ಮಾಡಿದ್ದಾನೆ. ಹೀಗೆ ಮಾಡುವುದು ರಿಬ್ಬಕ್ಕಳಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ವಿವಾಹಕ್ಕೂ ಮೊದಲೇ ಅಸಮಾಧಾನಗೊಂಡಿದ್ದ ಆಕೆ, ಗಂಡನ ಈ ನಡೆಯಿಂದ ತುಂಬಾ ಬೇಸರಗೊಂಡಿದ್ದಳು. ಕೊನೆಗೊಂದು ದಿನ ಗಂಡನ ಈ ಬಗೆಯ ಹಿಂಸೆಯನ್ನು ತಾಳಲಾರದೇ ಮನೆಯನ್ನು ಬಿಟ್ಟು ತನ್ನ ತವರು ಮನೆಗೆ ಬಂದಿದ್ದಾಳೆ. ಆದರೆ ಇಲ್ಲಿಯೂ ತುಂಬಾ ಬಡತನ. ಕುಟುಂಬದಲ್ಲಿ ತಾಯಿಯೊಂದೇ ಇರುವುದು. ಆಕೆ ವಿವಾಹದ ಸಂದರ್ಭದಲ್ಲಿ ಮಾಡಿದ ಸಾಲವನ್ನು ತೀರಿಸಲು ಇನ್ನೂ ಹೆಣಗಾಡುತ್ತಿದ್ದಾಳೆ ಎಂಬುದನ್ನು ಮನಗಂಡ ರಿಬ್ಬಕ್ಕ ಯಾವುದಾದರೂ ಕೆಲಸವನ್ನು ಮಾಡಿಕೊಂಡು ಜೀವಿಸಬೇಕು ಎಂದು ನಿರ್ಧರಿಸಿ, ಮೊದಲು ಸಣ್ಣಪುಟ್ಟ ಕೆಲಸಗಳನ್ನು ಮಾಡಲು ಮುಂದಾಗಿದ್ದಾಳೆ. ಆದರೆ ಅದರಿಂದ ಬರುವ ಆದಾಯ ಜೀವನಕ್ಕೆ ಸಾಲದ್ದಕ್ಕಾಗಿ ಏನು ಮಾಡಬೇಕೆಂದು ತಿಳಿಯದೆ, ವೇಶ್ಯಾವಾಟಿಕೆಗೆ ಇಳಿದಿದ್ದಾಳೆ. ಮುಖ್ಯವಾಗಿ ರಿಬ್ಬಕ್ಕ ಅವರ ತಾಯಿಯನ್ನು ಮಾತನಾಡಿಸಿದಾಗ ಅವರು ಹೇಳಿದ್ದು ಹೀಗೆ "ನಮ್ ಜೀವ್ನ ಬಾಳ ಕಷ್ಟ ಐತಿ. ಇರೋದು ಇಬ್ರು ಹೆಣ್ಮಕ್ಳು. ಸಾಲಾ ಮಾಡಿ ಅವ್ರಿಬ್ರಿಗಿ ಮದುವಿ ಮಾಡಿದೆ. ಆದ್ರೆ ಅವ್ರು ಗಂಡನ ಮನ್ಯಾಗ ಇರೋದನ್ನ ಬಿಟ್ಟು, ಅಲ್ಲಿಂದ ಇಲ್ಲಿಗೆ ಓಡಿ ಬಂದಾರ. ನಾನು ಏನ್ ಮಾಡ್ಲಿ. ಅವ್ರಿಗೆ ಎಷ್ಟು ಹೇಳಿದ್ರೂ ಕೇಳಂಗಿಲ್ಲ. ದೊಡ್ಡ ಮಗ್ಳು ಇಲ್ಲೇ ಫ್ಯಾಕ್ಟ್ರ್ಯಾಗ ಕೆಲ್ಸಕ್ಕ ಹೋಗ್ತಾಳ. ಇನ್ನ ಸಣ್ಣ ಮಗ್ಳು ಏನ್ ಮಾಡ್ತಾಳೋ ದೇವ್ರಿಗೇ ಗೊತ್ತು. ಯಾವಾಗ ಮನಿಗಿ ಬರ್ತಾಳೋ ಒಂದೂ ಗೊತ್ತಿಲ್ಲ. ಯಾವಾಗ ನೋಡಿದ್ರೂ ಫೋನಿನಾಗ ಮಾತಾಡ್ತಿರ್ತಾಳ. ಏನಾದ್ರು ಕೇಳಿದ್ರೆ ನೀನು ಏನೂ ಕೇಳ್ಬಾಡ, ಸುಮ್ನೆ ಇದ್ದುಬಿಡು ಅಂತ ಗದರಸ್ತಾಳ. ಯಾಕಪ್ಪಾ ಈ ಜೀವ್ನ ಅಂತ ಬ್ಯಾಸ್ರ ಆಗಿ ಬಿಡ್ತೈತಿ. ಸಣ್ಣ ಮಗ್ಳಾದ್ರು ಚೆನ್ನಾಗಿರ್ಲಿ ಅಂತ ಮದುವಿ ಮಾಡಿ ಕೊಟ್ರೆ ಅಕಿ ಸತೆ ಗಂಡನ

ಮನಿಬಿಟ್ಟು ಓಡಿ ಬಂದಾಳ. ಯಾಕ ಅಂತ ಕೇಳಿದ್ರೆ ಆ ಮುದಿಯಾತಂತಾಗ ಜೀವ್ನ ಮಾಡಾಕ ಆಗಂಗಿಲ್ಲ. ಅವ್ರು ಜನ ಸರಿಗಿಲ್ಲ. ನಾನು ಮತ್ತೆ ಅಲ್ಲಿಗಿ ಹೋಗಂಗಿಲ್ಲ ಅಂತ ಹೇಳ್ತಾಳ" ಎಂದರು.

ನಿಮ್ಮ ಮಗಳಿಗಿ ಯಾವ ವಯಸ್ಸಿಗಿ ಮದುವಿ ಮಾಡಿದ್ರಿ ಎಂದು ಕೇಳಿದಾಗ; ಅಕಿ ಆರ್ನೇ ಕ್ಲಾಸು ಓದತಿದ್ಲು. ಆವಾಗ್ಲೇ ಕೈಗೆ ಬಂದ್ಲು. ಕೈಗೆ ಬಂದು ನಾಕೈದು ತಿಂಗ್ಳಿಗೇ ಮದುವಿ ಮಾಡಿದ್ವಿ ಹುಡುಗ ಇಕಿಗಿಂತ ಎಂಟು ವರ್ಸ ದೊಡ್ಡೋನಿದ್ದ. ಆದ್ರೆ ಮಗಳ್ನು ಯಾವಾಗಾದ್ರು ಮದುವಿ ಮಾಡ್ಲೇಬೇಕಲ್ಲಾ ಅಂತ ತಿಳ್ದು ಮದುವಿ ಮಾಡಿದ್ವಿ. ಅದ್ರೆ ಏನ್ ಮಾಡಾದು ಅಕಿ ಅಣೇಬರಾನೇ ಸರಿಗಿಲ್ಲ. ಈಗ ಅಕಿ ಜೀವ್ನ ಹಿಂಗಾಗತೈತಿ ಅಂತ ಅನ್ಕಂಡಿರ್ಲಿಲ್ಲ, ಅಕಿ ಏನ್ ಕೆಲ್ಸ ಮಾಡ್ತಾಳೋ ಒಂದೂ ಗೊತ್ತಿಲ್ಲ. ಯಾವಾಗ ಊಟ ಮಾಡ್ತಾಳೋ. ಯಾವಾಗ ಮನಿಗಿ ಬರ್ತಾಳೋ, ನಿದ್ದಿ ಯಾವಾಗ ಮಾಡ್ತಾಳೋ ಒಂದೂ ಗೊತ್ತಿಲ್ಲ, ನನಿಗಂತೂ ಬಾಳ ಚಿಂತಿ ಆಗಿಬಿಟ್ಟೇತಿ ಎಂದು ಹೇಳುತ್ತಾ ಅಳತೊಡಗಿದರು.

ಇನ್ನೊಂದು ಪ್ರಕರಣದಲ್ಲಿ ವ್ಯಾಸನಕೆರೆ ಗ್ರಾಮದ ಲಲಿತ ಎಂಬುವವರು ಬಾಲ್ಯವಿವಾಹಕ್ಕೆ ಒಳಗಾಗಿ ಗಂಡನ ಕಾಟವನ್ನು ತಡೆಯದೇ ಗಂಡನ ಮನೆಯಿಂದ ಹೊರ ಬಂದು ತವರು ಮನೆಯನ್ನು ಸೇರಿದ್ದಾಳೆ. ಆದರೆ ತವರು ಮನೆಯಲ್ಲಿ ಜೀವನ ನಡೆಸುವುದು ಕಷ್ಟವಾಗಿ, ಉಪಜೀವನಕ್ಕಾಗಿ ವೇಶ್ಯಾವಾಟಿಕೆಯಲ್ಲಿ ತೊಡಗಿದ್ದಾರೆ ಎಂಬುದು ಗ್ರಾಮದ ಜನರಿಂದ ತಿಳಿದುಬಂದಿತು. ಲಲಿತ ಅವರ ಚಿಕ್ಕಮ್ಮನವರನ್ನು ಮಾತನಾಡಿಸಿದಾಗ, ಅವರು ಹೇಳಿದ್ದು ಹೀಗೆ "ಲಲಿತ ಬಾಳ ಚನ್ನಾಗಿ ಓದತಿದ್ಲು. ಆದ್ರೆ ಅಕಿಗಿ ಅವ್ರ ಅಪ್ಪ ಓದಿಸ್ಲಿಲ್ಲ. ಬಾಳ ಜಲ್ದಿ ಮದುವಿ ಮಾಡಿಬಿಟ್ರು, ಮದುವಿ ಆದ್ ಮ್ಯಾಲ ಗಂಡ ದಿನಾಲೂ ಹೊಡಿತಿದ್ನಂತೆ. ಅವ್ನಿಗಿ ಯಾವಾಗ ಬೇಕಾದಾಗ ಅವಾಗ ಅಕಿ ಸಂಸಾರಕ್ಕ ಇಳಿಬೇಕಿತ್ತಂತೆ. ಆದ್ರೆ ಅದು ಲಲಿತಾಗ ಇಷ್ಟ ಇರ್ಲಿಲ್ಲ. ಜತಿಗಿ ವಯಸ್ನಾಗ ಅಕಿಗಿಂತ ಅವ್ನಿಗೆ ಬಾಳ ವಯಸ್ಸಾಗಿತ್ತು. ಅವ್ರ ಅಪ್ಪ ಅಮ್ಮ ಜುಲ್ಮಿ ಮಾಡಿ ಮದುವಿ ಮಾಡಿದ್ರು. ಈಗ ನೋಡ್ರಿ ಅಕಿ ಜೀವ್ನ ಹೆಂಗಾಗೇತಿ. ಅಕಡಿಗಿ ಗಂಡನ ಮನೀನೂ ಇಲ್ಲ. ಇಕಡಿಗಿ ತವ್ರಮನ್ಯಾಗ ಜೀವ್ನ ಮಾಡಾದೂ ಕಷ್ಟ ಆಗಿ ಬಿಟ್ಟೇತಿ" ಎಂದರು.

ವ್ಯವಸ್ಥೆಯಲ್ಲಿ ಹೆಣ್ಣು ಗಂಡಿನ ಲೈಂಗಿಕತೆಯ ಕುರಿತು ಮಾತನಾಡುವುದೆಂದರೆ ತುಂಬಾ ಎಚ್ಚರವಹಿಸಬೇಕಾಗುತ್ತದೆ. ಏಕೆಂದರೆ ಈ ವಿಷಯ ಅತ್ಯಂತ ಸೂಕ್ಷ್ಮವಾದುದಾಗಿದೆ. ಹಾಗಾಗಿಯೇ ಇದರ ಕುರಿತು ಯಾರೂ ಕೂಡ ಮುಕ್ತವಾಗಿ ಮಾತನಾಡುವುದಿಲ್ಲ. ಮೇಲಿನ ಎರಡು ಪ್ರಕರಣಗಳಲ್ಲಿ ಲೈಂಗಿಕತೆಯ ಕಾರಣಕ್ಕಾಗಿ ಗಂಡನ ಮನೆಯನ್ನು ಬಿಟ್ಟು ಬಂದಂತಹ ಮತ್ತು ಒಂಟಿಯಾಗಿ ಜೀವನವನ್ನು ನಡೆಸಲಾಗದೇ ವೇಶ್ಯಾವಾಟಿಕೆಗೆ ದೂಡಲ್ಪಟ್ಟಿರುವುದನ್ನು ಕಾಣಬಹುದು. ರಿಬ್ಬಕ್ಕ ಮತ್ತು ಲಲಿತ ಇಬ್ಬರೂ ಬಾಲ್ಯ ವಿವಾಹಕ್ಕೆ ಒಳಗಾಗಿ ಗಂಡನ ಮನೆಯಲ್ಲಿನ ಹಿಂಸೆಯನ್ನು ತಾಳಲಾರದೇ, ತಮ್ಮ ತವರು ಮನೆಗೆ ಬಂದಿದ್ದಾರೆ. ಆದರೆ ತವರು ಮನೆಯಲ್ಲಿನ ಬಡತನದ ಕಾರಣವಾಗಿ ತಮ್ಮ ಉಪ ಜೀವನಕ್ಕೆ ವೇಶ್ಯಾವೃತ್ತಿಯನ್ನು ಆಯ್ಕೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಆದರೆ ಈ ವಿಷಯವನ್ನು ಯಾರೂ ಮುಕ್ತವಾಗಿ ಮಾತನಾಡುವುದಿಲ್ಲ. ಹಾಗೆ ಮಾತನಾಡುವುದು ನಿಷಿದ್ಧ. ಹಾಗಾಗಿಯೇ ಇವರ ಕುರಿತಂತೆ ಹೆಚ್ಚಿನ ಮಾಹಿತಿಯನ್ನು ಮತ್ತು ಅವರ ಪರಿಸ್ಥಿತಿ ಹೇಗಿದೆ ಎಂಬುದನ್ನು ಅವಲೋಕಿಸುವುದರ ಮೂಲಕ

ತಿಳಿದುಕೊಳ್ಳಲಾಗಿದೆ. ಆ ಕಾರಣಕ್ಕಾಗಿಯೇ ಬಾಲ್ಯ ವಿವಾಹಕ್ಕೆ ಒಳಗಾದ ಇವರುಗಳ ಪರಿಸ್ಥಿತಿಯ ಕುರಿತು ವಿಶ್ಲೇಷಿಸುವ ಕಾರ್ಯ ಮಾಡಲಾಗಿದೆ.

ಮೇಲಿನ ಮೊದಲ ಪ್ರಕರಣದಲ್ಲಿ ರಿಬ್ಬಕ್ಕ ಅವರ ತಾಯಿ ಹೇಳುವ ಮಾತುಗಳು ನೇರವಾಗಿ ಅಲ್ಲದಿದ್ದರೂ, ಸೂಚ್ಯವಾಗಿ ಮಗಳ ಪರಿಸ್ಥಿತಿಯನ್ನು ತಿಳಿಸುತ್ತವೆ. ಹೆಣ್ಣಿನ ಲೈಂಗಿಕತೆಯನ್ನು ಪುರುಷ ವ್ಯವಸ್ಥೆ ತನಗೆ ಹೇಗೆ ಬೇಕೋ ಹಾಗೆ ಬಳಸಿಕೊಳ್ಳಲು ಮುಂದಾಗುತ್ತದೆ. ಇದಕ್ಕೆ ವಯಸ್ಸಿನ ಅಂತರವಿಲ್ಲ. ಹುಣಸೆಕಾಯಿಗೆ ಮುಪ್ಪಾದರೆ ಹುಳಿಗೆ ಮುಪ್ಪೇ? ಎಂಬ ಆಡುನುಡಿಯಂತೆ ಗಂಡು ತನ್ನ ಮುದಿ ವಯಸ್ಸಿನಲ್ಲಿಯೂ ಹರೆಯದ ಹೆಣ್ಣನ್ನು ಬಯಸುವವನಾಗಿದ್ದಾನೆ. ಅದಕ್ಕಾಗಿಯೇ ವಯಸ್ಸಿನ ಅಂತರವಿಲ್ಲದೇ ಅತ್ಯಾಚಾರದ ಪ್ರಕರಣಗಳು, ಲೈಂಗಿಕ ಹಲ್ಲೆಯಂತಹ ಪ್ರಕರಣಗಳು ಹೆಚ್ಚುತ್ತಲೇ ಇವೆ. ಇಂದಿಗೂ ಈ ಬಗೆಯ ಪ್ರಕರಣಗಳಲ್ಲಿ ಹೆಣ್ಣನ್ನು ಒಂದು ವಸ್ತುವಾಗಿ ನೋಡಲಾಗುತ್ತದೆಯೇ ಹೊರತು, ಆಕೆಯನ್ನು ಒಬ್ಬ ವ್ಯಕ್ತಿಯನ್ನಾಗಿ ಪರಿಭಾವಿಸುವುದಿಲ್ಲ. ಮೇಲಿನ ಎರಡೂ ಪ್ರಕರಣಗಳಲ್ಲಿಯೂ ಹೆಣ್ಣನ್ನು ಲೈಂಗಿಕತೆಯನ್ನು ಈಡೇರಿಸುವ ವಸ್ತುವಿನಂತೆ ಕಾಣಲಾಗಿದೆ. ಅಂದರೆ ವಿವಾಹದ ನಂತರ ತವರು ಮನೆಯಿಂದ ಗಂಡನ ಮನೆಯನ್ನು ಸೇರುವ ಹೆಣ್ಣು ಅಲ್ಲಿನ ಕಟ್ಟುಪಾಡುಗಳಿಗೆ ಒಳಗಾಗಬೇಕು. ಹಾಗೆಯೇ ಆಕೆಯ ಲೈಂಗಿಕತೆ ತಾಳಿಕಟ್ಟಿದ ಗಂಡಿನೊಂದಿಗೆ ಮಾತ್ರ ಇರಬೇಕು ಎಂಬುದು ಧರ್ಮಗಳು ಹೇಳುತ್ತವೆ. ಇವುಗಳನ್ನು ಪಾಲಿಸಲೇಬೇಕು. ಇದನ್ನು ಪಾಲಿಸುವ ಹೆಣ್ಣನ್ನು ಪಾತಿವ್ರತ್ಯದ ಚೌಕಟ್ಟಿನಡಿಯಲ್ಲಿ ತಂದು ಮುಕ್ತವಾಗಿ ಸ್ವೀಕರಿಸುತ್ತದೆ. ಮುಖ್ಯವಾಗಿ ಲೈಂಗಿಕತೆಯ ಕುರಿತು ಯಾವುದೇ ತಕರಾರುಗಳು ಹೆಣ್ಣಿನಲ್ಲಿ ಇರಬಾರದು. ಗಂಡು ಹೇಗೆ ಹೇಳುತ್ತಾನೋ ಹಾಗೆ ಕೇಳಬೇಕು. ಆಕೆಗೆ ಇಷ್ಟವಿದೆಯೋ ಇಲ್ಲವೋ ಎಂಬುದು ಅನಾವಶ್ಯಕ. ಈ ಬಗೆಯ ಮನೋಧೋರಣೆ ಪುರುಷ ವ್ಯವಸ್ಥೆಯದ್ದಾಗಿರುವುದರಿಂದಲೇ ಮಹಿಳೆಯರ ಮೇಲೆ ಹಿಂಸೆಗಳು ನಡೆಯುತ್ತಲೇ ಇವೆ. ಮುಖ್ಯವಾಗಿ ಮೇಲಿನ ಪ್ರಕರಣಗಳಲ್ಲಿ ಹೆಣ್ಣುಮಕ್ಕಳು ತುಂಬಾ ಚಿಕ್ಕ ವಯಸ್ಸಿನಲ್ಲಿಯೇ ತಮ್ಮ ಉಪಜೀವನಕ್ಕಾಗಿ ವೇಶ್ಯಾವಾಟಿಕೆಯಲ್ಲಿ ತೊಡಗಿಸಿಕೊಂಡಿರುವುದು ವ್ಯವಸ್ಥೆಗೆ ಹಿಡಿದ ಕನ್ನಡಿಯಂತಿದೆ. ರಾಜ್ಯದ ಕೆಲವು ಜಿಲ್ಲೆಗಳಲ್ಲಿ ಬಾಲ್ಯ ವಿವಾಹ ಮಾಡುವುದರ ಮೂಲಕ ಹೆಣ್ಣುಮಕ್ಕಳನ್ನು ಇತರರಿಗೆ ಮಾರಾಟ ಮಾಡಲಾಗುತ್ತಿದೆ. ಹೀಗೆ ವಿವಾಹದ ಹೆಸರಿನಲ್ಲಿ ಮಾರಾಟಗೊಂಡ ಹೆಣ್ಣುಮಕ್ಕಳನ್ನು ವೇಶ್ಯಾವಾಟಿಕೆಗೆ ದೂಡುತ್ತಿರುವುದು ಕಂಡುಬರುತ್ತಿದೆ.

ಬಡತನದ ಕಾರಣಕ್ಕಾಗಿಯೋ ಅಥವಾ ಹೆಣ್ಣುಮಕ್ಕಳ ಬಗೆಗಿನ ಕೀಳು ಮನಸ್ಥಿತಿಯ ಕಾರಣಕ್ಕಾಗಿಯೋ ತಮ್ಮ ಮಕ್ಕಳನ್ನು ಬೇರೊಂದು ರಾಜ್ಯದ ಗಂಡಿನೊಂದಿಗೆ ವಿವಾಹ ಮಾಡಲು ಮುಂದಾಗುತ್ತಿದ್ದಾರೆ. ಮುಖ್ಯವಾಗಿ ಗಂಡು ಹುಡುಗನಿಗೆ ಎಷ್ಟು ವಯಸ್ಸಾಗಿದೆ ಎಂಬುದನ್ನೂ ಯೋಚಿಸದೆ ತಮ್ಮ ಹೆಣ್ಣುಮಕ್ಕಳಿಗೆ ವಿವಾಹ ಮಾಡಲಾಗುತ್ತಿದೆ. ಹೀಗೆ ವಿವಾಹ ಬಂಧನವನ್ನು ಏರ್ಪಡಿಸಲು ಹಲವು ಜನರ ಮಧ್ಯವರ್ತಿಗಳ ಗುಂಪೇ ಇರುತ್ತದೆ. ಮೊದಲು ಇವರು ಯಾವ ಕುಟುಂಬದಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಅಧಿಕವಾಗಿದ್ದು, ಬಡತನದಲ್ಲಿದೆ ಎಂಬುದನ್ನು ಗುರುತಿಸಿಕೊಳ್ಳುತ್ತಾರೆ. ಅಂತಹ ಕುಟುಂಬದಲ್ಲಿನ ತಂದೆ ತಾಯಿಗೆ ಹಣದ ಆಮಿಷವನ್ನೊಡ್ಡಿ ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳನ್ನು ವಿವಾಹಕ್ಕೆ ಒಪ್ಪಿಸುತ್ತಾರೆ. ಈ ವಿವಾಹದಲ್ಲಿ ಗಂಡಿನ ಕಡೆಯವರೇ ಹೆಣ್ಣಿನ ಕಡೆಯವರಿಗೆ ಹಣವನ್ನು ಕೊಟ್ಟು ಅಂದರೆ ವಧುದಕ್ಷಿಣೆಯನ್ನು ಕೊಟ್ಟು

ವಿವಾಹ ಮಾಡಿಕೊಳ್ಳುತ್ತಾರೆ. ಹೀಗೆ ವಿವಾಹವಾದ ಹೆಣ್ಣುಮಕ್ಕಳನ್ನು ಬೇರೊಂದು ರಾಜ್ಯದಲ್ಲಿ ವೇಶ್ಯಾವಾಟಿಕೆಗೆ ತಳ್ಳುತ್ತಿರುವ ಪ್ರಕರಣಗಳು ಇಂದಿಗೂ ಕಂಡುಬರುತ್ತಿವೆ. ಹೀಗೆ ವಿವಾಹ ಮಾಡಿಕೊಂಡ ಗಂಡಿಗೆ ಈ ಹೆಣ್ಣುಮಕ್ಕಳೇ ಬಂಡವಾಳವಾಗಿ ಪರಿಣಮಿಸುತ್ತಾರೆ. ಅಂದರೆ ಅವರನ್ನು ವೇಶ್ಯಾವಾಟಿಕೆಗೆ ತಳ್ಳುವುದರ ಮೂಲಕ ಅದರಿಂದ ಹಣವನ್ನು ಸಂಪಾದಿಸುತ್ತಿದ್ದಾರೆ. ಇದೊಂದು ಬಹುದೊಡ್ಡ ಜಾಲವಾಗಿದೆ. ಇಂತಹ ಮದುವೆಗಳು ಯಾದಿ ಮೇ ಶಾದಿ ಎಂಬ ಪದ್ಧತಿಯಲ್ಲಿ ನಡೆಯುತ್ತವೆ. ಇದಕ್ಕೆ ಜಾತಿ, ಕುಲ, ಗೋತ್ರ, ಕುಂಡಲಿ ಸೇರಿದಂತೆ ಮತ್ತಿತರ ಯಾವುದೇ ವಿಷಯಗಳು ಅಡ್ಡಿಯಾಗುವುದಿಲ್ಲ. ಮದುವೆಯ ಸಂದರ್ಭದಲ್ಲಿ ಬಂಧುಗಳಾಗಲೀ, ಸಮುದಾಯದವರಾಗಲೀ ಇರುವುದಿಲ್ಲ. ಕೆಲವು ಜನರ ಸಮ್ಮುಖದಲ್ಲಿ ಮಾಂಗಲ್ಯ ಕಟ್ಟಿ ಮದುವೆ ಶಾಸ್ತ್ರ ಮುಗಿಸಲಾಗುತ್ತದೆ. ಮಹಾರಾಷ್ಟ್ರದ ಕೆಲ ಸಮುದಾಯದ ವರಗಳಿಗೆ ಕನ್ಯೆಯರೇ ಸಿಗುವುದಿಲ್ಲ. ವರನ ವಯಸ್ಸು ೪೦ ದಾಟಿದರೂ ಕನ್ಯೆ ಸಿಗದಿರುವುದರಿಂದ ಅವರು ಇಲ್ಲಿನ ಮಧ್ಯವರ್ತಿಗಳನ್ನು ಸಂಪರ್ಕಿಸಿ ಮದುವೆಗೆ ಕನ್ಯೆಯನ್ನು ಹುಡುಕಲು ಹೇಳುತ್ತಾರೆ. ಆಗ ಮಧ್ಯವರ್ತಿಗಳು ಇಲ್ಲಿನ ಬಡ ಕುಟುಂಬಗಳನ್ನು ಪತ್ತೆಹಚ್ಚಿ ಆ ಕುಟುಂಬದವರಿಗೆ ಹಣದ ಆಮಿಷವನ್ನೊಡ್ಡಿ ವರನು ಇರುವ ಊರಿಗೆ ಹೆಣ್ಣನ್ನು ಕರೆದುಕೊಂಡು ಹೋಗಿ ಮದುವೆ ಮಾಡಿಸಿ ಕನ್ಯೆಯನ್ನು ಅಲ್ಲಿಯೇ ಬಿಟ್ಟು ಬರುತ್ತಾರೆ. ಈ ಎಲ್ಲಾ ಕಾರ್ಯಗಳು ಪೂರ್ಣಗೊಂಡ ನಂತರ ಬಾಲಕಿಯ ತಂದೆ ತಾಯಿಗಳಿಗೆ ೩೦–೫೦ ಸಾವಿರ ರೂಪಾಯಿಗಳನ್ನು ಮತ್ತು ಮದುವೆ ಮಾಡಿಸಿದ ಮಧ್ಯವರ್ತಿಗಳಿಗೆ ೫೦ ಸಾವಿರ ರೂಪಾಯಿಗಳನ್ನು ವರನ ಕಡೆಯವರು ಕೊಟ್ಟು ಕಳುಹಿಸುತ್ತಾರೆ. ವರನ ಕಡೆಯವರು ಒಂದು ಮದುವೆಗೆ ಸುಮಾರು ೧.೫ರಿಂದ ೨ ಲಕ್ಷ ರೂಪಾಯಿಗಳನ್ನು ಖರ್ಚು ಮಾಡುತ್ತಾರೆ. ಹಾಗೆಯೇ ಇನ್ನೊಂದು ಬಗೆಯ ವಿವಾಹಗಳೂ ನಡೆಯುತ್ತಿದ್ದು, ಅದರ ಹೆಸರು 'ಗುಜ್ಜರ್ ಮದುವೆ'. ಇದು ಉತ್ತರ ಕರ್ನಾಟಕದಲ್ಲಿ ಅತೀ ಹೆಚ್ಚಾಗಿ ನಡೆಯುತ್ತಿರುವ ವಿವಾಹ ಪದ್ಧತಿಯಾಗಿದೆ. ಮುಖ್ಯವಾಗಿ ಹೆಣ್ಣುಮಕ್ಕಳ ಪೋಷಕರ ಬಡತನ, ಅಜ್ಞಾನವೇ ಇಂತಹ ಮದುವೆಗಳಿಗೆ ಕಾರಣವಾಗಿದೆ. ಹೆಣ್ಣು ಇಲ್ಲಿ ಕೇವಲ ಮಾರಾಟದ ವಸ್ತುವಾಗಿರುತ್ತಾಳೆ. ಇದರಲ್ಲಿ ಮಧ್ಯವರ್ತಿಗಳ ಪಾತ್ರ ಬಹು ದೊಡ್ಡದಿರುತ್ತದೆ. ಇವರು ಹೆಣ್ಣು ಮಗುವಿನ ತಂದೆ ತಾಯಂದಿರಲ್ಲಿ ತಮ್ಮ ಹೆಣ್ಣುಮಕ್ಕಳು ಮದುವೆಯಾದ ನಂತರ ಸುಖ ಸಂಸಾರ ನಡೆಸುವರೆಂಬ ಕನಸನ್ನು ಮಧ್ಯವರ್ತಿಗಳು ಬಿತ್ತಿ, ಕೇವಲ ಕೆಲವೇ ಸಾವಿರ ರೂಪಾಯಿಗಳನ್ನು ಕೊಟ್ಟು ಆ ಹೆಣ್ಣುಮಕ್ಕಳನ್ನು ಕೊಂಡುಕೊಳ್ಳುತ್ತಾರೆ. ಇವರು ಹಾಗೆ ಕೊಂಡುಕೊಂಡ ಹೆಣ್ಣುಮಕ್ಕಳನ್ನು ಹೊರ ರಾಜ್ಯಗಳಾದ ರಾಜಸ್ಥಾನ, ಹರಿಯಾಣ, ಗುಜರಾತ್, ಉತ್ತರಪ್ರದೇಶ, ಮಹಾರಾಷ್ಟ್ರದ ಯಾವನೋ ಒಬ್ಬನೊಂದಿಗೆ ವಿವಾಹ ಮಾಡಿಸುತ್ತಾರೆ. ವಿವಾಹದ ಹೆಸರಿನಲ್ಲಿ ಹೆಣ್ಣುಮಕ್ಕಳನ್ನು ಮಾರಾಟ ಮಾಡಲಾಗುತ್ತಿದೆ. ಹೀಗೆ ಮದುವೆ ಮಾಡಿಕೊಂಡ ಹೆಣ್ಣುಮಕ್ಕಳು ಆ ಕುಟುಂಬದ ಎಲ್ಲ ಪುರುಷರ ಕಾಮಕ್ಕೆ ಬಲಿಯಾಗುತ್ತಾರೆ. ಏಕೆಂದರೆ ಮೇಲೆ ತಿಳಿಸಿದ ರಾಜ್ಯಗಳಲ್ಲಿ ಮಹಿಳೆಯರ ಪ್ರಮಾಣ ಪುರುಷರಿಗಿಂತ ಗಣನೀಯ ಪ್ರಮಾಣದಲ್ಲಿ ಕಡಿಮೆಯಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಯಾದಿ ಮೇ ಶಾದಿ ಮತ್ತು ಗುಜ್ಜರ್ ಮದುವೆ ಇವುಗಳ ಹೆಸರಿನಲ್ಲಿ ಹೆಣ್ಣುಮಕ್ಕಳು ಬೇರೆ ರಾಜ್ಯಗಳಿಗೆ ಮಾರಾಟವಾಗುತ್ತಿರುವುದು ವಿಷಾಧದ ಸಂಗತಿಯಾಗಿದೆ. ೨೦೦೯ರಿಂದ ೨೦೧೧ರವರೆಗಿನ ದಾಖಲಾದ ನಾಪತ್ತೆಯಾದ

ಹೆಣ್ಣುಮಕ್ಕಳು ೧೪೯೮೯. ಇದರಲ್ಲಿ ಪತ್ತೆಯಾಗದೇ ಉಳಿದ ಹೆಣ್ಣುಮಕ್ಕಳು ೮೦೫೯, ಜೊತೆಗೆ ೨೦೧೨ರಲ್ಲಿ ನಾಪತ್ತೆಯಾದವರು ೮೦೮೪ ಜನ ಹೆಣ್ಣುಮಕ್ಕಳು. ಮಹಿಳೆಯರ ಕಳ್ಳ ಸಾಗಾಣಿಕೆಯ ಹಿಂದಿರುವ ಸಂಗತಿಗಳನ್ನು ಅರಿಯಲು ಇತ್ತೀಚೆಗೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ನಡೆಸಿದ ಅಧ್ಯಯನದಿಂದ ಕಳ್ಳಸಾಗಾಣಿಕೆ ಜಾಲಕ್ಕೆ ಸಿಕ್ಕಿ ವೇಶ್ಯಾವಾಟಿಕೆ ತಳ್ಳಲ್ಪಟ್ಟವರಲ್ಲಿ ಶೇ.೬೦.೬ರಷ್ಟು ಮಂದಿ ಬಾಲ್ಯ ವಿವಾಹವಾದವರೇ ಆಗಿದ್ದಾರೆ. ಹೀಗೆ ಭಾರತದಲ್ಲಿ ಹೆಣ್ಣುಮಕ್ಕಳ ಮಾರಾಟ ಬಾಲ್ಯ ವಿವಾಹದ ಮೂಲಕ ಅವ್ಯಾಹತವಾಗಿ ನಡೆಯುತ್ತಿರುವುದು ಕಂಡುಬರುತ್ತದೆ. ಮುಖ್ಯವಾಗಿ ಹೀಗೆ ಬಾಲ್ಯವಿವಾಹಕ್ಕೆ ಒಳಗಾದವರು ಹೆಚ್ಚಾಗಿ ವೇಶ್ಯಾವಾಟಿಕೆಗೆ ತಳ್ಳಲ್ಪಟ್ಟಿರುವುದು ಸಮಾಜಕ್ಕೆ ನಾಚಿಕೆಗೇಡಿನ ಸಂಗತಿಯಾಗಿದೆ. ಒಟ್ಟಾರೆಯಾಗಿ ಬಾಲ್ಯ ವಿವಾಹದಿಂದಾಗಿ ಹೆಚ್ಚಿನ ತೊಂದರೆಗಳಾಗುತ್ತಿರುವುದು ಹೆಣ್ಣುಮಕ್ಕಳಿಗೇ ಹೊರತು ಗಂಡುಮಕ್ಕಳಿಗಲ್ಲ. ಹೀಗೆ ಬಾಲ್ಯ ವಿವಾಹಕ್ಕೆ ಒಳಗಾದಂತಹ ಮುನ್ನೂರು ಪ್ರಕರಣಗಳಲ್ಲಿನ ಹೆಣ್ಣುಮಕ್ಕಳು ಮೇಲೆ ತಿಳಿಸಿದ ಸಮಸ್ಯೆಗಳಿಗೆ ಯಾವ ಪ್ರಮಾಣದಲ್ಲಿ ಒಳಗಾಗಿದ್ದಾರೆ ಎಂಬುದನ್ನು ಜಿಲ್ಲಾವಾರು ಅಂಕಿಸಂಖ್ಯೆಗಳನ್ನು ಕೆಳಗಿನ ಕೋಷ್ಟಕದಲ್ಲಿ ತಿಳಿಸಲಾಗಿದೆ.

**ಕೋಷ್ಟಕ ೬.೧**

**ಬಾಲ್ಯವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳು ಎದುರಿಸುತ್ತಿರುವ ಸಮಸ್ಯೆಗಳು**

| ಬಾಲ್ಯ ವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳು ಎದುರಿಸುತ್ತಿರುವ ಸಮಸ್ಯೆಗಳು | ಜಿಲ್ಲೆಗಳು ( ಪ್ರತೀ ಜಿಲ್ಲೆಯಿಂದ ೭೫ ಪ್ರಕರಣಗಳು; ನಾಲ್ಕು ಜಿಲ್ಲೆಗಳಿಂದ ಒಟ್ಟು ೩೦೦ ಪ್ರಕರಣಗಳು) | | | | | | | |
|---|---|---|---|---|---|---|---|---|
| | ಬಳ್ಳಾರಿ | | ಕೊಪ್ಪಳ | | ಗದಗ | | ಬಾಗಲಕೋಟೆ | |
| | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ |
| **A.** ಹೆಣ್ಣುಮಕ್ಕಳಿಗೆ ರಕ್ತಹೀನತೆಯ ಜೊತೆಗೆ ಕಡಿಮೆ ತೂಕದ ಮಕ್ಕಳ ಜನನ | ೬೮ | ೯೦.೬೬ | ೪೨ | ೫೬.೦ | ೭೦ | ೯೩.೩೩ | ೭೨ | ೯೬.೦ |
| **B.** ಶಿಶು ಮರಣ ಮತ್ತು ಮಕ್ಕಳ ಮರಣಗಳು | ೧೮ | ೨೪.೦ | ೨೬ | ೩೪.೬೬ | ೨೨ | ೨೯.೩೩ | ೧೬ | ೨೧.೩೩ |
| **C.** ಹೆಣ್ಣುಮಕ್ಕಳು ವಯಸ್ಸಿಗೆ ಮೀರಿದ ಜವಾಬ್ದಾರಿಯನ್ನು ಹೊರುವುದು ಮತ್ತು ಮಾನಸಿಕ ಖಿನ್ನತೆಗೆ ಒಳಗಾದವರು | ೭೦ | ೯೩.೩೩ | ೫೮ | ೭೭.೩೩ | ೬೦ | ೮೦.೦ | ೬೨ | ೮೨.೬೬ |
| **D.** ಹೆಣ್ಣುಮಕ್ಕಳು ಕೌಟುಂಬಿಕ ದೌರ್ಜನ್ಯಕ್ಕೆ ಒಳಗಾದವರು | ೭೫ | ೧೦೦.೦ | ೭೦ | ೯೩.೩೩ | ೬೨ | ೮೨.೬೬ | ೭೫ | ೧೦೦ |
| **E.** ಅಪ್ರಾಪ್ತ ವಯಸ್ಸಿನಲ್ಲಿ ಗರ್ಭಿಣಿಯಾಗುವುದರಿಂದ ಗರ್ಭಕೋಶದ ತೊಂದರೆ ಮತ್ತು ಹೆರಿಗೆ ಸಮಯದಲ್ಲಿ ಅಕಾಲಿಕ ಮರಣಕ್ಕೆ ತುತ್ತಾದವರು | ೧೮ | ೨೪.೦ | ೯ | ೧೨.೦ | ೬ | ೮.೦ | ೪ | ೫.೩೩ |
| **F.** ವೈಧವ್ಯದ ಸಮಸ್ಯೆಯನ್ನು ಎದುರಿಸುತ್ತಿರುವವರು | ೧೪ | ೧೮.೬೬ | ೨೦ | ೨೬.೬೬ | ೧೭ | ೨೨.೬೬ | ೧೮ | ೨೪.೦ |



ರೇಖಾಚಿತ್ರ ೬.೧ ಬಾಲ್ಯವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳು ಎದುರಿಸುತ್ತಿರುವ ಸಮಸ್ಯೆಗಳು

ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಬಾಲ್ಯ ವಿವಾಹಕ್ಕೆ ಒಳಗಾದ ಪ್ರತೀ ಜಿಲ್ಲೆಯಿಂದ ೭೫ ಪ್ರಕರಣಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಒಟ್ಟು ನಾಲ್ಕು ಜಿಲ್ಲೆಗಳ ವ್ಯಾಪ್ತಿಯನ್ನು ಹೊಂದಿರುವುದರಿಂದ ಒಟ್ಟು ೩೦೦ ಪ್ರಕರಣಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಬಾಲ್ಯ ವಿವಾಹಕ್ಕೆ ಒಳಗಾದವರಲ್ಲಿ ಹೆಣ್ಣುಮಕ್ಕಳ ಸಂಖ್ಯೆಯೇ ಅಧಿಕವಾಗಿದ್ದು, ಅವರು ನಾನಾ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಆ ಎಲ್ಲಾ ಸಮಸ್ಯೆಗಳನ್ನು ಅವರ ಹೇಳಿಕೆಗಳಿಂದಲೇ ವಿವರಿಸಿಕೊಳ್ಳಲಾಗಿದೆ. ಹಾಗೆಯೇ ಈ ಸಮಸ್ಯೆಗಳ ಪ್ರಮಾಣದ ಕುರಿತಂತೆ ಹೇಳುವುದಾದರೆ, ರಕ್ತಹೀನತೆಯಿಂದ ಬಳಲುತ್ತಿರುವ ಅಪ್ರಾಪ್ತ ಹೆಣ್ಣುಮಕ್ಕಳ ಪ್ರಮಾಣ ಒಟ್ಟು ಶೇ.೭೯.೩ರಷ್ಟಿದೆ. ಇದರಲ್ಲಿ ಬಾಗಲಕೋಟೆ ಜಿಲ್ಲೆಯೊಂದರಲ್ಲಿಯೇ ಅಧಿಕ ಪ್ರಮಾಣದ ರಕ್ತ ಹೀನತೆಯಿಂದ ಬಳಲುತ್ತಿರುವವರು ಕಂಡುಬರುತ್ತಾರೆ, ಹಾಗೆಯೇ ಶಿಶು ಮರಣ ಮತ್ತು ಮಕ್ಕಳ ಮರಣ ಪ್ರಮಾಣ ಒಟ್ಟು ಶೇ.೨೭.೩, ವಯಸ್ಸಿಗೆ ಮೀರಿದ ಜವಾಬ್ದಾರಿಯ ಕಾರಣವಾಗಿ ಮಾನಸಿಕ ಖಿನ್ನತೆಗೆ ಒಳಗಾದವರ ಪ್ರಮಾಣ ಒಟ್ಟು ಶೇ.೮೩.೩, ಕೌಟುಂಬಿಕ ಹಿಂಸೆಗೆ ಒಳಗಾದವರ ಪ್ರಮಾಣ ಒಟ್ಟು ಶೇ.೯೪, ಗರ್ಭಕೋಷದ ತೊಂದರೆಗೆ ಒಳಗಾದಂತಹವರ ಪ್ರಮಾಣ ಒಟ್ಟು ಶೇ.೬೪.೬ ಮತ್ತು ವೈಧವ್ಯಕ್ಕೆ ಒಳಗಾದವರ ಪ್ರಮಾಣ ಒಟ್ಟು ಶೇ.೨೩ ರಷ್ಟಿರುವುದು ಕಂಡುಬರುತ್ತದೆ. ಮೇಲಿನ ಎಲ್ಲಾ ಅಂಕಿಸಂಖ್ಯೆಗಳನ್ನು ಗಮನಿಸಿದಾಗ ಬಾಲ್ಯವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳು ಕೌಟುಂಬಿಕ ಹಿಂಸೆಯನ್ನು ಅತೀ ಹೆಚ್ಚಾಗಿ ಅನುಭವಿಸುತ್ತಿರುವುದು ಕಂಡುಬರುತ್ತದೆ. ಹಾಗೆಯೇ ಕುಟುಂಬದಲ್ಲಿನ ಕೆಲಸಗಳ ಒತ್ತಡಗಳ ಕಾರಣವಾಗಿ ಮಾನಸಿಕ ಖಿನ್ನತೆಗೆ ಒಳಗಾದ ಹೆಣ್ಣುಮಕ್ಕಳ ಪ್ರಮಾಣವೂ ಅಧಿಕವಾಗಿದೆ. ಮೇಲಿನ ಎಲ್ಲಾ ಸಮಸ್ಯೆಗಳನ್ನು ಹೆಣ್ಣುಮಕ್ಕಳು ಎದುರಿಸುತ್ತಿದ್ದಾರೆ. ಇವುಗಳ ಜೊತೆಗೆ ಅಪ್ರಾಪ್ತ ಹೆಣ್ಣುಮಕ್ಕಳು ಸಾವಿಗೂ ಒಳಗಾಗಿದ್ದಾರೆ. ಮುಖ್ಯವಾಗಿ ಬಾಲ್ಯ ವಿವಾಹಕ್ಕೆ ಒಳಗಾಗಿ ತಮ್ಮ ಹೆರಿಗೆ ಸಂದರ್ಭದಲ್ಲಿ

ಸಾವನ್ನನುಭವಿಸಿದ ಪ್ರಕರಣಗಳು ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಒಂದೊಂದು ಪ್ರಕರಣ ಕಾಣಿಸಿಕೊಂಡಿವೆ. ಮೇಲಿನ ಎಲ್ಲಾ ಪರಿಣಾಮಗಳ ಜೊತೆಗೆ ಮುಖ್ಯವಾಗಿ ಶಿಕ್ಷಣದಿಂದ ವಂಚಿತರಾಗಿರುವುದು ಕಂಡುಬಂದಿದೆ. ಇಲ್ಲಿ ಹೆಣ್ಣುಮಕ್ಕಳು ಮತ್ತು ಗಂಡು ಮಕ್ಕಳಿಬ್ಬರೂ ಶಿಕ್ಷಣದಿಂದ ವಂಚಿತರಾಗಿದ್ದಾರೆ. ನಾಲ್ಕು ಜಿಲ್ಲೆಗಳಲ್ಲಿನ ಬಾಲ್ಯ ವಿವಾಹಕ್ಕೆ ಒಳಗಾದ ಒಟ್ಟು ೩೦೦ ನಮೂನೆಗಳಲ್ಲಿ ಹೆಣ್ಣುಮಕ್ಕಳು ಮತ್ತು ಗಂಡುಮಕ್ಕಳು ಹೊಂದಿರುವ ಶಿಕ್ಷಣದ ಅಂಕಿಸಂಖ್ಯೆಗಳನ್ನು ಕೆಳಗಿನ ಕೋಷ್ಟಕದಲ್ಲಿ ತಿಳಿಸಲಾಗಿದೆ.

**ಕೋಷ್ಟಕ ೬.೨**

**ಬಾಲ್ಯ ವಿವಾಹಕ್ಕೆ ಒಳಗಾದ ೩೦೦ ನಮೂನೆಗಳಲ್ಲಿನ ಹೆಣ್ಣುಮಕ್ಕಳ ಶಿಕ್ಷಣದ ಮಟ್ಟ**

| ಜಿಲ್ಲೆ | ಹೆಣ್ಣುಮಕ್ಕಳ ಶಿಕ್ಷಣ | | | |
|---|---|---|---|---|
| | ಪ್ರಾಥಮಿಕ | ಮಾಧ್ಯಮಿಕ | ಪ್ರೌಢ | ಇಲ್ಲ |
| ಬಳ್ಳಾರಿ | ೧೬ | ೩೨ | ೧೨ | ೧೫ |
| ಕೊಪ್ಪಳ | ೧೦ | ೨೮ | ೩೧ | ೬ |
| ಗದಗ | ೧೪ | ೩೪ | ೧೬ | ೧೧ |
| ಬಾಗಲಕೋಟೆ | ೧೨ | ೩೩ | ೨೪ | ೬ |
| ಒಟ್ಟು | ೫೨ | ೧೨೭ | ೮೩ | ೩೮ |




ರೇಖಾಚಿತ್ರ ೬.೨ ಬಾಲ್ಯ ವಿವಾಹಕ್ಕೆ ಒಳಗಾದ ೩೦೦ ನಮೂನೆಗಳಲ್ಲಿನ ಹೆಣ್ಣುಮಕ್ಕಳ ಶಿಕ್ಷಣದ ಮಟ್ಟ

**ಕೋಷ್ಟಕ ೬.೩**

**ಬಾಲ್ಯ ವಿವಾಹಕ್ಕೆ ಒಳಗಾದ ೩೦೦ ನಮೂನೆಗಳಲ್ಲಿನ ಗಂಡು ಮಕ್ಕಳ ಶಿಕ್ಷಣದ ಮಟ್ಟ**

| ಜಿಲ್ಲೆ | ಗಂಡುಮಕ್ಕಳ ಶಿಕ್ಷಣ | | | | | |
|---|---|---|---|---|---|---|
| | ಪ್ರಾಥಮಿಕ | ಮಾಧ್ಯಮಿಕ | ಪ್ರೌಢ | ಪದವಿಪೂರ್ವ | ಪದವಿ | ಇಲ್ಲ |
| ಬಳ್ಳಾರಿ | ೨೩ | ೩೩ | ೦೯ | ೫ | ೨ | ೩ |
| ಕೊಪ್ಪಳ | ೨೭ | ೨೦ | ೧೪ | ೬ | ೩ | ೫ |
| ಗದಗ | ೧೫ | ೨೬ | ೧೯ | ೯ | ೩ | ೩ |
| ಬಾಗಲಕೋಟೆ | ೧೪ | ೩೬ | ೧೩ | ೭ | ೧ | ೪ |
| ಒಟ್ಟು | ೭೯ | ೧೧೫ | ೫೫ | ೨೭ | ೯ | ೧೫ |




**ರೇಖಾಚಿತ್ರ ೬.೩ ಬಾಲ್ಯ ವಿವಾಹಕ್ಕೆ ಒಳಗಾದ ೩೦೦ ನಮೂನೆಗಳಲ್ಲಿನ ಗಂಡು ಮಕ್ಕಳ ಶಿಕ್ಷಣದ ಮಟ್ಟ**

ಮೇಲಿನ ಎರಡೂ ಕೋಷ್ಟಕಗಳಲ್ಲಿ ಸೂಚಿರುವಂತೆ ಗಂಡು ಮಕ್ಕಳು ಶಿಕ್ಷಣವನ್ನು ಹೊಂದಿರುವವರ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಹೆಣ್ಣುಮಕ್ಕಳಿಗೆ ಪ್ರೌಢ ಶಿಕ್ಷಣದ ಹಂತವೇ ಕೊನೆಯದ್ದಾಗಿದೆ. ಅದರಲ್ಲೂ ಮಾಧ್ಯಮಿಕ ಶಿಕ್ಷಣವನ್ನು ಪಡೆದ ಹೆಣ್ಣುಮಕ್ಕಳನ್ನು ಶಾಲೆಯಿಂದ ಬಿಡಿಸಿ ವಿವಾಹಕ್ಕೆ ಒಳಪಡಿಸಲಾಗಿದೆ. ಆದರೆ ಗಂಡುಮಕ್ಕಳ ವಿಷಯದಲ್ಲಿ ಹಾಗಾಗಿಲ್ಲ. ಅವರು ಪದವಿ ಹಂತದ ಶಿಕ್ಷಣವನ್ನೂ ಪಡೆದಿದ್ದಾರೆ. ಈ ಅಂಕಿ ಸಂಖ್ಯೆಗಳು ನಾಲ್ಕು ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಮಾಹಿತಿಯನ್ನು ಸಂಗ್ರಹಿಸಿದ್ದು, ಅವುಗಳಲ್ಲಿ ಕೇವಲ ೩೦೦ ನಮೂನೆಗಳಲ್ಲಿನ ಮಾಹಿತಿ ಇದಾಗಿದೆ. ಈ ಹಿಂದೆ ಈ ನಾಲ್ಕು ಜಿಲ್ಲೆಗಳಲ್ಲಿನ ಹುಡುಗರು ಮತ್ತು ಹುಡುಗಿಯರು ಯಾವ ವರ್ಷದಲ್ಲಿ ವಿವಾಹ ಬಂಧನಕ್ಕೆ ಸಿಲುಕಿದ್ದಾರೆ ಎಂಬುದನ್ನು ತಿಳಿಸಲಾಗಿದೆ. ಒಟ್ಟಾರೆಯಾಗಿ ಬಾಲ್ಯ ವಿವಾಹದ ಕಾರಣವಾಗಿ ಹೆಣ್ಣುಮಕ್ಕಳು ಪ್ರೌಢ ಶಿಕ್ಷಣದಿಂದ ಮುಂದೆ ಹೋಗಲಾಗಿಲ್ಲದಿರುವುದು ಕಂಡುಬಂದಿದೆ.

ವೇದಗಳ ಕಾಲದಿಂದಲೂ ಸ್ತ್ರೀ ಶಿಕ್ಷಣದ ಬಗೆಗೆ ಮಾತನಾಡುತ್ತಲೇ ಬರಲಾಗಿದೆ. ಆದರೆ ಇಂದಿಗೂ ಮಹಿಳೆಯರಿಗೆ ಸಮಾನವಾದ ಶಿಕ್ಷಣವನ್ನು ಕೊಡುವುದರಲ್ಲಿ ವ್ಯವಸ್ಥೆ ಸೋತಿದೆ ಎಂದೇ ಹೇಳಬಹುದು. ಏಕೆಂದರೆ ಪಿತೃಪ್ರಧಾನ ಮೌಲ್ಯಗಳು ಸ್ತ್ರೀಯರು ಶಿಕ್ಷಣವನ್ನು ಪಡೆಯದಂತೆ ನೋಡಿಕೊಳ್ಳುತ್ತಿವೆ. ವಸಾಹತು ಕಾಲಘಟ್ಟದಲ್ಲಿ ಸ್ತ್ರೀಯರ ಶಿಕ್ಷಣಕ್ಕೆ ಹೆಚ್ಚಿನ ಆಧ್ಯತೆ ದೊರೆಯಿತು. ಸ್ತ್ರೀಯರ ಶಿಕ್ಷಣಕ್ಕಾಗಿ ಶ್ರಮಿಸಿದ ಮಹಾನೀಯರಲ್ಲಿ ಜ್ಯೋತಿರಾವ್ ಫುಲೆಯವರು ಮೊದಲಿಗರು ಎಂದು ಹೇಳಬಹುದು. ಏಕೆಂದರೆ ವಿದ್ಯೆಯಿಂದ ವಂಚಿತರಾಗಿರುವ ಸ್ತ್ರೀಯರಿಗೆ ಶಿಕ್ಷಣವನ್ನು ನೀಡಿದರೆ ಮಾತ್ರ ಭಾರತೀಯರ ಸಾಮಾಜಿಕ ಸಮಸ್ಯೆಗಳು ನಿವಾರಣೆಯಾಗುತ್ತದೆಂದು ನಂಬಿದ್ದರು. ಹಾಗಾಗಿಯೇ ಹೆಣ್ಣುಮಕ್ಕಳಿಗಾಗಿಯೇ ಪ್ರತ್ಯೇಕ ಶಿಕ್ಷಣದ ವ್ಯವಸ್ಥೆಯನ್ನು ಕಲ್ಪಿಸಿದ್ದರು. ಅದರಲ್ಲಿಯೂ ಮುಖ್ಯವಾಗಿ ದಲಿತ ಹೆಣ್ಣುಮಕ್ಕಳಿಗೆ ಶಾಲೆಗಳನ್ನು ತೆರೆದ ಕೀರ್ತಿ ಫುಲೆಯವರಿಗೆ ಸಲ್ಲುತ್ತದೆ. ಅಂದಿನ ಸಂದರ್ಭದಲ್ಲಿ ಈ ಬೆಳವಣಿಗೆಯನ್ನು ಸಹಿಸದ ಸಂಪ್ರದಾಯವಾದಿಗಳು ಇವರ ವಿರುದ್ಧ ಮಾತನಾಡುತ್ತಾರೆ, ಕೋಪಿಸಿಕೊಳ್ಳುತ್ತಾರೆ ಹಾಗೆಯೇ ಅಣಕವಾಡುತ್ತಾರೆ. ಹಾಗೆಯೇ ಸ್ತ್ರೀಯರಿಗಾಗಿಯೇ ಶಾಲೆಯನ್ನು ತೆರೆದರೂ ಅದಕ್ಕೆ ಶಿಕ್ಷಕರಾಗಲು ಮುಂದೆ ಬಾರದಿದ್ದಕ್ಕಾಗಿ ಅವರು ತಮ್ಮ ಪತ್ನಿಗೆ ಶಿಕ್ಷಣವನ್ನು ಕೊಡುವುದರ ಮೂಲಕ ಅವರನ್ನೇ ಶಿಕ್ಷಕರನ್ನಾಗಿ ಮಾಡಿದರು. "ಬಾಲ್ಯವಿವಾಹ ರೂಢಿಯಲ್ಲಿದ್ದ ಜ್ಯೋತಿರಾವ್ ಅವರ ಕಾಲದಲ್ಲಿ ಬಾಲಕಿಯರು ಮದುವೆಯಾಗುತ್ತಿದ್ದಂತೆಯೇ ಅತ್ತೆ ಮಾವಂದಿರು ಅವರನ್ನು ಶಾಲೆಯಿಂದ ಬಿಡಿಸುತ್ತಿದ್ದುದು ಅವರಿಗೆ ಸಹಿಸಲಾರದ ಸಂಕಟವಾಗುತ್ತಿತ್ತು. ಈ ಸ್ಥಿತಿ ಇಂದಿಗೂ ನಿಂತಿಲ್ಲ. ಆ ಕಾಲಕ್ಕೆ ಇದು ಇನ್ನೂ ಪ್ರಬಲವಾಗಿತ್ತು. ಇದರಿಂದ ಹೆಣ್ಣುಮಕ್ಕಳ ವಿದ್ಯಾಭ್ಯಾಸ ಕುಂಟಿತವಾಗುತ್ತಿತ್ತು. ಇದೊಂದು ಅಜ್ಞಾನ; ಅಜ್ಞಾನಕ್ಕಿಂತ ಕ್ರೂರವಾದ ರೋಗ ಮತ್ತೊಂದಿಲ್ಲ. ಅದನ್ನು ಸಂಪೂರ್ಣವಾಗಿ ಅಳಿಸದ ಹೊರತು ದೇಶಕ್ಕೆ ಭವಿಷ್ಯವಿಲ್ಲವೆಂದು ಅರ್ಥಮಾಡಿಕೊಂಡಿದ್ದ ಫುಲೆಯವರು ಹೆಣ್ಣುಮಕ್ಕಳ ಶಿಕ್ಷಣಕ್ಕೆ ಅಡ್ಡಿಯುಂಟುಮಾಡುವ ಬಾಲ್ಯ ವಿವಾಹ ಪದ್ಧತಿಯನ್ನೇ ನಿರ್ಮೂಲನ ಮಾಡಲು ಹೋರಾಡಿದರು. ಇದರಿಂದ ಶಾಲೆ ಪ್ರಗತಿದಾಯಕವಾಗಿ ಮುನ್ನಡೆಯಿತು"(ಹಾಲತಿ ಸೋಮಶೇಖರ್, ೨೦೦೭, ಪು-೨೨೦). ಹೀಗೆ ಆರಂಭಗೊಂಡ ಸ್ತ್ರೀ ಶಿಕ್ಷಣ, ಇಂದಿಗೂ ಮಹತ್ವವನ್ನು ಪಡೆದಿದೆ. ಮುಖ್ಯವಾಗಿ ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ದೇಶದ ಅಭಿವೃದ್ಧಿಗಾಗಿ ಹಲವಾರು ಪಂಚವಾರ್ಷಿಕ ಯೋಜನೆಗಳನ್ನು ಹಾಕಿಕೊಳ್ಳಲಾಗಿತ್ತು. ಅವುಗಳಲ್ಲಿ ಸ್ತ್ರೀ ಶಿಕ್ಷಣದ ಕುರಿತ ಯೋಜನೆಗಳನ್ನೂ ರೂಪಿಸಲಾಗಿತ್ತು. ಮುಖ್ಯವಾಗಿ ಮಹಿಳೆಯರ ಶಿಕ್ಷಣವನ್ನು ಕುರಿತಂತೆ ಒಂದು ವ್ಯವಸ್ಥಿತವಾದ ಕಾರ್ಯಕ್ರಮವನ್ನು ರೂಪಿಸಿದ ಕೀರ್ತಿ ೧೯೮೬ರಲ್ಲಿ ಜಾರಿಯಾದ ರಾಷ್ಟ್ರೀಯ ಶಿಕ್ಷಣ ನೀತಿಗೆ ಸಲ್ಲುತ್ತದೆ. ಈ ಶಿಕ್ಷಣ ನೀತಿಯು ಶಿಕ್ಷಣವು ಮಹಿಳೆಯರ ಸಶಕ್ತೀಕರಣ ಪ್ರಯತ್ನಗಳಲ್ಲಿ ಸಕ್ರಿಯವಾಗಿ ತನ್ನನ್ನು ತೊಡಗಿಸಿಕೊಳ್ಳುವಂತಹ ವ್ಯವಸ್ಥೆಯಾಗಿ ರೂಪುಗೊಳ್ಳಬೇಕು, ಪಠ್ಯಕ್ರಮಗಳನ್ನು ಲಿಂಗ ಪೂರ್ವಗ್ರಹಗಳಿಂದ ವಿಮುಕ್ತಿಗೊಳಿಸಿ ಸಮಾಜದಲ್ಲಿ ಹೊಸ ಮೌಲ್ಯಗಳನ್ನು ಸೃಷ್ಟಿಸುವಂತಹ ಪಠ್ಯಕ್ರಮ ಮತ್ತು ಪಠ್ಯ ಪುಸ್ತಕಗಳ ತಯಾರಿಗೆ ಗಮನ

ಹರಿಸಿತು ಮತ್ತು ವಿವಿಧ ಕೋರ್ಸ್‌ಗಳಲ್ಲಿ ಮಹಿಳಾ ಅಧ್ಯಯನವನ್ನು ಪಠ್ಯಕ್ರಮದ ಅಂಗವಾಗಿ ರೂಪಿಸಬೇಕು ಎಂಬುದಾಗಿ ಹಲವಾರು ನಿಯಮಗಳನ್ನು ರೂಪಿಸಿತು. ಹೀಗೆ ಅಂದಿನಿಂದ ಇಂದಿನವರೆಗೂ ಹಲವಾರು ಶಿಕ್ಷಣ ನೀತಿಗಳನ್ನು ಜಾರಿಗೊಳಿಸುತ್ತಲೇ ಬರಲಾಗಿದೆ. ಆದರೆ ಸ್ತ್ರೀಯರ ಶಿಕ್ಷಣ ಮಟ್ಟದಲ್ಲಿ ಹೆಚ್ಚಿನ ಬದಲಾವಣೆಯೇನೂ ಕಂಡುಬರುತ್ತಿಲ್ಲ. ಗ್ರಾಮೀಣ ಭಾಗಗಳಲ್ಲಿ ಜನರು ಇಂದಿಗೂ ಶಿಕ್ಷಣದಿಂದ ದೂರವೇ ಉಳಿದಿದ್ದಾರೆ. ಇದಕ್ಕೆ ಹಲವು ಕಾರಣಗಳಿವೆ. ಕುಟುಂಬಗಳಲ್ಲಿ ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ನೀಡದೇ ಇರುವ ಕಾರಣಕ್ಕಾಗಿ ಬಾಲ್ಯ ವಿವಾಹದಿಂದ ಆಗುತ್ತಿರುವ ದುಷ್ಪರಿಣಾಮಗಳ ಬಗೆಗೆ ತಿಳಿಯುತ್ತಿಲ್ಲ. ಹಾಗೆಯೇ ಹೆಣ್ಣುಮಕ್ಕಳು ಮದುವೆ ಮಾಡಿಕೊಂಡು ಬೇರೊಂದು ಕುಟುಂಬಕ್ಕೆ ಹೋಗುವಂತಹವರು. ಅವರಿಗೆ ಶಿಕ್ಷಣವನ್ನು ಕೊಡಿಸುವುದರಿಂದ ಯಾವುದೇ ಲಾಭವಿಲ್ಲ. ಹಾಗೆಯೇ ಗಂಡನ ಮನೆಗೆ ಹೋಗಿ ಅವರು ಸಾಧಿಸಬೇಕಾದದ್ದು ಏನೂ ಇಲ್ಲ ಎಂಬಂತಹ ಮನೋಭಾವಗಳು ಜನರಲ್ಲಿ ಹೆಚ್ಚಾಗಿ ಮೂಡಿರುವುದರಿಂದ ಮಹಿಳೆಯರನ್ನು ಪ್ರಾಥಮಿಕ ಅಥವಾ ಮಾಧ್ಯಮಿಕ ಶಿಕ್ಷಣಕ್ಕಷ್ಟೇ ಮೀಸಲಿಡಲಾಗಿದೆ. ಹಾಗಾಗಿ ಬಾಲ್ಯ ವಿವಾಹಗಳ ಸಂಖ್ಯೆ ಇಂದಿಗೂ ಜೀವಂತವಿರುವುದನ್ನು ಕಾಣಬಹುದು.

ನಗರಗಳಲ್ಲಾಗಲೀ ಅಥವಾ ಗ್ರಾಮೀಣ ಪ್ರದೇಶಗಳಲ್ಲಾಗಲೀ ಹಾಗೆಯೇ ಮೇಲುಜಾತಿ, ಕೆಳಜಾತಿ ಮತ್ತು ಶ್ರೀಮಂತ,ಬಡವ ಇತ್ಯಾದಿಗಳು ಯಾವುದೇ ಸಮಾಜದಲ್ಲಾಗಲೀ ಹೆಣ್ಣುಮಕ್ಕಳ ವಿವಾಹ ವಯಸ್ಸಿನ ಏರಿಕೆ ಮತ್ತು ಇಳಿಕೆಗಳು ಆಯಾ ಕುಟುಂಬಗಳ ಅಗತ್ಯಗಳನ್ನು ಅವಲಂಬಿಸಿರುತ್ತವೆ. ಬದಲಾಗಿ ಇಲ್ಲಿ ಸ್ತ್ರೀಯರ ಅಭಿವೃದ್ಧಿ ಅಥವಾ ಸುಧಾರಣೆಯನ್ನಾಗಲೀ ಹಾಗೆಯೇ ಕಾನೂನನ್ನಾಗಲೀ ಅವಲಂಬಿಸಿರುವುದಿಲ್ಲ. ಏಕೆಂದರೆ ಇವುಗಳು ಜನರಿಗೆ ಅಗತ್ಯವೆನಿಸಿಲ್ಲ. ಕುಟುಂಬಗಳ ಆರ್ಥಿಕ ಸ್ಥಿತಿಗತಿಗಳಿಗೆ ಅನುಗುಣವಾಗಿ ವಿವಾಹಗಳು ನಡೆಯುತ್ತಲೇ ಇರುತ್ತವೆ. ಮುಖ್ಯವಾಗಿ ಅಪ್ರಾಪ್ತತೆಯ ಪ್ರಶ್ನೆ ಕಾಡುವುದೇ ಇಲ್ಲ. ಹಾಗೆಯೇ ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಕುರಿತಾಗಿ ಚಿಂತಿಸುವುದೇ ಇಲ್ಲ. ಏಕೆಂದರೆ ಕುಟುಂಬದಲ್ಲಿನ ತಂದೆ ತಾಯಂದಿರಿಗೆ ಹೆಣ್ಣು ಮಗಳೇ ಭಾರವಾಗಿರುತ್ತಾಳೆ. ಹಾಗಾಗಿ ಅವಳನ್ನು ಬಹು ಬೇಗನೇ ವಿವಾಹ ಎಂಬ ಕೂಪಕ್ಕೆ ತಳ್ಳಿ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳುತ್ತಾರೆ. ಚಿಕ್ಕ ಮಕ್ಕಳಿಗೆ ವಿವಾಹ ಮಾಡಿದ ನಂತರ ಅವರು ತಮ್ಮ ಗಂಡನ ಮನೆಯಲ್ಲಿ ಹೇಗಿದ್ದಾರೆ ಎಂದೂ ವಿಚಾರಿಸದಿರುವಂತಹ ಸಂದರ್ಭಗಳೂ ಇವೆ. ಆದರೆ ಬಾಲ್ಯ ವಿವಾಹಕ್ಕೆ ಒಳಗಾದ ಹೆಣ್ಣು ಮಕ್ಕಳು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಲೇ ಇದ್ದಾರೆ. ಈ ಸಮಸ್ಯೆಗಳಾವುವೂ ವ್ಯವಸ್ಥೆಗೆ ಗಂಭೀರವಾಗಿ ಕಾಡುತ್ತಿಲ್ಲ. ವ್ಯವಸ್ಥೆಯಲ್ಲಿನ ಪಿತೃಪ್ರಧಾನ ಮೌಲ್ಯಗಳು ಇಂದಿಗೂ ಬಲಿಷ್ಠವಾಗಿರುವುದರ ಕಾರಣದಿಂದ ಬಾಲ್ಯ ವಿವಾಹಗಳು ಇಂದಿಗೂ ಜೀವಂತವಾಗಿವೆ. ಅದರ ಜೊತೆಗೆ ಹೆಣ್ಣುಮಕ್ಕಳ ಸಮಸ್ಯೆಗಳು ಹಾಗೆಯೇ ಮುಂದುವರೆಯುತ್ತಿವೆ. ಈ ವ್ಯವಸ್ಥೆ ಬದಲಾಗಬೇಕಿದೆ. ವಿವಾಹ ಸಂಸ್ಥೆಯು ಎಲ್ಲಿಯವರೆಗೆ ತನ್ನನ್ನು ಲಿಂಗ ಸಮಾನತೆಯ

ತಳಹದಿಯ ಮೇಲೆ ರೂಪಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅದು ಸ್ತ್ರೀಯರ ಬಗೆಗೆ ಭದ್ರತೆಯ ಮಾತನಾಡುತ್ತಲೇ ಅಭದ್ರತೆಯನ್ನು ಸೃಷ್ಟಿಸುತ್ತಿರುತ್ತದೆ. ಹಾಗಾಗಿ ಪುರುಷಶಾಹಿ ಚಿಂತನೆಗಳಲ್ಲಿ ಆಮೂಲಾಗ್ರ ಬದಲಾವಣೆಗಳು ಉಂಟಾಗಬೇಕು ಮತ್ತು ಸ್ತ್ರೀಯ ಪ್ರಾಮುಖ್ಯತೆಯ ಬಗೆಗೆ ಸರಿಯಾದ ಅರಿವು ಮೂಡಬೇಕಿದೆ. ಆಂದಾಗ ಮಾತ್ರ ಲಿಂಗ ಅಸಮಾನತೆ ಎಂಬುದನ್ನು ನಾಶಪಡಿಸಬಹುದು. ಬಾಲ್ಯ ವಿವಾಹಗಳನ್ನು ತಡೆಯಬಹುದು. ಈ ವಿವಾಹಗಳು ಮಕ್ಕಳ ಹಕ್ಕುಗಳನ್ನು ಸಂಪೂರ್ಣವಾಗಿ ಉಲ್ಲಂಘಿಸುತ್ತವೆ. ಇವುಗಳು ಮಾನವ ಹಕ್ಕುಗಳ ವ್ಯಾಪ್ತಿಗೆ ಒಳಪಡುತ್ತವೆಯಾದ್ದರಿಂದ ಮಾನವ ಹಕ್ಕುಗಳನ್ನು ಬಾಲ್ಯ ವಿವಾಹಗಳು ಹೇಗೆ ಉಲ್ಲಂಘಿಸುತ್ತವೆ ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ಸಂಪೂರ್ಣವಾಗಿ ವಿವರಿಸಲಾಗಿದೆ.

### ಉಲ್ಲೇಖಗಳು


೧. ಅನುಪಮಾ ಎಚ್.ಎಸ್, ೨೦೧೨, ಮಹಿಳೆ ದಲಿತತ್ವ ಮತ್ತು ರಾಜಕೀಯ ಪ್ರಜ್ಞೆ, ಲಡಾಯಿ ಪ್ರಕಾಶನ, ಗದಗ.

೨. ಉಷಾ ಎಂ, ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ವಿರೂಪಾಕ್ಷ ಪೂಜಾರಹಳ್ಳಿ(ಸಂ), ೨೦೦೭, ಪೆರಿಯಾರರ ವಿಚಾರಧಾರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಶೈಲಜ ಹಿರೇಮಠ; ಮೇ ೨೦೧೬; ಕುಟುಂಬ, ಮಹಿಳೆ, ದೌರ್ಜನ್ಯ ಮತ್ತು ಕಾನೂನು ಪರ್ಯಾಯ ಸಾಧ್ಯತೆಗಳಿಗಿರುವ ತೊಡಕುಗಳು; ಸಂವಾದ ಪತ್ರಿಕೆ; ಸ್ಫೂರ್ತಿಧಾಮ, ಅಂಜನಾನಗರ, ಬೆಂಗಳೂರು.

೫. ಸರೋಜ ಕೆ. ೨೦೦೧, ಮಹಿಳೆ ಮತ್ತು ಆರೋಗ್ಯ : ಮಹಿಳಾ ಅಧ್ಯಯನಗಳ ದೃಷ್ಟಿಯಲ್ಲಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಹಲಸಂಗಿಯ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ ಇತರರು, ೨೦೧೦, ಗರತಿಯ ಹಾಡು, ಸಮಾಜ ಪುಸ್ತಕಾಲಯ, ಧಾರವಾಡ.

೭. ಹಾಲತಿ ಸೋಮಶೇಖರ್, ೨೦೦೭, ಮಹಿಳಾ ಚಳವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು.

೮. ಪ್ರಜಾವಾಣಿ ದಿನಪತ್ರಿಕೆ, ೨೯ನೇ ಆಗಸ್ಟ್ ೨೦೧೫.

೯. ಪ್ರಜಾವಾಣಿ ದಿನಪತ್ರಿಕೆ, ೧ ಸೆಪ್ಟೆಂಬರ್ ೨೦೧೫.

## ಅಧ್ಯಾಯ ಆರು

# ಬಾಲ್ಯ ವಿವಾಹ ಪದ್ಧತಿ : ಮಾನವ ಹಕ್ಕುಗಳ ನೆಲೆಯಲ್ಲಿ

# ಅಧ್ಯಾಯ ಆರು

## ಬಾಲ್ಯ ವಿವಾಹ ಪದ್ಧತಿ : ಮಾನವ ಹಕ್ಕುಗಳ ನೆಲೆಯಲ್ಲಿ

ಬಾಲ್ಯ ವಿವಾಹ ಪದ್ಧತಿಯು ಮಾನವ ಹಕ್ಕುಗಳನ್ನು ಉಲ್ಲಂಘಿಸುತ್ತದೆ. ಇದು ಭಾರತೀಯ ಸಂದರ್ಭದಲ್ಲಿ ಅನಿಷ್ಟ ಪದ್ಧತಿ ಎಂದು ಗುರುತಿಸಿಕೊಂಡು, ಇದರ ನಿರ್ಮೂಲನೆಗಾಗಿ ಕಾಯಿದೆ ಜಾರಿಯಲ್ಲಿದ್ದರೂ, ಬಾಲ್ಯ ವಿವಾಹಗಳು ನಿರ್ಭಿಡೆಯಿಂದ ನಡೆಯುತ್ತಲೇ ಇವೆ. ಈ ವಿವಾಹಗಳು ಒತ್ತಾಯದಿಂದಲೋ, ಭಾವನಾತ್ಮಕ ಬೆದರಿಕೆಗಳಿಂದಲೋ, ಕುಟುಂಬಗಳಲ್ಲಿನ ಒತ್ತಡಗಳ ಕಾರಣವಾಗಿಯೋ ಚಿಕ್ಕ ಮಕ್ಕಳು ಹೀಗೆ ಬಾಲ್ಯ ವಿವಾಹಗಳಿಗೆ ಒಳಗಾಗುವುದಕ್ಕಿರುವ ಕಾರಣಗಳನ್ನು ಮತ್ತು ಅದರಿಂದಾಗುವ ಪರಿಣಾಮಗಳನ್ನು ಹಿಂದಿನ ಅಧ್ಯಾಯಗಳಲ್ಲಿ ಸವಿವರವಾಗಿ ವಿವರಿಸಲಾಗಿದೆ. ಚಿಕ್ಕ ಮಕ್ಕಳ ಮೇಲೆ ದುಷ್ಪರಿಣಾಮಗಳು ಆಗುತ್ತಿವೆಯಾದರೂ ಇವುಗಳಾವುವೂ ಗಣನೆಗೆ ಬರುತ್ತಿಲ್ಲ. ಹಾಗಾಗಿಯೇ ಇದೊಂದು ಸಹಜ ಪ್ರಕ್ರಿಯೆಯಾಗಿ ರೂಢಿಯಲ್ಲಿದೆ. ಬಾಲ್ಯ ವಿವಾಹ ಮಾನವ ಹಕ್ಕುಗಳ ಜೊತೆ ನೇರವಾದ ಸಂಬಂಧವನ್ನು ಹೊಂದಿದೆ. ಈ ವಿವಾಹವು ಮಕ್ಕಳ ಹಕ್ಕುಗಳು, ಮಹಿಳಾ ಹಕ್ಕುಗಳನ್ನು ನಿರಾಯಾಸವಾಗಿ ಉಲ್ಲಂಘಿಸುತ್ತದೆ. ಇವುಗಳಿಂದಾಗಿ ಮಗುವಿನ ಆರೋಗ್ಯದ ಮೇಲೆ ತೀವ್ರ ತೆರನಾದ ಪರಿಣಾಮ ಬೀರುತ್ತದೆ. ಮಗುವಿನ ಬಾಲ್ಯ ಮತ್ತು ಹದಿಹರೆಯದ ನಿರಾಕರಣೆಯಾಗುತ್ತದೆ. ಹಾಗೆಯೇ ಮಗುವಿನ ವೈಯಕ್ತಿಕ ಸ್ವಾತಂತ್ರ್ಯವನ್ನು ಹರಣ ಮಾಡುವುದರ ಜೊತೆಗೆ ಅದರ ವ್ಯಕ್ತಿತ್ವ ವಿಕಸನಕ್ಕೂ ಅಡ್ಡಿಯುಂಟು ಮಾಡುತ್ತದೆ. ಅವರನ್ನು ಶೈಕ್ಷಣಿಕ ಅವಕಾಶದಿಂದ ವಂಚಿತರನ್ನಾಗಿಸುತ್ತದೆ. ಈ ಎಲ್ಲಾ ಅಂಶಗಳ ಉಲ್ಲಂಘನೆಯು ಮಾನವ ಹಕ್ಕುಗಳಡಿಯಲ್ಲಿ ಅಪರಾಧವೆನಿಸಿಕೊಳ್ಳುತ್ತವೆ. ಮಾನವ ಹಕ್ಕುಗಳು ಮಕ್ಕಳ ಹಕ್ಕುಗಳ ಕುರಿತಂತೆ ಮತ್ತು ಮಹಿಳಾ ಹಕ್ಕುಗಳ ಕುರಿತಂತೆ ಏನನ್ನು ಹೇಳುತ್ತದೆ ಎಂಬುದನ್ನು ಮತ್ತು ಬಾಲ್ಯ ವಿವಾಹವು ಈ ಮಾನವ ಹಕ್ಕುಗಳನ್ನು ಹೇಗೆ ಉಲ್ಲಂಘಿಸುತ್ತದೆ ಹಾಗೂ ಲಿಂಗ ಅಸಮಾನತೆಯಿಂದ ಕೂಡಿರುವ ವ್ಯವಸ್ಥೆಯಲ್ಲಿ ಮಹಿಳೆಯರ ಹಕ್ಕುಗಳು ಹೇಗೆ

ಹರಣಗೊಳ್ಳುತ್ತಿವೆ; ಇವುಗಳು ಮಾನವ ಹಕ್ಕುಗಳ ಜೊತೆಗೆ ಯಾವ ಬಗೆಯ ನಂಟನ್ನು ಹೊಂದಿವೆ ಮತ್ತು ಸಂವಿಧಾನದ ಹಾಗೆಯೇ ಮಾನವ ಹಕ್ಕುಗಳ ಯಾವ ಕಲಮುಗಳು/ ಪರಿಚ್ಛೇದಗಳು ಮಕ್ಕಳ ಹಕ್ಕುಗಳನ್ನು ಪ್ರತಿಪಾದಿಸುತ್ತವೆ ಮತ್ತು ಅವುಗಳ ಉಲ್ಲಂಘನೆಗೆ ಬಾಲ್ಯ ವಿವಾಹ ಹೇಗೆ ಕಾರಣವಾಗಿವೆ ಎಂಬಂತಹ ವಿಷಯಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಹಕ್ಕುಗಳು ಎಂದು ರೂಪಿಸಲ್ಪಟ್ಟವೋ ಅಂದಿನಿಂದಲೇ ಮಾನವ ಹಕ್ಕುಗಳ ಉಗಮವಾಯಿತು ಎಂದು ಹೇಳಬಹುದು. ಏಕೆಂದರೆ ಮಾನವನ ಅಸ್ತಿತ್ವವನ್ನು ಅರ್ಥಪೂರ್ಣವಾಗಿಸುವುದು ಅವರ ಮೂಲಭೂತ ಹಕ್ಕುಗಳು ಮಾತ್ರ. ಎಲ್ಲಾ ವ್ಯಕ್ತಿಗಳು ಸಮಾನವಾದ ಘನತೆ ಹೊಂದಿರುತ್ತಾರೆ ಎಂಬುದು ಹಕ್ಕುಗಳ ಪರಿಕಲ್ಪನೆಯ ಕೇಂದ್ರ ಸಿದ್ಧಾಂತವಾಗಿದೆ. ಈ ಹಕ್ಕುಗಳು ಸಾರ್ವತ್ರಿಕವಾಗಿ ಎಲ್ಲರನ್ನೂ ಒಳಗೊಳ್ಳುತ್ತವೆ. ಇವುಗಳನ್ನು ಹಸ್ತಾಂತರಗೊಳಿಸಲು ಸಾಧ್ಯವಿಲ್ಲ. ಹಾಗಾಗಿಯೇ ಪ್ರತಿಯೊಬ್ಬ ಪ್ರಜೆಯೂ ರಾಜಕೀಯ ಸ್ಥಾನಮಾನ, ಸಾಮಾಜಿಕ ಸ್ಥಾನಮಾನ ಇವುಗಳು ಏನೇ ಇದ್ದರೂ ಈ ಹಕ್ಕುಗಳು ಅವರಿಗಿರುತ್ತವೆ. ಈ ಹಕ್ಕುಗಳು ತನಗೆ ಹುಟ್ಟಿನಿಂದಲೇ ಬಂದವುಗಳಾಗಿವೆ. ಇವುಗಳನ್ನು ಸ್ವಾಭಾವಿಕ ಹಕ್ಕುಗಳೆಂತಲೂ ಕರೆಯಲಾಗುತ್ತದೆ. "ಸ್ವಾಭಾವಿಕ ಹಕ್ಕುಗಳು ಕಾನೂನು ಹಕ್ಕುಗಳ ರೂಪ ಪಡೆದದ್ದು ೧೭೮೯ರ ಫ್ರೆಂಚ್ ಕ್ರಾಂತಿಯ ಅವಧಿಯಲ್ಲಿ. ಫ್ರಾನ್ಸ್‌ಗಾಗಿ ರಚಿಸಿದ್ದ ಹೊಸ ಸಂವಿಧಾನದ ಪ್ರಸ್ತಾವನೆಯಾಗಿ ೨೬ನೇ ಆಗಸ್ಟ್ ೧೭೮೯ರಂದು. ಆ ನಂತರದಲ್ಲಿ ಲೀಗ್ ಆಫ್ ನೇಷನ್ಸ್ ೧೯೧೯ರಲ್ಲಿ ಅಸ್ತಿತ್ವಕ್ಕೆ ಬಂದಿತು. ಇದರ ಉದ್ದೇಶ ರಾಷ್ಟ್ರಗಳು ಯುದ್ಧವಾಡುವುದನ್ನು ತಪ್ಪಿಸುವುದು ಮತ್ತು ಅಂತರಾಷ್ಟ್ರೀಯ ಕಾನೂನು ನಿಯಮವನ್ನು ಪಾಲಿಸುವ ಮೂಲಕ ಅಂತರಾಷ್ಟ್ರೀಯ ಸೌಹಾರ್ದತೆಯನ್ನು ವೃದ್ಧಿಸುವುದು ಮತ್ತು ಅಂತರಾಷ್ಟ್ರೀಯ ಶಾಂತಿ ಮತ್ತು ಸುರಕ್ಷೆಯನ್ನು ಸಾಧಿಸುವುದು. ಆದರೆ ಈ ಉದ್ದೇಶ ವಿಫಲಗೊಂಡು ಎರಡನೇ ಮಹಾಯುದ್ಧ ನಡೆದು ಹೋಯಿತು. ಹಾಗಾಗಿ ೧೯೪೬ರಲ್ಲಿ ಲೀಗ್ ಆಫ್ ನೇಷನ್ಸ್ ವಿಸರ್ಜನೆಗೊಂಡಿತು. ಎರಡನೇ ಮಹಾಯುದ್ಧದ ಫಲವಾಗಿ ಮಾನವ ಹಕ್ಕುಗಳನ್ನು ಕಾಯ್ದುಕೊಳ್ಳುವ ಹಾಗೂ ಸಂರಕ್ಷಿಸುವ ವಾದಕ್ಕೆ ಪುಷ್ಟಿ ದೊರೆಯಿತು" (ಗೀತಾ ಕೃಷ್ಣ ಮೂರ್ತಿ, ೨೦೦೯, ಪು-೨). ಹೀಗೆ ಹುಟ್ಟಿಕೊಂಡ ಮಾನವ ಹಕ್ಕುಗಳು ಇಂದು ಅತ್ಯಂತ ಪ್ರಬಲವಾಗಿ ರೂಪುಗೊಂಡು ಸರ್ವವ್ಯಾಪಿಯಾಗಿವೆ.

### ೬.೧. ಬಾಲ್ಯ ವಿವಾಹ : ಮಾನವ ಹಕ್ಕುಗಳ ಉಲ್ಲಂಘನೆ

ಮಾನವ ಹಕ್ಕುಗಳ ವಿಶ್ವವ್ಯಾಪಿ ಘೋಷಣೆಗೆ ಮುಖ್ಯವಾಗಿ ಕಾರಣವಾದದ್ದು ಮಾನವ ಹಕ್ಕುಗಳ ಬಗ್ಗೆ ವ್ಯಕ್ತವಾದ ಅಂತರಾಷ್ಟ್ರೀಯ ಕಾಳಜಿಯಾಗಿದೆ. ವಿಶ್ವಸಂಸ್ಥೆಯ ಸನ್ನಧಿನಲ್ಲಿ ಸಾಧಿಸಬೇಕೆಂದು ಹೇಳಿರುವ ಆದರ್ಶವನ್ನು ವಾಸ್ತವವಾಗಿ ಕಾರ್ಯಗತಗೊಳಿಸಲು ಮತ್ತು ಹಾಗೆ ಕಾರ್ಯಗತಗೊಳಿಸಲು ರಾಷ್ಟ್ರಗಳನ್ನು ಬದ್ಧರನ್ನಾಗಿಸಲು ಮತ್ತು ಮಾನವ ಹಕ್ಕುಗಳ

ಉಲ್ಲಂಘನೆಗಳಿಗೆ ಉತ್ತರದಾಯಿಗಳನ್ನಾಗಿಸಲು ರೂಪುಗೊಂಡಿದುದೇ ಮಾನವ ಹಕ್ಕುಗಳ ವಿಶ್ವವ್ಯಾಪಿ ಘೋಷಣೆ. "ಈ ಘೋಷಣೆ ಒಟ್ಟು ೩೦ ಅನುಚ್ಛೇದಗಳನ್ನು ಒಳಗೊಂಡಿದೆ. ಮೊದಲ ೨೧ ಅನುಚ್ಛೇದಗಳು ನಾಗರಿಕ ಮತ್ತು ರಾಜಕೀಯ ಹಕ್ಕುಗಳಿಗೆ ಸಂಬಂಧಪಡುತ್ತವೆ. ಇವು ತಾರತಮ್ಯದಿಂದ ಮುಕ್ತವಾಗುವ ಹಕ್ಕು; ಒಬ್ಬ ವ್ಯಕ್ತಿಯ ಜೀವಿಸುವ ಸ್ವಾತಂತ್ರ್ಯದ ಮತ್ತು ಭದ್ರತೆಯ ಹಕ್ಕುಗಳು; ಯೋಚನೆ ಮತ್ತು ಅಭಿವ್ಯಕ್ತಿಸುವ ಸ್ವಾತಂತ್ರ್ಯದ ಹಕ್ಕು; ಧಾರ್ಮಿಕ ಸ್ವಾತಂತ್ರ್ಯದ; ಸಭೆ ಸೇರುವ ಮತ್ತು ಸಂಸ್ಥೆಗಳನ್ನು ರಚಿಸುವ ಸ್ವಾತಂತ್ರ್ಯದ, ಹಿಂಸೆ ಮತ್ತು ಕ್ರೌರ್ಯದಿಂದ ಕೂಡಿದ ಶಿಕ್ಷೆಗೆ ಒಳಗಾಗದಿರಲು ಇರುವ ಸ್ವಾತಂತ್ರ್ಯದ ಹಕ್ಕುಗಳು; ಕಾನೂನಿನ ಮುಂದೆ ಸಮಾನತೆಯ ಹಕ್ಕು; ಅಕಾರಣ ದಸ್ತಗಿರಿಯಿಂದ ಸ್ವಾತಂತ್ರ್ಯ; ಸಂಚರಿಸುವ ಸ್ವಾತಂತ್ರ್ಯ; ಖಾಸಗೀ ಜೀವನದ ಮತ್ತು ವೈಯಕ್ತಿಕ ನಿಷ್ಠೆಯ ಹಕ್ಕು; ಕಾನೂನು ವ್ಯವಹರಣೆಗಳಿಗೆ ಮತ್ತು ಯುಕ್ತ ಕಾರ್ಯ ವಿಧಾನಕ್ಕೆ ಹಕ್ಕು; ಮತ್ತು ರಾಜಕೀಯದಲ್ಲಿ ಭಾಗವಹಿಸುವ ಹಕ್ಕುಗಳನ್ನು ಒಳಗೊಳ್ಳುತ್ತದೆ. ಮುಂದಿನ ಮೂರು ಅನುಚ್ಛೇದಗಳು ಎಂದರೆ ೨೨ರಿಂದ ೨೭ರವರೆಗಿನ ಅನುಚ್ಛೇದಗಳು ಸಾಮಾಜಿಕ ಭದ್ರತೆ, ಶಿಕ್ಷಣ ಮತ್ತು ಉತ್ತಮ ಗುಣಮಟ್ಟದ ಜೀವನದ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳು, ವಿವಾಹವಾಗುವ ಮತ್ತು ಕುಟುಂಬವನ್ನು ಹೊಂದುವ ಹಕ್ಕು, ಒತ್ತಾಯದ ವಿವಾಹವನ್ನು ಮಾಡಿಕೊಳ್ಳದಿರುವ ಸ್ವಾತಂತ್ರ್ಯ, ಅನಾರೋಗ್ಯ, ಅಸಾಮರ್ಥ್ಯ ಮತ್ತು ವೃದ್ಧಾಪ್ಯದಲ್ಲಿ ಭದ್ರತೆಯ ಹಕ್ಕು ಇವುಗಳನ್ನು ಒಳಗೊಳ್ಳುತ್ತದೆ. ಈ ಹಕ್ಕುಗಳು ಮೂಲಭೂತವಾಗಿ ಕಲ್ಯಾಣ ರಾಷ್ಟ್ರದ ನಿರ್ಮಾಣಕ್ಕೆ ಅಗತ್ಯವಾದ ಹಕ್ಕುಗಳು. ಕೊನೆಯ ಮೂರು ಅನುಚ್ಛೇದಗಳು ೨೮-೩೦ ಸಾಮಾನ್ಯ ಅನ್ವಯದ ಅನುಚ್ಛೇದಗಳಾಗಿದ್ದು, ಇಡೀ ಘೋಷಣೆಯ ಮೇಲೆ ಪರಿಣಾಮವನ್ನು ಹೊಂದಿದೆ" (ಗೀತಾ ಕೃಷ್ಣ ಮೂರ್ತಿ, ೨೦೦೯, ಪು-೬). ಒಟ್ಟಾರೆಯಾಗಿ ಈ ಎಲ್ಲಾ ಅನುಚ್ಛೇಧಗಳು ಮಾನವರ ಎಲ್ಲ ಹಕ್ಕುಗಳನ್ನು ಸಮರ್ಥಿಸುವ ಮೂಲಕ ಸ್ವಾತಂತ್ರ್ಯವನ್ನು ಒದಗಿಸಿಕೊಡುತ್ತವೆ.

ಭಾರತದಲ್ಲಿ ಮಾನವ ಹಕ್ಕುಗಳ ಕುರಿತ ಚಳುವಳಿಯು ಆರಂಭವಾದದ್ದು ೧೯೭೦ರ ದಶಕದಲ್ಲಿ. ಭಾರತದಲ್ಲಿನ ಮಾನವ ಹಕ್ಕುಗಳ ಅಧಿನಿಯಮ ೧೯೯೩ರಲ್ಲಿ ಮಾನವ ಹಕ್ಕುಗಳು ಎಂಬುದನ್ನು ಸಂವಿದಾನದಲ್ಲಿ ಅಥವಾ ಅಂತರಾಷ್ಟ್ರೀಯ ಒಡಂಬಡಿಕೆಯಲ್ಲಿ ಕೊಡ ಮಾಡಿರುವ ವ್ಯಕ್ತಿಗಳ ಜೀವ, ಸ್ವಾತಂತ್ರ್ಯ, ಸಮಾನತೆ ಮತ್ತು ಘನತೆಗೆ ಸಂಬಂಧಪಟ್ಟ ಹಾಗೂ ಭಾರತದ ನ್ಯಾಯಾಲಯಗಳ ಮೂಲಕ ಜಾರಿಗೊಳಿಸಬಹುದಾದ ಹಕ್ಕುಗಳು ಎಂದು ಪರಿಭಾಷಿಸುತ್ತದೆ. ಈ ಮಾನವ ಹಕ್ಕುಗಳಲ್ಲಿ ಸೂಚಿಸಲಾಗಿರುವ ನಿಯಮಗಳು ನಮ್ಮ ಭಾರತ ಸಂವಿಧಾನದಲ್ಲಿ ಅಡಕವಾಗಿರುವುದನ್ನು ಕಾಣಬಹುದು. ಮುಖ್ಯವಾಗಿ ಭಾರತದ ಸಂವಿಧಾನದಲ್ಲಿ ಮೂಲಭೂತ ಮಾನವ ಹಕ್ಕುಗಳನ್ನು ಆರು ವಿಭಾಗಗಳಲ್ಲಿ ವಿಂಗಡಿಸಲಾಗಿದೆ.

೧. ಸ್ವಾತಂತ್ರ್ಯದ ಹಕ್ಕು
೨. ಸಮಾನತೆಯ ಹಕ್ಕು

೩. ಶೋಷಣೆ ವಿರೋಧಿಸುವ ಹಕ್ಕು
೪. ಧಾರ್ಮಿಕ ಸ್ವಾತಂತ್ರ್ಯದ ಹಕ್ಕು
೫. ಶೈಕ್ಷಣಿಕ ಸ್ವಾತಂತ್ರ್ಯದ ಹಕ್ಕು
೬. ಸಾಂವಿಧಾನಿಕ ಪರಿಹಾರದ ಹಕ್ಕು

ಇವೆಲ್ಲವೂ ಮೂಲಭೂತ ಹಕ್ಕುಗಳಾಗಿದ್ದು, ಇವುಗಳೆಲ್ಲವುಗಳ ಅವಿಭಾಜ್ಯ ಅಂಗವೇ ಮಾನವ ಹಕ್ಕುಗಳು. ಈ ಮೇಲಿನ ಎಲ್ಲ ಮೂಲಭೂತ ಹಕ್ಕುಗಳನ್ನು ಬಾಲ್ಯ ವಿವಾಹವು ಉಲ್ಲಂಘಿಸಿರುವುದು ಕಂಡುಬರುತ್ತದೆ. ಮಾನವ ಹಕ್ಕುಗಳ ಪ್ರಕಾರ ವಿವಾಹಕ್ಕೆ ಸಂಬಂಧಿಸಿದಂತೆ ಸ್ತ್ರೀ–ಪುರುಷರಿಬ್ಬರಿಗೂ ವಿವಾಹವಾಗಲು ಇರಬೇಕಾದ ವಯಸ್ಸು ೧೮ ವರ್ಷಗಳು ಎಂದು ನಿಗಧಿಮಾಡಿದೆ. ಆದರೆ ಭಾರತದಲ್ಲಿ ನಿಗಧಿಪಡಿಸಿದ ವಿವಾಹ ವಯಸ್ಸು ಸ್ತ್ರೀಯರಿಗೆ ೧೮ ವರ್ಷ ಮತ್ತು ಪುರುಷರಿಗೆ ೨೧ ವರ್ಷಗಳು. ಈ ಬಗೆಯ ಅಂತರವಿದ್ದಾಗಲೂ ಬಾಲ್ಯ ವಿವಾಹಗಳು ನಡೆಯುತ್ತಲೇ ಇವೆ. ಇವು ಮಾನವ ಹಕ್ಕುಗಳನ್ನು ಉಲ್ಲಂಘಿಸುತ್ತಿವೆ. ಹೀಗೆ ಉಲ್ಲಂಘಿಸಲ್ಪಟ್ಟ ಹಕ್ಕುಗಳು ಯಾವುವು ಎಂಬುದನ್ನು ಕೆಲವು ಭಾಗಗಳನ್ನಾಗಿ ಮುಂದಿನಂತೆ ವಿಂಗಡಿಸಿಕೊಳ್ಳಲಾಗಿದೆ. ೧. ಸಮಾನತೆಯ ಹಕ್ಕು, ೨. ವಿವಾಹವಾಗುವ ಮತ್ತು ಉತ್ತಮ ಕುಟುಂಬವನ್ನು ಸ್ಥಾಪಿಸುವ ಹಕ್ಕು, ೩. ಸ್ವಾತಂತ್ರ್ಯ ಮತ್ತು ರಕ್ಷಣೆಯ ಹಕ್ಕು, ೪. ದಾಸ್ಯದಿಂದ ಬಿಡುಗಡೆಯ ಹಕ್ಕು. ಹಾಗೆಯೇ ಮೇಲಿನ ಎಲ್ಲಾ ಹಕ್ಕುಗಳನ್ನು ಪಡೆಯುವಲ್ಲಿ ಮಹಿಳೆಯರು ಎದುರಿಸುತ್ತಿರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು ಯಾವುವು ಎಂಬುದನ್ನು ಮತ್ತು ಬಾಲ್ಯ ವಿವಾಹವು ಈ ಬಗೆಯ ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡು ಮಕ್ಕಳ ಮತ್ತು ಸ್ತ್ರೀಯರ ಹಕ್ಕುಗಳನ್ನು ಹೇಗೆ ನಿರಾಕರಿಸುತ್ತಿದೆ ಎಂಬುದನ್ನು ಮುಂದಿನಂತೆ ಚರ್ಚಿಸಲಾಗಿದೆ.

**೬.೧.೧. ಸಮಾನತೆಯ ಹಕ್ಕು**

ಭಾರತ ಸ್ವತಂತ್ರಗೊಂಡ ನಂತರ ೧೯೫೦ರಲ್ಲಿ ಭಾರತೀಯ ಸಂಸತ್ತಿನಲ್ಲಿ ವಿಧೇಯಕವಾಗಿ ಅಂಗೀಕೃತಗೊಂಡ ಭಾರತದ ಸಂವಿಧಾನದಲ್ಲಿ ದತ್ತವಾಗಿರುವ ಅಂಶಗಳ ಪ್ರಕಾರ ಮಹಿಳಾ ಹಕ್ಕುಗಳ ಕುರಿತಾಗಿ, ಸ್ತ್ರೀ ಪುರುಷರ ಲಿಂಗಾನುಪಾತ, ತಾರತಮ್ಯ, ದೌರ್ಜನ್ಯಗಳನ್ನು ತಡೆಯುವ ಮತ್ತು ನಿಗ್ರಹಿಸುವ ನಿಟ್ಟಿನಲ್ಲಿ ಅನೇಕ ಕಾಯಿದೆಗಳು ರೂಪಿತವಾಗಿವೆ. ಲಿಂಗ ತಾರತಮ್ಯ, ಮಹಿಳೆಯರ ಮೂಲಭೂತ ಹಕ್ಕುಗಳು ಮತ್ತು ಇತರೆ ಪೂರಕವಾದ ಅಂಶಗಳ ಕುರಿತಾಗಿ ಭಾರತೀಯ ಸಂವಿಧಾನದಲ್ಲಿ ಸ್ಪಷ್ಟವಾಗಿ ಉಲ್ಲೇಖಗಳಿವೆ. ಮಹಿಳೆಯರಿಗೆ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ರಂಗಗಳಲ್ಲಿ ಸಮಾನತೆಯನ್ನು ಕೊಡುವುದು ಅತ್ಯವಶ್ಯಕವೆಂಬುದು ಭಾರತೀಯ ಸಂವಿಧಾನದ ಮೂಲ ಆಶಯವಾಗಿದೆ. ಭಾರತದಲ್ಲಿ ಮಾತ್ರವಲ್ಲದೆ ಅಂತರಾಷ್ಟ್ರೀಯ ಮಟ್ಟದಲ್ಲಿಯೂ ಮಹಿಳೆಯರ ಮತ್ತು ಮಕ್ಕಳ ಹಕ್ಕುಗಳ ಬಗೆಗೆ ತಿಳಿಸಲಾಗಿದೆ. ಸಮಾಜದಲ್ಲಿ ಇರುವ ಅಸಮಾನತೆಯನ್ನು ಹೋಗಲಾಡಿಸುವುದು ಅಂತರಾಷ್ಟ್ರೀಯ ಮಾನವ ಹಕ್ಕುಗಳ ಆದ್ಯ ಕರ್ತವ್ಯವಾಗಿದೆ. ಲಿಂಗ,

ಜನಾಂಗ, ಬಣ್ಣ, ಭಾಷೆ, ಧರ್ಮ, ರಾಜಕೀಯ ಅಥವಾ ಇತರೆ ಅಭಿಪ್ರಾಯಗಳು, ರಾಷ್ಟ್ರೀಯ ಅಥವಾ ಸಾಮಾಜಿಕ ಸಂಸ್ಥೆಗಳು, ಆಸ್ತಿ, ಹುಟ್ಟು ಅಥವಾ ಇತರೆ ಸ್ಥಾನಮಾನಗಳು ಇವುಗಳ ಕುರಿತಂತೆ ನಡೆಯುವ ತಾರತಮ್ಯವನ್ನು ಮಾನವ ಹಕ್ಕುಗಳು ಮೊದಲು ವಿರೋಧಿಸುತ್ತವೆ. ಭಾರತೀಯ ಸಂವಿಧಾನವು ಸಮಾನತೆಯ ಹಕ್ಕನ್ನು ಎಲ್ಲ ನಾಗರಿಕರಿಗೆ ಒಳಗೊಳ್ಳುವಂತೆ ಮೂಲಭೂತ ಹಕ್ಕನ್ನಾಗಿಸಿದೆ. ಸಂವಿಧಾನದ ೧೪ರಿಂದ ೧೮ರವರೆಗಿನ ಅನುಚ್ಛೇದಗಳು ಸಮಾನತೆಗೆ ಸಂಬಂಧಿಸಿದವುಗಳಾಗಿವೆ. ಸಂವಿಧಾನದ ೧೪ನೆಯ ಅನುಚ್ಛೇದವು ಕಾನೂನಿನ ಮುಂದೆ ಸಮಾನತೆಯ ಮತ್ತು ಕಾನೂನಿನಿಂದ ಸಮಾನ ರಕ್ಷಣೆಯ ಹಕ್ಕು ಎಲ್ಲ ವ್ಯಕ್ತಿಗಳಿಗೂ ಅನ್ವಯಿಸುತ್ತದೆ. ಎಂದರೆ ವ್ಯಕ್ತಿಯ ದರ್ಜೆ ಅಥವಾ ಸ್ಥಾನಮಾನ ಏನೇ ಇದ್ದರೂ, ಯಾರೂ ಕಾನೂನಿಗಿಂತ ಮೇಲಲ್ಲ ಎಂಬ ತತ್ವವನ್ನು ಸಂವಿಧಾನ ಎತ್ತಿ ಹಿಡಿಯುತ್ತದೆ. ಕಾನೂನಿನ ಮುಂದೆ ಸಮಾನತೆ ಎಂದರೆ ಸದೇಶ ಸಂದರ್ಭಗಳಲ್ಲಿ ಇರುವ ವ್ಯಕ್ತಿಗಳ ನಡುವೆ ತಾರತಮ್ಯ ಮಾಡತಕ್ಕದ್ದಲ್ಲ ಎಂಬುದು. ಹಾಗೆಯೇ ಅನುಚ್ಛೇದ–೧೫ ಮಹಿಳೆಯರು, ಮಕ್ಕಳು ಮತ್ತು ಹಿಂದುಳಿದ ವರ್ಗಗಳಿಗೆ ಅನುಕೂಲವಾಗುವಂತೆ ವಿಶೇಷ ಉಪಬಂಧಗಳನ್ನು ಮಾಡಲು ರಾಷ್ಟ್ರಕ್ಕೆ ಅವಕಾಶ ನೀಡುತ್ತದೆ. ಮುಖ್ಯವಾಗಿ ಜನಾಂಗ, ಧರ್ಮ, ಜಾತಿ, ಲಿಂಗ, ವಾಸಸ್ಥಳ, ಮುಂತಾದವುಗಳ ಆಧಾರದ ಮೇಲೆ ಯಾವುದೇ ತಾರತಮ್ಯ ಮಾಡತಕ್ಕದ್ದಲ್ಲ ಎಂಬುದನ್ನು ತಿಳಿಸುತ್ತದೆ.

ಸಂವಿಧಾನವು ಈ ಸಮಾನತೆಯ ಹಕ್ಕನ್ನು ಜಾರಿಗೆ ತರುವುದರ ಮೂಲಕ ಸಾಮಾಜಿಕ ವ್ಯವಸ್ಥೆಯಲ್ಲಿಯೂ ಸಮಾನತೆಯನ್ನು ತರುವ ಉದ್ದೇಶವನ್ನು ಹೊಂದಿತ್ತು. ಆದರೆ ಭಾರತೀಯ ಸಂಪ್ರದಾಯ ಮತ್ತು ಸಂಸ್ಕೃತಿ ಪಿತೃಪ್ರಧಾನ ಮೌಲ್ಯಗಳಿಂದ ಕೂಡಿದವುಗಳಾಗಿರುವುದರಿಂದ ಸ್ತ್ರೀಪುರುಷರ ನಡುವಿನ ಸಮಾನತೆ ಇಲ್ಲದಾಗಿದೆ. ಹಕ್ಕುಗಳ ವಿಷಯದಲ್ಲಿ ಮಹಿಳೆಯರಿಗೆ ಯಾವುದೇ ಸ್ವಾತಂತ್ರ್ಯವಿಲ್ಲದಾಗಿದೆ. ಮಹಿಳೆಯರು ತಮ್ಮ ಜೀವನದುದ್ದಕ್ಕೂ ಅಸಮಾನತೆಯಿಂದ ಕೂಡಿದ ವ್ಯವಸ್ಥೆಯಲ್ಲಿಯೇ ಜೀವಿಸಬೇಕಾಗಿದೆ. ಬಾಲ್ಯವಿವಾಹವು ಇದಕ್ಕೊಂದು ಉತ್ತಮ ಉದಾಹರಣೆಯಾಗಿದೆ. ಸಂಪ್ರದಾಯ ಮತ್ತು ಸಂಸ್ಕೃತಿಯ ಹೆಸರಲ್ಲಿ ಬಾಲ್ಯವಿವಾಹಗಳು ನಡೆಯುತ್ತಿದ್ದು, ಇದರಿಂದಾಗಿ ಹೆಣ್ಣುಮಕ್ಕಳು ಹಲವಾರು ತಾರತಮ್ಯಗಳಿಗೆ ಗುರಿಯಾಗಿರುವುದು ಕಂಡುಬರುತ್ತದೆ. ಒಂದು ಸಾರಿ ಬಾಲ್ಯವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳು ಶಿಕ್ಷಣ ಮತ್ತು ತಮ್ಮ ಅಭಿವೃದ್ಧಿಗೆ ಸಂಬಂಧಿಸಿದಂತೆ ಇರುವ ಸಮಾನ ಅವಕಾಶಗಳನ್ನು ಕಳೆದುಕೊಳ್ಳುತ್ತಿದ್ದಾರೆ. ಅದರ ಜೊತೆಗೆ ಮಾನಸಿಕವಾಗಿ ಮತ್ತು ದೈಹಿಕವಾಗಿ ಹಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇದು ಸಂತಾನೋತ್ಪತ್ತಿಯ ಸಮಸ್ಯೆಗಳನ್ನೂ ಒಳಗೊಳ್ಳುತ್ತದೆ. ಹೀಗೆ ಬಾಲ್ಯವಿವಾಹವು ಮಹಿಳೆಯ ಎಲ್ಲ ಬಗೆಯ ಸಮಾನತೆಯ ಹಕ್ಕನ್ನು ನಿರಾಕರಿಸುವಂತೆ ಮಾಡುತ್ತದೆ. ಸಾಮಾಜಿಕವಾಗಿ ರೂಢಿಯಲ್ಲಿರುವ ಬಾಲ್ಯವಿವಾಹವು ಮಹಿಳೆಯರ ಹಲವು ಪ್ರಶ್ನೆಗಳನ್ನು ಎದುರುಗೊಳ್ಳುತ್ತದೆ. ವ್ಯವಸ್ಥೆಯಲ್ಲಿ ಎಲ್ಲಾ ವಿಷಯಗಳು ಎಲ್ಲಿಯವರೆಗೆ ಮಹಿಳೆಯ ಕೇಂದ್ರಬಿಂದುವಾಗಿ

ಚರ್ಚಿತವಾಗುವುದಿಲ್ಲವೋ ಅಲ್ಲಿಯವರೆಗೆ ಸಾಂಸ್ಕೃತಿಕವಾಗಿ ರೂಪಿಸಲ್ಪಟ್ಟಿರುವ ಲಿಂಗ ಅಸಮಾನತೆಯ ಕುರಿತ ಅಂಶಗಳು ಹಾಗೆಯೇ ಮುಂದುವರೆಯುತ್ತವೆ.

ಭಾರತದ ಸಂವಿಧಾನವು ಬಾಲ್ಯ ವಿವಾಹ ಪದ್ಧತಿ ನಿಷೇಧ ಕಾನೂನನ್ನು ಜಾರಿಗೆ ತಂದಿದೆ. ಆದರೆ ಈ ಕಾಯಿದೆಯ ನಿಯಮಗಳು ಲಿಂಗದ ಕಾರಣಕ್ಕೆ ಮತ್ತು ವಯಸ್ಸಿನ ಕಾರಣಕ್ಕೆ ಸ್ತ್ರೀಪುರುಷರ ನಡುವಿನ ಅಸಮಾನತೆಗೆ ಕಾರಣವಾಗಿದೆ. ಅಂದರೆ ಈ ಕಾಯಿದೆಯ ಪ್ರಕಾರ ಸ್ತ್ರೀಪುರುಷರ ವಿವಾಹ ವಯಸ್ಸು ಸ್ತ್ರೀಯರಿಗೆ ೧೮ ಮತ್ತು ಪುರುಷರಿಗೆ ೨೧ ವರ್ಷ ವಯಸ್ಸನ್ನು ನಿಗಧಿ ಮಾಡಿದೆ. ಹೀಗೆ ಗುರುತಿಸಿರುವುದೇ ತಾರತಮ್ಯದ ಮೂಲ. ಇದು ಸಂವಿಧಾನದ ೧೪ನೇ ಅನುಚ್ಛೇದದ ಪ್ರಕಾರ ಹೆಣ್ಣುಮಗುವಿನ ಸ್ವಾಭಾವಿಕ ಹಕ್ಕನ್ನು ಲಿಂಗದ ಆಧಾರದಲ್ಲಿ ಉಲ್ಲಂಘಿಸುತ್ತದೆ. ಹಾಗೆಯೇ ಮಾನವ ಹಕ್ಕುಗಳಡಿಯಲ್ಲಿ ಸೂಚಿಸಲಾಗಿರುವ ನಿಯಮದ ಉಲ್ಲಂಘನೆಯೂ ಆಗಿದೆ. ಏಕೆಂದರೆ ಮಾನವ ಹಕ್ಕುಗಳ ಪ್ರಕಾರ ಸ್ತ್ರೀ-ಪುರುಷರಿಬ್ಬರಿಗೂ ವಿವಾಹ ವಯಸ್ಸು ೧೮ ವರ್ಷಗಳಿರಬೇಕು. ಆದರೆ ಭಾರತದ ಸಂದರ್ಭದಲ್ಲಿ ಹಾಗಿಲ್ಲ. ಬದಲಾಗಿ ಸ್ತ್ರೀ-ಪುರುಷರಿಬ್ಬರ ವಯಸ್ಸಿನ ನಡುವೆ ೩ ವರ್ಷಗಳ ಅಂತರವಿರುವುದನ್ನು ಕಾಣಬಹುದು. ಇದು ಲಿಂಗ ಅಸಮಾನತೆಗೆ ಕಾರಣವಾಗಿದೆ. ಭಾರದಲ್ಲಿ ಹಲವಾರು ಧರ್ಮಗಳಿವೆ. ಪ್ರತಿಯೊಂದು ಧರ್ಮವೂ ತನ್ನದೇ ಆದ ವೈಯಕ್ತಿಕ ಕಾನೂನನ್ನು ಹೊಂದಿವೆ. ಹಾಗೆಯೇ ವಿವಾಹದ ಬಗೆಗೆ ತಮ್ಮದೇ ಆದ ಚೌಕಟ್ಟನ್ನೂ ರೂಪಿಸಿಕೊಂಡಿವೆ. ಯಾವುದೇ ಧರ್ಮಗಳಲ್ಲಿಯಾಗಲೀ ಅಲ್ಲಿನ ವಿವಾಹ ಪರಂಪರೆಯ ಪ್ರಕಾರ ಗಂಡಿನ ವಯಸ್ಸು ಹೆಣ್ಣಿನ ವಯಸ್ಸಿಗಿಂತ ಹೆಚ್ಚಾಗಿರಬೇಕು ಎಂಬುದನ್ನೇ ಸೂಚಿಸುತ್ತವೆ. ಇದು ವಿವಾಹದಲ್ಲಿ ನಡೆಯುವ ಮೊದಲ ತಾರತಮ್ಯದ ನೆಲೆ. ಈ ಲಿಂಗ ಅಸಮಾನತೆ ಅಥವಾ ಸ್ತ್ರೀ ಪುರುಷರ ನಡುವಿನ ವಿವಾಹ ವಯಸ್ಸಿನ ನಡುವಿನ ಅಂತರ ಇಂದು ನಿನ್ನೆಯದಲ್ಲ. ಬದಲಾಗಿ ಇದು ಬಹಳ ಹಿಂದಿನಿಂದಲೂ ರೂಢಿಗತಗೊಳ್ಳುತ್ತಾ ಬಂದಿದೆ. ಬಹಳಷ್ಟು ಕಾಯಿದೆ ಕಾನೂನುಗಳು ಜಾರಿಯಾದರೂ, ವಿವಾಹ ವಯಸ್ಸಿನಲ್ಲಿ ಸಮಾನತೆಯನ್ನು ತರಲಾಗಲಿಲ್ಲ. ಏಕೆಂದರೆ ಪಿತೃಪ್ರಧಾನ ಮೌಲ್ಯಗಳು ಈ ಬಗೆಯ ಲಿಂಗ ಸಮಾನತೆಯನ್ನು ಒಪ್ಪುವುದಿಲ್ಲ. ಹಾಗಾಗಿಯೇ ಈ ಮೌಲ್ಯಗಳು ಮಹಿಳೆಯರನ್ನು ಹಿಂಸಿಸುತ್ತಿವೆ. ಮುಖ್ಯವಾಗಿ ಮಹಿಳೆಯರು ಇಂದು ಎಲ್ಲಾ ಹಕ್ಕುಗಳಿಂದ ವಂಚಿಸಲ್ಪಡುತ್ತಿದ್ದಾರೆ.

ಮಹಿಳೆಯರ ಹಕ್ಕುಗಳನ್ನು ಮಾನವ ಹಕ್ಕುಗಳ ನೆಲೆಯಲ್ಲಿ ಚರ್ಚಿಸಬೇಕಾದರೆ ಸೀಡಾ (ಮಹಿಳೆಯರ ವಿರುದ್ಧದ ಎಲ್ಲ ಬಗೆಯ ತಾರತಮ್ಯಗಳ ನಿವಾರಣೆ ಕುರಿತ ಒಡಂಬಡಿಕೆ) ಕುರಿತು ವಿವರಿಸಿಕೊಳ್ಳಬೇಕಾದ ಅಗತ್ಯತೆ ಇದೆ. ಇದು ರೂಪುಗೊಂಡಿದುದರ ಬಗೆಗೆ ತಿಳಿಯುವುದಾದರೆ, ಮಹಿಳೆಯರ ಮಾನವ ಹಕ್ಕುಗಳನ್ನು ನಿರ್ಧಿಷ್ಟವಾಗಿ ಉತ್ತೇಜಿಸುವ ಮತ್ತು ಸಂರಕ್ಷಿಸಲು ಅಂತರಾಷ್ಟ್ರೀಯ ಮಟ್ಟದಲ್ಲಿ ವಿಶೇಷ ಕಾನೂನನ್ನು ರಚಿಸುವುದು ಅಗತ್ಯವಾಗಿತ್ತು. ಸಾಮಾನ್ಯ ಮಾನದಂಡಗಳನ್ನು ನಿರ್ಧಿಷ್ಟ ಸಂದರ್ಭಕ್ಕೆ ಅಥವಾ ನಿರ್ಧಿಷ್ಟ ಗುಂಪಿಗೆ ಅನ್ವಯಿಸಲು ಮತ್ತು

ಸಾಂದರ್ಭೀಕರಿಸಲು ವಿಶೇಷ ಕಾನೂನುಗಳು ಸಹಾಯವಾಗುತ್ತವೆ. ಈ ದೃಷ್ಟಿಯಿಂದ ಮಹಿಳೆಯರ ವಿರುದ್ಧದ ಎಲ್ಲ ಬಗೆಯ ತಾರತಮ್ಯಗಳ ನಿವಾರಣೆ ಕುರಿತ ಒಡಂಬಡಿಕೆ (ಸೀಡಾ) ರೂಪುಗೊಂಡಿತು. ಈ ಒಡಂಬಡಿಕೆಯು ೧೮ನೇ ಡಿಸೆಂಬರ್ ೧೯೭೯ರಲ್ಲಿ ವಿಶ್ವಸಂಸ್ಥೆಯ ಮಹಾಧಿವೇಶನದಲ್ಲಿ ಅಂಗೀಕಾರವಾಯಿತು ಮತ್ತು ೩ನೇ ಸೆಪ್ಟೆಂಬರ್ ೧೯೮೧ರಲ್ಲಿ ಜಾರಿಯಾಯಿತು. ಈ ಒಡಂಬಡಿಕೆಯ ಕಲಮು ೫(ಎ) ಪ್ರಕಾರ "ಲಿಂಗಾಧಾರಿತವಾದ ಶ್ರೇಷ್ಟತೆ ಅಥವಾ ನಿಕೃಷ್ಟತೆ ವಿಚಾರದ ಮೇಲೆ ಅಥವಾ ಗಂಡು ಹೆಣ್ಣಿನ ಪಾತ್ರದ ಬಗ್ಗೆ ಒಂದು ಪಡಿಯಚ್ಚಿನ ಮೇಲೆ ಆಧಾರಿತವಾಗಿರುವ ಪೂರ್ವಗ್ರಹಗಳು, ರೂಢಿಗತ ಮತ್ತು ಇನ್ನಿತರ ಎಲ್ಲ ಆಚರಣೆಗಳ ನಿರ್ಮೂಲನವನ್ನು ಸಾಧಿಸುವ ದೃಷ್ಟಿಯಿಂದ ಪುರುಷ ಮತ್ತು ಸ್ತ್ರೀಯರ ಸಾಮಾಜಿಕ ಮತ್ತು ಸಾಂಸ್ಕೃತಿಕ ನಡವಳಿಕೆಯ ಮಾದರಿಗಳನ್ನು ಬದಲಾಯಿಸುವುದು. ಹಾಗೆಯೇ ಕಲಮು ೧೬(೧)ರ ಪ್ರಕಾರ ಭಾಗಸ್ಥ ರಾಷ್ಟ್ರಗಳು ಮದುವೆ ಮತ್ತು ಕೌಟುಂಬಿಕ ಸಂಬಂಧಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳಲ್ಲೂ ಮಹಿಳೆಯರ ವಿರುದ್ಧದ ತಾರತಮ್ಯವನ್ನು ನಿರ್ಮೂಲನೆಗೊಳಿಸಲು ಸೂಕ್ತವಾದ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು ಮತ್ತು ಗಂಡು ಮತ್ತು ಹೆಣ್ಣಿನ ಸಮಾನತೆಯ ಆಧಾರದ ಮೇಲೆ ನಿರ್ಧಿಷ್ಟವಾಗಿ ಈ ಕೆಳಗಿನವುಗಳನ್ನು ಖಚಿತಪಡಿಸತಕ್ಕದ್ದು,

ಅ) ಸಮಾನವಾದ ವೈವಾಹಿಕ ಹಕ್ಕು, ಅವರ ಸ್ವತಂತ್ರವಾದ ಹಾಗೂ ಪೂರ್ಣವಾದ ಒಪ್ಪಿಗೆಯ ಮೇಲೆ ಮಾತ್ರ ಗಂಡನನ್ನು ಸ್ವತಂತ್ರವಾಗಿ ಆಯ್ಕೆ ಮಾಡಿಕೊಳ್ಳುವ ಮತ್ತು ವಿವಾಹವಾಗುವ ಸಮಾನವಾದ ಹಕ್ಕು.

ಆ) ದಾಂಪತ್ಯದ ಅವಧಿಯಲ್ಲಿ ಮತ್ತು ಅದರ ರದ್ದತಿಯ ಸಂದರ್ಭದಲ್ಲಿ ಸಮಾನವಾದ ಹಕ್ಕು ಮತ್ತು ಬಾಧ್ಯತೆಗಳು.

ಈ) ಎಲ್ಲ ಪ್ರಕರಣಗಳಲ್ಲೂ ಮಕ್ಕಳ ಹಿತರಕ್ಷಣೆಯ ಅತ್ಯಂತ ಪ್ರಮುಖವಾಗಿರತಕ್ಕದ್ದು.

ಉ) ಮಕ್ಕಳ ಸಂಖ್ಯೆ ಮತ್ತು ಅವುಗಳ ಮಧ್ಯದ ಅವಧಿಯ ವಿಷಯಗಳನ್ನು ಸ್ವತಂತ್ರವಾಗಿ ಮತ್ತು ಜವಾಬ್ದಾರಿಯಿಂದ ನಿರ್ವಹಿಸಲು ಸಮಾನ ಹಕ್ಕು ಮತ್ತು ಈ ಹಕ್ಕುಗಳನ್ನು ಚಲಾಯಿಸಲು ಅವರನ್ನು ಶಕ್ತರನ್ನಾಗಿಸುವ ಮಾಹಿತಿ, ಶಿಕ್ಷಣ ಮತ್ತು ಸಾಧನೆಗಳಿಗೆ ಸಮಾನ ಅವಕಾಶ." (ಶ್ರೀನಿವಾಸ ಕೆ.ಎಚ್.(ಅನು), ೨೦೦೩, ಪು– ೬೯, ೭೪).ಹೀಗೆ ಸೀಡಾ ತನ್ನ ಒಡಂಬಡಿಕೆಯಲ್ಲಿ ಮಹಿಳೆಯರ ಮತ್ತು ಮಕ್ಕಳ ಹಕ್ಕುಗಳ ಬಗೆಗೆ ಸ್ಪಷ್ಟವಾಗಿ ಸೂಚಿಸಿದೆ. ಈ ಎಲ್ಲಾ ಹಕ್ಕುಗಳನ್ನು ಬಾಲ್ಯ ವಿವಾಹವು ಉಲ್ಲಂಘಿಸುತ್ತಿರುವುದು ಕಂಡುಬರುತ್ತದೆ. ಹೀಗೆ ಭಾರತದ ಸಂವಿಧಾನ, ಮಾನವ ಹಕ್ಕುಗಳ ಆಯೋಗ, ಮತ್ತು ಸೀಡಾ ಇವುಗಳು ಸ್ತ್ರೀ ಪುರುಷರಿಬ್ಬರಿಗೂ ಹಾಗೆಯೇ ಮಕ್ಕಳಿಗೂ ಸಮಾನತೆಯ ಹಕ್ಕನ್ನು ನೀಡಿವೆಯಾದರೂ, ಇವುಗಳು ಮಕ್ಕಳ ಬಾಲ್ಯದಲ್ಲಿಯೇ ಉಲ್ಲಂಘಿಸಲ್ಪಡುತ್ತಿವೆ.

೬.೧.೨. ವಿವಾಹವಾಗುವ ಮತ್ತು ಕುಟುಂಬವನ್ನು ಸ್ಥಾಪಿಸುವ ಹಕ್ಕು

ಮಾನವ ಹಕ್ಕುಗಳ ವಿಶ್ವವ್ಯಾಪಿ ಘೋಷಣೆಯ ಕಲಮು ೧೬ ವಿವಾಹವಾಗುವ ಮತ್ತು ಕುಟುಂಬವನ್ನು ಸ್ಥಾಪಿಸುವ ಹಕ್ಕಿನ ಕುರಿತಂತೆ ವಿವರಿಸುತ್ತದೆ. ಕಲಮು ೧೬(೧)ರ ಪ್ರಕಾರ ಪೂರ್ಣ ವಯಸ್ಕರಾದ ಹೆಣ್ಣು ಮತ್ತು ಗಂಡು, ಜನಾಂಗ ರಾಷ್ಟ್ರೀಯತೆ ಅಥವಾ ಧರ್ಮಗಳ ಕಾರಣದ ಯಾವುದೇ ಇತಿಮಿತಿಗಳಿಲ್ಲದೆ ಮದುವೆಯಾಗುವ, ಕುಟುಂಬವನ್ನು ಸ್ಥಾಪಿಸುವ ಹಕ್ಕನ್ನು ಹೊಂದಿರುತ್ತಾರೆ. ಮದುವೆಗೆ, ಮದುವೆಯಾಗಿರುವಾಗ ಮತ್ತು ಅದರ ರದ್ದತಿಯಲ್ಲಿ ಸಮಾನ ಹಕ್ಕನ್ನು ಹೊಂದಿರುತ್ತಾರೆ. ೧೬(೨): ಉದ್ದೇಶಿತ ದಂಪತಿಗಳ ಸ್ವತಂತ್ರ ಮತ್ತು ಪೂರ್ಣ ಸಮ್ಮತಿಯಿಂದ ಮಾತ್ರ ಮದುವೆ ಜರುಗತಕ್ಕದ್ದು. ೧೬(೩): ಕುಟುಂಬವು ಸಮಾಜದ ಸಹಜ ಮತ್ತು ಮೂಲಭೂತ ಗುಂಪಿನ ಘಟಕವಾಗಿದೆ ಮತ್ತು ಸಮಾಜ ಮತ್ತು ರಾಷ್ಟ್ರದ ಘೋಷಣೆಗೆ ಅರ್ಹವಾಗಿದೆ (ಶ್ರೀನಿವಾಸ ಕೆ.ಎಚ್.(ಅನು), ೨೦೦೩, ಪು- ೬೯, ೩೦). ಇವುಗಳ ಜೊತೆಗೆ ನಾಗರೀಕ ಮತ್ತು ರಾಜಕೀಯ ಹಕ್ಕುಗಳ ಕುರಿತ ಅಂತರಾಷ್ಟ್ರೀಯ ಕರಾರಿನ ೨೩ನೇ ಕಲಮು ಸಂಪೂರ್ಣವಾಗಿ ವಿವಾಹ ಮತ್ತು ಕುಟುಂಬ ರಚನೆಯ ಕುರಿತಂತೆ ವಿವರಿಸುತ್ತವೆ.

೨೩(೧)ರ ಪ್ರಕಾರ ಕುಟುಂಬವು ಸಮಾಜದ ಸಹಜ ಮೂಲಭೂತ ಘಟಕವಾಗಿದೆ. ಮತ್ತು ಸಮಾಜದ ರಾಷ್ಟ್ರದ ರಕ್ಷಣೆಗೆ ಅರ್ಹವಾಗಿದೆ.

೨೩(೨): ವಿವಾಹಯೋಗ್ಯ ವಯಸ್ಸಿನ ಗಂಡು ಹೆಣ್ಣುಗಳ ಮದುವೆಯ ಮತ್ತು ಕುಟುಂಬ ಸ್ಥಾಪನೆಯ ಹಕ್ಕನ್ನು ಮಾನ್ಯ ಮಾಡತಕ್ಕದ್ದು.

೨೩(೩): ಉದ್ದೇಶಿತ ದಂಪತಿಗಳ ಸ್ವತಂತ್ರ ಮತ್ತು ಪರಿಪೂರ್ಣ ಒಪ್ಪಿಗೆ ಇಲ್ಲದೆ ಯಾವುದೇ ಮದುವೆಯನ್ನು ನೆರವೇರಿಸತಕ್ಕದ್ದಲ್ಲ.

೨೩(೪): ಪ್ರಸ್ತುತ ಕರಾರಿಗೆ ಭಾಗಸ್ಥರಾದ ರಾಷ್ಟ್ರಗಳು, ಮದುವೆಗೆ, ದಾಂಪತ್ಯದ ಅವಧಿಯಲ್ಲಿ, ವಿವಾಹದ ರದ್ಧತಿಯ ಸಂದರ್ಭಗಳಲ್ಲಿ ದಂಪತಿಗಳ ಸಮಾನ ಹಕ್ಕು ಮತ್ತು ಜವಾಬ್ದಾರಿಗಳನ್ನು ಖಚಿತಪಡಿಸುವ ಭರವಸೆಯನ್ನು ನೀಡುತ್ತವೆ. ಮದುವೆಯ ರದ್ದತಿಯ ಪ್ರಕರಣಗಳಲ್ಲಿ ಮಕ್ಕಳ ರಕ್ಷಣೆಗೆ ಅಗತ್ಯ ಅವಕಾಶಗಳನ್ನು ಮಾಡತಕ್ಕದ್ದು (ಶ್ರೀನಿವಾಸ ಕೆ.ಎಚ್.(ಅನು), ೨೦೦೩, ಪು-೬೯, ೫೨).

ಮಹಿಳೆಯರ ವಿರುದ್ಧ ಎಲ್ಲ ಬಗೆಯ ತಾರತಮ್ಯ ನಿರ್ಮೂಲನ ಸಂಬಂಧವಾದ ಒಡಂಬಡಿಕೆಯ ಕಲಮು ೧೬(೨)ರ ಪ್ರಕಾರ ಮಗುವಿನ ನಿಶ್ಚಿತಾರ್ಥ ಮತ್ತು ಮದುವೆ ಯಾವುದೇ ಶಾಸನಾತ್ಮಕ ಪರಿಣಾಮಗಳನ್ನು ಹೊಂದಿರತಕ್ಕದ್ದಲ್ಲ ಮತ್ತು ವಿವಾಹಕ್ಕೆ ಕನಿಷ್ಠ ವಯೋಮಿತಿಯನ್ನು ನಿಗಧಿಪಡಿಸಲು ಹಾಗೂ ಒಂದು ಅಧಿಕೃತ ದಾಖಲಾತಿಯಲ್ಲಿ ಮದುವೆಗಳ ನೋಂದಾವಣಿಯನ್ನು ಕಡ್ಡಾಯಗೊಳಿಸಲು ಶಾಸನ ರಚನೆಯೂ ಸೇರಿದಂತೆ ಎಲ್ಲ ಅಗತ್ಯ ಕ್ರಮಗಳನ್ನು ಕೈಗೊಳ್ಳತಕ್ಕದ್ದು (ಶ್ರೀನಿವಾಸ ಕೆ.ಎಚ್.(ಅನು), ೨೦೦೩, ಪು-೭೬).

ಮಹಿಳೆಯರ ವಿರುದ್ಧದ ಎಲ್ಲ ಬಗೆಯ ತಾರತಮ್ಯಗಳನ್ನು ನಿರ್ಮೂಲನೆ ಮಾಡಲು ಅಂತರಾಷ್ಟ್ರೀಯ ಮಟ್ಟದಲ್ಲಿ ಹಲವಾರು ಒಡಂಬಡಿಕೆಗಳು ಅಥವಾ ಕರಾರುಗಳನ್ನು ಹಾಕಿಕೊಳ್ಳಲಾಗಿದೆ. ಇವುಗಳಲ್ಲಿನ ಹಲವು ಕಲಮುಗಳು ಮದುವೆಯಾಗುವ ಹಕ್ಕಿನ ಕುರಿತಂತೆ ಮತ್ತು ಕುಟುಂಬ ಸ್ಥಾಪನೆಯ ಕುರಿತಂತೆ ವಿವರಿಸಲಾಗಿದೆ. ಆದರೆ ಬಾಲ್ಯವಿವಾಹಗಳು ಈ ಬಗೆಯ ಎಲ್ಲ ಹಕ್ಕುಗಳನ್ನು ಉಲ್ಲಂಘಿಸುವುದು ಕಂಡುಬರುತ್ತದೆ. ಈ ಹಿಂದೆಯೇ ಹೇಳಿದಂತೆ ಹೆಣ್ಣುಮಕ್ಕಳು ಒತ್ತಾಯಪೂರ್ವಕವಾಗಿ ತಾಯ್ತನಕ್ಕೆ ಮತ್ತು ಕುಟುಂಬದ ಜವಾಬ್ದಾರಿಗಳನ್ನು ನಿರ್ವಹಿಸುವ ಒತ್ತಡಗಳಿಗೆ ಒಳಗಾಗುತ್ತಿದ್ದಾರೆ. ಇದಕ್ಕೆ ಮಾನಸಿಕವಾಗಿ, ದೈಹಿಕವಾಗಿ ಹೊಂದಿಕೊಂಡಿರುವುದಿಲ್ಲ. ಹಾಗಾಗಿ ಅವರು ಕುಟುಂಬದಲ್ಲಿನ ಯಾವುದೇ ಜವಾಬ್ದಾರಿಗಳ ಒತ್ತಡಗಳನ್ನು ಅನುಭವಿಸುವ ಅನಿವಾರ್ಯತೆಯನ್ನು ಹೊಂದಿರುತ್ತಾರೆ. ಅಂತಹ ಸಂದರ್ಭದಲ್ಲಿ ವಿವಾಹಿತ ಅಪ್ರಾಪ್ತ ಮಹಿಳೆ ಗಂಡನನ್ನು ತ್ಯಜಿಸಿ ಬರುವ ಸ್ಥಿತಿಯಲ್ಲಿರುವುದಿಲ್ಲ. ಹಾಗೆಯೇ ಮೊದಲ ಮಗುವಿನ ಜನನವನ್ನು ನಿರಾಕರಿಸುವ ಸ್ಥಿತಿಯಲ್ಲಿಯೂ ಇರುವುದಿಲ್ಲ. ಒಂದುವೇಳೆ ಈ ಎರಡೂ ಬಗೆಯ ಸ್ಥಿತಿಗಳನ್ನು ವಿರೋಧಿಸಿದರೆ ಕುಟುಂಬದಿಂದ, ಸಮಾಜದಿಂದ ದೂಷಿಸಲ್ಪಡುತ್ತಾಳೆ. ಕುಟುಂಬದಲ್ಲಿ ತನ್ನ ಸ್ಥಾನದ/ಇರುವಿಕೆಯ ಅಭದ್ರತೆ ಕಾಡತೊಡುಗುತ್ತದೆ. ಇದು ಸಂಭವಿಸಬಾರದು ಎಂಬ ಕಾರಣಕ್ಕಾಗಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಕಾಯಿದೆಗಳು ವಿವಾಹವನ್ನು ಮಾಡಿಕೊಳ್ಳುವ ಮತ್ತು ಕುಟುಂಬವನ್ನು ಸ್ಥಾಪಿಸುವ ಸಂಪೂರ್ಣವಾದ ಹಕ್ಕನ್ನು ಸ್ತ್ರೀಪುರುಷರಿಬ್ಬರಿಗೂ ಸಮಾನವಾಗಿರುತ್ತದೆ ಎಂಬುದನ್ನು ಪ್ರತಿಪಾದಿಸುತ್ತವೆ.

ಭಾರತದಲ್ಲಿ ಮಹಿಳೆಯರ ಪರವಾದ ಹಕ್ಕುಗಳು ಸರಿಯಾದ ನಿಟ್ಟಿನಲ್ಲಿ ಅನುಷ್ಠಾನಗೊಳ್ಳುತ್ತಿಲ್ಲ. ಸಮಾಜದಲ್ಲಿ ಮಹಿಳೆಯರ ಕುರಿತಾದ ಭಿನ್ನ ನಂಬಿಕೆ, ಆಚರಣೆಗಳು ಅವರನ್ನು ಕುಟುಂಬದ ಚೌಕಟ್ಟಿನಲ್ಲಿಯೇ ಜೀವಿಸುವಂತೆ ಮಾಡಿವೆ. ಮಹಿಳೆಯರು ಕುಟುಂಬದ ಆಚೆ ಬರಬಾರದು ಎಂಬ ಪಿತೃಪ್ರಧಾನ ಮೌಲ್ಯಗಳ ಕಾರಣವಾಗಿ ಅವಳು ಆರ್ಥಿಕ ರಂಗದಿಂದ ದೂರವೇ ಉಳಿದಿದ್ದಾಳೆ. ಕೆಲವು ಬೆರಳೆಣಿಕೆಯಷ್ಟು ಮಹಿಳೆಯರು ಆರ್ಥಿಕವಾಗಿ ಸದೃಢರಾಗಿದ್ದಾರೆ ಎಂದು ಹೇಳಲಾಗುತ್ತಿದೆ. ಆದರೆ ಗ್ರಾಮೀಣ ಭಾಗಗಳಲ್ಲಿ ಇಂದಿಗೂ ಮಹಿಳೆಯರು ಆರ್ಥಿಕವಾಗಿ ಹಿಂದುಳಿದಿರುವುದು ಕಂಡುಬರುತ್ತದೆ. ಇಂತಹ ಸ್ಥಿತಿಯಲ್ಲಿರುವ ಮಹಿಳೆಯರು ವಿವಾಹದ ಕುರಿತಾಗಿ ತಮ್ಮ ಸ್ವಂತ ಅಭಿಪ್ರಾಯವನ್ನು ಅಭಿವ್ಯಕ್ತಿಸಲೂ ಸಾಧ್ಯವಿಲ್ಲದ ಪರಿಸ್ಥಿತಿ ಒದಗಿದೆ. ಆ ಕಾರಣಕ್ಕಾಗಿಯೇ ಕುಟುಂಬದಲ್ಲಿ ಹೆಣ್ಣುಮಕ್ಕಳ ಮಾತುಗಳು ಕಡೆಗಣಿಸಲ್ಪಡುತ್ತಿವೆ. ಹಾಗೆಯೇ ಹಲವು ಸಂದರ್ಭಗಳಲ್ಲಿ ಅವರ ಮಾತುಗಳು ಅಥವಾ ಅಭಿಪ್ರಾಯಗಳು ಮೌನಗೊಳ್ಳುತ್ತವೆ. ಕುಟುಂಬದ ಹಿರಿಯ ಪುರುಷನೇ ಆಗಿರುತ್ತಾನೆ ಆದ್ದರಿಂದ ಅವನ ಮಾತೇ ಅಂತಿಮವಾಗಿರುತ್ತದೆ. ಮಹಿಳೆ ಯಾವ ಕುಟುಂಬಕ್ಕೆ ಸೊಸೆಯಾಗಿ ಹೋಗಬೇಕು ಎಂಬುದನ್ನು ನಿರ್ಧರಿಸುವವರು ಅವರೇ. ಹಾಗಾದಾಗ ಹೆಣ್ಣುಮಕ್ಕಳ ಮಾತುಗಳಿಗೆ ಬೆಲೆಯೇ ಇಲ್ಲದಂತಾಗುತ್ತದೆ. ಇಂತಹ ಸಾಮಾಜಿಕ ಪರಿಸರದಲ್ಲಿ ಜೀವಿಸುತ್ತಿರುವ ಹೆಣ್ಣುಮಕ್ಕಳು ತಮಗೆ

ಓದುವ ಆಸೆ ಇದೆಯೆಂಬುದನ್ನೂ ವ್ಯಕ್ತಪಡಿಸಲು ಆಗದ ವಾತಾವರಣ ನಿರ್ಮಾಣವಾಗಿರುವುದರಿಂದ ಅವರು ನಿರಾಸೆಯನ್ನು ಅನುಭವಿಸುವುದರ ಮೂಲಕ ಬಾಲ್ಯದಲ್ಲಿಯೇ ವಿವಾಹ ಬಂಧನಕ್ಕೆ ಒಳಗಾಗುತ್ತಿದ್ದಾರೆ. ಅಪ್ರಾಪ್ತ ವಯಸ್ಸಿನಲ್ಲಿ ವಿವಾಹವಾಗುತ್ತಾರಾದ್ದರಿಂದ ಈ ಬಗೆಯ ಎಲ್ಲ ಹಕ್ಕುಗಳನ್ನು ಕಳೆದುಕೊಳ್ಳುತ್ತಿದ್ದಾರೆ. ಹಾಗಾಗಿ ಬಾಲ್ಯ ವಿವಾಹವು ಹೆಣ್ಣುಮಕ್ಕಳು ವಿವಾಹವಾಗುವ ಮತ್ತು ಕುಟುಂಬವನ್ನು ಸ್ಥಾಪಿಸುವ ಹಕ್ಕುಗಳಿಂದ ವಂಚಿತರಾಗುತ್ತಿದ್ದಾರೆ. ಇದು ಮಾನವ ಹಕ್ಕುಗಳ ಸ್ಪಷ್ಟ ಉಲ್ಲಂಘನೆಯಾಗಿದೆ.

**೬.೧.೩. ಸ್ವಾತಂತ್ರ್ಯ ಮತ್ತು ರಕ್ಷಣೆಯ ಹಕ್ಕು**

ಭಾರತದ ಸಂವಿಧಾನವು ವ್ಯಕ್ತಿಯ ಸ್ವಾತಂತ್ರ್ಯದ ಹಕ್ಕಿಗೆ ಸಂಬಂಧಿಸಿದಂತೆ ೧೯ರಿಂದ ೨೨ರವರೆಗಿನ ವಿಧಿಗಳಲ್ಲಿ ನಿಯಮಗಳನ್ನು ರೂಪಿಸಿದೆ. ಈ ವಿಧಿಗಳು ವ್ಯಕ್ತಿಯ ವೈಯಕ್ತಿಕ ಸ್ವಾತಂತ್ರ್ಯಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಿವೆ. ಇವುಗಳಲ್ಲಿ ೧೯ನೇ ವಿಧಿ ಅತಿ ಮುಖ್ಯವಾದುದಾಗಿದೆ. ಇದು ಭಾರತದ ನಾಗರೀಕರಿಗೆ ೭ ವಿಭಿನ್ನ ಸ್ವಾತಂತ್ರ್ಯಗಳನ್ನು ಒದಗಿಸಿದೆ. ಅವುಗಳೆಂದರೆ,

೧. ವಾಕ್ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ
೨. ಶಾಂತಿಯಿಂದ ಹಾಗೂ ನಿರಾಯುಧರಾಗಿ ಸಭೆ ಸೇರುವ ಹಕ್ಕು
೩. ಸಂಸ್ಥೆಗಳನ್ನು ಮತ್ತು ಸಂಘಗಳನ್ನು ರಚಿಸುವುದು.
೪. ಭಾರತದ ರಾಜ್ಯ ಕ್ಷೇತ್ರದಲ್ಲಿ ಅಬಾಧಿತವಾಗಿ ಸರ್ವತ್ರ ಸಂಚಾರ ಮಾಡುವ ಹಕ್ಕು.
೫. ಭಾರತದ ರಾಜ್ಯ ಕ್ಷೇತ್ರದಲ್ಲಿ ಯಾವುದೇ ಭಾಗದಲ್ಲಿ ವಾಸಮಾಡುವ ಮತ್ತು ನೆಲೆಸುವ ಹಕ್ಕು.
೬. ಯಾವುದೇ ವೃತ್ತಿಯನ್ನು ಅಥವಾ ಉದ್ಯೋಗವನ್ನು, ವ್ಯಾಪಾರವನ್ನು ಅಥವಾ ವ್ಯವಹಾರವನ್ನು ನಡೆಸುವ ಹಕ್ಕು.
೭. ಆಸ್ತಿಯನ್ನು ಗಳಿಸುವ, ಇಟ್ಟುಕೊಳ್ಳುವ–ಉಪಭೋಗಿಸುವ, ವಿಕ್ರಯಮಾಡುವ ಹಕ್ಕು.

ಹೀಗೆ ಸಂವಿಧಾನವು ವೈಯಕ್ತಿಕ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ಹಕ್ಕುಗಳನ್ನು ಕೊಡಮಾಡಿದೆ. ಆದರೆ ಬಾಲ್ಯ ವಿವಾಹ ಸಂವಿಧಾನದತ್ತವಾದ ಕೆಲವು ಹಕ್ಕುಗಳನ್ನು ಕಿತ್ತುಕೊಂಡಿರುವುದು ಕಂಡುಬರುತ್ತದೆ. ಮುಖ್ಯವಾಗಿ ಹೆಣ್ಣುಮಕ್ಕಳ ವಾಕ್ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದರ ಮೂಲಕ ಮಾನವ ಹಕ್ಕುಗಳ ಉಲ್ಲಂಘನೆಯನ್ನು ಮಾಡಿದೆ.

ಮಾನವ ಹಕ್ಕುಗಳ ವಿಶ್ವವ್ಯಾಪಿ ಘೋಷಣೆಯ ಕಲಮು ೩ರ ಪ್ರಕಾರ ಪ್ರತಿಯೊಬ್ಬರಿಗೂ ಜೀವದ, ಸ್ವಾತಂತ್ರ್ಯದ, ವೈಯಕ್ತಿಕ ಭದ್ರತೆಯ ಹಕ್ಕಿದೆ.

ಹಾಗೆಯೇ ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಕುರಿತ ಅಂತರಾಷ್ಟ್ರೀಯ ಕರಾರಿನ ಕಲಮು ೯(೧)ರ ಪ್ರಕಾರ "ಪ್ರತಿಯೊಬ್ಬರೂ ತಮ್ಮ ಸ್ವಾತಂತ್ರ್ಯ ಮತ್ತು ಭದ್ರತೆಗೆ

ಹಕ್ಕುಳ್ಳವರಾಗಿದ್ದಾರೆ. ಯಾರನ್ನೂ ನಿರಂಕುಷ ಬಂಧನ ಅಥವಾ ಸ್ಥಾನಬದ್ಧತೆಗೆ ಒಳಪಡಿಸತಕ್ಕದ್ದಲ್ಲ. ಶಾಸನಾತ್ಮಕವಾಗಿ ಸ್ಥಾಪನೆಗೊಂಡ ಕಾರಣಗಳು ಮತ್ತು ವಿಧಿವಿಧಾನಗಳಿಗನುಸಾರ ಅಲ್ಲದೆ ಯಾರಿಂದಲೂ ಅವರ ಸ್ವಾತಂತ್ರ್ಯವನ್ನು ಅಪಹರಿಸತಕ್ಕದ್ದಲ್ಲ" (ಶ್ರೀನಿವಾಸ ಕೆ.ಎಚ್.(ಅನು), ೨೦೦೩, ಪು-೪೭)

ಮಕ್ಕಳ ಹಕ್ಕುಗಳ ಕುರಿತ ಒಡಂಬಡಿಕೆಯ ಕಲಮು ೩೭(೨)ರಲ್ಲಿ ತಿಳಿಸಿರುವಂತೆ "ಯಾವುದೇ ಮಗುವಿನ ಅವನ ಅಥವಾ ಅವಳ ಸ್ವಾತಂತ್ರ್ಯವನ್ನು ಕಾನೂನು ಬಾಹಿರವಾಗಿ ಅಥವಾ ಸ್ವೇಚ್ಛಾನುಸಾರಿಯಾಗಿ ಅಪಹರಿಸತಕ್ಕದ್ದಲ್ಲ. ಹಾಗೆಯೇ ಕಲಮು ೩೭(೩)ರ ಪ್ರಕಾರ ಸ್ವಾತಂತ್ರ್ಯ ಅಪಹಣಕ್ಕೆ ಒಳಗಾದ ಪ್ರತಿಯೊಂದು ಮಗುವನ್ನು ಮಾನವೀಯವಾಗಿ ಮತ್ತು ಮಾನುಷ ವ್ಯಕ್ತಿತ್ವದ ಅಂತರ್ಗತ ಘನತೆಗೆ ಗೌರವಪೂರ್ವಕವಾಗಿ ಮತ್ತು ಅವನ ಅಥವಾ ಅವಳ ವಯಸ್ಸಿನ ವ್ಯಕ್ತಿಗಳ ಅವಶ್ಯಕತೆಯನ್ನು ಗಮನಕ್ಕೆ ತೆಗೆದುಕೊಂಡ ರೀತಿಯಲ್ಲಿ ನಡೆಸಿಕೊಳ್ಳತಕ್ಕದ್ದು" ಎಂದು ಹೇಳಲಾಗಿದೆ. (ಶ್ರೀನಿವಾಸ ಕೆ.ಎಚ್.(ಅನು), ೨೦೦೩, ಪು-೧೦೦).

ಹೀಗೆ ಮಕ್ಕಳಿಗೆ ಸಂಬಂಧಿಸಿದಂತೆ ಮತ್ತು ಮಹಿಳೆಯರಿಗೆ ಸಂಬಂಧಿಸಿದಂತೆ ಮಾನವ ಹಕ್ಕುಗಳಲ್ಲಿ ಹಲವು ಬಗೆಯ ಅವಕಾಶಗಳನ್ನು ಒದಗಿಸಿಕೊಡುವುದರ ಮೂಲಕ ಮಹಿಳೆಯರ ಅಭಿವೃದ್ಧಿಗೆ ಪೂರಕವಾಗಿವೆ ಎಂಬುದನ್ನು ತಿಳಿಸಲಾಗಿದೆ. ಆದರೆ ವಾಸ್ತವದಲ್ಲಿ ಮಹಿಳೆಯರು ಈ ಎಲ್ಲಾ ಹಕ್ಕುಗಳಿಂದ ವಂಚಿತರಾಗಿದ್ದಾರೆ. ಬಾಲ್ಯ ವಿವಾಹವು ಹೆಣ್ಣುಮಗುವಿನ ಎಲ್ಲ ಬಗೆಯ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುತ್ತದೆ. ಕುಟುಂಬದಲ್ಲಿ ತಂದೆ ತಾಯಂದಿರು ಒಪ್ಪಿ ನಿಶ್ಚಯಿಸಿರುವ ವರನು ತನಗೆ ಇಷ್ಟವಿಲ್ಲದಿದ್ದರೆ 'ಬೇಡ' ಎನ್ನುವ ಅಥವಾ ನಿರಾಕರಿಸುವ ಸ್ವಾತಂತ್ರ್ಯವಿಲ್ಲದಾಗಿದೆ. ಅಂದರೆ ತನ್ನ ಜೀವನ ಸಂಗಾತಿಯನ್ನು ಸ್ವತಂತ್ರವಾಗಿ ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿಲ್ಲ. ಹಾಗಾಗಿ ಬಾಲ್ಯ ವಿವಾಹವು ಹೆಣ್ಣುಮಗುವಿನ ಮುಂದಿನ ಸ್ವತಂತ್ರ ಜೀವನವನ್ನು ಕಿತ್ತುಕೊಳ್ಳುತ್ತದೆ. ಹಾಗಾಗಿಯೇ ಬಾಲ್ಯ ವಿವಾಹವು ಹೆಣ್ಣುಮಗುವಿನ ಎಲ್ಲಾ ಹಕ್ಕುಗಳನ್ನು ಕಿತ್ತುಕೊಳ್ಳುವುದರ ಮೂಲಕ ಪರಾವಲಂಬಿ ಜೀವನಕ್ಕೆ ದೂಡುತ್ತಿದೆ. ಆದರೆ ಗಂಡು ಮಗುವಿನ ವಿಚಾರದಲ್ಲಿ ವ್ಯವಸ್ಥೆ ಸ್ವಲ್ಪ ಉದಾರತನವನ್ನು ತೋರ್ಪಡಿಸಿದೆ. ಏಕೆಂದರೆ ಗಂಡು ಮಗುವಿಗೆ ತನ್ನ ಬಾಳ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಅಧಿಕಾರವನ್ನು ಹಕ್ಕಿನ ರೀತಿಯಲ್ಲಿ ನೀಡಿದೆ. ಹಾಗಾಗಿ ಗಂಡು ಯಾವ ಹುಡುಗಿಯನ್ನಾದರೂ ವಿವಾಹಕ್ಕೆ ನಿರಾಕರಿಸುವ ಮತ್ತು ಒಪ್ಪಿಗೆ ಸೂಚಿಸುವ ಹೀಗೆ ತನ್ನ ನಿರ್ಧಾರಗಳನ್ನು ತಿಳಿಸುವ ಅಧಿಕಾರವನ್ನು ಹುಟ್ಟಿನಿಂದಲೇ ಪಡೆದಿರುತ್ತಾನೆ. ಹಾಗಾಗಿ ಇಲ್ಲಿ ಲಿಂಗದ ವಿಷಯದಲ್ಲಿ ಹೆಣ್ಣುಮಗುವಿನ ಎಲ್ಲ ಬಗೆಯ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದರ ಮೂಲಕ ತಾರತಮ್ಯವನ್ನು ಎಸಗಲಾಗುತ್ತಿದೆ. ಈ ಬಗೆಯ ತಾರತಮ್ಯವನ್ನು ಸೀಡಾ ತುಂಬಾ ಬಲವಾಗಿ ಖಂಡಿಸುತ್ತದೆ. ಮಹಿಳೆಯರ ವಿರುದ್ಧದ ಎಲ್ಲ ಬಗೆಯ ತಾರತಮ್ಯ ನಿರ್ಮೂಲನೆಗೆ ಸಂಬಂಧಿಸಿದ ಒಡಂಬಡಿಕೆಯಲ್ಲಿನ ಕಲಮು ೧ ಹೀಗೆ ಹೇಳುತ್ತದೆ. "ಮಹಿಳೆಯರ ವಿರುದ್ಧದ ತಾರತಮ್ಯವನ್ನು ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ನಾಗರೀಕ ಅಥವಾ

ಇನ್ನಾವುದೇ ಕ್ಷೇತ್ರದಲ್ಲಿ ಅವರ ವೈವಾಹಿಕ ಸ್ಥಾನಮಾನಗಳ ಗಣನೆಯಿಲ್ಲದೆ, ಮಹಿಳೆಯರಿಂದ ಮಾನವ ಹಕ್ಕುಗಳ ಮನ್ನಣೆ, ಅನುಭೋಗ ಅಥವಾ ಚಲಾವಣೆಯನ್ನು ರದ್ದುಗೊಳಿಸುವ ಅಥವಾ ಕುಂಠಿತಗೊಳಿಸುವ ಪರಿಣಾಮ ಅಥವಾ ಉದ್ದೇಶವನ್ನು ಹೊಂದಿರುವ ಲಿಂಗಾಧಾರಿತವಾಗಿರುವ ವಿಂಗಡಣೆ, ನಿರಾಕರಣೆ ಅಥವಾ ನಿರ್ಬಂಧ ಎಂದು ಅರ್ಥೈಸತಕ್ಕದ್ದು ಎಂದು ಹೇಳಿದೆ. ಹಾಗೆಯೇ ಕಲಮು ೩ರಲ್ಲಿ ತಿಳಿಸಿರುವಂತೆ ಭಾಗಸ್ಥ ರಾಷ್ಟ್ರಗಳು ಎಲ್ಲಾ ಕ್ಷೇತ್ರಗಳಲ್ಲಿ ನಿರ್ದಿಷ್ಟವಾಗಿ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಹಿಳೆಯರ ಪರಿಪೂರ್ಣ ಅಭಿವೃದ್ಧಿ ಮತ್ತು ಮುನ್ನಡೆಯನ್ನು ಖಚಿತಪಡಿಸುವುದಕ್ಕಾಗಿ ಪುರುಷರ ಜತೆಯಲ್ಲಿ ಸಮಾನತೆಯ ಸ್ತರದಲ್ಲಿ ಮಾನವ ಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳ ಚಲಾವಣೆ ಮತ್ತು ಅನುಭೋಗವನ್ನು ಅವರಿಗೆ ಖಾತರಿ ಪಡಿಸುವ ಉದ್ದೇಶಕ್ಕಾಗಿ ಶಾಸನ ರಚನೆಯೂ ಸೇರಿದಂತೆ ಎಲ್ಲ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು" (ಶ್ರೀನಿವಾಸ ಕೆ.ಎಚ್.(ಅನು), ೨೦೦೩, ಪು–೬೭ ೬೯) ಎಂದು ಹೇಳಿದೆ. ಇವುಗಳ ಜೊತೆಗೆ ಭಾರತೀಯ ಸಂವಿಧಾನವೂ ಸ್ತ್ರೀಪುರುಷರ ಸ್ವಾತಂತ್ರ್ಯಕ್ಕಾಗಿ ಹಲವು ವಿಧಿಗಳನ್ನು ರೂಪಿಸಿದೆಯಾದರೂ ಅವುಗಳು ವ್ಯವಸ್ಥೆಯಲ್ಲಿ ಸರಿಯಾಗಿ ಪಾಲಿತಗೊಳ್ಳುತ್ತಿಲ್ಲ. ಸಂವಿಧಾನದ ನಿಯಮಗಳ ಪ್ರಕಾರ ಹೆಣ್ಣುಮಕ್ಕಳೂ ಗಂಡುಮಕ್ಕಳಂತೆ ಮೂಲಭೂತ ಸ್ವಾತಂತ್ರ್ಯವನ್ನು ಹೊಂದಿದ್ದಾರೆ. ಹಾಗೆಯೇ ಯಾರನ್ನು, ಯಾವಾಗ, ಹೇಗೆ ವಿವಾಹವಾಗಬೇಕು ಎಂಬ ಸ್ವಾತಂತ್ರ್ಯವನ್ನು ಗಂಡು ಮಕ್ಕಳು ಪಡೆದಂತೆಯೇ ಹೆಣ್ಣುಮಕ್ಕಳೂ ಆ ಬಗೆಯ ಹಕ್ಕುಗಳನ್ನು ಹೊಂದಿದ್ದಾರೆ. ಆದರೆ ಬಾಲ್ಯ ವಿವಾಹವು ಹೆಣ್ಣುಮಕ್ಕಳ ಈ ಬಗೆಯ ಸ್ವಾತಂತ್ರ್ಯವನ್ನು ಕಿತ್ತುಕೊಂಡಿದೆ. ಮುಖ್ಯವಾಗಿ ಹೆಣ್ಣುಮಕ್ಕಳಿಗೆ ವಿವಾಹವಾಗುವ ಸಂದರ್ಭದಲ್ಲಿ ಯಾವ ಉದ್ದೇಶಕ್ಕಾಗಿ ತಮ್ಮ ತಂದೆ ತಾಯಂದಿರು ತಮಗೆ ಬಹು ಬೇಗನೇ ವಿವಾಹ ಮಾಡುತ್ತಿದ್ದಾರೆ ಎಂಬುದರ ಅರಿವೇ ಇರುವುದಿಲ್ಲ. ಅಂತಹ ಸಂದರ್ಭದಲ್ಲಿ ಹೆಣ್ಣುಮಕ್ಕಳು ಅದನ್ನು ಪ್ರಶ್ನಿಸುವ ಗೋಜಿಗೆ ಹೋಗುವುದಿಲ್ಲ. ಆ ಬಗೆಯ ಸ್ವಾತಂತ್ರ್ಯವನ್ನೂ ಕಳೆದುಕೊಂಡಿದ್ದಾರೆ. ಒಟ್ಟಾರೆಯಾಗಿ ಬಾಲ್ಯ ವಿವಾಹವು ಹೆಣ್ಣುಮಕ್ಕಳ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದರ ಮೂಲಕ ಅವರನ್ನು ಪರಾವಂಬಿಯನ್ನಾಗಿಸುತ್ತದೆ ಮಾತ್ರವಲ್ಲ ಮಾನವ ಹಕ್ಕುಗಳ ಉಲ್ಲಂಘನೆಯನ್ನೂ ಮಾಡುತ್ತಿದೆ.

**೬.೧.೪. ದಾಸ್ಯದಿಂದ ಬಿಡುಗಡೆಯ ಹಕ್ಕು**

ವ್ಯವಸ್ಥೆಯಲ್ಲಿ ದಾಸ್ಯತ್ವ ಎಂಬುದು ಮಹಿಳೆಯರ ಜೀವನದ ಎಲ್ಲಾ ಹಂತಗಳಲ್ಲೂ ಗೋಚರಿಸುತ್ತದೆ. ಮಹಿಳೆಯರು ಇಂದಿಗೂ ಪುರುಷರ ದಾಸ್ಯತ್ವದಿಂದ ಹೊರಬರಲಾಗುತ್ತಿಲ್ಲ. ಮುಖ್ಯವಾಗಿ ಬಾಲ್ಯ ವಿವಾಹವು ಹೆಣ್ಣುಮಕ್ಕಳನ್ನು ಪರಾವಲಂಬಿಯನ್ನಾಗಿಸುವುದರ ಮೂಲಕ ಪುರುಷನ ದಾಸ್ಯತ್ವದಲ್ಲಿರುವಂತೆ ಮಾಡುತ್ತಿದೆ. ಮತ್ತು ಅದನ್ನು ಬಹು ಬೇಗನೇ ವ್ಯವಸ್ಥೆಯಲ್ಲಿ ನೆಲೆಯೂರುವಂತೆ ಮಾಡುತ್ತಿದೆ;ಗಟ್ಟಿಗೊಳಿಸುತ್ತಿದೆ. ಇದನ್ನು ಪುರುಷ ವ್ಯವಸ್ಥೆ ನಿರೀಕ್ಷಿಸುತ್ತಿರುತ್ತದೆ.

ಹಾಗಾಗಿಯೇ ಪುರುಷ ವ್ಯವಸ್ಥೆಗೆ ಬಾಲ್ಯ ವಿವಾಹವು ಅನಿಷ್ಟ ಪದ್ಧತಿಯಾಗಿ ಗೋಚರಿಸುತ್ತಿಲ್ಲ. ಆದರೆ ವಾಸ್ತವದಲ್ಲಿ ಇದು ಹೆಣ್ಣುಮಕ್ಕಳ ಅಸ್ತಿತ್ವವನ್ನು ನಿರಾಕರಿಸುತ್ತಿದೆ.

ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಕುರಿತ ಅಂತರಾಷ್ಟ್ರೀಯ ಕರಾರಿನ ಕಲಮು ೮(೧) ಹೇಳುವಂತೆ ಯಾರನ್ನೂ ಗುಲಾಮಗಿರಿಯಲ್ಲಿ ಇಡತಕ್ಕದ್ದಲ್ಲ. ಗುಲಾಮಗಿರಿ ಮತ್ತು ಗುಲಾಮಿ ವ್ಯಾಪಾರವನ್ನು ಅದರ ಎಲ್ಲಾ ರೂಪಗಳಲ್ಲಿ ನಿಷೇಧಿಸತಕ್ಕದ್ದು. ಹಾಗೆಯೇ ಕಲಮು ೮(೨) ಯಾರನ್ನೂ ದಾಸ್ಯದಲ್ಲಿಡತಕ್ಕದ್ದಲ್ಲ ಎಂದು ಹೇಳುತ್ತದೆ. ಆದರೆ ಬಾಲ್ಯ ವಿವಾಹದ ಕಾರಣಕ್ಕಾಗಿ ಹೆಣ್ಣುಮಕ್ಕಳು ಚಿಕ್ಕ ವಯಸ್ಸಿನಲ್ಲಿಯೇ ದಾಸ್ಯತ್ವಕ್ಕೆ ತಳ್ಳಲ್ಪಡುತ್ತಿದ್ದಾರೆ. ಭಾರತೀಯ ಸಮಾಜದಲ್ಲಿ ಧರ್ಮಶಾಸ್ತ್ರಗಳು ಹಾಕಿಕೊಟ್ಟ ಹಾದಿ ತುಂಬಾ ಕಠಿಣವಾದುದು. ಏಕೆಂದರೆ ಧರ್ಮಶಾಸ್ತ್ರಗಳು ಮಹಿಳೆಯರನ್ನು ಪುರುಷನ ದಾಸಿಯರನ್ನಾಗಿ ಮಾಡಿದುದು ಒಂದು ಚಾರಿತ್ರಿಕ ದಾಖಲೆ. ಇದು ಇಂದಿಗೂ ಮುಂದುವರೆದುಕೊಂಡು ಬರುತ್ತಿರುವುದಂತೂ ಚರಿತ್ರೆಯ ವ್ಯಂಗ್ಯವೆಂದೇ ಹೇಳಬಹುದು. ೨೧ನೆಯ ಶತಮಾನದಲ್ಲಿ ಜೀವಿಸುತ್ತಿರುವ ಜನರು ವೇದಗಳ ಕಾಲದ, ಧರ್ಮಶಾಸ್ತ್ರಗಳ ಕಾಲದ ಜನರಿಗಿಂತಲೂ ತುಂಬಾ ವೈಜ್ಞಾನಿಕವಾಗಿ ಆಲೋಚಿಸುವ ಗುಣವುಳ್ಳವರಾಗಿದ್ದಾರೆ. ಆದರೆ ಹಿಂದಿನ ಕಾಲದಲ್ಲಿನ ನೀತಿ ನಿಯಮಗಳು, ಸಂಪ್ರದಾಯ ಆಚರಣೆಗಳು, ರೂಢಿ ಪದ್ಧತಿಗಳು ಇಂದಿಗೂ ಆಚರಿಸಲ್ಪಡುತ್ತಿವೆ ಎಂದಾದರೆ, ಅಂದಿನ ಕಾಲದ ಜನರಿಗೂ ಮತ್ತು ಇಂದಿನ ಜನತೆಗೂ ಯಾವುದೇ ವ್ಯತ್ಯಾಸವಿಲ್ಲವೆಂದೇ ಹೇಳಬಹುದು. ಇದು ಬದಲಾಗಿಲ್ಲ. ಕಾರಣ ಮಹಿಳೆಯರನ್ನು ತಮ್ಮ ದಾಸಿಯರನ್ನಾಗಿಯೇ ಇರಿಸಿಕೊಳ್ಳಬೇಕು ಎಂಬುದು ಪುರುಷ ವರ್ಗದ ಮನೋಧರ್ಮ. ಇದನ್ನೇ ಧರ್ಮಶಾಸ್ತ್ರಗಳು ತಿಳಿಸಿರುವುದು. ಹಾಗಾಗಿಯೇ ಮಹಿಳೆಯರು ಪುರುಷನ ದಾಸ್ಯತ್ವದಲ್ಲಿಯೇ ಉಳಿದಿರುವುದನ್ನು ಕಾಣಬಹುದು. ಆದರೆ ಸಂವಿಧಾನವು ಸ್ತ್ರೀ-ಪುರುಷರಿಬ್ಬರಿಗೂ ಸಮಾನವಾದ ಸ್ವಾತಂತ್ರ್ಯವನ್ನು ನೀಡಿದೆ. ಜೊತೆಗೆ ಜೀವಿಸುವ ಹಕ್ಕನ್ನೂ ನೀಡಿದೆ. ಹಾಗೆಯೇ ಮಾನವ ಹಕ್ಕುಗಳೂ ಇವುಗಳನ್ನೇ ಪ್ರತಿಪಾದಿಸುತ್ತಿವೆ. ಮಹಿಳೆಯರು ದಾಸ್ಯದಿಂದ ಹೊರಬರಲು ಪ್ರಯತ್ನಿಸಬೇಕಾದ ಅಗತ್ಯತೆ ಇದೆ. ಇದಕ್ಕೆ ಮಾನವ ಹಕ್ಕುಗಳು ಮತ್ತು ಸಂವಿಧಾನ ಕೊಡಮಾಡಿದ ಹಕ್ಕುಗಳು ಸಹಕಾರಿಯಾಗಿರುವುದನ್ನು ಕಾಣಬಹುದು.

### ೬.೨. ಬಾಲ್ಯ ವಿವಾಹ : ಮಕ್ಕಳ ಹಕ್ಕುಗಳ ಉಲ್ಲಂಘನೆ

ಮಗುವಿನ ಹಕ್ಕುಗಳ ಕುರಿತ ಒಡಂಬಡಿಕೆ ವಿಶ್ವಸಂಸ್ಥೆಯ ಮಹಾಧಿವೇಶನದಿಂದ ನವೆಂಬರ್ ೨೦,೧೯೮೯ರಂದು ಅಂಗೀಕಾರವಾಗಿ ಸೆಪ್ಟೆಂಬರ್ ೨, ೧೯೯೦ರಿಂದ ಜಾರಿಗೆ ಬಂದಿದೆ. ಅಪ್ರಾಪ್ತ ವಯಸ್ಸಿನಲ್ಲಿ ಹೆಣ್ಣುಮಕ್ಕಳಿಗೆ ವಿವಾಹ ಮಾಡುವುದು ಒಂದು ಅಪರಾಧವೇ ಸರಿ. ಮಾನವ ಹಕ್ಕುಗಳಲ್ಲಿ ಸೂಚಿಸಿರುವ ಮಕ್ಕಳ ಹಕ್ಕುಗಳ ಕುರಿತ ಒಡಂಬಡಿಕೆಯಲ್ಲಿನ ಕಲಮು ೧ರಲ್ಲಿ ಸೂಚಿಸಿರುವಂತೆ ಮಗುವಿಗೆ ಅನ್ವಯಗೊಳ್ಳುವ ಶಾಸನದ ಪ್ರಕಾರ ಅದಕ್ಕಿಂತ ಮುಂಚಿತವಾಗಿ ಪ್ರಾಪ್ತ ವಯಸ್ಸು ಹೊಂದಿರದ ಹೊರತು, ಮಗು ಎಂದರೆ ಹದಿನೆಂಟು

ವರ್ಷಗಳಿಗಿಂತ ಕಡಿಮೆ ವಯಸ್ಸಿನ ಪ್ರತಿಯೊಬ್ಬ ಮಾನವ ಜೀವಿ ಎಂದರ್ಥ. ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಸೂಚಿಸಲಾಗಿರುವ ಎಲ್ಲ ಬಗೆಯ ಹಕ್ಕುಗಳನ್ನು ಬಾಲ್ಯ ವಿವಾಹ ಉಲ್ಲಂಘಿಸುತ್ತದೆ. ಜೊತೆಗೆ ಕುಟುಂಬದಲ್ಲಿನ ತಂದೆ ತಾಯಂದಿರೂ ಮಕ್ಕಳ ಹಕ್ಕುಗಳನ್ನು ಉಲ್ಲಂಘಿಸುವುದರ ಮೂಲಕ ಬಾಲ್ಯ ವಿವಾಹಗಳನ್ನು ಉತ್ತೇಜಿಸುತ್ತಿದ್ದಾರೆ. ಮಗುವಿನ ಬೆಳವಣಿಗೆಯ ಸಂಪೂರ್ಣ ಜವಾಬ್ದಾರಿಯನ್ನು ತಂದೆ ತಾಯಂದಿರಿಗೇ ವಹಿಸಿಕೊಟ್ಟಿರುವುದು ಕಂಡುಬರುತ್ತದೆ. ಈ ಒಡಂಬಡಿಕೆಯ ಕಲಮು ೧೮ ಹೇಳುವಂತೆ ಭಾಗಸ್ಥ ರಾಷ್ಟ್ರಗಳು ಮಗುವಿನ ಪಾಲನೆ, ಪೋಷಣೆಯಲ್ಲಿ ಮತ್ತು ಬೆಳವಣಿಗೆಯಲ್ಲಿ ತಂದೆ ತಾಯಿಗಳಿಬ್ಬರ ಸಮಾನ ಜವಾಬ್ದಾರಿಯ ತತ್ವಕ್ಕೆ ಮನ್ನಣೆಯನ್ನು ಖಚಿತಗೊಳಿಸಲು ತಮ್ಮ ಅತ್ಯುತ್ತಮ ಪ್ರಯತ್ನಗಳನ್ನು ಬಳಸತಕ್ಕದ್ದು. ಮಗುವಿನ ಪಾಲನೆ, ಪೋಷಣೆ ಮತ್ತು ಬೆಳವಣಿಗೆಯಲ್ಲಿ ತಂದೆ-ತಾಯಿಗಳು ಅಥವಾ ಸಾಂದರ್ಭಿಕವಾಗಿ ಶಾಸನಬದ್ಧ ಪೋಷಕರು ಪ್ರಾಥಮಿಕ ಜವಾಬ್ದಾರಿಯನ್ನು ಹೊಂದಿರತಕ್ಕದ್ದು. ಮಗುವಿನ ಅತ್ಯಂತ ಹೆಚ್ಚಿನ ಹಿತರಕ್ಷಣೆಯೇ ಅವರ ಮೂಲಭೂತ ಕಾಳಜಿಯಾಗಿರುತ್ತದೆ ಎಂದು ಹೇಳುತ್ತದೆ. ಆದರೆ ವಾಸ್ತವದಲ್ಲಿ ಈ ಜವಾಬ್ದಾರಿಯನ್ನು ತಂದೆ ತಾಯಂದಿರು ನಿರ್ವಹಿಸುತ್ತಿದ್ದಾರಾದರೂ ಮಗುವಿನ ಸಂಪೂರ್ಣ ಬೆಳವಣಿಗೆಯಲ್ಲಿ ಪಾಲ್ಗೊಳ್ಳದಿರುವುದನ್ನು ಕಾಣಬಹುದು. ಏಕೆಂದರೆ ಬಾಲ್ಯದಲ್ಲಿಯೇ ತಮ್ಮ ಮಕ್ಕಳಿಗೆ ವಿವಾಹ ಮಾಡುವುದರ ಮೂಲಕ ಅವರ ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಬೆಳವಣಿಗೆ ಕುಂಠಿತವಾಗಲು ಕಾರಣರಾಗುತ್ತಿದ್ದಾರೆ. ಇದು ಮಾನವ ಹಕ್ಕುಗಳ ಉಲ್ಲಂಘನೆಯ ಒಂದು ಭಾಗವಾಗಿದೆ. ಮಕ್ಕಳ ಹಕ್ಕುಗಳ ಕುರಿತ ಕೆಲವು ಕಲಮುಗಳನ್ನು ನೋಡುವುದಾದರೆ,

ಕಲಮು ೨: ೧. ಭಾಗಸ್ಥ ರಾಷ್ಟ್ರಗಳು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಇರುವ ಪ್ರತಿಯೊಂದು ಮಗುವಿಗೂ, ಆ ಮಗುವಿನ ಅವನ ಅಥವಾ ಅವಳ ತಂದೆ ತಾಯಿಗಳ ಅಥವಾ ಶಾಸನಬದ್ಧ ಪೋಷಕರ ಜನಾಂಗ, ವರ್ಣ, ಲಿಂಗ, ಭಾಷೆ, ಧರ್ಮ, ರಾಜಕೀಯ ಅಥವಾ ಇತರ ಅಭಿಪ್ರಾಯ, ರಾಷ್ಟ್ರೀಯ ಬುಡಕಟ್ಟು ಅಥವಾ ಸಾಮಾಜಿಕ ಮೂಲ, ಆಸ್ತಿ, ಅನರ್ಹತೆ, ಹುಟ್ಟು ಅಥವಾ ಇನ್ನಿತರ ಸ್ಥಾನಮಾನಗಳನ್ನು ಲೆಕ್ಕಿಸದೆ ಯಾವುದೇ ಬಗೆಯ ತಾರತಮ್ಯವಿಲ್ಲದ ಪ್ರಸ್ತುತ ಒಡಂಬಡಿಕೆಯಲ್ಲಿ ನಮೂದಿಸಿರುವ ಹಕ್ಕುಗಳನ್ನು ಗೌರವಿಸಿ ಖಚಿತಪಡಿಸತಕ್ಕದ್ದು.

೨. ಸ್ಥಾನಮಾನ, ಚಟುವಟಿಕೆ, ಅಭಿವ್ಯಕ್ತಿ, ಅಭಿಪ್ರಾಯ ಅಥವಾ ಮಗುವಿನ ತಂದೆ-ತಾಯಿಗಳ ಶಾಸನಬದ್ಧ ಪೋಷಕರ ಅಥವಾ ಕೌಟುಂಬಿಕ ಸದಸ್ಯರ ನಂಬಿಕೆಗಳ ಆಧಾರದ ಮೇಲಿನ ಎಲ್ಲ ಬಗೆಯ ತಾರತಮ್ಯ ಮತ್ತು ಶಿಕ್ಷೆಗಳ ವಿರುದ್ಧವಾಗಿ ಮಗುವಿನ ರಕ್ಷಣೆಯನ್ನು ಖಚಿತಪಡಿಸಲು ಎಲ್ಲಾ ಸೂಕ್ತ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

ಕಲಮು ೬: ೧. ಪ್ರತಿಯೊಂದು ಮಗುವಿನ ಅಂತರ್ಗತವಾದ ಜೀವಿಸುವ ಹಕ್ಕನ್ನು ಭಾಗಸ್ಥ ರಾಷ್ಟ್ರಗಳು ಮನ್ನಿಸತಕ್ಕದ್ದು. ಮತ್ತು ೨. ಮಗುವಿನ ಉಳಿವು ಮತ್ತು ಬೆಳವಣಿಗೆಯನ್ನು ಭಾಗಸ್ಥ ರಾಷ್ಟ್ರಗಳು ಸಾಧ್ಯವಿದ್ದಷ್ಟು ಗರಿಷ್ಠ ಪ್ರಮಾಣದಲ್ಲಿ ಖಚಿತಪಡಿಸತಕ್ಕದ್ದು.

ಕಲಮು ೧೨ : ಅವನ ಅಥವಾ ಅವಳ ಸ್ವಂತ ಅಭಿಪ್ರಾಯಗಳನ್ನು ರೂಪಿಸಿಕೊಳ್ಳಲು ಶಕ್ತವಾದ ಮಗುವಿಗೆ ಅದರ ವಯಸ್ಸು ಮತ್ತು ಪ್ರಬುದ್ಧತೆಗನುಸಾರವಾಗಿ ಅದರ ಅಭಿಪ್ರಾಯಗಳಿಗೆ ಬೆಲೆ ನೀಡುವಂತೆ ಮಗುವಿಗೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲೂ ಅದರ ಸ್ವತಂತ್ರವಾದ ಅಭಿಪ್ರಾಯಗಳ ಅಭಿವ್ಯಕ್ತಿಯ ಹಕ್ಕನ್ನು ಖಚಿತಪಡಿಸತಕ್ಕದ್ದು.

ಕಲಮು ೧೩ : ಮಗುವಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವಿರತಕ್ಕದ್ದು.

ಕಲಮು ೨೪(೩)ರ ಪ್ರಕಾರ ಮಕ್ಕಳ ಆರೋಗ್ಯಕ್ಕೆ ಹಾನಿಕರವಾದ ಆಚರಣೆಗಳನ್ನು ನಿಷೇಧಿಸುವ ದೃಷ್ಟಿಯಿಂದ ಭಾಗಸ್ಥ ರಾಷ್ಟ್ರಗಳು ಪರಿಣಾಮಕಾರಿ ಮತ್ತು ಸೂಕ್ತವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

ಕಲಮು ೨೭: ೧. ಮಗುವಿನ ದೈಹಿಕ, ಭೌತಿಕ, ಆಧ್ಯಾತ್ಮಿಕ, ನೈತಿಕ ಮತ್ತು ಸಾಮಾಜಿಕ ಬೆಳವಣಿಗೆಗೆ ಸಾಕಾಗುವ ಜೀವನ ಮಟ್ಟಕ್ಕೆ ಪ್ರತಿಯೊಂದು ಮಗುವಿಗೂ ಇರುವ ಹಕ್ಕನ್ನು ಭಾಗಸ್ಥ ರಾಷ್ಟ್ರಗಳು ಮಾನ್ಯ ಮಾಡುತ್ತವೆ. ಮತ್ತು ೨. ತಂದೆ ತಾಯಿಗಳು ಅಥವಾ ಮಗುವಿನ ಜವಾಬ್ದಾರಿಗಳನ್ನು ಇನ್ನಿತರರು ಅವರುಗಳ ಶಕ್ತ್ಯಾನುಸಾರ ಮತ್ತು ಹಣಕಾಸಿನ ಲಭ್ಯತೆಯ ಅನುಸಾರ ಮಗುವಿನ ಬೆಳವಣಿಗೆಗೆ ಅಗತ್ಯವಾದ ಜೀವನ ಸ್ಥಿತಿಗತಿಗಳನ್ನು ಒದಗಿಸುವ ಪ್ರಾಥಮಿಕ ಜವಾಬ್ದಾರಿಯನ್ನು ಹೊಂದಿರುತ್ತಾರೆ.

ಕಲಮು ೨೮: ೧. ಭಾಗಸ್ಥ ರಾಷ್ಟ್ರಗಳು ಮಗುವಿನ ಶಿಕ್ಷಣದ ಹಕ್ಕನ್ನು ಸಮಾನ ಅವಕಾಶಗಳ ಆಧಾರದ ಮೇಲೆ ಹಂತಹಂತವಾಗಿ ಸಾಧಿಸಲು ನಿರ್ಧಿಷ್ಟವಾಗಿ ಈ ಕೆಳಗಿನವುಗಳನ್ನು ಮಾಡತಕ್ಕದ್ದು. ಅ. ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಿ ಅದು ಎಲ್ಲರಿಗೂ ಉಚಿತವಾಗಿ ದೊರಕುವಂತೆ ಮಾಡುವುದು.

ಕಲಮು ೩೧: ೧. ಭಾಗಸ್ಥ ರಾಷ್ಟ್ರಗಳು ಮಗುವಿನ ವಿಶ್ರಾಂತಿ ಮತ್ತು ವಿರಾಮದ ಮತ್ತು ಅದರ ವಯೋಮಾನಕ್ಕೆ ಸೂಕ್ತವಾದ ಆಟಗಳು ಮತ್ತು ಮನೋರಂಜನಾ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಮತ್ತು ಸಾಂಸ್ಕೃತಿಕ ಜೀವನ ಹಾಗೂ ಕಲೆಗಳಲ್ಲಿ ಮುಕ್ತವಾಗಿ ಭಾಗವಹಿಸುವ ಹಕ್ಕನ್ನು ಮಾನ್ಯ ಮಾಡುತ್ತವೆ. ೨. ಭಾಗಸ್ಥ ರಾಷ್ಟ್ರಗಳು ಸಾಂಸ್ಕೃತಿಕ ಮತ್ತು ಕಲಾತ್ಮಕ ಜೀವನದಲ್ಲಿ ಪೂರ್ಣವಾಗಿ ಭಾಗಿಯಾಗುವ ಮಗುವಿನ ಹಕ್ಕನ್ನು ಗೌರವಿಸಿ ಪ್ರೋತ್ಸಾಹಿಸತಕ್ಕದ್ದು ಮತ್ತು ಸಾಂಸ್ಕೃತಿಕ, ಕಲಾತ್ಮಕ, ಮನೋರಂಜನೆಯ ಮತ್ತು ವಿರಾಮದ ಚಟುವಟಿಕೆಗಳಿಗೆ ಸೂಕ್ತ ಮತ್ತು ಸಮಾನ ಅವಕಾಶಗಳ ಪೂರೈಕೆಗೆ ಪ್ರೋತ್ಸಾಹ ನೀಡತಕ್ಕದ್ದು.

ಕಲಮು ೩೨: ೧. ಭಾಗಸ್ಥ ರಾಷ್ಟ್ರಗಳು ಆರ್ಥಿಕ ಶೋಷಣೆಯಿಂದ ಮತ್ತು ಮಗುವಿನ ಶಿಕ್ಷಣದಲ್ಲಿ ಹಸ್ತಾಕ್ಷೇಪಕ್ಕೆ ಅವಕಾಶ ಮಾಡುವ ಅಥವಾ ಅಪಾಯಕಾರಿಯಾಗಬಲ್ಲ ಯಾವುದೇ ಕೆಲಸವನ್ನು ಮಾಡಿಸುವ ಅಥವಾ ಮಗುವಿನ ಆರೋಗ್ಯ, ದೈಹಿಕ, ಬೌದ್ಧಿಕ, ಆಧ್ಯಾತ್ಮಿಕ, ನೈತಿಕ ಅಥವಾ

ಸಾಮಾಜಿಕ ಬೆಳವಣಿಗೆಗೆ ಹಾನಿಯುಂಟು ಮಾಡಬಲ್ಲವುಗಳಿಂದ ರಕ್ಷಿಸಲ್ಪಡುವುದಕ್ಕೆ ಇರುವ ಮಗುವಿನ ಹಕ್ಕನ್ನು ಮಾನ್ಯ ಮಾಡುತ್ತದೆ.

ಕಲಮು ೩೯: ಯಾವುದೇ ಬಗೆಯ ತಾತ್ಸಾರಕ್ಕೆ, ಶೋಷಣೆಗೆ, ದುರುಪಯೋಗಕ್ಕೆ, ಚಿತ್ರಹಿಂಸೆಗೆ ಅಥವಾ ಯಾವುದೇ ರೂಪದ ಕ್ರೂರ, ಅಮಾನುಷ ಅಥವಾ ಹೀನಾಯ ನಡವಳಿಕೆ ಅಥವಾ ಶಿಕ್ಷೆಗೆ ಅಥವಾ ಸಶಸ್ತ್ರ ಘರ್ಷಣೆಗೆ ತುತ್ತಾದ ಮಗುವಿನ ದೈಹಿಕ ಮತ್ತು ಮನೋವೈಜ್ಞಾನಿಕ ಸುಧಾರಣೆಗೆ ಮತ್ತು ಸಾಮಾಜಿಕ ಪುನರ್ ಹೊಂದಾಣಿಕೆಯನ್ನು ಪ್ರೋತ್ಸಾಹಿಸುವ ಸೂಕ್ತವಾದ ಎಲ್ಲಾ ಕ್ರಮಗಳನ್ನು ಭಾಗಸ್ಥ ರಾಷ್ಟ್ರಗಳು ಕ್ರಮ ಕೈಗೊಳ್ಳತಕ್ಕದ್ದು ಮತ್ತು ಅಂತಹ ಸುಧಾರಣೆ ಹಾಗೂ ಪುನರ್ ಹೊಂದಾಣಿಕೆ ಮಗುವಿನ ಆರೋಗ್ಯ, ಸ್ವಾಭಿಮಾನ ಮತ್ತು ಘನತೆಯನ್ನು ಪೋಷಿಸುವ ವಾತಾವರಣದಲ್ಲಿ ನಡೆಯತಕ್ಕದ್ದು.

ಹೀಗೆ ಮಕ್ಕಳ ಹಕ್ಕುಗಳ ಕುರಿತಂತೆ ಮಾನವ ಹಕ್ಕಗಳ ವಿಶ್ವವ್ಯಾಪಿ ಘೋಷಣೆಯಲ್ಲಿ ಒಟ್ಟು ೧ರಿಂದ ೪೨ ಕಲಮುಗಳನ್ನು ರೂಪಿಸಲಾಗಿದೆ. ಇಲ್ಲಿ ಕೆಲವು ಕಲಮುಗಳನ್ನು ಮಾತ್ರ ಗುರುತಿಸಲಾಗಿದೆ. ಬಾಲ್ಯಾವಸ್ಥೆಯು ವಿಶೇಷ ಸಂರಕ್ಷಣೆ ಮತ್ತು ಸಹಾಯಕ್ಕೆ ಅರ್ಹವಾಗಿದೆಯೆಂದು ಮಾನವ ಹಕ್ಕಗಳ ವಿಶ್ವವ್ಯಾಪಿ ಘೋಷಣೆಯಲ್ಲಿ ತಿಳಿಸಲಾಗಿದೆ. ಸಮಾಜದ ಪ್ರಮುಖ ಘಟಕವಾಗಿರುವ ಕುಟುಂಬವು ಯಾವ ಬಗೆಯ ಜವಾಬ್ದಾರಿಗಳನ್ನು ನಿರ್ವಹಿಸಬೇಕಿದೆ ಮತ್ತು ಅದರ ಸದಸ್ಯರನ್ನು ಹೇಗೆ ನೋಡಿಕೊಳ್ಳಬೇಕಿದೆ ಎಂಬುದನ್ನು ಸೂಚಿಸುತ್ತದೆ. ಹಾಗೆಯೇ ಒಂದು ಮಗುವು ಕುಟುಂಬದಲ್ಲಿ ಸಂತೋಷದಿಂದ, ಪ್ರೀತಿಯಿಂದ, ಸೌಹಾರ್ದತೆಯಿಂದ, ಸಹಾನುಭೂತಿಯಿಂದ ಉತ್ತಮವಾದ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಈ ಮಾವನ ಹಕ್ಕುಗಳು ತುಂಬಾ ಸಹಕಾರಿಯಾಗಿವೆ. ಮುಖ್ಯವಾಗಿ ಮಗು ಸಮಾಜದಲ್ಲಿ ಯಾವುದೇ ಅಳುಕಿಲ್ಲದೇ ವ್ಯಕ್ತಿಗತ ಜೀವನವನ್ನು ನಡೆಸಲು ಸಾಧ್ಯವಾಗುವಂತೆ ಮತ್ತು ಅದರ ದೈಹಿಕ ಮತ್ತು ಮಾನಸಿಕ ಅಪ್ರಬುದ್ಧತೆಯಿಂದಾಗಿ ಮಗು ಹುಟ್ಟುವುದಕ್ಕಿಂತ ಮುಂಚೆ ಮತ್ತು ತದನಂತರದ ಸೂಕ್ತವಾದ ಶಾಸನಾತ್ಮಕವಾದ ರಕ್ಷಣೆಯನ್ನು ಬಯಸುತ್ತದೆ ಎಂಬ ಕಾರಣಕ್ಕಾಗಿ ಈ ನಿಯಮಗಳನ್ನು ರೂಪಿಸಲಾಗಿದೆ. ಮೇಲಿನ ಎಲ್ಲಾ ನಿಯಮಗಳೂ ಮಕ್ಕಳ ಹಕ್ಕುಗಳು ಯಾವುವು ಮತ್ತು ಅವುಗಳನ್ನು ನಿಭಾಯಿಸುವುದು ಹೇಗೆ ಎಂಬುದನ್ನು ತಿಳಿಸುತ್ತದೆ. ಮುಖ್ಯವಾಗಿ ಈ ಮಾನವ ಹಕ್ಕುಗಳ ಒಡಂಬಡಿಕೆಗೆ ಸಹಿ ಹಾಕಿರುವ ಎಲ್ಲಾ ರಾಷ್ಟ್ರಗಳೂ ಮಕ್ಕಳ ಹಕ್ಕಗಳನ್ನು ಕಾಪಾಡುವ ಜವಾಬ್ದಾರಿಯನ್ನು ಹೊಂದಿರುತ್ತಾರೆ.

ಮೇಲಿನ ಎಲ್ಲಾ ಕಲಮುಗಳಲ್ಲಿ ಸೂಚಿರುವ ನಿಯಮಗಳನ್ನು ಬಾಲ್ಯ ವಿವಾಹವು ಉಲ್ಲಂಘಿಸಿರುವುದು ಕಂಡುಬರುತ್ತದೆ. ಮುಖ್ಯವಾಗಿ ೧೮ ವರ್ಷದ ಕೆಳಗಿನ ಮಕ್ಕಳಿಗೆ ವಿವಾಹ ಮಾಡುತ್ತಿರುವುದು ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ. ಹೆಣ್ಣುಮಗುವನ್ನು, ಹುಟ್ಟಿನಿಂದಲೇ ಪರರ ವಸ್ತುವಿನಂತೆ ಬೆಳೆಸಲಾಗುತ್ತದೆ. ತನ್ನ ಎಲ್ಲಾ ಸ್ವಾತಂತ್ರ್ಯ ಅಥವಾ ಹಕ್ಕುಗಳು ಪುರುಷನಿಗೆ ಪೂರಕವಾಗಿರಬೇಕು ಎಂದು ಹೇಳುವಂತಹ ಸಾಮಾಜೀಕರಣದಲ್ಲಿ ಬೆಳೆಸಲಾಗುತ್ತಿದೆ.

ಕುಟುಂಬದಲ್ಲಿನ ಸಾಮಾಜೀಕರಣ ಪ್ರಕ್ರಿಯೆ ಹೆಣ್ಣುಮಕ್ಕಳ ವ್ಯಕ್ತಿತ್ವ ರೂಪುಗೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಇಲ್ಲಿ ಗಂಡು ಮತ್ತು ಹೆಣ್ಣು ಇಬ್ಬರಿಗೂ ಪ್ರತ್ಯೇಕವಾದ ಕಲಿಕೆ ಆರಂಭಗೊಳ್ಳುತ್ತದೆ. ಈ ಸಂದರ್ಭದಲ್ಲಿಯೇ ಹೆಣ್ಣುಮಗು ಪರಾವಲಂಬಿ ಜೀವನಕ್ಕೆ ಒಗ್ಗಿಕೊಳ್ಳುವಂತ ಪಾಠವನ್ನು ಕಲಿಯಲ್ಪಡುತ್ತಾಳೆ. ಇಲ್ಲಿಯೇ ನಡೆಯುವ ಈ ತಾರತಮ್ಯ, ವ್ಯವಸ್ಥೆಗೆ ತೆರೆದುಕೊಂಡಾಗ ಅದು ಇನ್ನೂ ಪ್ರಖರವಾಗಿ ಗುರುತಿಸಲ್ಪಡುತ್ತದೆ. ಮುಖ್ಯವಾಗಿ ಸಮಾಜದಲ್ಲಿನ ಪಿತೃಪ್ರಧಾನ ವ್ಯವಸ್ಥೆಯು ಈ ಬಗೆಯ ಅಸಮಾನತೆಗೆ ಕಾರಣವಾಗಿದೆ.

ಮಕ್ಕಳು ಚಿಕ್ಕ ವಯಸ್ಸಿನಲ್ಲಿಯೇ ಬಾಲ್ಯ ವಿವಾಹಗಳಿಗೆ ತುತ್ತಾಗುವುದರಿಂದ ಅವರು ಸಂಪೂರ್ಣವಾಗಿ ತಮ್ಮ ಬಾಲ್ಯದ ದಿನಗಳಲ್ಲಿ ಏನನ್ನು ಅನುಭವಿಸಬೇಕಾಗಿತ್ತೋ ಅವುಗಳನ್ನು ಅನುಭವಿಸಲಾರದೇ ನಿರಾಸೆಯನ್ನು ಅನುಭವಿಸುತ್ತಾರೆ. ಅಧ್ಯಯನದ ವ್ಯಾಪ್ತಿ ಪ್ರದೇಶದಲ್ಲಿ ತಮ್ಮ ಬಾಲ್ಯವನ್ನು ಕಳೆದುಕೊಂಡು ವಿವಾಹ ಬಂಧನಕ್ಕೆ ಸಿಲುಕಿದ ಹೆಣ್ಣುಮಕ್ಕಳು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡಿರುವುದು ಕಂಡುಬರುತ್ತದೆ. ಕೆಲವು ಪ್ರಕರಣಗಳನ್ನು ಉದಾಹರಣೆಯಾಗಿ ನೋಡುವುದಾದರೆ,

ಹೊಸಳ್ಳಿ ಗ್ರಾಮದ ನಿಂಗಮ್ಮ ಎಂಬುವವರು ಬಾಲ್ಯ ವಿವಾಹಕ್ಕೆ ಒಳಗಾಗಿದ್ದು, ಇವರು ತಮ್ಮ ಬಾಲ್ಯದ ದಿನಗಳನ್ನು ಕಳೆದುಕೊಂಡಿದುದರ ಮತ್ತು ಶಿಕ್ಷಣದಿಂದ ವಂಚಿತರಾದುದರ ಕುರಿತಂತೆ ಹೀಗೆ ಹೇಳಿದರು. ನಾನು ಇನ್ನ ಏಳ್ನೇ ಕ್ಲಾಸು ಓದ್ತಿದ್ದೆ. ಆವಾಗ್ಲೇ ಸಾಲಿ ಬಿಡ್ಸಿ ಮನ್ಯಾಗ ಇರಾಕ ಹೇಳಿದ್ರು. ಯಾಕಂದ್ರೆ ನಾನು ಕೈಗೆ ಬಂದಿದ್ದು ಆವಾಗ್ಲೇ. ಅದಕ್ಕ ನನ್ನ ಸಾಲಿ ಬಿಡಿಸಿದ್ರು, ಮತ್ತೆ ನಾನು ಮನಿಲಿಂದ ಹೊರ್ಗ ಹೋಗಿ ಆಟ ಆಡ್ಬಾರ್ದು ಅಂತ ಹೇಳಿದ್ರು. ಬರೇ ಮನಿಕೆಲ್ಸ ಇಲ್ಲಾಂದ್ರೆ ಮನ್ಯಾಗ ಸುಮ್ನೆ ಟೀವಿ ನೋಡ್ಕೆಂಡು ಕುಂತ್ಕಬೇಕು ಅಷ್ಟೇ. ಎಲ್ಲಿಗಾದ್ರೂ ಹೋದ್ರೆ ಜತಿಗಿ ಯಾರ್ನಾದ್ರೂ ಕಳ್ಸೋರು. ಯಾಕ ಅಂತ ಗೊತ್ತಿಲ್ಲ. ಕೈಗೆ ಬಂದು ಒಂದುವರಿ ವರ್ಸಕ್ಕ ನನಗ ಮದುವಿ ಮಾಡಿದ್ರು, ಗಂಡನ ಮನಿಗಿ ಬಂದಾಗಂತೂ ಇಲ್ಲಿ ಬಾಳಷ್ಟು ಕೆಲ್ಸಗಳು ಕಾಯ್ಕಂಡು ಕುಂತಿದ್ವು. ನಾನು ಅವುನ್ನೆಲ್ಲಾ ಮಾಡಿ ಉಣ್ಣಷ್ಟತ್ತಿಗೆ ರಾತ್ರಿ ೧೦ ಗಂಟಿ ಆಗಾದು. ನನಿಗಿ ಮದುವಿ ಬ್ಯಾಡ, ನಾನು ಓದ್ಬೇಕು ಅಂತ ಹೇಳಿದ್ರೂ ಸತೆ ನನ್ನ ಮಾತನ್ನ ಯಾರೂ ಕೇಳ್ಲಿಲ್ಲ. ಮದುವಿ ಮಾಡೇ ಬಿಟ್ರು. ನನ್ ಜತಿಗಿ ಓದ್ತ್ತಿದ್ದೋರು ಈಗ ಬಾಳ ಚೆನ್ನಾಗಿ ಐದಾರ. ಏನ್ ಮಾಡಾದು ನನ್ ಹಣೇಬರ ಹಿಂಗ ಬರ್ದೈತಿ ಎಂದು ಅಸಮಾಧಾನಗೊಂಡರು. ಹಾಗೆಯೇ ಬೆಣಕಲ್ ಗ್ರಾಮದ ಗಾದಿಲಿಂಗಮ್ಮನವರು ಹೇಳುವಂತೆ, ನಮ್ ಮಗ್ಳಿಗೆ ಬಾಳ ಜಲ್ದಿ ಮದುವಿ ಮಾಡಿಬಿಟ್ವಿ, ಆದ್ರೆ ಆಕಿ ಗಂಡನ್ ಮನ್ಯಾಗ ಎಷ್ಟು ಕಷ್ಟ ಅನುಬೋಸಕತ್ಯಾಳ ಅಂದ್ರೆ ಹೇಳಂಗಿಲ್ಲ. ಅಕಿಗಿ ಮದುವಿನ ಮಾಡ್ಬ್ಯಾಡ್ರಿ ನಾನು ಓದ್ತೀನಿ ಅಂತ ಹೇಳಿದ್ಲು. ಆದ್ರೆ ನಮ್ ಯಜಮಾನ್ರು ಅದನ್ನೆಲ್ಲಾ ಲೆಕ್ಕಕ್ಕ ತಗಂಡ್ಲಿಲ್ಲ. ಒಳ್ಳೆ ಸಂಬಂಧ, ಇಂಥ ಸಂಬಂಧ ಕೈ ಬಿಡ್ಬಾರ್ದು ಅಂತ ಹೇಳಿ ಅಕಿ ಇನ್ನ ಎಂಟ್ನೇ ಕ್ಲಾಸು ಓದ್ತಿದ್ಲು ಆವಾಗ್ಲೇ ಮದುವಿ ಮಾಡಿಬಿಟ್ರು, ಅಕಿ ವಾರಿಗೇರು ಈಗ ಟೀಚರ್ ಕೆಲ್ಸದಾಗ ಐದಾರ. ನಮ್ ಮಗಳ್ನ ಓದ್ಸಿದ್ರೆ ಅಕಿ ಸತೆ ಟೀಚರ್

ಆಗ್ತಿದ್ಲು. ಏನ್ ಮಾಡಾದು ಮನ್ಯಾಗ ಏನೂ ಮಾತಾಡಂಗಿಲ್ಲ. ಎಲ್ಲಾದನ್ನೂ ಮನಿ ಯಜಮಾನ್ನೇ ನೋಡ್ಕೆಂತಾನ. ಅವ್ರು ಹೇಳ್ದಂಗ ಕೇಳ್ಬೇಕು ಅಷ್ಟೆ. ಈಗ ಮಗ್ಳು ಎಷ್ಟು ಕಷ್ಟ ಪಡಕತ್ಯಾಳ ಅದನ್ನ ನೋಡ್ಕೆಂಡು ಸುಮ್ನೆ ಇರ್ಬೇಕಾಗೈತಿ" ಎಂದು ತಮ್ಮ ಮಗಳ ಕುರಿತು ಅಸಮಾಧಾನಗೊಂಡರು.

ಬಾಗಲಕೋಟೆಯ ಶಿರೂರಿನ ಸಕ್ರೆವ್ವ ಹೇಳುವಂತೆ "ನಮ್ ಅಮ್ಮ ದೇವದಾಸಿ ಐದಾಳ. ನನಿಗೆ ೧೧ನೇ ವರ್ಸದಾಗ ಮದುವಿ ಮಾಡಿದ್ಲು. ಈಗ ನನಿಗಿ ಒಂದು ಮಗ ಐದಾನ. ಗಂಡ ತೀರ್ಕೆಂಡು ಒಂದು ವರ್ಸ ಆತು. ಹಂಗಾಗಿ ಇಲ್ಲಿ ಇರ್ಬಾರ್ದು ಅಂತೇಳಿ ನಮ್ ತಾಯಿ ಮನಿಗಿ ಬಂದೆ. ಇಲ್ಲಿ ಸತೆ ನಮ್ ಅಮ್ಮಗ ಬಾಳ ಕಷ್ಟ ಐತಿ. ಹಂಗಾಗಿ ನಾನು ಕೆಲ್ಸಕ್ಕ ಹೋಗಕತ್ತೇನಿ. ಊರಾಗ ನನ್ ಜತಿಗಿ ಇದ್ದೋರು ಇನ್ನ ಸಾಲಿಗಿ ಹೋಗಾಕತ್ಯಾರ. ಅವ್ರೆಲ್ಲಾ ಸಾಲಿಗಿ ಹೋಗಾದನ್ನ ನೋಡಿದ್ರ ನನಿಗಿ ಜೀವ್ನನೇ ಬ್ಯಾಸರಾಗ್ತೈತಿ. ನನಿಗಿ ಮದುವಿ ಆಗಿರ್ಲಿಲ್ಲ ಅಂದಿದ್ರೆ ಅವ್ರ ಜತಿಗಿ ಸಾಲಿ ಕಲಿಯಾಕ ಹೋಗ್ತಿದ್ದೆಲ್ಲಾ ಅಂತ ಅನ್ಸತೈತಿ. ಆದ್ರೆ ಏನ್ ಮಾಡಾದು ನನ್ ಹಣೇಬರ್ದಾಗ ಹಂಗ ಬರ್ದಿಲ್ಲ. ಸಣ್ಣ ವಯಸ್ಸಿಗೇನೇ ಜೀವ್ನ ಅಂದ್ರೆ ಏನು ಅನ್ನಾದು ಗೊತ್ತಾಗೇತಿ. ಮತ್ತೆ ಗಂಡನ ಕಳ್ಕಂಡು ಸಾಯೋವರ್ಗೂ ಜೀವ್ನ ಮಾಡ್ಬೇಕಾಗೇತಿ. ಸಣ್ಣ ವಯಸ್ಸಿಗಿ ಮದುವಿ ಆಗಿದ್ರಿಂದ ಇಷ್ಟೆಲ್ಲಾ ಕಷ್ಟಗೋಳ್ನ ಅನುಬೋಸಕತ್ತೇನಿ" ಎಂದು ಹೇಳುತ್ತಾ ಅಸಮಧಾನಗೊಂಡರು.

ಹೀಗೆ ಮಕ್ಕಳು ಅದರಲ್ಲಿಯೂ ಹೆಣ್ಣುಮಕ್ಕಳು ತಮ್ಮ ಬಾಲ್ಯದ ದಿನಗಳನ್ನು ಅನುಭವಿಸಲಾರದೇ ಬಹು ಬೇಗನೇ ವಿವಾಹ ಬಂಧನಕ್ಕೆ ಸಿಲುಕಿಕೊಂಡಿರುವುದು ಮತ್ತು ಅದರಿಂದ ಅವರು ನೋವುಗಳನ್ನು ಅನುಭವಿಸುತ್ತಿರುವುದು ಕಂಡುಬರುತ್ತದೆ. ಮುಖ್ಯವಾಗಿ ಮಕ್ಕಳು ತಮ್ಮ ಬಾಲ್ಯದ ದಿನಗಳನ್ನು ಆಟ-ಪಾಠಗಳಲ್ಲಿ ಕಳೆಯಬೇಕು. ಆ ಬಗೆಯ ವಾತಾವರಣವನ್ನು ಕುಟುಂಬದಲ್ಲಿನ ಸದಸ್ಯರು ಒದಗಿಸಿಕೊಡಬೇಕು. ಅಂದಾಗ ಮಾತ್ರ ಮಕ್ಕಳ ಮಾನಸಿಕ ಮತ್ತು ಭೌದ್ಧಿಕ ಬೆಳವಣಿಗೆಗಳು ಚೆನ್ನಾಗಿ ಆಗುತ್ತವೆ. ಆದರೆ ಆಟವಾಡಿಕೊಂಡು ಕಾಲ ಕಳೆಯಬೇಕಾದ ವಯಸ್ಸಿನಲ್ಲಿ ವಿವಾಹ ಮಾಡಿದರೆ ಅವರು ತಮ್ಮ ಬಾಲ್ಯದ ಹಕ್ಕುಗಳನ್ನು ಕಳೆದುಕೊಂಡಂತೆಯೇ. ಮಾನವ ಹಕ್ಕುಗಳಲ್ಲಿ ಸೂಚಿಸಿರುವ ಎಲ್ಲಾ ನಿಯಮಗಳನ್ನು ಗಮನಿಸಿದಾಗ, ಬಾಲ್ಯ ವಿವಾಹದ ಮಕ್ಕಳು ತಮ್ಮ ಬಾಲ್ಯವನ್ನು ಕಳೆದುಕೊಳ್ಳುತ್ತಿದ್ದಾರೆ. ಮುಖ್ಯವಾಗಿ ಮಗುವಿಗೆ ಬಾಲ್ಯದ ಹಾಗೂ ಹದಿಹರೆಯದ ನಿರಾಕರಣೆಯಾಗುತ್ತದೆ. ಬಾಲ್ಯ ವಿವಾಹ ಮಗುವಿನ ವೈಯಕ್ತಿಕ ಸ್ವಾತಂತ್ರ್ಯವನ್ನು ಹರಣ ಮಾಡುತ್ತದೆ. ಇದರ ಜೊತೆಗೆ ಅದರ ವ್ಯಕ್ತಿತ್ವ ವಿಕಸನಕ್ಕೆ ಅಡ್ಡಿಯುಂಟು ಮಾಡುತ್ತದೆ. ಶೈಕ್ಷಣಿಕ ಅವಕಾಶದಿಂದ ವಂಚಿತರನ್ನಾಗಿಸುತ್ತದೆ. ಮುಖ್ಯವಾಗಿ ಹೆಣ್ಣುಮಗುವಿನ ದೈಹಿಕ, ಮಾನಸಿಕ ಹಾಗೂ ಭಾವನಾತ್ಮಕ ಬೆಳವಣಿಗೆ ಸರಿಪಡಿಸಲಾರದಷ್ಟು ಹಾನಿಗೊಳಗಾಗುತ್ತದೆ. ಹೆಣ್ಣುಮಕ್ಕಳು ತಮ್ಮ ಹುಟ್ಟಿದ ಮನೆಯಿಂದ ಹಿಡಿದು ವಿವಾಹದ ನಂತರ ಸೇರುವ ಗಂಡನ ಮನೆಯವರೆಗೆ ತನ್ನ ಎಲ್ಲಾ ಸ್ವಾತಂತ್ರ್ಯವನ್ನು

ಕಳೆದುಕೊಂಡು ಪರಾವಲಂಬಿಯಾಗಿಯೇ ಉಳಿಯುತ್ತಿದ್ದಾಳೆ. ಇದಕ್ಕೆಲ್ಲಾ ಮುಖ್ಯ ಕಾರಣ ಪಿತೃಪ್ರಧಾನ ವ್ಯವಸ್ಥೆ. ಸಿಲ್ವಿಯಾ ವಾಲ್ಬಿ ಎನ್ನುವವರು ತನ್ನ 'ಥಿಯರೈಸಿಂಗ್ ಪೇಟ್ರಿಯಾರ್ಕಿ' ಎಂಬುದರಲ್ಲಿ 'ಪಿತೃಪ್ರಧಾನ ವ್ಯವಸ್ಥೆಯನ್ನು ಪುರುಷರು ಮಹಿಳೆಯರ ಮೇಲೆ ದಬ್ಬಾಳಿಕೆ ನಡೆಸುವ, ತುಳಿಯುವ ಮತ್ತು ಶೋಷಿಸುವ ಸಾಮಾಜಿಕ ಸಂರಚನೆಯನ್ನು ಮತ್ತು ಆಚರಣೆಗಳನ್ನು ಹೊಂದಿರುವ ವ್ಯವಸ್ಥೆ' ಎನ್ನುತ್ತಾರೆ. ಈ ವ್ಯವಸ್ಥೆಯಲ್ಲಿ ತಂದೆ ಅಥವಾ ಗಂಡ ಪ್ರಬಲನಾಗಿದ್ದು, ಪತ್ನಿ ಮಕ್ಕಳು ಅವರ ಅಧೀನಕ್ಕೆ ಒಳಪಟ್ಟರುತ್ತಾರೆ. ಇಂದಿನ ನಾಗರಿಕ ಸಮಾಜದಲ್ಲಿ ಮಹಿಳೆಯರು ಕುಟುಂಬದಲ್ಲಿನ ತಂದೆ ಅಥವಾ ಗಂಡನ ಮಾತನ್ನು ಮೀರುವ ಹಾಗಿಲ್ಲ. ಅವರು ಹೇಳಿದಂತೆ ಕೇಳಬೇಕು. ಅದಕ್ಕೆ ಪ್ರತಿರೋಧವನ್ನು ಒಡ್ಡುವಂತಿಲ್ಲ. ಹೆಣ್ಣುಮಕ್ಕಳಿಗೆ ಸರಿಯಾದ ಶಿಕ್ಷಣ ವ್ಯವಸ್ಥೆಯನ್ನು ಕಲ್ಪಿಸಿಕೊಡದೇ ಅವರನ್ನು ಬಹು ಬೇಗನೇ ವಿವಾಹ ಬಂಧನಕ್ಕೆ ತಳ್ಳುತ್ತಿದ್ದಾರೆ. ಇದು ಮಾನವ ಹಕ್ಕುಗಳ ಉಲ್ಲಂಘನೆಯ ಜೊತೆಗೆ ಸಂವಿಧಾನದ ಮೂಲಭೂತ ಹಕ್ಕುಗಳ ಉಲ್ಲಂಘನೆಯೂ ಆಗಿದೆ. ಪಿತೃಪ್ರಧಾನ ವ್ಯವಸ್ಥೆಯ ಏಕಮುಖ ಚಲನೆಯ ಕಾರಣವಾಗಿ ಗಂಡು ಮೇಲ್‌ಸ್ತರಕ್ಕೆ ಮತ್ತು ಹೆಣ್ಣುಮಕ್ಕಳು ಕೆಳಸ್ತರಕ್ಕೆ ತಳ್ಳಲ್ಪಡುತ್ತಿದ್ದಾರೆ. ಹಕ್ಕುಗಳ ನೆಲೆಯಲಿಟ್ಟು ವಿಶ್ಲೇಷಿಸಿದಾಗ ಹೆಣ್ಣುಮಕ್ಕಳು ಸಂವಿಧಾನ ಬದ್ಧವಾದ ಮತ್ತು ಮಾನವ ಹಕ್ಕಗಳು ಸೂಚಿಸಿರುವ ಯಾವ ಹಕ್ಕುಗಳನ್ನೂ ಹೊಂದಿಲ್ಲದಿರುವುದು ಕಂಡುಬರುತ್ತದೆ.

ಹುಟ್ಟಿದ ಪ್ರತಿಯೊಂದು ಮಗುವಿಗೂ ಅಭಿವ್ಯಕ್ತಿ ಸ್ವಾತಂತ್ರ್ಯವಿದೆ. ಅವರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ತುಂಬಾ ಮುಕ್ತತೆಯನ್ನು ಹೊಂದಿದ್ದಾರೆ. ಇಲ್ಲಿ ಮಗು ಎಂದ ಕೂಡಲೇ ಗಂಡು ಮತ್ತು ಹೆಣ್ಣು ಇಬ್ಬರೂ ಇದ್ದಾರೆ. ಈ ಹಕ್ಕು ಇಬ್ಬರಿಗೂ ಅನ್ವಯಿಸುತ್ತದೆಯಾದರೂ, ವಾಸ್ತವದಲ್ಲಿ ಈ ಹಕ್ಕು ಚಲಾವಣೆಯಲ್ಲಿರುವುದು ಗಂಡು ಮಗುವಿಗೆ ಮಾತ್ರ. ಹೆಣ್ಣು ಮಕ್ಕಳ ಈ ಹಕ್ಕನ್ನು ವ್ಯವಸ್ಥೆ ಕಿತ್ತುಕೊಂಡಿದೆ. ಇವರಿಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯ ಇಲ್ಲದಾಗಿದೆ. ಕುಟುಂಬದಲ್ಲಿ ಗಂಡು ಮಗುವಿಗೆ ಇರುವ ಆದ್ಯತೆ ಹೆಣ್ಣು ಮಗುವಿಗೆ ಇಲ್ಲದಾಗಿದೆ. ಗಂಡು ಎಲ್ಲದಕ್ಕೂ ಸ್ವತಂತ್ರನು. ಅವನು ಕುಟುಂಬದಲ್ಲಿನ ಎಲ್ಲಾ ಅವಕಾಶಗಳನ್ನು ಪಡೆಯುವ, ನಿರಾಕರಿಸುವ ಮುಕ್ತತೆಯನ್ನು ಹೊಂದಿದ್ದಾನೆ. ಮುಖ್ಯವಾಗಿ ಅವನು ಅಧಿಕಾರದ ನೆಲೆಯಲ್ಲಿ ವ್ಯವಹರಿಸಬಹುದಾಗಿದೆ. ಅಂದರೆ ಕುಟುಂಬದಲ್ಲಿನ ತಂದೆ–ತಾಯಿಯರ ಮಾತನ್ನು ನಿರಾಕರಿಸುವ ಅಥವಾ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸುವ ಅಧಿಕಾರವನ್ನು ಹೊಂದಿದ್ದಾನೆ. ಅವನ ಮಾತಿಗೆ ಬೆಲೆ ಇದೆ. ಹಾಗಾಗಿಯೇ ಗಂಡು ಯಾವ ಸಂದರ್ಭದಲ್ಲಿ ವಿವಾಹವಾಗಬೇಕು, ಯಾರನ್ನ ತನ್ನ ಬಾಳ ಸಂಗಾತಿಯನ್ನಾಗಿ ಮಾಡಿಕೊಳ್ಳಬೇಕು ಎಂಬುದನ್ನು ನಿರ್ಧರಿಸುವ ಹಕ್ಕನ್ನು ಪಡೆದಿರುತ್ತಾನೆ. ಆದರೆ ಮಹಿಳೆಯರ ವಿಷಯದಲ್ಲಿ ಇದು ವಿರುದ್ಧ ವಾತಾವರಣವನ್ನು ಸೃಷ್ಟಿಸಿದೆ. ಕುಟುಂಬದಲ್ಲಿ ತಂದೆ, ತಾಯಿ, ಅಣ್ಣ, ತಮ್ಮನವರ ಅಭಿಪ್ರಾಯವೇ ಅಂತಿಮವಾಗಿರುತ್ತದೆ. ಹಾಗಾಗಿಯೇ ಹೆಣ್ಣುಮಕ್ಕಳ ಅಭಿಪ್ರಾಯಗಳು

ನಿರಾಕರಿಸಲ್ಪಡುತ್ತವೆ. ಇಂತಹ ಸಂದರ್ಭದಲ್ಲಿ ಅವರ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದೆಂದರೆ ಅದು ಸವಾಲಿನ ಸಂಗತಿಯೇ ಸರಿ. ಇದು ಮಾನವ ಹಕ್ಕುಗಳ ಸಂಪೂರ್ಣ ಉಲ್ಲಂಘನೆಯಾಗುತ್ತದೆ.

ಬಾಲ್ಯ ವಿವಾಹವು ಒಂದು ಅನಿಷ್ಟ ಪದ್ಧತಿಯಾಗಿದ್ದು, ಇದು ಒಂದು ಬಗೆಯಲ್ಲಿ ಸಂಪ್ರದಾಯದ ರೂಪದಲ್ಲಿ ಬೆಳೆದುಕೊಂಡು ಬಂದಿದೆ. ಹಾಗಾಗಿಯೇ ಇಂದಿಗೂ ಬಾಲ್ಯ ವಿವಾಹಗಳು ಜೀವಂತವಿರುವುದನ್ನು ಕಾಣಬಹುದಾಗಿದೆ. ಅಲೆಮಾರಿ, ಅರೆ ಅಲೆಮಾರಿ, ಬುಡಕಟ್ಟು ಸಮುದಾಯಗಳಲ್ಲಿ ಇಂದಿಗೂ ಬಾಲ್ಯ ವಿವಾಹಗಳು ನಡೆಯುತ್ತಲೇ ಇವೆ. ಆಧುನಿಕತೆಯ ಗಾಳಿ ಸೋಂಕಿ ಅವರು ಬದಲಾಗಿದ್ದಾರೆ ಎಂದು ಹೇಳಲಾಗುತ್ತಿದೆಯಾದರೂ, ಬಾಲ್ಯ ವಿವಾಹಗಳು ಮಾತ್ರ ಎಲೆಮರೆಯ ಕಾಯಿಯಂತೆ ಸಂಭವಿಸುತ್ತಲೇ ಇವೆ. ಈ ವಿವಾಹಕ್ಕೆ ಒಳಗಾದವರಲ್ಲಿ ಗಂಡು ಮಕ್ಕಳಿಗಿಂತ ಹೆಣ್ಣುಮಕ್ಕಳೇ ಹೆಚ್ಚು. ಹಾಗಾಗಿ ಹೆಣ್ಣುಮಕ್ಕಳು ಹಲವಾರು ಸಮಸ್ಯೆಗಳಿಗೆ ಒಳಗಾಗಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ. ಅವರ ಆರೋಗ್ಯ ಕಡೆಗಣಿಸಲ್ಪಡುತ್ತಿದೆ. ಶಿಕ್ಷಣ ಅರ್ಧದಲ್ಲಿಯೇ ಕುಂಠಿತಗೊಳ್ಳುತ್ತಿದೆ, ಕೌಟುಂಬಿಕ ಹಿಂಸೆಗಳಿಗೆ ಒಳಗಾಗುತ್ತಿರುವಂತಹ ಹಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇವು ಮಕ್ಕಳ ಹಕ್ಕುಗಳ ಕಲಮು ೨೪(೨) ಮತ್ತು ಕಲಮು ೩ನ್ನು ಸಂಪೂರ್ಣವಾಗಿ ಉಲ್ಲಂಘಿಸುತ್ತವೆ. ಈ ನಿಯಮಗಳಲ್ಲಿ ತಿಳಿಸಿರುವಂತೆ ಮಗುವಿನ ಆರೋಗ್ಯಕ್ಕೆ ಹಾನಿಕರವಾಗುವ ಯಾವುದೇ ಆಚರಣೆಯನ್ನು ನಿಷೇಧಿಸುವುದಾಗಿದೆ. ಆದರೆ ಬಾಲ್ಯ ವಿವಾಹವು ಒಂದು ಆಚರಣೆಯಾಗಿ ರೂಪು ಪಡೆದಿರುವುದರಿಂದ ಇದು ಮೇಲಿನ ನಿಯಮಗಳನ್ನು ಉಲ್ಲಂಘಿಸುತ್ತಿದೆ ಎಂದೇ ಹೇಳಬಹುದು.

ತಂದೆ ತಾಯಂದಿರು ತಮ್ಮ ಶಕ್ತ್ಯಾನುಸಾರ ಮಕ್ಕಳನ್ನು ಸಾಕುವ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಇಂತಹ ಸಂದರ್ಭದಲ್ಲಿ ಹೆಣ್ಣುಮಕ್ಕಳು ಹೊರೆಯಾಗುತ್ತಾರೆ. ಭಾರತದಲ್ಲಿನ ಬಹಳಷ್ಟು ಕುಟುಂಬಗಳು ಬಡತನದಿಂದ ಕೂಡಿದವುಗಳಾಗಿರುವುದರಿಂದ ಕುಟುಂಬದಲ್ಲಿನ ಹಿರಿಯರು ತಮ್ಮ ಮಕ್ಕಳನ್ನು ಬೆಳೆಸುವ ಜವಾಬ್ದಾರಿಯಿಂದ ನುಣಿಚಿಕೊಳ್ಳುವ ಅವಕಾಶಕ್ಕಾಗಿ ಕಾಯುತ್ತಿರುತ್ತಾರೆ. ಇವರು ಮಕ್ಕಳ ಉತ್ತಮ ಮಾನಸಿಕ ಮತ್ತು ದೈಹಿಕ ಬೆಳವಣಿಗೆಗೆ ಅಡ್ಡಿಯನ್ನುಂಟುಮಾಡುತ್ತಾರೆ. ಬಡತನವನ್ನೇ ಕಾರಣವಾಗಿಟ್ಟುಕೊಂಡು ತಮ್ಮ ಮಕ್ಕಳಿಗೆ ಅಪ್ರಾಪ್ತ ವಯಸ್ಸಿನಲ್ಲಿಯೇ ವಿವಾಹ ಮಾಡುತ್ತಿರುವುದು ವಾಸ್ತವ. ಮಕ್ಕಳ ಹಕ್ಕುಗಳ ಪ್ರಕಾರ ೧೮ ವರ್ಷ ವಯಸ್ಸಿನ ವರೆಗೆ ಮಕ್ಕಳನ್ನು ಉತ್ತಮ ನಾಗರೀಕರನ್ನಾಗಿ ಮಾರ್ಪಡಿಸುವಂತಹ ಜವಾಬ್ದಾರಿ ತಂದೆ ತಾಯಿಗೆ ಇರುತ್ತದೆ. ಆದರೆ ವಾಸ್ತವದಲ್ಲಿ ಹಾಗಾಗುತ್ತಿಲ್ಲ. ನಾನಾ ಕಾರಣಗಳಿಗಾಗಿ ತಮ್ಮ ಮಕ್ಕಳನ್ನು ಚಿಕ್ಕ ವಯಸ್ಸಿನಲ್ಲಿಯೇ ಬಾಲ್ಯ ವಿವಾಹಗಳಿಗೆ ನೂಕುತ್ತಿದ್ದಾರೆ. ಇದರಿಂದ ಮಗು ತನ್ನೆಲ್ಲಾ ವೈಯಕ್ತಿಕ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತದೆ. ಅದರಲ್ಲಿಯೂ ಹೆಣ್ಣುಮಕ್ಕಳು ಕುಟುಂಬದಲ್ಲಿನ ಕೆಲಸಗಳ ಒತ್ತಡದ ಕಾರಣವಾಗಿ ಹಲವು ಸಮಸ್ಯೆಗಳಿಗೆ ಒಳಗಾಗುತ್ತಿದ್ದಾರೆ.

ವಿವಾಹ ಎಂಬುದರಿಂದ ಹೆಣ್ಣು ಮಕ್ಕಳಿಗೆ ತುಂಬಾನೇ ಸಮಸ್ಯೆಗಳು ಎದುರಾಗುತ್ತವೆ. ಈ ಬಗೆಯ ಸಮಸ್ಯೆಗಳಿಗೆ ತಂದೆ ತಾಯಂದಿರೇ ಕಾರಣರಾಗಿರುವುದರಿಂದ ಅವರೂ ಸಂಪೂರ್ಣವಾಗಿ ಮಕ್ಕಳ ಹಕ್ಕುಗಳನ್ನು ಹರಣ ಮಾಡಿದಂತೆಯೇ. ಬಾಲ್ಯದ ಜೀವನವನ್ನು ಅನುಭವಿಸುವ ವಯಸ್ಸಿನಲ್ಲಿ ವಿವಾಹದ ಮೂಲಕ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸಬೇಕಾದ ಅನಿವಾರ್ಯತೆ ಹೆಣ್ಣುಮಕ್ಕಳಿಗಿದೆ. ಇದು ಗಂಡಿನ ವಿಷಯದಲ್ಲಿ ಹಾಗಾಗುವುದಿಲ್ಲ. ಏಕೆಂದರೆ ಅವನು ಯಾವಾಗಲೂ ನಿರ್ದೇಶಕನ ಸ್ಥಾನದಲ್ಲಿರುತ್ತಾನೆ. ಅವನ ಅಣತಿಯಂತೆಯೇ ಹೆಣ್ಣು ನಡೆಯಬೇಕು. ಇದನ್ನೇ ವ್ಯವಸ್ಥೆ ನಿರೀಕ್ಷಿಸುತ್ತದೆ. ಹೆಣ್ಣು ತಾನು ಹುಟ್ಟಿದ ಮನೆಯಿಂದ, ವಿವಾಹದ ನಂತರ ಸೇರುವ ಗಂಡನ ಮನೆಯವರೆಗೂ, ಅಸಮಾನ ಪರಿಸ್ಥಿತಿಯಲ್ಲಿ ಬದುಕಬೇಕಾದ ಅನಿವಾರ್ಯತೆಗೆ ಒಳಗಾಗಿದ್ದಾಳೆ. ಭಾರತದ ಸಂವಿಧಾನವು ಮಕ್ಕಳಿಗಾಗಿಯೇ ಹಲವು ಹಕ್ಕುಗಳನ್ನು ಕೊಡಮಾಡಲ್ಪಟ್ಟಿದೆ. ಅವುಗಳಲ್ಲಿನ ಕೆಲವನ್ನು ನೋಡುವುದಾದರೆ,

**ಶಿಕ್ಷಣದ ಹಕ್ಕು :** ಭಾರತದಲ್ಲಿ ಹುಟ್ಟಿದ ಪ್ರತಿಯೊಬ್ಬ ಮಗುವಿಗೂ ೧ರಿಂದ ೧೦ನೇ ತರಗತಿಯವರೆಗೆ ಉಚಿತ ಶಿಕ್ಷಣವನ್ನು ಪಡೆಯುವಂತಹ ಹಕ್ಕಿದೆ. ಆದರೆ ವಾಸ್ತವದಲ್ಲಿ ಈ ಹಕ್ಕು ತಂದೆ ತಾಯಂದಿರಿಂದಲೇ ನಿರಾಕರಿಸಲ್ಪಟ್ಟಿರುವುದು ಕಂಡುಬರುತ್ತದೆ. ಶಿಕ್ಷಣ ಮೂಲಭೂತ ಅವಶ್ಯಕತೆಯಾಗಿದ್ದು, ಅಧ್ಯಯನದ ವ್ಯಾಪ್ತಿ ಪ್ರದೇಶದಲ್ಲಿ ಬಾಲ್ಯ ವಿವಾಹದ ಹೆಣ್ಣುಮಕ್ಕಳಲ್ಲಿ ೧೦ನೇ ತರಗತಿಯನ್ನು ಪೂರೈಸಿದ ಮಕ್ಕಳು ಕಂಡು ಬಂದಿಲ್ಲ. ೫,೬,೭ನೆಯ ತರಗತಿಗಳಲ್ಲಿ ಓದುತ್ತಿರುವಾಗಲೇ ಅವರನ್ನು ಶಾಲೆಯಿಂದ ಬಿಡಿಸಿ ವಿವಾಹಕ್ಕೆ ಒಳಗುಮಾಡಿರುವುದು ಕಂಡುಬರುತ್ತದೆ. ಇದು ಸಂವಿಧಾನದ ಆಶಯಗಳನ್ನು ನಿರಾಯಾಸವಾಗಿ ಉಲ್ಲಂಘಿಸಿರುವುದು ಕಂಡುಬರುತ್ತದೆ.

**ಪೌಷ್ಠಿಕ ಆಹಾರವನ್ನು ಪಡೆಯುವ ಹಕ್ಕು :** ಪೌಷ್ಠಿಕ ಆಹಾರವನ್ನು ಪಡೆಯುವುದೊಂದು ಜೀವನಾವಶ್ಯಕ ವಿಚಾರವಾಗಿದೆ. ನಮ್ಮ ದೇಶದಲ್ಲಿ ಶೇಕಡಾ ೫೦ಕ್ಕಿಂತ ಹೆಚ್ಚು ಮಕ್ಕಳು ಪೌಷ್ಟಿಕ ಆಹಾರದಿಂದ ಬಳಲುತ್ತಿದ್ದಾರೆ. ಅಪೌಷ್ಟಿಕತೆಯಿಂದ ಮಕ್ಕಳು ಮರಣಿಸಿದ ಎಷ್ಟೋ ಉದಾಹರಣೆಗಳಿವೆ. ಮುಖ್ಯವಾಗಿ ಬಾಲ್ಯ ವಿವಾಹವು ಹೆಣ್ಣುಮಕ್ಕಳು ಅಪೌಷ್ಟಿಕತೆಯಿಂದ ಬಳಲುವಂತೆ ಮಾಡಿರುವುದು ಸತ್ಯ ಸಂಗತಿ. ಮುಖ್ಯವಾಗಿ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಬಂಧನಕ್ಕೆ ಒಳಗಾಗಿರುವ ಹೆಣ್ಣುಮಕ್ಕಳು ಗಂಡನ ಮನೆಯಲ್ಲಿನ ಕೆಲಸಗಳ ಒತ್ತಡ, ಕೌಟುಂಬಿಕ ಹಿಂಸೆಗಳಿಗೆ ಒಳಗಾಗುವುದರಿಂದ ತಮ್ಮ ಆಹಾರದ ಬಗೆಗೆ ಹೆಚ್ಚಿನ ಆಸ್ಥೆಯನ್ನು ವಹಿಸದಾಗಿದ್ದಾರೆ. ಎಲ್ಲದಕ್ಕೂ ಮುಖ್ಯವಾಗಿ ಸಾಮಾಜಿಕವಾಗಿ ರೂಢಿಯಲ್ಲಿರುವ ಸಂಗತಿಯೆಂದರೆ, ಕುಟುಂಬದಲ್ಲಿ ಗಂಡನಾದವನು ಆಹಾರವನ್ನು ಸೇವಿಸಿದ ನಂತರವೇ ಹೆಂಡತಿಯಾದವಳು ಆಹಾರವನ್ನು ಸೇವಿಸಬೇಕು. ಅದರಲ್ಲಿಯೂ ಹೊಸದಾಗಿ ಮದುವೆಯಾದ ಹೆಣ್ಣು, ಗಂಡನ ಮನೆಯಲ್ಲಿನ ಎಲ್ಲ ಸದಸ್ಯರ ಊಟದ ನಂತರವೇ ಅವಳು ಸೇವಿಸುವುದರ

ಮೂಲಕ ತನ್ನ ಸ್ವಾಮಿನಿಷ್ಠೆ, ಹಿರಿಯರಿಗೆ ನೀಡುವ ವಿಧೇಯತೆಯನ್ನು ತೋರ್ಪಡಿಸಬೇಕಾಗುತ್ತದೆ. ಹೀಗೆ ಮಾಡಲೇಬೇಕು. ಇದನ್ನು ಸಮಾಜ ಅವಳಿಂದ ನಿರೀಕ್ಷಿಸುತ್ತದೆ. ಇದಕ್ಕೆ ವಿರುದ್ಧವಾಗಿ ನಡೆದುಕೊಂಡರೆ ಕುಟುಂಬದಲ್ಲಿ ಆಕೆಯ ಸ್ಥಾನ ಭದ್ರವಾಗಿರುವುದಿಲ್ಲ. ಕುಟುಂಬದ ಸದಸ್ಯರ ಹೀಯಾಳಿಕೆಗಳಿಗೆ ಬಲಿಯಾಗಬೇಕಾಗುತ್ತದೆ. ಹೀಗೆ ತನ್ನ ಸ್ವಾಮಿನಿಷ್ಠೆಯನ್ನು ತೋರಿಸಬೇಕಾದ ಕಾರಣಕ್ಕಾಗಿ ಸರಿಯಾದ ಸಮಯಕ್ಕೆ ಆಹಾರವನ್ನು ಸೇವಿಸಲಾಗುವುದಿಲ್ಲ ಮತ್ತು ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳು ಇನ್ನು ದೈಹಿಕವಾಗಿ ಬೆಳವಣಿಗೆಯನ್ನು ಹೊಂದುತ್ತಿರುತ್ತಾರೆ, ಅಂತಹ ಸಮಯದಲ್ಲಿ ಅವರಿಗೆ ಉತ್ತಮ ಆರೋಗ್ಯ ಮತ್ತು ಸರಿಯಾದ ಬೆಳವಣಿಗೆಗೆ ಪೌಷ್ಠಿಕ ಆಹಾರದ ಅವಶ್ಯಕತೆ ಇರುತ್ತದೆ. ಆದರೆ ಸಮಾಜ ನಿರ್ಮಿಸಿದ ನಿಯಮಗಳು ಅವಳನ್ನು ದೈಹಿಕವಾಗಿ, ಮಾನಸಿಕವಾಗಿ ಬೆಳೆಯದಂತೆ ಮಾಡುತ್ತಿವೆ. ಹಾಗಾಗಿ ಅಧ್ಯಯನದ ಕ್ಷೇತ್ರದಲ್ಲಿ ಬಹಳಷ್ಟು ಹೆಣ್ಣುಮಕ್ಕಳು ಅಪೌಷ್ಠಿಕತೆಯಿಂದ ಬಳಲುತ್ತಿದ್ದಾರೆ. ಹಾಗೆಯೇ ಅಪ್ರಾಪ್ತ ವಯಸ್ಸಿನ ವಿವಾಹಿತ ಹೆಣ್ಣುಮಕ್ಕಳಿಗೆ ಹುಟ್ಟಿದ ಮಕ್ಕಳೂ ಅಪೌಷ್ಠಿಕತೆಯಿಂದ ಬಳಲುತ್ತಿರುವುದು ಕಂಡುಬರುತ್ತದೆ. ಹಾಗಾಗಿ ಇಂದು ಹೆರಿಗೆಯ ಸಮಯದಲ್ಲಿ ರಕ್ತಹೀನತೆಯಿಂದ ಬಳಲಿ ಸಾವನ್ನಪ್ಪಿದ ಹೆಣ್ಣುಮಕ್ಕಳ ಉದಾಹರಣೆಗಳು ವ್ಯವಸ್ಥೆಯಲ್ಲಿ ಕಾಣಸಿಗುತ್ತವೆ. ಹೀಗೆ ಅಪೌಷ್ಠಿಕತೆಯಿಂದ ನರಳುವ ಎಷ್ಟೋ ಹೆಣ್ಣುಮಕ್ಕಳು, ಮಕ್ಕಳು ಸಮಾಜದಲ್ಲಿ ಕಂಡುಬರುತ್ತಾರಾದ್ದರಿಂದ ಇವರು ಪೌಷ್ಠಿಕತೆಯಿಂದ ಇರಬೇಕು ಎಂಬ ಸಂವಿಧಾನದ ಹಕ್ಕಿನಿಂದ ದೂರವೇ ಉಳಿದಿದ್ದಾರೆ. ಮುಖ್ಯವಾಗಿ ಈ ಹಕ್ಕನ್ನು ಸಂಪೂರ್ಣವಾಗಿ ಕಳೆದುಕೊಳ್ಳುವಂತೆ ಮಾಡಲಾಗಿದೆ. ಇದು ವ್ಯವಸ್ಥೆಯು ಹೆಣ್ಣುಮಕ್ಕಳನ್ನು ಯಾವ ರೀತಿಯಲ್ಲಿ ನಡೆಸಿಕೊಳ್ಳುತ್ತಿದೆ ಎಂಬುದಕ್ಕೆ ಒಂದು ಉದಾಹರಣೆಯಾಗಿದೆ. ಬಾಲ್ಯ ವಿವಾಹ ಸಂವಿಧಾನವು ಮಕ್ಕಳಿಗಾಗಿ ನೀಡಿರುವ ಆರೋಗ್ಯದ ಹಕ್ಕನ್ನೂ ಉಲ್ಲಂಘಿಸುತ್ತದೆ.

**ಶೋಷಣೆಯಿಂದ ರಕ್ಷಣೆಯ ಹಕ್ಕು** : ಮಗುವಿಗೆ ಕುಟುಂಬದಲ್ಲಿ ತನ್ನ ಮೇಲೆ ನಡೆಯುವ ಯಾವುದೇ ಬಗೆಯ ಹಿಂಸೆಯಿಂದ ರಕ್ಷಣೆಯನ್ನು ಪಡೆಯುವ ಹಕ್ಕನ್ನು ಸಂವಿಧಾನವು ಕೊಡಮಾಡಲ್ಪಟ್ಟಿದೆ. ಬಾಲ್ಯ ವಿವಾಹಕ್ಕೆ ಒಳಗಾದ ಮಕ್ಕಳು ಅದರಲ್ಲಿಯೂ ಹೆಣ್ಣುಮಕ್ಕಳು ಕೌಟುಂಬಿಕ ಹಿಂಸೆ, ಕೆಲಸಗಳ ಒತ್ತಡಗಳಿಂದ ಬಳಲುತ್ತಿರುವುದು ಕಂಡುಬರುತ್ತದೆ. ಇನ್ನೂ ಆಟವಾಡಿಕೊಂಡು ಜೀವಿಸಬೇಕಾದ ವಯಸ್ಸಿನಲ್ಲಿ ವಿವಾಹದ ಮೂಲಕ ಕುಟುಂಬದ ಜವಾಬ್ದಾರಿಯನ್ನು ಅವಳ ಮೇಲೆ ಹೇರುತ್ತಿರುವ ವ್ಯವಸ್ಥೆ, ಅವಳ ಮೇಲಿನ ಹಲವು ಬಗೆಯ ಹಿಂಸೆಗಳಿಗೆ ಕಾರಣವಾಗುತ್ತಿದೆ. ಕುಟುಂಬದಲ್ಲಿ ತನ್ನ ಮೇಲೆ ನಡೆಯುವ ಶೋಷಣೆಯನ್ನು ವಿರೋಧಿಸುವ ಹಕ್ಕನ್ನು ಸಂವಿಧಾನವು ಕೊಟ್ಟಿದೆ. ಆದರೆ ಈ ಹಕ್ಕನ್ನು ಬಳಸಿಕೊಳ್ಳುವ ಅವಕಾಶವನ್ನು ವ್ಯವಸ್ಥೆ ಕಿತ್ತುಕೊಂಡಿದೆ. ಹೆಣ್ಣುಮಕ್ಕಳು ಮೊದಲು ತಾವು ಹುಟ್ಟಿದ ಮನೆಯಿಂದಲೇ ಶೋಷಣೆಯನ್ನು ಅನುಭವಿಸುತ್ತಾರೆ. ಅಂದರೆ ಕುಟುಂಬದಲ್ಲಿನ ಸಾಮಾಜಿಕ ಪ್ರಕ್ರಿಯೆಯು ಲಿಂಗ ಅಸಮಾನತೆಯ ಗುಣಗಳನ್ನು ಬಿತ್ತುವುದರಿಂದ ಅಲ್ಲಿಂದಲೇ ಶೋಷಣೆ

ಆರಂಭವಾಗುತ್ತದೆ. ಅಲ್ಲಿನ ಸಾಮಾಜೀಕರಣ ಮಗುವಿನ ಮಾನಸಿಕ ಮತ್ತು ಭೌದ್ಧಿಕತೆಯ ಮೇಲೆ ತುಂಬಾ ಪರಿಣಾಮವನ್ನು ಬೀರುತ್ತದೆ. ಇದೇ ಮುಂದುವರೆದು ಹೆಣ್ಣು ದಾಸ್ಯತ್ವಕ್ಕೆ ಒಳಗಾಗುತ್ತಾಳೆ. ಮುಖ್ಯವಾಗಿ ತಂದೆ ತಾಯಂದಿರಿಂದ ತನ್ನ ಚಲನ ವಲನದ ಮೇಲೆ ನಿರ್ಬಂಧಗಳು ಹೇರಲ್ಪಡುತ್ತವೆ. ಇದು ಶೋಷಣೆಯ ಒಂದು ಹಂತ. ನಂತರ ಬಾಲ್ಯದಲ್ಲಿರುವಾಗಲೇ ವಿವಾಹ ಬಂಧನಕ್ಕೆ ಒಳಗುಮಾಡುವುದರ ಮೂಲಕ ತನ್ನ ವ್ಯಕ್ತಿ ಸಾತಂತ್ರ್ಯವನ್ನು ಕಿತ್ತುಕೊಳ್ಳುವುದು ಇನ್ನೊಂದು ಹಂತವಾದರೆ, ವಿವಾಹದ ನಂತರ ಗಂಡನ ಮನೆಯಲ್ಲಿನ ಹಿಂಸೆಗಳು ಇನ್ನೊಂದು ಮುಖವನ್ನು ತೋರಿಸುತ್ತವೆ. ಇವುಗಳೆಲ್ಲವೂ ಶೋಷಣೆಯ ಸಂಗತಿಗಳಾಗಿವೆ. ಮುಖ್ಯವಾಗಿ ಇವುಗಳು ಕೌಟುಂಬಿಕ ಹಿಂಸೆಯ ವ್ಯಾಪ್ತಿಗೆ ಒಳಪಡುತ್ತವೆಯಾದ್ದರಿಂದ ಅದರ ಸ್ವರೂಪದಲ್ಲಿಯೇ ಇವುಗಳನ್ನು ವಿಶ್ಲೇಷಣೆಗೆ ಒಳಪಡಿಸಬೇಕಿದೆ. ಅಂದರೆ ಮಕ್ಕಳು ತಾನು ಹುಟ್ಟಿದ ಮನೆಯಲ್ಲಿಯೇ ಸಂವಿಧಾನ ಬದ್ಧವಾದ ಎಲ್ಲ ಹಕ್ಕುಗಳನ್ನು ಕಳೆದುಕೊಳ್ಳುವುದರ ಕಾರಣ ಇದು ಹಿಂಸೆಯ ಒಂದು ಸ್ವರೂಪವಾಗಿದೆ. ಇದು ಕುಟುಂಬದಲ್ಲಿ ತನ್ನ ಹೆತ್ತವರಿಂದಲೇ ನಡೆಯುತ್ತದೆ. ಹಾಗಾಗಿ ಇದು ಕೌಟುಂಬಿಕ ಹಿಂಸೆಯ ವ್ಯಾಪ್ತಿಗೆ ಕೊಂಡೊಯ್ಯುವುದು ಸೂಕ್ತ. ಇವೆಲ್ಲವೂ ಶೋಷಣೆಗಳಾಗಿವೆ ಎಂಬುದು ಮತ್ತು ಬಾಲ್ಯ ವಿವಾಹಗಳಿಂದ ಇವು ಹೆಚ್ಚಾಗಿರುವುದು ವಾಸ್ತವ. ಈ ಬಗೆಯ ಶೋಷಣೆಗಳಿಂದ ರಕ್ಷಿಸಿಕೊಳ್ಳಲು ಮಹಿಳೆಯರಿಗೆ ಸಂವಿಧಾನವು ಕೆಲವು ಹಕ್ಕುಗಳನ್ನು ನೀಡಿದೆ. ಆದರೆ ಈ ಹಕ್ಕುಗಳಾವುವೂ ಪಾಲಿತಗೊಳ್ಳುತ್ತಿಲ್ಲ ಎಂಬುದು ವಿಪರ್ಯಾಸದ ಸಂಗತಿ.

**ಭಾವನೆಗಳನ್ನು ವ್ಯಕ್ತಪಡಿಸುವ ಹಕ್ಕು** : ಸಮಾಜದಲ್ಲಿ ಈ ಬಗೆಯ ಹಕ್ಕನ್ನು ಮಕ್ಕಳಿಗಾಗಿ ಸಂವಿಧಾನವು ಕೊಡಮಾಡಿದೆ. ಆದರೆ ವಾಸ್ತವದಲ್ಲಿ ಇದು ಜಾರಿಯಲ್ಲಿಲ್ಲ. ಏಕೆಂದರೆ ಮಕ್ಕಳ ಎಲ್ಲಾ ಹಕ್ಕುಗಳನ್ನು ತಂದೆ ತಾಯಂದಿರು ತಮ್ಮದಾಗಿಸಿಕೊಂಡಿದ್ದಾರೆ. ಅವರ ಸರ್ವತೋಮುಖ ಬೆಳವಣಿಗೆಯ ಜವಾಬ್ದಾರಿ ತಂದೆ ತಾಯಂದಿರ ಮೇಲಿರುತ್ತದೆ. ಹಾಗಾಗಿಯೇ ಅವರ ನೆರಳಲ್ಲಿಯೇ ಬೆಳೆಯಬೇಕು ಎಂಬುದು ಅವರ ನಿರೀಕ್ಷೆಯಾಗಿರುತ್ತದೆ. ಮಗು ತಾನು ಯಾವ ಊಟ ಮಾಡಬೇಕು, ಯಾವ ಬಟ್ಟೆಗಳನ್ನು ಹಾಕಿಕೊಳ್ಳಬೇಕು, ಯಾವ ಶಿಕ್ಷಣವನ್ನು ಪಡೆಯಬೇಕು ಎಂಬೆಲ್ಲಾ ವಿಷಯಗಳ ಕುರಿತಾದ ತಮ್ಮ ಭಾವನೆಗಳನ್ನು ಮುಕ್ತವಾಗಿ ವ್ಯಕ್ತಪಡಿಸಲು ಸಾಧ್ಯವಿಲ್ಲದಾಗಿದೆ. ಮಗು ತನಗನಿಸಿದ್ದನ್ನು ಮಾತಿನ ಮೂಲಕ ವ್ಯಕ್ತಪಡಿಸುವ ಹಕ್ಕನ್ನು ಹೊಂದಿದೆ. ಆದರೆ ಈ ಅವಕಾಶವಿರುವುದು ಅವರ ಅರಿವಿಗಿಲ್ಲ. ಆ ಕಾರಣಕ್ಕಾಗಿಯೇ ಬಾಲ್ಯ ವಿವಾಹಗಳ ಸಂಖ್ಯೆಯೂ ಅಧಿಕವಾಗಿರುವುದು ಕಂಡುಬರುತ್ತಿದೆ. ಕುಟುಂಬದಲ್ಲಿ ಹೆಣ್ಣುಮಕ್ಕಳು ತಮ್ಮ ಭಾವನೆಗಳನ್ನು ಮುಕ್ತವಾಗಿ ವ್ಯಕ್ತಪಡಿಸುವ ಹಕ್ಕಿನಿಂದ ದೂರವೇ ಉಳಿಸಲಾಗಿದೆ. ಆದರೆ ಗಂಡುಮಗುವಿನ ವಿಚಾರದಲ್ಲಿ ಹಾಗಿಲ್ಲ. ಏಕೆಂದರೆ, ತನ್ನ ಭಾವನೆಗಳನ್ನು ಮುಕ್ತವಾಗಿ ವ್ಯಕ್ತಪಡಿಸುವಂತಹ ಅಧಿಕಾರವನ್ನು ಹುಟ್ಟಿನಿಂದಲೇ ಪಡೆದಿರುತ್ತಾನೆ. ವಿವಾಹದ ವಿಷಯದಲ್ಲಿ ಹೆಣ್ಣು ಏನನ್ನೂ ಮಾತನಾಡಬಾರದು ಅವಳು ಹಿರಿಯರು ಹೇಳಿದಂತೆ

ಕೇಳಿಕೊಂಡಿರಬೇಕು ಎಂಬುದು ವ್ಯವಸ್ಥೆಯ ನಿರೀಕ್ಷೆಯಾಗಿರುತ್ತದೆ. ಆದರೆ ಗಂಡು ಈ ನಿರೀಕ್ಷೆಗಳನ್ನು ಪೂರೈಸಬಹುದು ಅಥವಾ ನಿರಾಕರಿಸಬಹುದು ಅಂಥ ಅವಕಾಶ ಅವನಿಗೆ ದತ್ತವಾಗಿ ಬಂದಿರುವ ಹಕ್ಕಾಗಿರುತ್ತದೆ. ಇದನ್ನು ವ್ಯವಸ್ಥೆಯು ಮಾನ್ಯ ಮಾಡುತ್ತದೆ. ಮಕ್ಕಳು ತಮ್ಮ ಭಾವನೆಗಳನ್ನು ವ್ಯಕ್ತಪಡಿಸುವುದರಲ್ಲಿ ಈ ಬಗೆಯ ಅಸಮಾನತೆಯ ಅಂಶಗಳು ಕಂಡುಬರುತ್ತವೆ. ಇದು ಕಾನೂನು ಬಾಹೀರವಾದದ್ದು. ಏಕೆಂದರೆ ಮಕ್ಕಳು ತಮ್ಮ ಭಾವನೆಗಳನ್ನು ಮುಕ್ತವಾಗಿ ವ್ಯಕ್ತಪಡಿಸುವಂತಹ ಅವಕಾಶವನ್ನು ಸಂವಿಧಾನ ನೀಡಿದೆ.

ಒಟ್ಟಾರೆಯಾಗಿ ಬಾಲ್ಯ ವಿವಾಹ ಮಾನವ ಹಕ್ಕುಗಳನ್ನು ಸಂಪೂರ್ಣವಾಗಿ ನಿರಾಕರಿಸುತ್ತದೆ ಮತ್ತು ಉಲ್ಲಂಘಿಸುತ್ತದೆ. ಪ್ರಪಂಚದಾದ್ಯಂತ ಬಾಲ್ಯ ವಿವಾಹಗಳು ನಡೆಯುತ್ತಲೇ ಇವೆ. ಇವುಗಳು ಮಕ್ಕಳ ಹಕ್ಕುಗಳನ್ನು ನಿರಾಕರಿಸುವುದರ ಜೊತೆಗೆ ಹೆಣ್ಣುಮಕ್ಕಳನ್ನು ದಾಸ್ಯತ್ವದೆಡೆಗೆ ಕೊಂಡೊಯ್ಯುತ್ತಿವೆ. ಭಾರತದ ಸಂದರ್ಭದಲ್ಲಿ ಇದು ಹೆಚ್ಚಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಮಾನವಹಕ್ಕುಗಳ ಚಳುವಳಿಯು ಆರಂಭವಾದದ್ದು ೧೯೭೦ರಲ್ಲಿ. ಭಾರತದಲ್ಲಿ ಮಾನವ ಹಕ್ಕುಗಳ ಸಂರಕ್ಷಣಾ ಅಧಿನಿಯಮ ೧೯೯೩ರಲ್ಲಿ ಮಾನವ ಹಕ್ಕುಗಳು ಎಂಬುದನ್ನು ಸಂವಿಧಾನದಲ್ಲಿ ಅಥವಾ ಅಂತರಾಷ್ಟ್ರೀಯ ಒಡಂಬಡಿಕೆಗಳಲ್ಲಿ ಜಾರಿಗೊಳಿಸಿತು. ಅಂದಿನಿಂದ ಇಂದಿನವರೆಗೂ ಈ ಬಗೆಯ ಹಕ್ಕುಗಳನ್ನು ರಕ್ಷಿಸಿಕೊಳ್ಳುವಲ್ಲಿ ವ್ಯವಸ್ಥೆ ಸೋತಿರುವುದು ಕಂಡುಬರುತ್ತದೆ. ಮುಖ್ಯವಾಗಿ ಬಾಲ್ಯ ವಿವಾಹಗಳ ಕಾರಣವಾಗಿ ಮಾನವ ಹಕ್ಕುಗಳು ಸಂಪೂರ್ಣವಾಗಿ ನಿರಾಕರಿಸಲ್ಪಟ್ಟಿವೆ. ವ್ಯವಸ್ಥೆಯಲ್ಲಿ ಮಹಿಳೆಯರು ಹೊಂದಿರುವ ಸ್ಥಾನಮಾನಗಳು ಇದನ್ನು ದೃಢೀಕರಿಸುತ್ತವೆ. ಪುರುಷಪ್ರಧಾನ ವ್ಯವಸ್ಥೆ ಕುಟುಂಬದಲ್ಲಿ ಹೆಣ್ಣು ಮಗುವಿನ ಹುಟ್ಟಿನ ಹಕ್ಕನ್ನೇ ಕಿತ್ತುಕೊಳ್ಳುತ್ತದೆ. ಹಾಗಾಗಿಯೇ ಹೆಣ್ಣು ಭ್ರೂಣಹತ್ಯೆಗಳು, ಹೆಣ್ಣುಶಿಶು ಹತ್ಯೆಗಳು ಇಂದಿಗೂ ನಡೆಯುತ್ತಲೇ ಇವೆ. ಇವುಗಳು ಕಡಿಮೆಯಾಗಿವೆ ಎಂದು ಹೇಳಲಾಗುತ್ತಿದೆಯಾದರೂ, ಈ ಬಗೆಯ ಪ್ರಕರಣಗಳು ಅಲ್ಲಲ್ಲಿ ನಡೆಯುತ್ತಲೇ ಇವೆ. ಈ ಆತಂಕಗಳಿಂದ ಮುಕ್ತವಾಗಿ ಬದುಕುಳಿಯುವ ಹೆಣ್ಣು, ನಂತರದಲ್ಲಿ ಸಮಾಜದ ನೀತಿ ನಿಯಮಗಳಿಗೆ ಒಳಗಾಗಬೇಕಾಗುತ್ತದೆ ಮತ್ತು ಪುರುಷ ನಿರ್ಮಿತ ಕಾನೂನಿನಡಿಯಲ್ಲಿಯೇ ಜೀವಿಸಬೇಕಾದ ಅನಿವಾರ್ಯತೆಯನ್ನು ಹೊಂದುತ್ತಾಳೆ. ಅಂದರೆ ತಾನು ಭ್ರೂಣಾವಸ್ಥೆಯಲ್ಲಿ ಇರುವಾಗಲೇ ಸಾವಿನಿಂದ ತಪ್ಪಿಸಿಕೊಂಡು ಬದುಕಿದರೂ, ಬದುಕಿನುದ್ದಕ್ಕೂ ಹಿಂಸೆಯಿಂದ ಮುಕ್ತಿಯನ್ನು ಪಡೆಯುವುದೇ ಇಲ್ಲ. ಹೆಣ್ಣುಮಕ್ಕಳನ್ನು ಹೊರೆಯೆಂದು ಭಾವಿಸುವ ತಂದೆ ತಾಯಂದಿರ ಮನೋಭಾವ, ಮಹಿಳೆಯರ ಹಕ್ಕುಗಳ ಬಗೆಗಿನ ಅಸಡ್ಡೆ, ಸಂಪ್ರದಾಯಗಳನ್ನು, ಪ್ರಚಲಿತವಿರುವ ಮೂಢನಂಬಿಕೆಗಳನ್ನು ಹಾಗೂ ಧಾರ್ಮಿಕ ನಂಬಿಕೆಗಳನ್ನು ಪಾಲಿಸದಿದ್ದರೆ, ಆಚರಿಸದಿದ್ದರೆ ಅಂಥ ಹೆಣ್ಣು ಮಕ್ಕಳನ್ನು ಅವರ ಸಮುದಾಯದಿಂದ ಹೊರಹಾಕುವ ಆಚರಣೆ ಮತ್ತು ಸಂವಿಧಾನ ಬದ್ಧವಾದ ಕಾನೂನುಗಳ ಅರಿವನ್ನು ಹೊಂದದೇ ಇರುವುದು ಇವುಗಳೆಲ್ಲವೂ ಅನಿಷ್ಟ ಪದ್ಧತಿಗಳು ಹೆಚ್ಚಾಗಲು ಕಾರಣವಾಗುತ್ತಿವೆ. ಹಾಗೆಯೇ

ಮಹಿಳೆಯರ ದಾಸ್ಯತ್ವಕ್ಕೆ ಕಾರಣವಾಗುತ್ತಿವೆ. ಮುಖ್ಯವಾಗಿ ಹೆಣ್ಣುಮಕ್ಕಳು ಸಂವಿಧಾನ ದತ್ತವಾದ ಹಕ್ಕುಗಳನ್ನು ಅರಿಯಬೇಕು. ಅದಕ್ಕಾಗಿ ಅವರಿಗೆ ಶಿಕ್ಷಣದ ಅಗತ್ಯತೆ ತುಂಬಾ ಇದೆ. ಹೆಣ್ಣುಮಕ್ಕಳೆಲ್ಲರೂ ಉನ್ನತ ಶಿಕ್ಷಣವನ್ನು ಪಡೆಯುವಂತಾಗಬೇಕು. ಅದಕ್ಕಾಗಿ ವ್ಯವಸ್ಥೆಯ ಮನಸ್ಥಿತಿಗಳು ಬದಲಾಗಬೇಕು. ಹಾಗಾದಾಗ ಮಾತ್ರ ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಬಾಲ್ಯ ವಿವಾಹಗಳ ಸಂಖ್ಯೆ ಕಡಿಮೆಯಾಗುತ್ತವೆ ಮತ್ತು ಮಾನವ ಹಕ್ಕುಗಳ ರಕ್ಷಣೆಯಲ್ಲಿ ಮುನ್ನುಡಿಯಿಟ್ಟಂತಾಗುತ್ತದೆ.

**ಉಲ್ಲೇಖಗಳು**


೧. ಗೀತಾ ಕೃಷ್ಣಮೂರ್ತಿ, ೨೦೦೯, ಮಹಿಳಾ ಹಕ್ಕುಗಳು: ಮಾನವ ಹಕ್ಕುಗಳ ನೆಲೆಯಲ್ಲಿ; ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಶ್ರೀನಿವಾಸ ಕೆ.ಎಚ್.(ಅನು), ೨೦೦೩, ಮಾನವ ಹಕ್ಕುಗಳು: ಒಂದು ಆಕರ ಗ್ರಂಥ, ನ್ಯಾಷಲ್ ಬುಕ್ ಟ್ರಸ್ಟ್, ಇಂಡಿಯಾ.

# ಅಧ್ಯಾಯ ಏಳು

## ಬಾಲ್ಯ ವಿವಾಹ ನಿಷೇಧ : ಶಾಸನಾತ್ಮಕ ಕ್ರಮಗಳು

೭.೧. ವಸಾಹತು ಸಂದರ್ಭದಲ್ಲಿ ಬಾಲ್ಯ ವಿವಾಹ ನಿಷೇಧ : ಶಾಸನಾತ್ಮಕ ಕ್ರಮಗಳು

೭.೨. ವಸಾಹತೋತ್ತರ ಸಂದರ್ಭದಲ್ಲಿ ಬಾಲ್ಯ ವಿವಾಹ ನಿಷೇಧ: ಶಾಸನಾತ್ಮಕ ಕ್ರಮಗಳು

೭.೩. ಆಧುನಿಕೋತ್ತರ ಸಂದರ್ಭದಲ್ಲಿ ಬಾಲ್ಯ ವಿವಾಹ ನಿಷೇಧ : ಶಾಸನಾತ್ಮಕ ಕ್ರಮಗಳು

# ಅಧ್ಯಾಯ ಏಳು

## ಬಾಲ್ಯ ವಿವಾಹ ನಿಷೇಧ : ಶಾಸನಾತ್ಮಕ ಕ್ರಮಗಳು

ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿ ಸಮಾಜದಲ್ಲಿ ಬೇರೂರಿರುವ ಬಾಲ್ಯ ವಿವಾಹ ಪದ್ಧತಿಯನ್ನು ಸಂಪೂರ್ಣವಾಗಿ ನಿಷೇಧಿಸಲು ಹಲವಾರು ಕಾನೂನಾತ್ಮಕ ಪ್ರಯತ್ನಗಳು ನಡೆದವು. ಮುಖ್ಯವಾಗಿ ಬಾಲ್ಯ ವಿವಾಹವು ಮಹಿಳೆಯರ ಎಲ್ಲ ಹಕ್ಕುಗಳನ್ನು ಕಿತ್ತುಕೊಳ್ಳತೊಡಗಿತ್ತು. ಅಂತಹ ಸಂದರ್ಭದಲ್ಲಿ ಈ ಪದ್ಧತಿಯನ್ನು ನಿರ್ಮೂಲನ ಮಾಡಬೇಕೆಂದು ಹಲವಾರು ಪ್ರಯತ್ನಗಳು ನಡೆದವು. ಮುಖ್ಯವಾಗಿ ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದ ಪ್ರಯತ್ನಗಳ ಫಲವಾಗಿ ಇಂದು ಬಾಲ್ಯ ವಿವಾಹ ನಿಷೇಧ ಕಾಯ್ದೆ ಜಾರಿಯಲ್ಲಿದೆ. ಹಾಗಾಗಿ ಈ ಬಗೆಯ ಶಾಸನಾತ್ಮಕ ಪ್ರಯತ್ನಗಳು ಹಲವು ಸಮಾಜ ಸುಧಾರಕರ ಪ್ರಯತ್ನದಿಂದ ಆಗಿರುವುದನ್ನು ಕಾಣಬಹುದು. ಬಾಲ್ಯ ವಿವಾಹ ಪದ್ಧತಿಯನ್ನು ತಡೆಯುವಲ್ಲಿ ನಡೆದ ಶಾಸನಾತ್ಮಕ ಪ್ರಯತ್ನಗಳನ್ನು ಮೂರು ನೆಲೆಗಳಲ್ಲಿ ಗುರುತಿಸಲಾಗಿದೆ. ೧. ವಸಾಹತು ಸಂದರ್ಭ ೨. ವಸಾಹತೋತ್ತರ ಸಂದರ್ಭ ೩. ಆಧುನಿಕೋತ್ತರ ಸಂದರ್ಭ ಈ ಮೂರೂ ಕಾಲಘಟ್ಟಗಳ ಸಂದರ್ಭಗಳಲ್ಲಿ ಬಾಲ್ಯ ವಿವಾಹ ಪದ್ಧತಿಯನ್ನು ನಿರ್ಮೂಲನೆ ಮಾಡಲು ಹಲವು ಶಾಸನಾತ್ಮಕ ಪ್ರಯತ್ನಗಳು ನಡೆದವು. ಅವುಗಳನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

### ೭.೧. ವಸಾಹತು ಸಂದರ್ಭದಲ್ಲಿ ಬಾಲ್ಯ ವಿವಾಹ ನಿಷೇಧ : ಶಾಸನಾತ್ಮಕ ಕ್ರಮಗಳು

ಭಾರತೀಯ ಸಂಸ್ಕೃತಿಯು ಪುರಾತನವಾದದ್ದು, ಆದರ್ಶವಾದದ್ದು, ಜಗತ್ಪ್ರಸಿದ್ಧವಾದದ್ದು ಎಂದು ಗುರುತಿಸಲಾಗುತ್ತದೆ. ಆದರೆ ಈ ಬಗೆಯ ಭವ್ಯ ಪರಂಪರೆಯನ್ನು ಹೊಂದಿರುವಂತಹ ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯರು ಮಾತ್ರ ಆತಂಕಕಾರಿ ಜೀವನವನ್ನು ನಡೆಸುತ್ತಿದ್ದಾರೆ. ವಸಾಹತು ಸಂದರ್ಭಕ್ಕಿಂತ ಪೂರ್ವದಲ್ಲಿ ಧರ್ಮದ ಹೆಸರಿನಲ್ಲಿ ಆಗುತ್ತಿದ್ದ ಅನ್ಯಾಯಗಳು ನಿರಂತರವಾಗಿ ಚಲನೆಯನ್ನು ಹೊಂದಿದ್ದವು. ಹಾಗಾಗಿ ವಸಾಹತು ಸಂದರ್ಭದಲ್ಲಾಗಲೇ ಬಾಲ್ಯ ವಿವಾಹ ಪದ್ಧತಿಯು ವ್ಯವಸ್ಥೆಯಲ್ಲಿ ಬಲಿಷ್ಠವಾಗಿ ಬೇರೂರಿಬಿಟ್ಟಿತ್ತು.

ಈ ಕಾರಣದಿಂದ ಅಂದಿನ ಸಂದರ್ಭದಲ್ಲಿ ಈ ಪದ್ಧತಿಗೆ ಹೊಂದಿಕೊಂಡಂತೆ ಇತರೆ ಓನಾಯ ಪದ್ಧತಿಗಳಾದ ಸತೀ ಸಹಗಮನ ಪದ್ಧತಿ, ವಿಧವಾ ಪದ್ಧತಿ ಜಾರಿಯಲ್ಲಿದ್ದವು. ಬಾಲ್ಯವಿವಾಹ ಪದ್ಧತಿಯು ಜಾರಿಯಲ್ಲಿದ್ದ ಕಾರಣ ಇನ್ನೂ ತನ್ನ ಹೆಸರನ್ನೇ ಸರಿಯಾಗಿ ಉಚ್ಚಾರ ಮಾಡಲು ಬರದ ಸ್ಥಿತಿಯಲ್ಲಿನ ವಯಸ್ಸಿನಲ್ಲಿಯೇ ಹೆಣ್ಣುಮಕ್ಕಳಿಗೆ ವಿವಾಹ ಮಾಡುತ್ತಿದ್ದರು. ಪುರುಷನ ವಯಸ್ಸಿಗೂ ಮತ್ತು ಹೆಣ್ಣುಮಗುವಿನ ವಯಸ್ಸಿಗೂ ಅಜಗಜಾಂತರ ವ್ಯತ್ಯಾಸವಿರುತ್ತಿತ್ತು. ಇವರಿಬ್ಬರಲ್ಲಿ ಹೆಂಡತಿ ತುಂಬಾ ಚಿಕ್ಕವಳಾಗಿರುತ್ತಿದ್ದಳು. ಕೆಲವು ಸಂದರ್ಭಗಳಲ್ಲಿ ಆಕೆ ಯೌವನಾವಸ್ಥೆಯನ್ನು ತಲುಪುವ ಮೊದಲೇ ವಿಧವೆಯಾಗಿರುತ್ತಿದ್ದಳು. ಜೊತೆಗೆ ಗಂಡನ ಚಿತೆಯೊಂದಿಗೆ ತಾನೂ ಚಿತೆಯೇರುತ್ತಿದ್ದಳು. ಇದೊಂದು ಅಮಾನವೀಯ ಪದ್ಧತಿಯಾಗಿತ್ತು. ಜೊತೆಗೆ ಬಾಲ ವಿಧವೆಯರ ಸಂಖ್ಯೆಯೂ ಅಧಿಕವಾಗತೊಡಗಿತ್ತು. ಇದನ್ನು ತಡೆಯಲು ಹತ್ತೊಂಬತ್ತನೆಯ ಶತಮಾನದಲ್ಲಿ ರಾಜಾರಾಮ್ ಮೋಹನ್‌ರಾಯ್, ಈಶ್ವರಚಂದ್ರ ವಿದ್ಯಾಸಾಗರ್, ಜ್ಯೋತಿ ಬಾ ಪುಲೆ, ಬೆಹರಾನ್ ಮಲಬಾರಿ, ರಾನಡೆ ಮುಂತಾದವರು ಬಹಳಷ್ಟು ಶ್ರಮಿಸಿದರು. ಇದಕ್ಕೂ ಪೂರ್ವದಲ್ಲಿ ಸೂತ್ರಗಳ ಕಾಲದಲ್ಲಿಯ ಒಂದು ವೈದ್ಯ ಗ್ರಂಥದಲ್ಲಿ ಸುಶ್ರುತನು ತನ್ನ ಸಂಹಿತೆಯಲ್ಲಿ ಹೀಗೆ ಹೇಳುತ್ತಾನೆ. "ಹುಡುಗಿಯರನ್ನು ಹದಿನಾರನೇ ವಯಸ್ಸಿಗಿಂತ ಮೊದಲು ಮದುವೆ ಮಾಡಬಹುದು. ಆಕೆಗೆ ಆ ವಯಸ್ಸಿಗೆ ಮುಂಚೆ ಮದುವೆಯಾಗಿ ಗರ್ಭಿಣಿಯಾದರೆ ಮಗುವು ಗರ್ಭದಲ್ಲಿ ಸಾಯುತ್ತದೆ. ಹುಟ್ಟಿದರೂ ಬಹಳ ಕಾಲ ಬದುಕುವುದಿಲ್ಲ. ಬದುಕಿದರೂ ರೋಗ ಪೀಡಿತವಾಗಿರುತ್ತದೆ" (ಚಿದಾನಂದಮೂರ್ತಿ ಎಂ., ೨೦೦೨). ಆದರೆ ಧಾರ್ಮಿಕ ಗ್ರಂಥಗಳ ಆರ್ಭಟದಲ್ಲಿ ಈ ಹೇಳಿಕೆ ಮುಖ್ಯವೆನಿಸಲಿಲ್ಲ. ಹಾಗಾಗಿ ಇದರ ಕಡೆಗೆ ಜನರ ಗಮನ ಹರಿಯಲಿಲ್ಲ. ಇಲ್ಲಿ ಸುಶ್ರುತನು ವಿವಾಹದ ವಯಸ್ಸಿನ ಬಗೆಗೆ ಯಾವುದೇ ತಕರಾರರನ್ನು ಎತ್ತುವುದಿಲ್ಲ. ಬದಲಾಗಿ ವಿವಾಹದ ನಂತರ ನಡೆಯುವ ಹೆಣ್ಣುಮಗುವಿನ ಗರ್ಭಾವಸ್ಥೆ ಮತ್ತು ಅದರ ನಂತರದ ಹೆರಿಗೆಯ ಸಂದರ್ಭದಲ್ಲಿನ ಸಮಸ್ಯೆಗಳ ಕುರಿತಾಗಿ ಹೇಳುತ್ತಾನೆ. ಆದರೂ ಆ ಸಂದರ್ಭದಲ್ಲಿ ಇದೊಂದು ಸಂಚಲನವನ್ನು ಸೃಷ್ಟಿಸುವ ಹೇಳಿಕೆಯಾಗಿತ್ತು. ನಂತರ ಮಧ್ಯಯುಗೀನ ಕಾಲದ ಸಂದರ್ಭದಲ್ಲಿ 'ದೀನ್-ಇ-ಇಲಾಹಿ' ಧರ್ಮವನ್ನು ಸ್ಥಾಪಿಸಿದ ಅಕ್ಬರನು ಸರ್ವಧರ್ಮ ಸಹಿಷ್ಣುತೆಯಲ್ಲಿ ತೀವ್ರ ನಿಷ್ಠೆಯಿಂದ ಇದ್ದನು. ಅಕ್ಬರನು ತನ್ನ ಧರ್ಮಕ್ಕೆ ಮತಾಂತರಗೊಳಿಸುವುದಾಗಲೀ, ತನ್ನ ಧರ್ಮವನ್ನು ಇತರರ ಮೇಲೆ ಹೇರುವುದಾಗಲೀ ಮಾಡದೇ ಮಾನವ ಧರ್ಮವನ್ನು ಪ್ರತಿಪಾದಿಸಿದನು. ಹಿಂದೂಗಳಲ್ಲಿದ್ದ ಬಾಲ್ಯವಿವಾಹ ಪದ್ಧತಿಯನ್ನು, ಸತಿ ಪದ್ಧತಿಯನ್ನು ನಿರ್ಮೂಲನೆ ಮಾಡಲು ಪ್ರಯತ್ನಿಸಿದನು ಎಂಬುದಾಗಿ ತಿಳಿದುಬರುತ್ತದೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಸಮಾಜ ಸುಧಾರಕರು ಮಹಿಳೆಯರ ಸುಧಾರಣೆಯ ವಿಷಯವನ್ನು ಕೈಗೆತ್ತಿಕೊಂಡಾಗ ಮೊಟ್ಟ ಮೊದಲು ಅವರ ಗಮನ ಸೆಳೆದದ್ದು ವಿವಾಹ ಸಂಸ್ಥೆ. ಏಕೆಂದರೆ ಈ ವಿವಾಹ ಸಂಸ್ಥೆಯ ಕಾರಣವಾಗಿ ಬಾಲ್ಯ ವಿವಾಹ, ಸತಿ ಸಹಗಮನ ಪದ್ಧತಿ, ವೈಧವ್ಯ ಪದ್ಧತಿಗಳು ತಲೆಯೆತ್ತಿದ್ದವು. ಇವುಗಳನ್ನು ನಿರ್ಮೂಲನೆ

ಮಾಡಬೇಕೆಂದರೆ ಮೊದಲು ವಿವಾಹ ಪದ್ಧತಿಯನ್ನು ಸರಿಪಡಿಸಬೇಕೆಂದು ತೀರ್ಮಾನಿಸಿದರು. ಇವುಗಳಿಗೆ ಪರಿಹಾರವನ್ನು ವಿವಾಹದ ನೆಲೆಯಲ್ಲಿಯೇ ರೂಪಿಸತೊಡಗಿದ್ದರು. ಅಂದರೆ ಬಾಲ್ಯವಿವಾಹ ಸಂಸ್ಥೆಗೆ ಪ್ರೌಢ ವಿವಾಹ, ವಿಧವಾ ಸಮಸ್ಯೆಗೆ ಪುನರ್ ವಿವಾಹ ಇತ್ಯಾದಿ. "ಬಾಲ್ಯ ವಿವಾಹ ಮತ್ತು ಅಸಮ ವಿವಾಹಗಳಿಂದಾಗಿ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಕಿರಿಯ ವಯಸ್ಸಿಗೆ ವಿಧವೆಯರಾಗುತ್ತಿದ್ದ ಮಹಿಳೆಯರು ಅತ್ಯಂತ ದುರ್ಬರವಾದ ಜೀವನವನ್ನು ನಡೆಸಬೇಕಾಗುತ್ತಿತ್ತು. ವ್ಯಕ್ತಿಗತವಾದ ಒಂಟಿತನವಿರಲಿ, ಸಾಮಾಜಿಕ ಸ್ಥಾನಮಾನದ ಕೊರತೆಯಿರಲಿ, ಆರ್ಥಿಕ ಅಭದ್ರತೆಯಾಗಲೀ ಎಂದೂ ಪರಿಹಾರ ಕಾಣಲಾರದ ದುಸ್ಥಿತಿಗಳಾಗಿ ಆಕೆ ಸತಿಯಂತಹ ಆಚರಣೆಯನ್ನು ಸ್ವೀಕರಿಸುವ ಮಟ್ಟಕ್ಕೆ ಬೆಳೆಯುತ್ತಿತ್ತು"(ಉಷಾ ಎಂ, ೨೦೦೪, ಪು–೭೫). ಹೀಗೆ ಅಂದಿನ ಸಂದರ್ಭದಲ್ಲಿ ಬಾಲ್ಯ ವಿವಾಹವು ಮಹಿಳೆಯರ ಮೇಲೆ ಅತ್ಯಂತ ಕೆಟ್ಟ ಪರಿಣಾಮವನ್ನು ಬೀರಿತ್ತು. ಕೆಲವು ಮಹಿಳೆಯರು ಸತಿ ಸಹಗಮನ ಪದ್ಧತಿಗೆ ಮೊರೆ ಹೋದರೆ, ಕೆಲವು ಮಹಿಳೆಯರು ಬಾಲ ವಿಧವೆಯರಾಗಿ ಉಳಿಯುತ್ತಿದ್ದರು. ಹೀಗೆ ಬಾಲ ವಿಧವೆಯರಾದವರ ಸ್ಥಿತಿಯಂತೂ ತುಂಬಾ ಚಿಂತಾಜನಕವಾಗಿರುತ್ತಿತ್ತು. ಸಮಾಜದಲ್ಲಿ ಶ್ರೇಷ್ಠರೆನಿಸಿದ ಪುರುಷರು ತಮ್ಮ ಯಾವುದೇ ವಯಸ್ಸಿನಲ್ಲಿ ಎಷ್ಟಾದರೂ ವಿವಾಹ ಮಾಡಿಕೊಳ್ಳಬಹುದಿತ್ತು. ಇದಕ್ಕಾಗಿ ಆ ಸಂದರ್ಭದಲ್ಲಿ ಇದೊಂದು ಲಾಭದಾಯಕ ವ್ಯಾಪಾರವಾಗಿ ಮಾರ್ಪಟ್ಟಿತ್ತು. ಈ ರೀತಿಯ ಮದುವೆಗಳನ್ನು ಮಾಡಿಸಲು ದಲ್ಲಾಳಿಗಳೂ ಇದ್ದರು. ಹಾಗಾಗಿ ಒಬ್ಬ ಪುರುಷನಿಗೆ ಅನೇಕ ಜನ ಮಹಿಳೆಯರು ಹೆಂಡತಿಯರಾಗಿರುತ್ತಿದ್ದರು. ಒಂದುವೇಳೆ ಗಂಡ ಸತ್ತರೆ ಎಲ್ಲರೂ ವಿಧವೆಯರಾಗುತ್ತಿದ್ದರು. ಇವರಲ್ಲಿ ಹೆಚ್ಚು ಬಾಲ ವಿಧವೆಯರೇ ಇರುತ್ತಿದ್ದರು. ಇದಕ್ಕೆ ಮುಖ್ಯ ಕಾರಣವಾಗಿದ್ದ ಬಾಲ್ಯ ವಿವಾಹ ಪದ್ಧತಿಯನ್ನು ಮೊದಲು ನಿರ್ಮೂಲನೆ ಮಾಡಬೇಕೆಂದು ಸಮಾಜ ಸುಧಾರಕರು ತೀರ್ಮಾನಿಸಿದರು. ಮೊದಲು ಸತೀ ಪದ್ಧತಿಯನ್ನು ನಿಷೇಧಿಸುವುದಕ್ಕಾಗಿ ಒತ್ತಾಯಿಸತೊಡಗಿದರು. ಇದರ ಬೆನ್ನಲ್ಲೇ ವಿಧವಾ ವಿವಾಹದ ಮನ್ನಣೆಗೆ, ಬಾಲ್ಯ ವಿವಾಹದ ನಿಷೇಧಕ್ಕೆ ಒತ್ತಾಯಿಸಿದರು. ಬಾಲ್ಯ ವಿವಾಹದ ನಿಷೇಧದ ಹೊರತು ವಿಧವಾ ಸಮಸ್ಯೆಯನ್ನಾಗಲೀ, ಸ್ತ್ರೀಶಿಕ್ಷಣದ ವಿಚಾರವನ್ನಾಗಲೀ ಕೈಗೆತ್ತಿಕೊಳ್ಳುವುದು ವ್ಯರ್ಥವೆಂದು ಮನಗಂಡರು. ಹಿಂದೂ ಸಮಾಜದ ವಿಧವಾ ಸಮಸ್ಯೆಯ ನೇರ ಕಾರಣವಾಗಿ ಕಂಡುಬಂದ ಬಾಲ್ಯ ವಿವಾಹದ ವಿರುದ್ಧ ಬ್ರಹ್ಮ ಸಮಾಜ ಮತ್ತು ಆರ್ಯ ಸಮಾಜಗಳು ಕಾರ್ಯಾಚರಣೆಗೆ ಇಳಿದವು. ಬ್ರಹ್ಮ ಸಮಾಜವು ಹೆಣ್ಣುಮಕ್ಕಳ ವಿವಾಹ ವಯಸ್ಸನ್ನು ೧೪ಕ್ಕೆ ನಿಗದಿಗೊಳಿಸಿತು. ಈಶ್ವರಚಂದ್ರ ವಿದ್ಯಾಸಾಗರರಂತೂ ವಿಧವಾ ವಿವಾಹಕ್ಕೆ ಹಠ ಹಿಡಿದಂತೆಯೇ ಇದರ ಬಗೆಗೂ ಕಾನೂನುಗೊಳಿಸಲು ತೀವ್ರ ಒತ್ತಡ ತಂದರು. ಪರಿಣಾಮವಾಗಿ ೧೮೬೦ರಲ್ಲಿ ಇಂಡಿಯನ್ ಪೀನಲ್ ಕೋಡ್ ೧೦ ವರ್ಷ ವಯಸ್ಸಿನ ಕೆಳಗಿರುವ ಹೆಂಡತಿಯ ಜೊತೆಗಿನ ಶಾರೀರಿಕ ಸಂಬಂಧವನ್ನು ನಿಷೇಧಿಸಲಾಯಿತು. ೧೮೭೨ರಲ್ಲಿ ದಿ ನೇಟಿವ್ ಮ್ಯಾರೇಜ್ ಆಕ್ಟ್ III ಜಾರಿಗೊಂಡಿತು. ಆ ಸಂದರ್ಭದಲ್ಲಿ ಬಾಲ್ಯ ವಿವಾಹ ನಿಷೇಧಕ್ಕೆ ಸಂಪ್ರದಾಯವಾದಿಗಳ

ವಿರೋಧವೂ ಇತ್ತು. ಆದರೆ ಈ ವಿರೋಧಗಳ ನಡುವೆಯೇ ವಿವಾಹ ವಯಸ್ಸನ್ನು ಜಾರಿಗೊಳಿಸಲಾಗಿತ್ತು. ಮುಖ್ಯವಾಗಿ "ಆ ಸಂದರ್ಭದಲ್ಲಿ ಈ ಎಲ್ಲಾ ವಿವಾದಗಳ ನಡುವೆ ೧೧ ವರ್ಷದ ಹುಡುಗಿಯೊಬ್ಬಳು ಗಂಡನ ಕಾರಣದಿಂದಾಗಿ ಸಾವೀಗೀಡಾದ ಘಟನೆ ಈ ವಿಚಾರವನ್ನು ಇನ್ನೂ ಚುರುಕಾಗಿಸಿತು. ಇದರಿಂದ ಪ್ರಚೋದಿತರಾದ ೫೦೦ ಜನ ವೈದ್ಯರು ವಿವಾಹ ವಯಸ್ಸನ್ನು ೧೪ ವರ್ಷಕ್ಕೆ ನಿಗಧಿಗೊಳಿಸಬೇಕೆಂದು ಸರ್ಕಾರದ ಮೇಲೆ ಒತ್ತಡ ತಂದರು. ಈ ಕುರಿತಂತೆ ೧೮೯೧ರಲ್ಲಿ ಏಜ್ ಆಫ್ ಕನ್ಸೆಂಟ್ ಆಕ್ಟ್‌ಗೆ ತಿದ್ದುಪಡಿ ಕಾಯ್ದೆಯೊಂದನ್ನು ಜಾರಿಗೆ ತರಲಾಯಿತು. ಅದರ ಪ್ರಕಾರ ವಿವಾಹಿತ ಹೆಂಗಸಿನೊಂದಿಗೆ ಶಾರೀರಿಕ ಸಂಬಂಧದ ವಯಸ್ಸು ೧೦ರಿಂದ ೧೨ಕ್ಕೆ ಏರಲ್ಪಟ್ಟಿತು"(ಉಷಾ ಎಂ, ೨೦೦೪, ಪು-೭೬). ನಂತರ ೧೮೯೪ರಲ್ಲಿ ಮೈಸೂರು ರಾಜ್ಯದಲ್ಲಿ ಬಾಲ್ಯ ವಿವಾಹ ನಿಷೇಧ ಕಾಯಿದೆ ಜಾರಿಗೆ ಬಂದಿತು. ೧೯೦೪ರಲ್ಲಿ ಬರೋಡಾ ಸಂಸ್ಥಾನ ಹಾಗೂ ೧೯೧೪ರಲ್ಲಿ ರಾಜಾಸ್ಥಾನ (ಆಗಿನ ಇಂದೋರ್ ಸಂಸ್ಥಾನ) ರಾಜ್ಯಗಳಲ್ಲಿ ಈ ಕಾನೂನು ಜಾರಿಗೆ ಬಂದಿತು. ಹತ್ತೊಂಬತ್ತನೇ ಶತಮಾನದ ಕೊನೆಯಲ್ಲಿ ಬೆಹೆರಾನ್ ಮಲಬಾರಿ ಮತ್ತು ರಾನಡೆಯವರು ಈ ಬಾಲ್ಯ ವಿವಾಹ ಪದ್ಧತಿಯನ್ನು ನಿರ್ಮೂಲನೆ ಮಾಡಲು ಶ್ರಮಿಸಿದರು. ಈ ವಿವಾಹ ಪದ್ಧತಿಯಲ್ಲಿ ೨ ಮುಖ್ಯ ಅಂಶಗಳಿದ್ದವು. ೧. ವಿವಾಹ ಸಮಾರಂಭ ಹುಡುಗಿಯ ಬಾಲ್ಯದ ಯಾವುದೇ ಸಮಯದಲ್ಲಿ ನಡೆಯಬಹುದಾಗಿತ್ತು. ೨. ಗೃಹ ಬಂಧನ ಎಂದರೆ ವೈವಾಹಿಕ ಜೀವನದ ಪ್ರಾರಂಭ. ಇದು ಹುಡುಗಿ ಋತುಮತಿಯಾದ ಹದಿನಾರು ದಿನಗಳೊಳಗೆ ನಡೆಯಬೇಕಿತ್ತು. ಇದಕ್ಕೆ ಒಂದು ತಡೆ ಹಾಕಿದರು. "ಶ್ರೀ ಮಲಬಾರಿಯವರು ನಡೆಸಿದ ಮತ್ತು ನೇತೃತ್ವ ವಹಿಸಿದ್ದ ಆಂದೋಲನ ಮತ್ತೊಂದು ರಾಜಕೀಯ ವಿವಾದಕ್ಕೆ ಕಾರಣವಾಗಿತ್ತು. ಆ ಸಂದರ್ಭದಲ್ಲಿ ಮಲಬಾರಿಯವರ ರಾಜಕೀಯ ವೈರಿಯಾಗಿದ್ದವರು ಬಾಲಗಂಗಾಧರ ತಿಲಕರು. ವಿವಾಹ ಸಮ್ಮತಿ ವಯಸ್ಸಿನ ವಿಧೇಯಕವನ್ನು ವಿರೋಧಿಸುವುದಕ್ಕೆ ತಿಲಕರು ಎರಡು ಕಾರಣಗಳನ್ನು ಮುಂದಿಟ್ಟರು. ಮೊದಲನೆಯದಾಗಿ ಕುಟುಂಬದೊಳಗಿನ ವರ್ತನೆ ಮತ್ತು ಆಚರಣೆಗಳನ್ನು ಬದಲಾಯಿಸುವ ಹಾಗೂ ಹುಡುಗಿ ಪ್ರೌಢಾವಸ್ಥೆಗೆ ಬರುವ ಮುನ್ನ ವೈವಾಹಿಕ ಜೀವನವನ್ನು ಪ್ರಾರಂಭ ಮಾಡಬಾರದೆಂಬ ವಾದವನ್ನು ತಿಲಕರು ಒಪ್ಪಿದರೂ, ಬಾಲ್ಯ ವಿವಾಹ ಪದ್ಧತಿಯನ್ನು ನಿರ್ಮೂಲನ ಮಾಡುವಲ್ಲಿ ಕಾನೂನು ಪರಿಣಾಮಕಾರಿಯಾದ ಅಥವಾ ಸೂಕ್ತವಾದ ಮಾರ್ಗವಾಗುತ್ತದೆಂಬುದರಲ್ಲಿ ಅವರಿಗೆ ನಂಬಿಕೆ ಇರಲಿಲ್ಲ. ಕೇವಲ ಶಿಕ್ಷಣ ಮತ್ತು ಜ್ಞಾನ ಈ ಎರಡು ಮಾತ್ರವೇ ಸಾಮಾಜಿಕ ಬದಲಾವಣೆಯನ್ನು ತರಬಲ್ಲದೆಂದು ತೀವ್ರವಾಗಿ ನಂಬಿದ್ದರು. ಎರಡನೆಯದಾಗಿ ಬ್ರಿಟಿಷರು ಆಡಳಿತವನ್ನು ತಮ್ಮ ಹಕ್ಕನ್ನಾಗಿ ಪರಿವರ್ತಿಸಲು ಕಾನೂನನ್ನು ಸಾಧನವನ್ನಾಗಿ ಬಳಸಿಕೊಳ್ಳುತ್ತಿದ್ದಾರೆಂಬುದು ಅವರ ಅಭಿಪ್ರಾಯವಾಗಿತ್ತು. ತಿಲಕರು ಹಾಗೂ ಇತರ ರಾಷ್ಟ್ರೀಯತಾವಾದಿಗಳು ಬ್ರಿಟಿಷರ ಆಡಳಿತದ ಕಾನೂನು ಸಮ್ಮತಿಯನ್ನು ತಿರಸ್ಕರಿಸಿದರು. ಹಾಗಾಗಿ ಕಾನೂನು ಸುಧಾರಣೆಯ ಎಲ್ಲಾ ಯೋಜನೆಗಳಲ್ಲಿ ಭಾಗವಹಿಸಲು ಅವರು ನಿರಾಕರಿಸಿದರು"(ಗೀತಾ ಕೃಷ್ಣಮೂರ್ತಿ, ೨೦೦೯, ಪು-೧೩೮). ಮಲಬಾರಿಯವರು ಇವರೆಲ್ಲರ

ಹೊರತಾಗಿಯೂ ಹೋರಾಟವನ್ನು ಮುಂದುವರೆಸಿದರು. ಇದರ ಫಲವಾಗಿ ಈ ಹಿಂದೆಯೇ ಹೇಳಿದಂತೆ ಭಾರತ ದಂಡ ಸಂಹಿತೆ ಮತ್ತು ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯನ್ನು ತಿದ್ದುಪಡಿ ಮಾಡಿ ಹುಡುಗಿ ಲೈಂಗಿಕ ಕ್ರಿಯೆಗೆ ಸಮ್ಮತಿ ನೀಡುವ ವಯಸ್ಸನ್ನು ೧೨ ವರ್ಷಗಳಿಗೆ ಏರಿಸಲಾಯಿತು. ಈ ವಯಸ್ಸಿಗಿಂತ ಕಡಿಮೆ ವಯಸ್ಸಿನ ಹುಡುಗಿಯೊಡನೆ ನಡೆಸುವ ಯಾವುದೇ ಲೈಂಗಿಕ ಕ್ರಿಯೆಗೆ ೧೦ ವರ್ಷಗಳ ಕಾರಾವಾಸ ಶಿಕ್ಷೆಯನ್ನು ಮತ್ತು ಜೀವಾವಧಿ ಗಡಿಪಾರು ಶಿಕ್ಷೆಯನ್ನು ವಿಧಿಸಲಾಯಿತು. ತದನಂತರದಲ್ಲಿ ಈ ವಿವಾಹಗಳ ಸಂಖ್ಯೆಯೇನೂ ಕಡಿಮೆಯಾಗಲಿಲ್ಲ. ಬದಲಾಗಿ ಹೆಚ್ಚಾಗತೊಡಗಿದವು. ನಂತರ ೧೯೨೫ರಲ್ಲಿ ಈ ಬಗ್ಗೆ ಚಿಂತನೆ ಆರಂಭವಾಯಿತು. ಇದರ ಪರಿಣಾಮವಾಗಿ ಜೋಷಿ ಕಮಿಟಿಯನ್ನು ರಚಿಸಲಾಯಿತು. ಇದಕ್ಕೆ ಹರಬಿಲಾಸ್ ಸರ್ದಾ ಎಂಬುವವರು ಮುಖ್ಯ ಸ್ಥಾನದಲ್ಲಿದ್ದರು. ಇದು ತನ್ನ ವರದಿಯನ್ನು ನೀಡಿದ ನಂತರ ೧೯೨೯ರಲ್ಲಿ ಸರ್ ದ ಕಾಯಿದೆ ಜಾರಿಗೊಳಿಸಲಾಯಿತು. ಇದರ ಪ್ರಕಾರ ಹೆಣ್ಣು ಮಕ್ಕಳ ವಿವಾಹದ ವಯಸ್ಸನ್ನು ೧೪ಕ್ಕೆ ಹುಡುಗರಿಗೆ ೧೮ ವರ್ಷಕ್ಕೆ ಏರಿಸಲಾಯಿತು. ಈ ಕಾಯಿದೆಯನ್ನು ಬಾಲ್ಯ ವಿವಾಹ (ನಿಷೇಧ) ಅಧಿನಿಯಮ ಎಂದು ಕರೆಯಲಾಗುತ್ತದೆ.

ಈ ಕಾಯಿದೆಯ ಪ್ರಕಾರ ಬಾಲ್ಯ ವಿವಾಹವನ್ನು ಉತೇಜಿಸುವ ಯಾವುದೇ ವ್ಯಕ್ತಿ, ಅಂದರೆ ಮಗುವಿನ ತಂದೆ, ತಾಯಿ, ಪೋಷಕರು, ಮತ್ತು ಇತರೆ ಸಂಬಂಧಪಟ್ಟವರು ಕಾನೂನು ಬದ್ಧವಾದ ಶಿಕ್ಷೆಗೆ ಒಳಗಾಗಬೇಕಾಗುತ್ತದೆ. ಈ ಅಪರಾಧಕ್ಕೆ ಮೂರು ತಿಂಗಳ ಜೈಲುವಾಸ ಅಥವಾ ೧೦೦೦ ರೂಪಾಯಿ ಜುಲ್ಮಾನೆಯನ್ನು ವಿಧಿಸಲಾಗುತ್ತಿತ್ತು. ಆದರೆ ವಿವಾಹ ನೋಂದಣಿಯ ಬಗೆಗೆ ಅಂದರೆ ವಿವಾಹಕ್ಕೆ ಪೂರ್ವದಲ್ಲಿ ಮತ್ತು ವಿವಾಹದ ನಂತರದಲ್ಲಿ ನೋಂದಣಿಯನ್ನು ಮಾಡಿಸುವುದಕ್ಕೆ ಆಧ್ಯತೆಯನ್ನು ನೀಡಲಿಲ್ಲ. ಈ ದೋಷವನ್ನು ಹೊಂದಿದ ಕಾರಣಕ್ಕಾಗಿ ಮತ್ತೆ ೨೦೦೬ರಲ್ಲಿ ಬಾಲ್ಯ ವಿವಾಹ ನಿಷೇಧ ಕಾಯಿದೆಗೆ ತಿದ್ದುಪಡಿಯನ್ನು ತರಲಾಯಿತು. ಹತ್ತೊಂಬತ್ತನೆಯ ಶತಮಾನದ ಸಂದರ್ಭದಲ್ಲಿ ಮೊದಲು ಶಾರೀರಿಕ ಸಂಬಂಧಗಳ ಮೇಲೆ ಒತ್ತಡವನ್ನು ತರಲಾಗಿತ್ತು. ಆದರೆ ಇದರಿಂದ ಬಾಲ್ಯವಿವಾಹಗಳ ಸಂಖ್ಯೆಯೇನೂ ಕಡಿಮೆಯಾಗಲಿಲ್ಲ. ಆ ಕಾರಣಕ್ಕಾಗಿ ವಿವಾಹ ವಯಸ್ಸಿನ ಮೇಲೆ ನಿರ್ಬಂಧವನ್ನು ಹೇರಲಾಯಿತು. ಇದರಿಂದಾಗಿ ಬಾಲ್ಯ ವಿವಾಹದ ಮೇಲೆ ಸ್ವಲ್ಪ ಮಟ್ಟಿಗಿನ ನಿಯಂತ್ರಣವನ್ನು ಸಾಧಿಸಿದಂತಾಯಿತು. ಹೀಗೆ ವಸಾಹತು ಕಾಲಘಟ್ಟದ ಸಂದರ್ಭದಲ್ಲಿ ಬಾಲ್ಯ ವಿವಾಹವನ್ನು ತಡೆಯಲು ಹಲವಾರು ಸಮಾಜ ಸುಧಾರಕರು ಪ್ರಯತ್ನಿಸಿದರು. ಸಮಾಜ ಸುಧಾರಣೆಯ ಉದ್ದೇಶದಿಂದ ಹಲವು ಪತ್ರಿಕೆಗಳು ಜನರನ್ನು ಎಚ್ಚರಿಸುವಂತಹ ಕೆಲಸಗಳನ್ನು ಮಾಡಿದವು. ಮುಖ್ಯವಾಗಿ "ಮಹಾದೇವ ಗೋವಿಂದ ರಾನಡೆಯವರು ನ್ಯಾಷನಲ್ ಸೋಷಲ್ ಕಾನ್ಫರೆನ್ಸ್‌ನ್ನು ಸ್ಥಾಪಿಸಿದರು. ಫಾರಸೀ ಪತ್ರಿಕೆ 'ದಿ ಟೈಮ್ಸ್' ಬಾಲ್ಯ ವಿವಾಹ ಮತ್ತು ವಿಧವಾ ವಿವಾಹದ ಸಂಕಷ್ಟಗಳನ್ನು ಓದುಗರ ಕರುಳು ಮಿಡಿಯುವಂತೆ ಪ್ರಕಟಿಸುತ್ತಿತ್ತು"(ಪ್ರೀತಿ ಶುಭಚಂದ್ರ, ೨೦೦೨, ಪು-೨೬೦). ಹೀಗೆ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಬೇಕೆಂಬ ಮತ್ತು ಮಹಿಳೆಯರ ಸಮಸ್ಯೆಗಳನ್ನು ನಿವಾರಿಸಬೇಕೆಂಬ ನಿಲುವುಗಳನ್ನು ಹೊಂದಿದ ಎಲ್ಲಾ ಸಮಾಜ ಸುಧಾರಕರು

ಒಂದಲ್ಲಾ ಒಂದು ರೀತಿಯಲ್ಲಿ ಶ್ರಮಿಸಿದರು ಮತ್ತು ತಮ್ಮ ಕಾಣಿಕೆಯನ್ನು ನೀಡಿದರು. ಬಾಲ್ಯ ವಿವಾಹ ಪದ್ಧತಿಯನ್ನು ವಸಾಹತು ಸಂದರ್ಭದಲ್ಲಿ ಬ್ರಿಟಿಷರು ಮತ್ತು ಅಂದಿನ ಸಮಾಜ ಸುಧಾರಣಾವಾದಿಗಳು ನೋಡಿದ ಬಗೆ ತುಂಬಾ ಭಿನ್ನವಾಗಿದೆ. "ವಸಾಹತು ಆಡಳಿತ ಸಂದರ್ಭದಲ್ಲಿ ಸತಿನಿಷೇಧ, ಬಾಲ್ಯ ವಿವಾಹ ನಿಷೇಧ, ವಿಧವಾ ವಿವಾಹಕ್ಕೆ ಸಂಬಂಧಿಸಿದಂತೆ ಕಾನೂನುಗಳು ಬಂದರೂ, ಇವಾವುಗಳು 'ಕೌಟುಂಬಿಕ ದೌರ್ಜನ್ಯ'ಗಳೆಂದು ಪರಿಗಣಿತವಾಗಲಿಲ್ಲ; ಬದಲಾಗಿ 'ಸಾಮಾಜಿಕ ಸಮಸ್ಯೆ'ಗಳೆಂದು ಗುರುತಿಸಲ್ಪಟ್ಟವು. ಬ್ರಿಟಿಷರು ಬಾಲ್ಯ ವಿವಾಹ, ಸತಿಪದ್ಧತಿ, ವಿಧವಾ ಪದ್ಧತಿ ಮೊದಲಾದವುಗಳನ್ನು 'ಕೌಟುಂಬಿಕ ಸಮಸ್ಯೆ'ಗಳೆಂದು ಗುರುತಿಸಿದ್ದರೆ ಅವರು ಭಾರತದಲ್ಲಿ ಆಡಳಿತ ನಡೆಸಲು ಸಾಧ್ಯವಾಗುತ್ತಿರಲಿಲ್ಲ. ಕುಟುಂಬಗಳನ್ನು 'ಸಾಂಸ್ಕೃತಿಕ ಸ್ಥಾನ'ಗಳೆಂದು ಭಾರತೀಯರು ಭಾವಿಸಿದ್ದರು. ಹೀಗಾಗಿ ಬ್ರಿಟಿಷರು ಈ 'ಸಾಂಸ್ಕೃತಿಕ ಸ್ಥಾನ'ಗಳಿಗೆ ಪ್ರವೇಶಿಸುವುದು ಅಷ್ಟು ಸುಲಭವಾಗಿರಲಿಲ್ಲ. ವಿಧವಾ ಸಮಸ್ಯೆ, ಸತಿ ಸಮಸ್ಯೆಗಳನ್ನು ಕೌಟುಂಬಿಕ ನಂಟಿನಿಂದ ಬಿಡಿಸಿ ಸಾಮಾಜಿಕ ಸ್ತರಕ್ಕೆ ತರಲಾಯಿತು. ಮಹಿಳೆಯರ ಮೇಲಿನ ಕೌಟುಂಬಿಕ ದೌರ್ಜನ್ಯಗಳನ್ನು ಸಾಮಾಜಿಕ ನೆಲೆಯಲ್ಲಿ ತರುವ ಹಾಗೂ ನೋಡುವ ಪ್ರಕ್ರಿಯೆಯನ್ನು ಬಹುದೊಡ್ಡ ಪಲ್ಲಟವೆಂದೇ ನೋಡಲಾಗುತ್ತದೆ. ಮಹಿಳಾ ಪ್ರಶ್ನೆಗಳಿಗೆ ನ್ಯಾಯ ಸಿಕ್ಕಿದೆಯೆಂದು ಭಾವಿಸಲಾಗುತ್ತದೆ" (ಶೈಲಜ ಹಿರೇಮಠ, ೨೦೧೬, ಪು-೪೧). ಹೀಗೆ ಅಂದಿನ ಸಂದರ್ಭದಲ್ಲಿ ಕುಟುಂಬದ ಒಳಗಿನ ಸಮಸ್ಯೆಯನ್ನು ಸಾಮಾಜಿಕ ಸ್ತರದಲ್ಲಿಟ್ಟು ನೋಡಿದ್ದರಿಂದಾಗಿ, ಮಹಿಳಾ ಸಮಸ್ಯೆಯ ಪ್ರಶ್ನೆ ವಿಸ್ತಾರವನ್ನು ಪಡೆದುಕೊಂಡಿತು. ಆದರೆ ಬಾಲ್ಯ ವಿವಾಹಕ್ಕೆ ಒಳಗಾಗಿ ತಾನು ಹುಟ್ಟಿದ ಕುಟುಂಬವನ್ನು ತೊರೆದು ಬೇರೊಂದು ಕುಟುಂಬವನ್ನು ಸೇರುವ ಮಹಿಳೆಯರ ಸಮಸ್ಯೆಗಳು ಮಾತ್ರ ಹಾಗೇ ಉಳಿದುಬಿಟ್ಟವು. ಈ ವಿವಾಹ ಪದ್ಧತಿಯನ್ನು ಕುಟುಂಬ ಚೌಕಟ್ಟಿಗೆ ತರದೇ ಇರುವುದಕ್ಕೆ ಕಾರಣವೂ ಇದೆ. "ಕೌಟುಂಬಿಕ ಸಮಸ್ಯೆಗಳನ್ನು ಕುಟುಂಬದ ನೆಲೆಗಟ್ಟಿನಲ್ಲಿಯೇ ನೋಡುವುದರಿಂದ ಈಗಾಗಲೇ ಬಿಂಬಿಸಿದ ಹಾಗೂ ನಂಬಿಸಿದ 'ಹೆಣ್ಣುಮಕ್ಕಳ ಸುರಕ್ಷಾ ಸ್ಥಾನ ಕುಟುಂಬ' ಎನ್ನುವ ನಂಬಿಕೆಯೇ ಬಿದ್ದು ಹೋಗುತ್ತದೆ. ಕೌಟುಂಬಿಕ ದೌರ್ಜನ್ಯಗಳನ್ನು ಅನಾವರಣಗೊಳಿಸಿದರೆ ಹೆಣ್ಣುಮಕ್ಕಳು ವಿವಾಹದಂತಹ ಸಂಬಂಧಗಳನ್ನು ನಿರಾಕರಿಸುವ ಪ್ರಕ್ರಿಯೆಗೆ ಚಾಲನೆ ದೊರೆಯುತ್ತದೆ. ಆದರೆ ಭಾರತೀಯರು ಕುಟುಂಬಗಳನ್ನು ಸಾಂಸ್ಕೃತಿಕ ಸ್ಥಾನಗಳೆಂದು ನಂಬಿದ್ದಾರೆ. 'ಕುಟುಂಬಗಳು ದೌರ್ಜನ್ಯಗಳ ಸ್ಥಾನಗಳು' ಎನ್ನುವುದು ಸಾಬೀತಾದರೆ ಈಗಾಗಲೇ ನಂಬಿಸಿ, ಬಿಂಬಿಸಿ ವಿಸ್ತರಿಸಿದ 'ಕುಟುಂಬಗಳು ಸಾಂಸ್ಕೃತಿಕ ಸ್ಥಾನಗಳು' ಎನ್ನುವ ಬಹುದೊಡ್ಡ ಭಾರತೀಯ ತಾತ್ವಿಕತೆ ತಂತಾನೇ ನಿರಚನಗೊಳ್ಳುತ್ತದೆ. ಇದರ ಪರಿಣಾಮ ನೇರವಾಗಿ ಕುಟುಂಬದ ಮೇಲಾಗುತ್ತದೆ; ಕುಟುಂಬಗಳು ಕರಗುತ್ತವೆ; ಭಾರತೀಯ ಪುರುಷರಿಗೆ ಅತಂತ್ರತೆ, ನಡುಕ, ಅನಾಥತೆ ಶುರುವಾಗುತ್ತದೆ. ಹೀಗಾಗಿಯೇ ಬ್ರಿಟಿಷರು ಭಾರತೀಯರ ಕೌಟುಂಬಿಕ ಸಮಸ್ಯೆಗಳನ್ನು ಸಾಮಾಜಿಕ ನೆಲೆಗೆ ಕೊಂಡೊಯ್ದರು; ಅದಕ್ಕಾಗಿ ಮಾನವಿಕ ವಿಜ್ಞಾನಗಳ ದೃಷ್ಟಿಕೋನಗಳನ್ನು ಬಳಸಿಕೊಂಡರು. ತಮ್ಮ ಆಡಳಿತಕ್ಕೆ, ತಮ್ಮ ಅಸ್ತಿತ್ವಕ್ಕೆ ಧಕ್ಕೆ

ಬರಬಾರದೆಂದೆ ಎಲ್ಲಾ ಕೌಟುಂಬಿಕ ಸಮಸ್ಯೆಗಳನ್ನು ಸಾಮಾಜಿಕ ನೆಲೆಗೆ ತಂದು ಮಾತನಾಡಿದರು. ಬ್ರಿಟಿಷರ ಈ ತಂತ್ರದಿಂದಾಗಿ ಭಾರತದಲ್ಲಿ ಅನೇಕರು ಮಹಿಳಾ ಸಮಸ್ಯೆಗಳಿಗೆ ಸ್ಪಂದಿಸಲು ಸಾಧ್ಯವಾಯಿತು. ಹೀಗಾಗಿ ಭಾರತೀಯರು ಬ್ರಿಟಿಷರು ಗುರುತಿಸಿದ 'ಮಹಿಳಾ ಸಮಸ್ಯೆ'ಗಳನ್ನು ಒಪ್ಪಿಕೊಂಡು ಅವರ ಆಲೋಚನೆಗಳಿಗೆ ಕ್ರಿಯಾತ್ಮಕ ಚಾಲನೆ ನೀಡಿದರು. ಆದರೆ ಇವುಗಳಿಗೆ ಸಮಾಜ ಸುಧಾರಣೆಯ ಸ್ಪರ್ಶ ಮಾತ್ರವೇ ಇತ್ತು; ಕುಟುಂಬದೊಳಗಡೆ ಮಹಿಳೆಯ ಮೇಲೆ ನಡೆಯುವ ಹಿಂಸೆಗಳನ್ನು ಕಡಿಮೆ ಮಾಡುವ ಇಲ್ಲವೆ, ಸಂಪೂರ್ಣ ತೊಡೆದುಹಾಕುವ ಉದ್ದೇಶ ಇರಲಿಲ್ಲ. ಮಹಿಳೆಯ ವಿವಾಹ ವಿಚ್ಛೇದನ ಹಕ್ಕಿಗೆ ಸಂಬಂಧಿಸಿದಂತೆ ೧೮೭೩ರಲ್ಲಿ ವಿಶೇಷ ವಿವಾಹ ಕಾಯಿದೆಯು ಒಪ್ಪಿಗೆ ಸೂಚಿಸಿತು. ಆದರೆ ವಿಚ್ಛೇದನೆಗೆ ಸಂಬಂಧಿಸಿದಂತೆ ಮಹಿಳೆಗಿರುವ ಹಕ್ಕಿನ ಕುರಿತು ಯಾವ ಬಗೆಯ ಚರ್ಚೆಯು ನಡೆಯಲಿಲ್ಲ ಎಂಬುದು ಗಮನಾರ್ಹ. ಬದಲಾಗಿ ಬಾಲ್ಯ ವಿವಾಹ ಹಾಗೂ ವಿಧವಾ ವಿವಾಹವನ್ನು ಕೇಂದ್ರಕ್ಕೆ ತೆಗೆದುಕೊಂಡು ಮದುವೆಯ ವಯಸ್ಸು ಹಾಗೂ ಪುನರ್ ವಿವಾಹಕ್ಕೆ ಸಂಬಂಧಿಸಿದಂತೆ ಚರ್ಚೆ ಬೆಳೆಸಿತು. ಅಂದರೆ ವಸಾಹತುಶಾಹಿಗಳು ಮಹಿಳಾ ಪರ ಎಂದು ರೂಪಿಸಿದ ಕಾನೂನುಗಳು ಕೂಡ 'ಮಹಿಳೆಗೆ ವಿವಾಹ ಆತ್ಯಂತಿಕ' ಎಂದೇ ನೋಡುತ್ತವೆ" (ಶೈಲಜ ಹಿರೇಮಠ, ೨೦೧೬, ಪು-೪೧). ಹೀಗೆ ವಸಾಹತು ಸಂದರ್ಭದಲ್ಲಿ ಭಾರತೀಯ ಸಾಂಸ್ಕೃತಿಕ ಕೇಂದ್ರವಾದ ಕುಟುಂಬಕ್ಕೆ ಯಾವುದೇ ಧಕ್ಕೆ ಬಾರದಂತೆ ಬ್ರಿಟಿಷರು ನಡೆದುಕೊಂಡರು. ಹಾಗಾಗಿಯೇ ಬಾಲ್ಯ ವಿವಾಹವು ಸಾಮಾಜಿಕವಾಗಿ ಗುರುತಿಸಿಕೊಂಡಿತು. ಜೊತೆಗೆ ಈ ವಿವಾಹಗಳ ನಿಷೇಧಕ್ಕೆ ಸಾಮಾಜಿಕವಾಗಿ, ಸಂಪ್ರದಾಯವಾದಿಗಳ ವಿರೋಧಗಳಿದ್ದರೂ ಮನ್ನಣೆ ದೊರೆಯಿತು. ಆದರೆ ಬ್ರಿಟಿಷರಿರಬಹುದು ಅಥವಾ ಸಮಾಜ ಸುಧಾರಣವಾದಿಗಳಿರಬಹುದು ಇವರೆಲ್ಲರೂ ಮಹಿಳೆಗೆ ವಿವಾಹವೇ ಅಂತಿಮ ಎಂಬುದನ್ನು ಸ್ಪಷ್ಟಪಡಿಸುತ್ತಾ, ಗಟ್ಟಿಗೊಳಿಸುತ್ತಾ ನಡೆದರು.

ವಸಾಹತು ಸಂದರ್ಭದಲ್ಲಿ ಬ್ರಿಟೀಷರು ಮಹಿಳೆಯರ ವಿಷಯಗಳಿಗೆ ಸಂಬಂಧಿಸಿದಂತೆ ದ್ವಿಮುಖ ನೀತಿಯನ್ನು ಅನುಸರಿಸುತ್ತಿದ್ದರು. ಇದಕ್ಕೆ ಪ್ರಮುಖ ಉದಾಹರಣೆಯೆಂದರೆ ರುಕ್ಮಾಬಾಯಿ ಪ್ರಕರಣ. ರುಕ್ಮಾಬಾಯಿ ಮಹಾರಾಷ್ಟ್ರದ ಪತಾರೆ ಜಾತಿಗೆ ಸೇರಿದ ಸುಧಾರಿತ ಕುಟುಂಬದ ಹೆಣ್ಣುಮಗಳಾಗಿದ್ದಳು. ಈಕೆಗೆ ೧೧ನೆಯ ವಯಸ್ಸಿನಲ್ಲಿ ಬಾಲ್ಯ ವಿವಾಹಮಾಡಲಾಗಿತ್ತು. ಅಂದಿನ ವಿವಾಹ ಆಚರಣೆಗಳಂತೆ ವಿವಾಹಿತಳಾದರೂ, ಪ್ರೌಢಳಾಗುವವರೆಗೆ ತಂದೆಯ ಮನೆಯಲ್ಲಿ ಉಳಿದ ರುಕ್ಮಾಭಾಯಿ ತನ್ನ ತಂದೆಯ ಪ್ರೋತ್ಸಾಹದಿಂದ ವಿದ್ಯಾಭ್ಯಾಸ ಮುಂದುವರೆಸಿದಳು. ಪ್ರೌಢಳಾದ ನಂತರ ತನ್ನ ಅನಕ್ಷರಸ್ಥ ಹಾಗೂ ಪರಾಧಿನ ಪತಿಯೊಂದಿಗೆ ಆಕೆ ಜೀವಿಸಲು ನಿರಾಕರಿಸಿದಾಗ ಅಂತಿಮವಾಗಿ ಅದು ೧೮೮೪ರಲ್ಲಿ ನ್ಯಾಯಾಲಯ ಪ್ರವೇಶಿಸಿತ್ತು.

"ರುಕ್ಮಾಬಾಯಿ ಅವೈಧಿಕ ಕುಟುಂಬಕ್ಕೆ ಸೇರಿದ್ದರಿಂದ ಆಕೆಯ ಮೇಲೆ ಪಂರಂಪರಾಗತವಾಗಿ ವೈಧಿಕ ಮೌಲ್ಯವನ್ನು ಹೇರಲಾಗದಿದ್ದರೂ, ಅಂದು ವೈಧಿಕತೆಯನ್ನು ಭಾರತೀಯ ಮೌಲ್ಯವಾಗಿ ಪ್ರಮಾಣೀಕರಿಸುವ ಪ್ರಕ್ರಿಯೆ ನಡೆಯುತ್ತಿದ್ದರಿಂದ ಸಹಜವಾಗಿಯೇ

ಈ ವಿಚಾರದಲ್ಲಿ ಒತ್ತಡ ನಿರ್ಮಾಣವಾಗಿ ಎರಡು ಗುಂಪುಗಳಾದವು. ಅದರಲ್ಲಿ ರುಕ್ಮಾಬಾಯಿಯ ತೀರ್ಮಾನವನ್ನು ವಿರೋಧಿಸುವ ಸಂಪ್ರದಾಯವಾದಿಗಳ ಗುಂಪನ್ನು ಪ್ರೊ.ಬಾಲಗಂಗಾಧರ ತಿಲಕ್, ರಾವ್ ಬಹದ್ದೂರ್, ವಿ.ಎ.ಮಾಂಡಲೀಕ್‌ರವರು ಮುನ್ನೆಡೆಸಿದರೆ, ರುಕ್ಮಾಬಾಯಿಯ ಪರವಾಗಿ ರಾವ್ ಬಹದ್ದೂರ್ ಮಹದೇವ ಗೋವಿಂದ ರಾನಡೆ, ಡಾ.ಆರ್.ಜಿ.ಭಂಡಾರ್‌ಕರ್ ಮತ್ತು ಪ್ರೊ.ಗೋಪಾಲ್ ಗಣೇಶ್ ಅಗರ್‌ಕರ್ ವಹಿಸಿದರು. ದೇಶೀ ಜನತೆಯ ಈ ಪ್ರಭಾವಶಾಲಿ ಒತ್ತಡದಲ್ಲಿ ಬ್ರಿಟಿಷ ಸರ್ಕಾರ ತನ್ನ ತೀರ್ಮಾನವನ್ನು ರೂಪಿಸಬೇಕಾಯಿತು. ರುಕ್ಮಾಬಾಯಿಯ ವಿಷಯ ನ್ಯಾಯಾಲಯದ ಮೆಟ್ಟಿಲೇರಿದ ಸುಮಾರು ನಾಲ್ಕು ವರ್ಷಗಳ ವಿಚಾರಣೆಯ ನಂತರ ೧೮೮೮ರಲ್ಲಿ ಬಾಂಬೆ ಹೈಕೋರ್ಟ್ ಆಕೆಯ ಗಂಡನ ಪರವಾಗಿ ತೀರ್ಪಿತ್ತಿತು. ಆಕೆ ತನ್ನ ವಿವಾಹ ಸ್ಥಿತಿಯನ್ನು ಉಳಿಸಿಕೊಳ್ಳಬೇಕೆಂದು, ಇಲ್ಲದಿದ್ದರೆ ಆರು ತಿಂಗಳ ಸೆರೆವಾಸವನ್ನು ಅನುಭವಿಸಬೇಕೆಂದು ವಿಧಿಸಿತು. ರುಕ್ಮಾಭಾಯಿ ಅಪ್ರಾಪ್ತ ವಯಸ್ಸಿನಲ್ಲಿ ಘಟಿಸಿದ ತನ್ನ ವಿವಾಹವನ್ನು ಅಸಿಂಧುಗೊಳಿಸಬೇಕೆಂದು ವಾದಿಸಿದಳಾದರೂ ಅದು ಈಡೇರಲಿಲ್ಲ. ಕೊನೆಗೆ ಆಕೆ ಸೆರೆವಾಸವನ್ನು ಅನುಭವಿಸಲು ಸಿದ್ಧಳಾದಾಗ ಅವಳ ಗಂಡ ಎರಡು ಸಾವಿರ ರೂಪಾಯಿಗಳನ್ನು ರುಕ್ಮಾಬಾಯಿಯಿಂದ ಪಡೆಯುವ ಮೂಲಕ ತನ್ನ ಮೊಕದ್ದಮೆಯನ್ನು ಹಿಂತೆಗೆದುಕೊಂಡ. ವ್ಯಕ್ತಿಗತವಾಗಿ ಇಬ್ಬರೂ ದೂರವಾದರೂ, ಕಾನೂನಿನ ದೃಷ್ಟಿಯಲ್ಲಿ ರುಕ್ಮಾಬಾಯಿ ಕೊನೆಯವರೆಗೂ ಆತನ ಪತ್ನಿಯಾಗಿಯೇ ಉಳಿದಳು. ಈ ಘಟನೆ ನಡೆದ ಒಂದು ವರ್ಷದೊಳಗೆ ಆಕೆಯ ಗಂಡನ ಪುನರ್ ವಿವಾಹ ನಡೆದರೂ ರುಕ್ಮಾಬಾಯಿ ಮಾತ್ರ ಒಂಟಿಯಾಗಿದ್ದು, ತನ್ನ ವಿವಾಹ ಸ್ಥಿತಿಯನ್ನು ಉಳಿಸಿಕೊಳ್ಳಬೇಕಾಯಿತು"(ಉಷಾ ಎಂ.೨೦೦೪,ಪು-೨೭). ಬ್ರಿಟಿಷ್ ಸರ್ಕಾರ ಈ ವಿಷಯದಲ್ಲಿ ಮಹಿಳಾ ಪರವಾದ ಯಾವುದೇ ನಿಲುವನ್ನು ತೋರಿಸದೇ ಇರುವುದನ್ನು ಕಾಣಬಹುದು. ಹೀಗೆ ಬ್ರಿಟೀಷರು ಭಾರತೀಯ ಸಂಸ್ಕೃತಿಯ ವಿರುದ್ಧ ಮಾತನಾಡಲು ಹಿಂಜರಿಕೆಯನ್ನು ಅನುಭವಿಸಿತು. ಮುಖ್ಯವಾಗಿ ಭಾರತೀಯ ಸಂಸ್ಕೃತಿಯ ಮುಂದುವರಿಕೆಯ ಭಾಗವಾಗಿರುವ ವಿವಾಹ ಪದ್ಧತಿಯ ವಿರುದ್ಧ ಮಾತನಾಡಿದರೆ, ತಮ್ಮ ಆಡಳಿತಕ್ಕೆ ಧಕ್ಕೆ ಒದಗುತ್ತದೆ ಎಂಬ ನಿಲುವಿನಿಂದಾಗಿ ಸಂಪ್ರದಾಯವಾದಿಗಳ ಪರವಾಗಿ ತೀರ್ಪುಗಳನ್ನು ಕೊಡುತ್ತಾ ಬಂದಿತು. ಕೆಲವು ಸಂದರ್ಭದಲ್ಲಿ ಮಾನವೀಯ ದೃಷ್ಟಿಯಿಂದಲೂ ಭಾರತೀಯ ಜನರನ್ನು ನಡೆದುಕೊಂಡಿದೆ. ಆದರೆ ಭಾರತೀಯ ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರದಂತಹ ವಿಷಯಗಳಲ್ಲಿ ಬಹಳಷ್ಟು ಸಲ ಮೌನವಹಿಸಿರುವುದು ತಿಳಿದುಬರುತ್ತದೆ.

ಇದೇ ರೀತಿಯ ಇನ್ನೊಂದು ಪ್ರಕರಣ ಗಂಡು ಮತ್ತು ಹೆಣ್ಣಿನ ನಡುವಿನ ಲೈಂಗಿಕತೆಯ ವಯಸ್ಸಿನ ಅಂತರವನ್ನು ಹೆಚ್ಚಿಸಿದ್ದಾಗಿದೆ. ಇದರಲ್ಲಿ "ಫುಲ್ಮೊನಿ ಪ್ರಕರಣ"ವು ಅತ್ಯಂತ ಮಹತ್ವದ ಸ್ಥಾನವನ್ನು ಪಡೆದುಕೊಳ್ಳುತ್ತದೆ. ಫುಲ್ಮೊನಿಗೆ ೧೧ ವರ್ಷ ೩ ತಿಂಗಳು ವಯಸ್ಸಾಗಿದ್ದಾಗ ಬಾಲ್ಯ ವಿವಾಹವನ್ನು ಮಾಡಲಾಗಿದ್ದು, ಇದೇ ವಯಸ್ಸಿನಲ್ಲಿ ಮರಣವನ್ನಪ್ಪಿದ್ದಾಳೆ. ಮುಖ್ಯವಾಗಿ ವಿವಾಹವಾದ ಪತಿಯು ಫುಲ್ಮೊನಿಗೆ ಇಷ್ಟವಿಲ್ಲದಿದ್ದರೂ ಒತ್ತಾಯ ಪೂರ್ವಕವಾಗಿ ತನ್ನ ಲೈಂಗಿಕ

ತೃಷೆಯನ್ನು ಈಡೇರಿಸಿಕೊಂಡಿದ್ದಾನೆ. ಇದರಿಂದ ತುಂಬಾ ನೋವನ್ನು ಅನುಭವಿಸಿ ಫುಲ್ಮೋನಿ ಸಾವನ್ನಪ್ಪಿದ್ದಾಳೆ. ಈ ವಿಷಯ ಇಡೀ ದೇಶದ ತುಂಬೆಲ್ಲಾ ಹರಡಿ ಸಂಚಲನವನ್ನೇ ಮೂಡಿಸಿತ್ತು. ಇದು ಕೋರ್ಟ್ ಮೆಟ್ಟಿಲೇರಿ ಆಕೆಯ ಗಂಡನನ್ನು ಕೊಲೆಯ ಆರೋಪದ ಮೇಲೆ ಬಂಧಿಸಲಾಯಿತು. ಇದು ಇಲ್ಲಿಗೇ ನಿಲ್ಲದೇ ಹೆಣ್ಣಿನ ಲೈಂಗಿಕತೆಯ ವಯಸ್ಸನ್ನು ಹೆಚ್ಚಿಸುವಲ್ಲಿಗೆ ಮುಂದುವರೆಯಿತು. ಈ ಕಾರಣವಾಗಿ ೧೮೬೦ರಲ್ಲಿ ೧೦ ವರ್ಷಕ್ಕಿಂತ ಮುಂಚಿತವಾಗಿ ಲೈಂಗಿಕತೆಯಲ್ಲಿ ತೊಡಗುವುದು ಅಪರಾಧ ಅದನ್ನು ರೇಪ್ ಎಂದು ಪರಿಗಣಿಸಲಾಗಿತ್ತು. ನಂತರ ಈ ವಯಸ್ಸನ್ನು ೧೮೯೧ರಲ್ಲಿ ೧೨ ವರ್ಷಗಳಿಗೆ ಏರಿಸಲಾಯಿತು. ೧೯೨೫ರಲ್ಲಿ ೧೩ ವರ್ಷಕ್ಕೆ, ೧೯೪೯ರಲ್ಲಿ ೧೫ ವರ್ಷಗಳಿಗೆ ಮತ್ತು ಅಂತಿಮವಾಗಿ ೧೯೭೮ರಲ್ಲಿ ೧೮ ವರ್ಷಕ್ಕೆ ಏರಿಸಲಾಯಿತು. ಇಂದಿಗೂ ಇದೇ ಮುಂದುವರೆದಿದೆ. ೧೮ ವರ್ಷಕ್ಕಿಂತ ಮುಂಚಿತವಾಗಿ ಯಾವುದೇ ಗಂಡು ಅಥವಾ ಹೆಣ್ಣು ಲೈಂಗಿಕತೆಯಲ್ಲಿ ತೊಡಗಿದರೆ ಅದು ಅಪರಾಧವೆನಿಸಿಕೊಳ್ಳುತ್ತದೆ. ಹೀಗೆ ಫುಲ್ಮೋನಿ ಪ್ರಕರಣದ ನಂತರ ಹಲವಾರು ಬದಲಾವಣೆಗಳು ನಡೆದವು. ಮುಖ್ಯವಾಗಿ ಬಾಲ್ಯ ವಿವಾಹದಿಂದಾಗಿ ಹೆಣ್ಣುಮಗುವಿನ ಮೇಲೆ ನಡೆಯುವ ಇಂತಹ ಲೈಂಗಿಕ ಹಲ್ಲೆಗಳು ಇಂದಿಗೂ ನಡೆಯುತ್ತಲೇ ಇವೆ. ಇವುಗಳು ಕುಟುಂಬದ ಆಚೆಗೆ ಬಂದು ತೆರೆದುಕೊಳ್ಳುವುದಿಲ್ಲವಷ್ಟೇ. ಆದರೆ ಬಾಲ್ಯ ವಿವಾಹಕ್ಕೆ ಒಳಗಾದ ಪ್ರತಿಯೊಂದು ಹೆಣ್ಣುಮಗುವೂ ಕುಟುಂಬದಲ್ಲಿ ಲೈಂಗಿಕ ಹಲ್ಲೆಯನ್ನು ಅನುಭವಿಸುತ್ತಲೇ ಇರುತ್ತಾಳೆ. "ದಾಂಪತ್ಯ ಚೌಕಟ್ಟಿನಲ್ಲಿ ನಡೆಯುವ ಅತ್ಯಾಚಾರದ ಪ್ರಶ್ನೆಯನ್ನು ಭಾರತೀಯರು ಗಂಭೀರವಾಗಿಯೇ ಪರಿಗಣಿಸಿಲ್ಲ; ಯಾಕೆಂದರೆ ಇಲ್ಲಿ ಅತ್ಯಾಚಾರದ ಪ್ರಶ್ನೆಯೇ ಬರುವುದಿಲ್ಲ ಎನ್ನುವುದು ಅವರ ಖಚಿತ ನಿಲುವು. 'ಅತ್ಯಾಚಾರ' ಎನ್ನುವ ಪರಿಕಲ್ಪನೆ ಭಾರತಕ್ಕೇನೂ ಹೊಸದಲ್ಲ. ವಸಾಹತುಶಾಹಿ ಈ ಪರಿಕಲ್ಪನೆಯನ್ನು ಭಾರತದ ಸಾಮಾಜಿಕ ಸಂದರ್ಭವನ್ನು ಅನುಲಕ್ಷಿಸಿ ಅನ್ವಯಿಸಿದೆ. ಇಂಗ್ಲಿಷ್ ವೈದ್ಯಕೀಯ ಪದ್ಧತಿ ಭಾರತೀಯರಿಗೆ ಅಪರಿಚಿತವಾಗಿತ್ತು. ಸ್ಥಳೀಯ ವೈದ್ಯಕೀಯ ಪದ್ಧತಿಗಳು ಅನೇಕ ಮೂಢನಂಬಿಕೆಗಳನ್ನು ಒಳಗೊಂಡಿತ್ತು; ಹಾಗೂ ಅದು ಪುರುಷ ಪ್ರಧಾನವಾಗಿತ್ತು. ಮೇಲ್ಜಾತಿಗಳಲ್ಲಿ ಅಪ್ರಾಪ್ತ ಹೆಣ್ಣು ಮಕ್ಕಳಿಗೆ ಮದುವೆ ಮಾಡುತ್ತಿದ್ದರು. ಮದುವೆಯಾದ ತಕ್ಷಣವೇ ಹುಡುಗಿಯನ್ನು ಗಂಡನಮನೆಗೆ ಕಳುಹಿಸಲಾಗುತ್ತಿತ್ತು; ಹುಡುಗಿಯು ಮಾನಸಿಕವಾಗಿ, ದೈಹಿಕವಾಗಿ ಲೈಂಗಿಕ ಸಂಬಂಧಕ್ಕೆ ಸಿದ್ಧಗೊಂಡಿದ್ದಾಳೆಯೇ ಇಲ್ಲವೇ ಎನ್ನುವುದರ ಪರಿಶೀಲನೆ ನಡೆಯುತ್ತಿರಲಿಲ್ಲ. ಮದುವೆಯಾದ ಅಸಂಖ್ಯ ಅಪ್ರಾಪ್ತ ಹುಡುಗಿಯರು ಬಹುಬೇಗನೇ ಲೈಂಗಿಕ ಹಲ್ಲೆಗೆ ಒಳಗಾಗುತ್ತಿದ್ದರು. ಇದರಿಂದಾಗಿ ಹುಡುಗಿಯರಿಗೆ ದಾಂಪತ್ಯ ಸಂಬಂಧವು ಮಧುರ ಸಂಬಂಧವಾಗದೇ ಹಿಂಸಾತ್ಮಕ ಸಂಬಂಧವಾಗಿ ಪರಿಣಮಿಸುತ್ತಿತ್ತು; ಹುಡುಗಿಯರು ಬಹುಬೇಗನೇ ಮಾನಸಿಕ ಖಿನ್ನತೆಗೊಳಗಾಗುತ್ತಿದ್ದರು. ಲೈಂಗಿಕ ಸಂಬಂಧದಿಂದಾಗಿ ಅನೇಕ ದೈಹಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದರು. ಅನೇಕರು ಲೈಂಗಿಕತೆ ಎಂದರೇನು ಎಂದು ತಿಳಿಯುವ ಮುಂಚಿತವಾಗಿಯೇ ಗರ್ಭಿಣಿಯರಾಗುತ್ತಿದ್ದರು. ಹೆಚ್ಚಿನ ಸಂಖ್ಯೆಯಲ್ಲಿ ಹುಡುಗಿಯರು ಹೆರಿಗೆ ಸಂದರ್ಭದಲ್ಲಿ ಸಾವನ್ನಪ್ಪುತ್ತಿದ್ದರು. ಇದನ್ನು ವಸಾಹತುಶಾಹಿಗಳು 'ವಿವಾಹದೊಳಗಿನ

ಅತ್ಯಾಚಾರ' ಎಂದು ಗುರುತಿಸಿದರೂ ಸಹ ಅದನ್ನು ಕಾನೂನನ್ನಾಗಿಸಲಿಲ್ಲ. ಹಾಗೆ ಮಾಡಿದ್ದರೆ ಮೇಲ್ಜಾತಿಗೆ ಸೇರಿದ ಭಾರತೀಯರ ಅತ್ಯಂತ ಖಾಸಗಿ ಎನ್ನಬಹುದಾದ ಲೈಂಗಿಕ ವಿಷಯಕ್ಕೆ ಕೈಹಾಕಿದಂತಾಗುತ್ತಿತ್ತು. ಇದರ ಪರಿಣಾಮಗಳು ನೇರವಾಗಿ ವಸಾಹತು ಆಡಳಿತದ ಮೇಲೆ ಬೀಳುತ್ತಿತ್ತು. ಹೀಗಾಗಿಯೇ ಮೇಲ್ಜಾತಿಗಳಲ್ಲಿನ ಬಾಲಕಿಯರು ವೈವಾಹಿಕ ಚೌಕಟ್ಟಿನೊಳಗೆ ಎದುರಿಸುವ ಲೈಂಗಿಕ ದೌರ್ಜನ್ಯವನ್ನು ಕಡಿಮೆ ಮಾಡಲು ಪರ್ಯಾಯ ದಾರಿಯನ್ನು ಕಂಡುಕೊಂಡರು; ಅದೆಂದರೆ ಹುಡುಗಿಯರ ವೈವಾಹಿಕ ವಯಸ್ಸನ್ನು ಹೆಚ್ಚು ಮಾಡಿದರು. ಅವರು ನಿಗದಿಪಡಿಸಿದ ವಯಸ್ಸಿಗಿಂತ ಮೊದಲು ಮದುವೆ ಮಾಡಿದರೆ ಅದನ್ನು 'ಬಾಲ್ಯ ವಿವಾಹ' ನಿಷೇಧ ಕಾನೂನಿನ ಮೂಲಕ ಅಪರಾಧವನ್ನಾಗಿಸಿದರು. ಇತ್ತೀಚೆಗೆ ಎಲ್ಲ ತಳ ಸಮುದಾಯಗಳಲ್ಲಿ ಬಾಲ್ಯ ವಿವಾಹಗಳು ನಡೆಯುತ್ತಿವೆ. ತಮ್ಮ ಹೆಣ್ಣುಮಕ್ಕಳನ್ನು ಬಾಲ್ಯ ವಿವಾಹಕ್ಕೆ ಒಳಪಡಿಸುವ ಮೂಲಕವೇ ಮೇಲ್ಜಾತಿಗಳು ತಮ್ಮ ಜಾತಿ ಶುದ್ಧತೆಯನ್ನು ನಿರೂಪಿಸುತ್ತಿದ್ದವು. ಈ ಪ್ರಕ್ರಿಯೆಯನ್ನೇ ಮೇಲ್ಜಾತಿಯ ನಂತರದ ಶ್ರೇಣೀಕರಣದಲ್ಲಿ ಬರುವ ಎಲ್ಲ ಜಾತಿ, ಸಮುದಾಯಗಳು ಬಾಲ್ಯ ವಿವಾಹ ಪದ್ಧತಿಯನ್ನು ಅಳವಡಿಸಿಕೊಂಡು ತಮ್ಮ ಜಾತಿ ಶುದ್ಧತೆಯನ್ನು ನಿರೂಪಿಸುತ್ತಿವೆ. ಬಾಲ್ಯ ವಿವಾಹ ನಿಷೇಧ ಕಾನೂನಿನ ಉದ್ದೇಶ ವೈವಾಹಿಕ ಚೌಕಟ್ಟಿನೊಳಗೆ ಬಾಲಕಿಯರ ಮೇಲಿನ ಲೈಂಗಿಕ ದೌರ್ಜನ್ಯವನ್ನು ತಡೆಗಟ್ಟುವುದಾಗಿದೆಯೇ ಹೊರತು ಮಹಿಳೆಯರ ಮೇಲಿನ ಲೈಂಗಿಕ ದೌರ್ಜನ್ಯವನ್ನು ತಡೆಯುವುದಾಗಿರಲಿಲ್ಲ" (ಶೈಲಜ ಹಿರೇಮಠ, ೨೦೧೬, ಪು-೪೨). ಫುಲ್ಮೋನಿ ಪ್ರಕರಣದಿಂದ ಎಚ್ಚೆತ್ತ ಅಂದಿನ ಸಮಾಜ ಸುಧಾರಕರು ಬಾಲ್ಯ ವಿವಾಹದಿಂದಾಗಿಯೇ ಫುಲ್ಮೋನಿ ಸಾವನ್ನಪ್ಪಿದ್ದಕ್ಕಾಗಿ ಅದರ ಕುರಿತಂತೆ ಲೈಂಗಿಕತೆಯ ಒಪ್ಪಿಗೆಯ ವಯಸ್ಸಿನಲ್ಲಿ ಬದಲಾವಣೆಗಳನ್ನು ತರಲು ಮುಂದಾದರು. ಆದರೆ ಇದರ ಹೊರತಾಗಿ ಕುಟುಂಬದಲ್ಲಿ ನಡೆಯುವ ಅಥವಾ ಕುಟುಂಬದ ಆಚೆ ನಡೆಯುವ ಮಹಿಳೆಯರ ಮೇಲಿನ ಅತ್ಯಾಚಾರದ ಕುರಿತಂತೆ ಅಥವಾ ಅವಿವಾಹಿತ ಮಹಿಳೆಯರ ಮೇಲೆ ನಡೆಯುವ ಅತ್ಯಾಚಾರದ ಕುರಿತು ಕಾನೂನನ್ನು ರೂಪಿಸಲಿಲ್ಲವೆಂದೇ ಹೇಳಬಹುದು.

ಬಾಲ್ಯ ವಿವಾಹವು ಕುಟುಂಬದ ಚೌಕಟ್ಟಿನಲ್ಲಿ ನಡೆಯುವುದರಿಂದ ಇದನ್ನು ಕೌಟುಂಬಿಕ ದೌರ್ಜನ್ಯದ ವ್ಯಾಪ್ತಿಗೆ ಒಳಪಡಿಸಬಹುದಾಗಿದೆ. ಏಕೆಂದರೆ ಚಿಕ್ಕ ವಯಸ್ಸಿನಲ್ಲಿ ಹೆಣ್ಣು ಮಕ್ಕಳಿಗೆ ವಿವಾಹವನ್ನು ಮಾಡುವುದರಿಂದ ಅವರಿಗೆ ಲೈಂಗಿಕತೆಯ ಅರಿವೇ ಇರುವುದಿಲ್ಲ. ಹಾಗಾಗಿ ಏನೂ ಅರಿಯದ ವಯಸ್ಸಿನಲ್ಲಿ ಈ ಲೈಂಗಿಕತೆಗೆ ಸಿಲುಕುವುದರಿಂದ ಹೆಣ್ಣು ಮಕ್ಕಳು ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುತ್ತಾರೆ. ವಿವಾಹದ ನಂತರ ಗಂಡನ ಮನೆಯನ್ನು ಸೇರುವ ಹೆಣ್ಣು ಆ ಮನೆಯಲ್ಲಿ ನಾನಾ ಬಗೆಯ ಹಿಂಸೆಗೆ ಒಳಗಾಗುತ್ತಾಳೆ. ಹಾಗಾಗಿ ಇದನ್ನು ಕುಟುಂಬದ ನೆಲೆಯಲ್ಲಿಯೇ ನೋಡುವ ಅಗತ್ಯವಿದೆ. ಈ ಕಾರಣಗಳಿಗಾಗಿ ಬಾಲ್ಯ ವಿವಾಹವನ್ನು ಸಂಪೂರ್ಣವಾಗಿ ನಿಯಂತ್ರಿಸುವಲ್ಲಿ ಸಾಧ್ಯವಾಗಲಿಲ್ಲ. ಆ ಕಾರಣಕ್ಕಾಗಿ ವಸಾಹತು ಕಾಲಘಟ್ಟದ ಅಂದರೆ ಸ್ವಾತಂತ್ರ್ಯ ನಂತರ ಬಾಲ್ಯ ವಿವಾಹ ನಿಷೇಧ ಕಾನೂನಿನಲ್ಲಿ ಅಮೂಲಾಗ್ರವಾದ ಬದಲಾವಣೆಗಳು ಸಂಭವಿಸಿದವು. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

## ೭.೨. ವಸಾಹತೋತ್ತರ ಸಂದರ್ಭದಲ್ಲಿ ಬಾಲ್ಯ ವಿವಾಹ ನಿಷೇಧ: ಶಾಸನಾತ್ಮಕ ಪ್ರಯತ್ನಗಳು

ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ಸಂವಿಧಾನಾತ್ಮಕ ನಿಯಮಗಳಿಗೆ ಹೆಚ್ಚಿನ ಒತ್ತನ್ನು ನೀಡಲಾಯಿತು. ಶತಶತಮಾನಗಳಿಂದಲೂ ಮನುಸ್ಮೃತಿ, ಯಜ್ಞಾವಲ್ಕ, ಮತ್ತು ಅವುಗಳಿಗೆ ಸಂಬಂಧಿಸಿದ ಟೀಕಾ ಗ್ರಂಥಗಳೇ ಭಾರತೀಯರನ್ನು ಆಳುತ್ತಿದ್ದವು; ಇಂದಿಗೂ ಆಳುತ್ತಿವೆ. ಮಾತ್ರವಲ್ಲದೆ ಭಾರತೀಯರ ಸಾಮಾಜಿಕ ಸಮಸ್ಯೆಗಳ ಪರಿಹಾರಕ್ಕೆ, ನ್ಯಾಯ ಪದ್ಧತಿಗಳಿಗೆ ಆಧಾರ ಗ್ರಂಥಗಳಾಗಿದ್ದವು. ಅನೇಕ ಕಟ್ಟುಪಾಡುಗಳು ಅಮಾನವೀಯವಾಗಿದ್ದರೂ, ಸ್ಮೃತಿಕಾರರು ಸಮಕಾಲೀನತೆಗೆ ತಕ್ಕಂತೆ ಹಳೆಯದನ್ನು ಪರಿಶೀಲಿಸುವ, ಪರಿಷ್ಕರಿಸುವ, ಸುಧಾರಿಸುವ, ಹೊಸ ನಿಯಮಗಳನ್ನು ರೂಪಿಸುವ ಕೆಲಸವನ್ನು ಮಾಡಲಿಲ್ಲ. ಎಂದೋ ತಮ್ಮ ಕಾಲದಲ್ಲಿ ರೂಢವಾಗಿದ್ದ ಸಂಪ್ರದಾಯಗಳನ್ನು ಕ್ರೋಢೀಕರಿಸಿದ ಗ್ರಂಥವನ್ನೆ ಸಾವಿರಾರು ವರ್ಷಗಳ ಕಾಲ ಪ್ರಮಾಣವಾಗಿಟ್ಟುಕೊಂಡು ಬಹು ಸಂಖ್ಯಾತರು ಅನುಸರಿಸುತ್ತಾ; ಮಹಿಳೆಯನ್ನು ಶೋಷಣೆ ಮಾಡಿದ್ದು ಚರಿತ್ರೆಯ ವ್ಯಂಗ್ಯ.

ಸ್ವತಂತ್ರ ಭಾರತ ದೇಶಕ್ಕೆ ಒಂದು ಪ್ರತ್ಯೇಕವಾದ ಸಂವಿಧಾನದ ಅಗತ್ಯತೆ ಇರುವುದನ್ನು ಮನಗಂಡ ಅಂದಿನ ಮಹಾ ಪುರುಷರು ಸಂವಿಧಾನವನ್ನು ರಚಿಸಲು ಮುಂದಾದರು. ಮುಖ್ಯವಾಗಿ ಸಂವಿಧಾನ ರಚನೆಗೆ ಡಾ. ಅಂಬೇಡ್ಕರರು ಮಾಡಿದ ಕಾರ್ಯ ಅಪಾರವಾದುದು. ಅಂಬೇಡ್ಕರರು ಭಾರತದಂತಹ ಜಾತಿ ಆಧಾರಿತ ಸಮಾಜದಲ್ಲಿ ಸ್ತ್ರೀ ವಿಮೋಚನೆಗೆ ಪಣ ತೊಟ್ಟರು. ಇದನ್ನು ಸಾಧಿಸಲು ಮಹಿಳಾ ಹಕ್ಕನ್ನು ಸ್ಥಾಪಿಸಲು ಲಿಂಗಬೇಧ ರಹಿತ ಸಮಾಜದ ನಿರ್ಮಾಣದ ಕನಸನ್ನು ಕಂಡರು. ಮುಖ್ಯವಾಗಿ ಶತಶತಮಾನಗಳಿಂದಲೂ ಸ್ತ್ರೀಯರು ಎದುರಿಸುತ್ತಿದ್ದ ಅನ್ಯಾಯಗಳನ್ನು ಸರಿಪಡಿಸಲು ಶಾಸನಾತ್ಮಕವಾಗಿ ಕಾನೂನುಗಳನ್ನು ರಚಿಸುವ ಅವಶ್ಯಕತೆ ಇದೆಯೆಂದು ತಿಳಿದಿದ್ದರು. ಇದರ ಪರಿಣಾಮವಾಗಿ ಸ್ತ್ರೀ ಪರವಾದ ಹಲವು ನಿಯಮಗಳನ್ನು ಜಾರಿಗೆ ತಂದರು. ಮುಖ್ಯವಾಗಿ "ಅಂಬೇಡ್ಕರರು ಸ್ತ್ರೀ ಪುರುಷರ ನಡುವಿನ ತಾರತಮ್ಯಕ್ಕೆ ಕಾರಣಗಳನ್ನು ಸ್ವಜಾತಿ ವಿವಾಹಗಳ ನೆಲೆಯಲ್ಲಿ ಕಂಡುಕೊಳ್ಳುತ್ತಾರೆ. ಭಾರತೀಯ ಸಮಾಜದಲ್ಲಿ ರೂಢಿಯಲ್ಲಿದ್ದ ಕೆಲವು ಆಚರಣೆಗಳನ್ನು ಈ ರೀತಿ ವಿಶ್ಲೇಷಿಸಿದ್ದಾರೆ. ತನ್ನ ಸತ್ತ ಗಂಡನೊಂದಿಗೆ ವಿಧವೆಯನ್ನು ಸುಡುವುದು, ಕಡ್ಡಾಯ ವೈಧವ್ಯ, ವಿಧುರ/ ವಿಧವೆಯರ ಮೇಲೆ ಕಡ್ಡಾಯ ಬ್ರಹ್ಮಚರ್ಯವನ್ನು ಹೇರುವುದು ಮತ್ತು ಬಾಲ್ಯ ವಿವಾಹ ಪದ್ಧತಿ. ಇವುಗಳು ಸ್ವಜಾತಿ ಪದ್ಧತಿಯನ್ನು ಸೃಷ್ಟಿಸುತ್ತವೆ ಮತ್ತು ಮುಂದುವರೆಸುತ್ತವೆ. ಅಂಬೇಡ್ಕರರು ಬಾಲ್ಯ ವಿವಾಹ ಪದ್ಧತಿಯನ್ನು ಹೀಗೆ ವಿವರಿಸುತ್ತಾರೆ. ಕನ್ಯೆಯು ತನ್ನಲ್ಲಿನ್ನು ಲೈಂಗಿಕ ಪ್ರಜ್ಞೆ ಜಾಗೃತಗೊಳ್ಳುವ ಮೊದಲೇ ಆಕೆ ತಾನು ಯಾರನ್ನು ಪ್ರೀತಿಸಬೇಕೆಂಬುದನ್ನು ತಿಳಿಸುವ ಕಾರಣಕ್ಕೆ ಬಾಲ್ಯ ವಿವಾಹ ಆಚರಣೆ ಬಂದಿದೆ ಎಂದು ಹೇಳುತ್ತಾರೆ. ಇದರಿಂದ ಮದುವೆಗೆ ಮುನ್ನ ಆಕೆ ಯಾವ ಪುರುಷನಲ್ಲೂ ಅನುರಕ್ತಳಾಗಕೂಡದೆಂದು ಪ್ರತಿಬಂಧಿಸುವುದೇ ಆಗಿದೆ"(ಅಂಬೇಡ್ಕರ್ ಉದ್ಧೃತ, ಹಾಲತಿ ಸೋಮಶೇಖರ್,೨೦೦೭, ಪು– ೨೬೨,೨೬೪) ಎನ್ನುತ್ತಾರೆ. ಹೀಗೆ ಈ ಬಗೆಯ

ವ್ಯವಸ್ಥೆಯನ್ನು ಬುಡ ಸಮೇತ ಕಿತ್ತು ಹಾಕಲು ಶಾಸನಾತ್ಮಕ ನಿಯಮಗಳಿಂದಲೇ ಸಾಧ್ಯ ಎಂಬುದನ್ನು ಅರಿತ ಅವರು, ಹಲವಾರು ಸ್ತ್ರೀ ಪರವಾದ ಕಾನೂನುಗಳಿಗೆ ಮುನ್ನುಡಿ ಹಾಕಿದರು.

ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ಹಿಂದೆ ಜಾರಿಯಲ್ಲಿದ್ದ ಬಾಲ್ಯ ವಿವಾಹ ನಿಷೇಧ ಕಾನೂನಿಗೆ ತಿದ್ದುಪಡಿ ಮಾಡಲಾಯಿತು. ಮುಖ್ಯವಾಗಿ ೧೯೨೯ರಲ್ಲಿ ಜಾರಿಯಲ್ಲಿದ್ದ ಸರ್‌ದಾ ಕಾಯಿದೆಯಂತೆ ವಿವಾಹವಾಗುವ ಹೆಣ್ಣಿನ ವಯಸ್ಸು ೧೪ ಮತ್ತು ಗಂಡಿನ ವಯಸ್ಸು ೧೮ ಎಂದು ತಿಳಿಸಲಾಗಿತ್ತು. ಆದರೂ ಬಾಲ್ಯ ವಿವಾಹಗಳು ನಿರಂತರವಾಗಿ ನಡೆಯುತ್ತಲೇ ಇದ್ದವು. ಹಾಗಾಗಿ ಮಹಿಳೆಯರ ಸ್ಥಾನಮಾನ ಮತ್ತು ಸಾರ್ವಜನಿಕ ಅವಕಾಶಗಳು ವಿಸ್ತಾರಗೊಂಡಂತೆಲ್ಲಾ ಮದುವೆ ವಯಸ್ಸಿನಲ್ಲಿ ಏರಿಕೆಯನ್ನು ಮಾಡಲಾಯಿತು. ೧೯೭೮ರಲ್ಲಿ ತಂದ ತಿದ್ದುಪಡಿಯ ಪ್ರಕಾರ ಮದುವೆಯಾಗುವ ಹೆಣ್ಣುಗಂಡಿನ ವಯಸ್ಸು ೧೮-೨೧ ಎಂದು ನಿರ್ಧರಿಸಲಾಯಿತು. ಇಂದಿಗೂ ಇದೇ ವಯಸ್ಸಿನ ಮಿತಿ ಜಾರಿಯಲ್ಲಿದೆ. ಇನ್ನು ಮುಂದುವರೆದಂತೆ ಈ ಬಾಲ್ಯ ವಿವಾಹ ನಿಷೇಧ ಕಾಯಿದೆಯನ್ನು ಬಲಿಷ್ಠಗೊಳಿಸಲು ಕಾನೂನಾತ್ಮಕ ಬದಲಾವಣೆಗಳು ನಡೆದವು ಇದರ ಪರಿಣಾಮವಾಗಿ ೨೦೦೬ರಲ್ಲಿ ಬಾಲ್ಯ ವಿವಾಹ ನಿಷೇಧ ಕಾಯಿದೆಗೆ ಬಹು ಮುಖ್ಯ ತಿದ್ದುಪಡಿಗಳನ್ನು ಮಾಡಲಾಯಿತು. ಇದು ಆಧುನಿಕೋತ್ತರ ಸಂದರ್ಭದ ಕಾನೂನಿನಲ್ಲಾದ ಬದಲಾವಣೆಯಾಗಿದೆ. ಇದನ್ನು ಮುಂದಿನಂತೆ ವಿವರಿಸಲಾಗಿದೆ.

### ೭.೩. ಆಧುನಿಕೋತ್ತರ ಸಂದರ್ಭದಲ್ಲಿ ಬಾಲ್ಯ ವಿವಾಹ ನಿಷೇಧ : ಶಾಸನಾತ್ಮಕ ಪ್ರಯತ್ನಗಳು

ಭಾರತವು ಆಧುನಿಕತೆಗೆ ಒಳಪಟ್ಟು ಹಲವಾರು ವರ್ಷಗಳೇ ಕಳೆದರೂ, ಜನರ ಆಚಾರ ವಿಚಾರಗಳಲ್ಲೇನೂ ಬದಲಾವಣೆಗಳು ಆಗಿಲ್ಲದಿರುವುದು ವಾಸ್ತವ. ಏಕೆಂದರೆ ಜನರು ಆಧುನಿಕತೆಗೆ ಒಳಗಾಗುತ್ತಲೇ ತಮ್ಮ ನಡುವಿನ ಸಂಪ್ರದಾಯ, ರೂಢಿ, ಪದ್ಧತಿ, ಆಚಾರ ವಿಚಾರಗಳನ್ನೂ ಆಧುನಿಕತೆಗೆ ಒಗ್ಗುವಂತೆ ಮಾಡಿಕೊಂಡು ತಮ್ಮ ನಿಲುವನ್ನು ತೋರ್ಪಡಿಸುತ್ತಿವೆ. ಅಂದರೆ ಆಧುನಿಕತೆಗೆ ಜನರು ಎಷ್ಟೇ ಬದಲಾದರೂ ಸಂಸ್ಕೃತಿಯಲ್ಲಿ ಮಾತ್ರ ಯಾವುದೇ ಬದಲಾವಣೆಗಳು ನಡೆಯದಿರುವುದು ಕಂಡುಬರುತ್ತದೆ. ಇದು ವಿವಾಹ ವಿಷಯದಲ್ಲಿಯೂ ಅಷ್ಟೇ. ಆಧುನಿಕತೆಗೆ ಒಳಪಟ್ಟು ವಿವಾಹದ ಸ್ವರೂಪದಲ್ಲಿ ಬದಲಾವಣೆಗಳು ಸಂಭವಿಸಿವೆಯೇ ಹೊರತು, ಅದರ ಉದ್ದೇಶ , ಮನೋಧರ್ಮದಲ್ಲಿ ಮಾತ್ರ ಯಾವುದೇ ಬದಲಾವಣೆಗಳು ಸಂಭವಿಸಿಲ್ಲ. ಇನ್ನು ಬಾಲ್ಯ ವಿವಾಹಗಳ ಸಂದರ್ಭದಲ್ಲಿಯೂ ಇದೇ ಅನ್ವಯಿಸುತ್ತದೆ. ಭಾರತಕ್ಕೆ ಸ್ವಾತಂತ್ರ್ಯ ದೊರೆತು ಹಲವು ವರ್ಷಗಳೇ ಕಳೆದರೂ, ಆಧುನಿಕತೆಗೆ ಎಷ್ಟೇ ತೀವ್ರ ಸ್ವರೂಪದಲ್ಲಿ ಬದಲಾವಣೆಗಳಾಗುತ್ತಿದ್ದರೂ ಗ್ರಾಮೀಣ ಭಾಗಗಳಲ್ಲಿ ಬಾಲ್ಯ ವಿವಾಹಗಳು ಮಾತ್ರ ನಿಂತಿಲ್ಲ. ಇವುಗಳು ಅವ್ಯಾಹತವಾಗಿ ನಡೆಯುತ್ತಲೇ ಇವೆ. ಮುಖ್ಯವಾಗಿ ೧೯೭೮ರಲ್ಲಿ ಬಾಲ್ಯ ವಿವಾಹ ನಿಷೇಧ ಕಾಯಿದೆಯಲ್ಲಿ ತಿದ್ದುಪಡಿಯನ್ನು ಮಾಡಲಾಗಿತ್ತಾದರೂ, ಈ ನಿಯಮಗಳು ಸರಿಯಾಗಿ ಅನುಷ್ಠಾನಗೊಳ್ಳದೇ ಇರುವುದರಿಂದ ಆಧುನಿಕೋತ್ತರ ಸಂದರ್ಭದ ಇಂದಿನ ದಿನಮಾನಗಳಲ್ಲೂ ಬಾಲ್ಯ ವಿವಾಹಗಳು ನಡೆಯುತ್ತಲೇ ಇರುವುದು ಕಂಡುಬರುತ್ತದೆ. ಹಾಗಾಗಿ ಇವುಗಳನ್ನು

ತಡೆಗಟ್ಟಬೇಕೆಂಬ ಉದ್ದೇಶದಿಂದ ೨೦೦೬ರಲ್ಲಿ ಬಾಲ್ಯ ವಿವಾಹ ನಿಷೇಧ ಕಾಯಿದೆಯಲ್ಲಿ ಪುನಃ ತಿದ್ದುಪಡಿಯನ್ನು ತರಲಾಯಿತು. ಈ ತಿದ್ದುಪಡಿಯ ನಂತರ ಯಾವುದೇ ತಿದ್ದುಪಡಿಗಳು ನಡೆದಿಲ್ಲ. ಹಾಗಾಗಿ ೨೦೦೬ರಲ್ಲಿ ಜಾರಿಯಾದ ಬಾಲ್ಯ ವಿವಾಹ ನಿಷೇಧ ಕಾಯಿದೆಯ ಕುರಿತಂತೆ ಸಮಗ್ರವಾಗಿ ಅರಿಯುವುದು ಮುಖ್ಯವಾಗಿದೆ.

**ಬಾಲ್ಯ ವಿವಾಹ ನಿಷೇಧ ಕಾಯಿದೆ ೨೦೦೬**

ಈ ಕಾಯಿದೆಯ ಪ್ರಕಾರ ಬಾಲ್ಯ ವಿವಾಹ ಎಂದರೆ ಯಾವುದೇ ೧೮ ವರ್ಷದೊಳಗಿನ ಹೆಣ್ಣು ಮಕ್ಕಳಿಗೆ ಮತ್ತು ೨೧ ವರ್ಷದೊಳಗಿನ ಗಂಡು ಮಕ್ಕಳಿಗೆ ಮದುವೆ ಮಾಡುವುದು ಬಾಲ್ಯ ವಿವಾಹ ಎಂದೆನಿಸಿಕೊಳ್ಳುತ್ತದೆ. ಕಾನೂನು ಇಂತಹ ಮದುವೆಗಳನ್ನು ಮಾಡುವುದನ್ನು ನಿಷೇಧಿಸಿದೆ. ಈ ಬಗೆಯ ಹೊಸ ಅಧಿನಿಯಮ ಅಧಿಕಾರಿಗಳ ನೇಮಕಾತಿಗೆ ಉಪಬಂಧ ಕಲ್ಪಿಸುತ್ತದೆ. ಸಾಮೂಹಿಕ ಬಾಲ್ಯ ವಿವಾಹಗಳನ್ನು ತಡೆಯಲು ಮ್ಯಾಜಿಸ್ಟ್ರೇಟರಿಗೆ ಅಧಿಕಾರಗಳನ್ನು ನೀಡುತ್ತದೆ. ಮತ್ತು ಬಾಲ್ಯ ವಿವಾಹಗಳನ್ನು ಸಂಜ್ಞೆಯ ಹಾಗೂ ಜಾಮೀನು ರಹಿತ ಅಪರಾಧವನ್ನಾಗಿ ಮಾಡುವ ಮೂಲಕ ಬಾಲ್ಯ ವಿವಾಹಗಳನ್ನು ತಡೆಗಟ್ಟಲು ಏಕಪಕ್ಷೀಯ ಪ್ರತಿಬಂಧಕಾಜ್ಞೆಯನ್ನು ಮ್ಯಾಜಿಸ್ಟ್ರೇಟರು ಕೊಡುವುದಕ್ಕೂ ಅವಕಾಶ ನೀಡುತ್ತದೆ. ೯, ೧೦ ಮತ್ತು ೧೧ನೇ ಪ್ರಕರಣಗಳಲ್ಲಿ ಬಾಲ್ಯ ವಿವಾಹಕ್ಕೆ ಉತ್ತೇಜನ ನೀಡುವ, ಅನುಮತಿ ನೀಡುವ ಅಥವಾ ಅಂಥ ವಿವಾಹವನ್ನು ತಡೆಗಟ್ಟಲು ವಿಫಲನಾಗುವ ಪೋಷಕ ಅಥವಾ ಇತರ ವ್ಯಕ್ತಿಯನ್ನು ಅಪರಾಧಿ ಎಂದು ಪರಿಗಣಿಸಲಾಗುತ್ತದೆ.

ಕರ್ನಾಟಕ ರಾಜ್ಯದಲ್ಲಿ 'ಬಾಲ್ಯ ವಿವಾಹ ನಿಷೇಧ ಕಾಯಿದೆ(ಕರ್ನಾಟಕ) ಅಧಿನಿಯಮಗಳು ೨೦೦೮' ಎಂಬ ಹೆಸರಿನಲ್ಲಿ ಜಾರಿಯಾಯಿತು. ದೇಶದಲ್ಲಿ ೨೦೦೬ರಲ್ಲಿ ಜಾರಿಯಾದ ಕಾಯಿದೆಯ ಎಲ್ಲಾ ನಿಯಮಗಳನ್ನು ಇದು ಹೊಂದಿದೆ. ಮುಖ್ಯವಾಗಿ ಒಂದು ಮತ್ತು ಎರಡನೆಯ ಕಲಮುಗಳು ಬಾಲ್ಯ ವಿವಾಹದ ಕುರಿತ ವ್ಯಾಖ್ಯಾನಗಳನ್ನು ಹೊಂದಿವೆ. ನಂತರದಲ್ಲಿ ೩, ೪ ಮತ್ತು ೫ನೆಯ ಕಲಮುಗಳು ರಾಜ್ಯದ ಪ್ರದೇಶಕ್ಕನುಗುಣವಾಗಿ ರೂಪಿಸಲ್ಪಟ್ಟಿವೆ. ಈ ಅವಕಾಶ ಕೇಂದ್ರದ ಅಧಿನಿಯಮವೇ ಎಲ್ಲಾ ರಾಜ್ಯಗಳಿಗೆ ಕೆಲವು ಉಪ ವಿಭಾಗಗಳನ್ನು ಮಾಡಿಕೊಳ್ಳುವುದರ ಮೂಲಕ ಬಾಲ್ಯ ವಿವಾಹ ಪದ್ಧತಿಯನ್ನು ನಿರ್ಮೂಲನೆ ಮಾಡಲು ಅಧಿಕಾರವನ್ನು ಒದಗಿಸಿಕೊಟ್ಟಿದೆ. ಇವುಗಳೆಲ್ಲವೂ ಕೇಂದ್ರದ ಬಾಲ್ಯ ವಿವಾಹ ನಿಷೇಧ ಅಧಿನಿಯಮ–೨೦೦೬ಕ್ಕೆ ಬದ್ಧವಾಗಿರುತ್ತವೆ. ಕರ್ನಾಟಕದಲ್ಲಿ ಜಾರಿಯಾದ ಈ ಅಧಿನಿಯಮ ಹಲವು ನಿಯಮಗಳನ್ನು ಒಳಗೊಂಡಿದೆ. ಈ ನಿಯಮಗಳನ್ನು ಕೆಳಗಿನಂತೆ ವಿವರಿಸಲಾಗಿದೆ. ಮುಖ್ಯವಾಗಿ ಬಾಲ್ಯ ವಿವಾಹದಲ್ಲಿ ಮಕ್ಕಳನ್ನು ಮದುವೆಯಾಗುವ ಯಾವುದೇ ವಯಸ್ಕ ವ್ಯಕ್ತಿ ತಪ್ಪಿತಸ್ಥನಾಗುತ್ತಾನೆ. ಹಾಗೆಯೇ ಬಾಲ್ಯ ವಿವಾಹವನ್ನು ಏರ್ಪಡಿಸುವ, ನಿರ್ದೇಶಿಸುವ, ನೆರವೇರಿಸುವ ಮತ್ತು ಕುಮ್ಮಕ್ಕು ನೀಡುವ ಯಾವುದೇ ವ್ಯಕ್ತಿ/ಸಂಸ್ಥೆ ಅಥವಾ ಮಗುವನ್ನು ಹೆತ್ತವರು/ಪೋಷಕರು/ಸಂರಕ್ಷಕರು ಅಥವಾ ಮಗುವಿನ ಜವಾಬ್ದಾರಿಯನ್ನು ಹೊತ್ತ ಯಾವುದೇ

ವ್ಯಕ್ತಿ/ಸಂಸ್ಥೆಯ ನಿರ್ಲಕ್ಷತೆಯಿಂದ ಬಾಲ್ಯ ವಿವಾಹವನ್ನು ತಡೆಯಲು ವಿಫಲರಾದವರು ತಪ್ಪಿತಸ್ಥರಾಗುತ್ತಾರೆ. ಜೊತೆಗೆ ಬಾಲ್ಯ ವಿವಾಹದಲ್ಲಿ ಭಾಗವಹಿಸುವವರು/ಭಾಗವಹಿಸಿದವರು/ ಕಾಯ್ದೆಯಡಿ ನೀಡಿದ ತಡೆಯಾಜ್ಞೆಯನ್ನು ಉಲ್ಲಂಘಿಸಿದವರು, ಇವರೆಲ್ಲರೂ ತಪ್ಪಿತಸ್ಥರಾಗುತ್ತಾರೆ. ಈ ವಿವಾಹದ ಅಪರಾಧಕ್ಕಾಗಿ ಎರಡು ವರ್ಷಗಳ ಕಠಿಣ ಜೈಲುವಾಸ ಅಥವಾ ೧ ಲಕ್ಷದವರೆಗೆ ದಂಡ ಅಥವಾ ಎರಡೂ ಅನ್ವಯಿಸಬಹುದು. ಹಾಗೆಯೇ ಅಪರಾಧಿಯು ಮಹಿಳೆಯಾಗಿದ್ದಲ್ಲಿ ಜೈಲು ಶಿಕ್ಷೆಯನ್ನು ವಿಧಿಸುವಂತಿಲ್ಲ, ಈ ಶಿಕ್ಷೆಯಿಂದ ವಿನಾಯಿತಿಯನ್ನು ನೀಡಲಾಗಿದೆ.

**ಬಾಲ್ಯ ವಿವಾಹವು ಅನೂರ್ಜಿತ/ಅಸಿಂಧು/ಶೂನ್ಯವಾಗುವ ಸಂದರ್ಭಗಳು:** ಸೆಕ್ಷನ್-೩ರ ಪ್ರಕಾರ ವಿವಾಹ ಸಂದರ್ಭದಲ್ಲಿ ಅಪ್ರಾಪ್ತ ವಯಸ್ಕರಾಗಿದ್ದ ಯಾವುದೇ ಕರಾರು ಪಕ್ಷವು ಜಿಲ್ಲಾ ನ್ಯಾಯಾಲಯವನ್ನು ಅಸಿಂಧು ಆಜ್ಞೆಯ ಮೂಲಕ ರದ್ದುಪಡಿಸಬೇಕೆಂದು ಮನವಿ ಮಾಡಿಕೊಂಡಾಗ(ಅಸಿಂಧು) ಅಸಿಂಧುಗೊಳ್ಳುತ್ತದೆ. ಹಾಗೆಯೇ ಕಾನೂನು ಬದ್ಧ ಪೋಷಕರ ಬಳಿಯಿಂದ ಬಲವಂತವಾಗಿ ಒಯ್ಯಲ್ಪಟ್ಟಿರುತ್ತಾರೋ ಅಂತಹ ಸಂದರ್ಭದಲ್ಲಿ, ಬಲವಂತದಿಂದ ಅಥವಾ ವಂಚನೆಯಿಂದ ಪ್ರೇರೇಪಿಸಲ್ಪಟ್ಟಿರುತ್ತಾರೋ ಅಂತಹ ಸಂದರ್ಭದಲ್ಲಿ ಬಾಲ್ಯ ವಿವಾಹವು ಅಸಿಂಧುಗೊಳ್ಳುತ್ತದೆ. ಸೆಕ್ಷನ್-೧೨ರ ಪ್ರಕಾರ ವಿವಾಹ ಉದ್ದೇಶದ ಮಾರಾಟ, ವಿವಾಹದ ನಂತರ ಮಾರಾಟದ (ಶೂನ್ಯ ಮತ್ತು ಅಸಿಂಧು) ಸಂದರ್ಭದಲ್ಲಿ ಮತ್ತು ಸೆಕ್ಷನ್ ೧೩ರಡಿಯಲ್ಲಿ ಹೊರಡಿಸಿದ ತಡೆಯಾಜ್ಞೆ ಉಲ್ಲಂಘಿಸಿ ನಡೆಯುವ ಬಾಲ್ಯ ವಿವಾಹ (ಪ್ರಾರಂಭದಿಂದಲೇ ಶೂನ್ಯ) ಅಸಿಂಧುಗೊಳ್ಳುತ್ತವೆ.

**ಬಾಲ್ಯ ವಿವಾಹದಲ್ಲಿ ಹೆಣ್ಣು ಮಗುವಿಗಿರುವ ಅವಕಾಶಗಳು:** ಬಾಲ್ಯವಿವಾಹ ನಿಷೇಧ ಕಾಯಿದೆಯ ಸೆಕ್ಷನ್-೩(೪)ರ ಪ್ರಕಾರ ಮದುವೆ ಸಮಯದಲ್ಲಿ ನೀಡಲಾದ ಹಣ, ಒಡವೆ ಮತ್ತಿತರ ಮೌಲ್ಯದ ವಸ್ತುಗಳನ್ನು ಪರಸ್ಪರ ಹಿಂದಿರುಗಿಸಲು ಜಿಲ್ಲಾ ನ್ಯಾಯಾಲಯವು ಆದೇಶಿಸಬಹುದು, ಸೆಕ್ಷನ್-೪(೧)ರ ಪ್ರಕಾರ ಹುಡುಗಿ ಮರು ಮದುವೆಯಾಗುವ ತನಕ ನಿರ್ವಹಣಾ ವೆಚ್ಚವನ್ನು ಗಂಡಿನ ಕಡೆಯವರು ನೀಡುವಂತೆ ಜಿಲ್ಲಾ ನ್ಯಾಯಾಲಯವು ಆದೇಶಿಸಬಹುದು, ಸೆಕ್ಷನ್-೪(೪)ರ ಪ್ರಕಾರ ಒಂದು ಪಕ್ಷ ಹೆಣ್ಣು ಮಕ್ಕಳು ಪ್ರಕರಣವನ್ನು ದಾಖಲಿಸಿದ್ದರೆ, ಮರು ಮದುವೆಯಾಗುವ ತನಕ ಆಕೆಯ ವಾಸ್ತವ್ಯದ ಕುರಿತಂತೆ ಜಿಲ್ಲಾ ನ್ಯಾಯಾಲಯವು ಆದೇಶಿಸಬಹುದು. ಕೊನೆಯಲ್ಲಿ ಸೆಕ್ಷನ್-೫(೪)ರ ಪ್ರಕಾರ ಬಾಲ್ಯ ವಿವಾಹದಿಂದ ಜನಿಸುವ ಮಗುವಿನ ನಿರ್ವಹಣಾ ವೆಚ್ಚ ನೀಡಲು ಆದೇಶ ಈ ಎಲ್ಲಾ ಸೆಕ್ಷನ್‌ಗಳಡಿಯಲ್ಲಿ ಹೆಣ್ಣುಮಕ್ಕಳು ವಿಶೇಷವಾದ ಹಕ್ಕನ್ನು ಹೊಂದಿರುತ್ತಾರೆ.

**ಬಾಲ್ಯ ವಿವಾಹದಿಂದ ಜನಿಸಿದ ಮಕ್ಕಳಿಗೆ ಇರುವ ಅವಕಾಶಗಳು:** ಸೆಕ್ಷನ್-೬ರ ಪ್ರಕಾರ ಬಾಲ್ಯ ವಿವಾಹಿತರಿಗೆ ಜನಿಸಿದ ಮಗು ನ್ಯಾಯಸಮ್ಮತ (ಔರಸ) ಎಂದು ಎಲ್ಲಾ ಸಂದರ್ಭಗಳಲ್ಲೂ ಪರಿಗಣಿಸಲ್ಪಡುತ್ತದೆ, ಸೆಕ್ಷನ್-೫(೨)ರ ಪ್ರಕಾರ ಎಲ್ಲಾ ನ್ಯಾಯಲಯವು ಮಗುವಿನ ಜವಾಬ್ದಾರಿ ಕುರಿತು ಆದೇಶ ಹೊರಡಿಸುವಾಗ ಮಗುವಿನ ಹಿತರಕ್ಷಣೆ ಮತ್ತು ಒಳಿತು ಪ್ರಧಾನ

ಆದ್ಯತೆಯಾಗಿರಬೇಕು, ಸೆಕ್ಷನ್-೫(೩)ರ ಪ್ರಕಾರ ಮಗುವಿನ ಸುಪರ್ದಿ ಆಜ್ಞೆಯಲ್ಲಿ ಇನ್ನೊಂದು ಕಡೆಯವರು ಮಗುವನ್ನು ಭೇಟಿಯಾಗುವ ಅವಕಾಶ ನೀಡುವ ನಿರ್ದೇಶನ ಒಳಗೊಂಡಿರಬೇಕು ಮತ್ತು ಸೆಕ್ಷನ್-೫(೪)ರ ಪ್ರಕಾರ ಮದುವೆಯಾದ ವ್ಯಕ್ತಿ ಅಥವಾ ಆ ವ್ಯಕ್ತಿಯು ಅಪ್ರಾಪ್ತ ವಯಸ್ಕರಾಗಿದ್ದಲ್ಲಿ ಅವರ ಪೋಷಕರು ಮಗುವಿನ ನಿರ್ವಹಣೆಯನ್ನು ಭರಿಸುವಂತೆ ಆದೇಶಿಸಬಹುದು.

**ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳು** : ಬಾಲ್ಯ ವಿವಾಹ ನಿಷೇಧ ಕಾಯಿದೆ ೨೦೦೬ರ ಪ್ರಕಾರ ಬಾಲ್ಯ ವಿವಾಹಗಳನ್ನು ತಡೆಗಟ್ಟಲು ಹಲವು ಅಧಿಕಾರಿಗಳನ್ನು ಗುರುತಿಸುತ್ತದೆ. ಮುಖ್ಯವಾಗಿ ಈ ಅಧಿನಿಯಮ ಸೆಕ್ಷನ್-೧೬(೧)ರ ಅಡಿಯಲ್ಲಿ ನಾಲ್ಕು ಹಂತದ ಅಧಿಕಾರಿಗಳನ್ನು ಗುರುತಿಸುತ್ತದೆ. ೧. ರಾಜ್ಯ ಮಟ್ಟದ ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳು ೨. ಜಿಲ್ಲಾ ಮಟ್ಟದ ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳು ೩. ತಾಲೂಕು ಮಟ್ಟದ ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳು ೪. ಗ್ರಾಮ ಪಂಚಾಯತಿ/ ನಗರ ಸಭೆ/ ಪುರಸಭೆ ಮಟ್ಟದ ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳು. ಹೀಗೆ ಬಾಲ್ಯ ವಿವಾಹ ಪದ್ಧತಿಯನ್ನು ತಡೆಗಟ್ಟಲು ಸಂವಿಧಾನ ಬದ್ಧವಾದ ಹಲವಾರು ನಿಯಮಗಳನ್ನು ರೂಪಿಸಲಾಗಿದೆ. ಆದರೂ ಇವುಗಳನ್ನು ಸಂಪೂರ್ಣವಾಗಿ ತಡೆಗಟ್ಟಲು ಸಾಧ್ಯವಾಗುತ್ತಿಲ್ಲ ಎಂಬುದು ವಿಷಾಧನೀಯ ಸಂಗತಿಯಾಗಿದೆ.

ವಿವಾಹ ವಯಸ್ಸಿನ ಬಗೆಗೆ ತಿಳಿದುಕೊಳ್ಳುವುದಾದರೆ, ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ವಿವಾಹ ವಯಸ್ಸನ್ನು ೧೮ಕ್ಕೆ ನಿಗಧಿ ಮಾಡಿರುವುದು ಕಂಡುಬರುತ್ತದೆ. ಮುಖ್ಯವಾಗಿ ಕ್ಯಾಲಿಫೋರ್ನಿಯಾದಂತಹ ರಾಜ್ಯಗಳಲ್ಲಿ ತಂದೆ ತಾಯಿಯರ ಅನುಮತಿ ಪಡೆದು ೧೮ ವರ್ಷ ವಯಸ್ಸಿಗಿಂತ ಮುಂಚೆ ವಿವಾಹವಾಗಲು ಅವಕಾಶವಿದೆ. ವೈವಾಹಿಕ ಅತ್ಯಾಚಾರಕ್ಕಿದ್ದ ವಿನಾಯಿತಿಯನ್ನು ಅಮೇರಿಕಾದ ೫೦ ರಾಜ್ಯಗಳಲ್ಲಿ ನಿಷೇಧಿಸಲಾಗಿದೆ. ಪಾಕಿಸ್ತಾನದಲ್ಲಿ ಮುಸ್ಲಿಂ ಕುಟುಂಬ ಕಾನೂನು ಅಧ್ಯಾದೇಶದ ಅಡಿಯಲ್ಲಿ ಹುಡುಗಿ ೧೬ ವರ್ಷಗಳನ್ನು ಮತ್ತು ಹುಡುಗ ೧೮ ವರ್ಷಗಳನ್ನು ಪೂರೈಸಿರಬೇಕು. ಇಂಡೋನೇಷಿಯಾದಲ್ಲಿ ಪ್ರಾಪ್ತ ವಯಸ್ಕನಾಗುವ ಮತ್ತು ವಿವಾಹಕ್ಕೆ ಅರ್ಹನಾಗುವ ವಯಸ್ಸು ಎರಡೂ ಒಂದೇ ಆಗಿದೆ. ಇದು ಹುಡುಗಿಯರಿಗೆ ೧೬ ವರ್ಷಗಳು ಮತ್ತು ಹುಡುಗರಿಗೆ ೧೯ ವರ್ಷಗಳು. ಲೈಂಗಿಕ ಕ್ರಿಯೆಗೆ ಒಪ್ಪಿಗೆ ಕೊಡುವ ವಯಸ್ಸನ್ನು ಸಹ ಹುಡುಗಿಯರಿಗೆ ೧೬ ವರ್ಷಗಳು ಎಂದು ನಿಗಧಿಗೊಳಿಸಲಾಗಿದೆ. ಯೂನಿಸೆಫ್, ಸಂಯುಕ್ತ ರಾಷ್ಟ್ರೀಯ ಜನಸಂಖ್ಯಾ ನಿಧಿ ಮತ್ತು ಅಂಥ ಅನೇಕ ಅಂತರಾಷ್ಟ್ರೀಯ ಸಂಸ್ಥೆಗಳೂ ವಿವಾಹ ಯೋಗ್ಯ ವಯಸ್ಸು ೧೮ ವರ್ಷಗಳಾಗಿರಬೇಕೆಂದು ಸಲಹೆ ನೀಡಿವೆ. ಮಹಿಳೆಯರ ವಿರುದ್ಧ ನಡೆಯುವ ಎಲ್ಲ ಬಗೆಯ ತಾರತಮ್ಯಗಳನ್ನು ನಿವಾರಿಸುವ ಬಗ್ಗೆ ಮಾಡಿಕೊಂಡ ಒಪ್ಪಂದದ ೧೬(೨)ನೇ ಅನುಚ್ಛೇದ ' ವಿವಾಹದ ಕನಿಷ್ಟ ವಯಸ್ಸನ್ನು ನಿರ್ದಿಷ್ಟಪಡಿಸಲು ಮತ್ತು ವಿವಾಹಗಳ ನೋಂದಣಿಯನ್ನು ಕಡ್ಡಾಯಗೊಳಿಸಲು ರಾಷ್ಟ್ರಗಳು ಎಲ್ಲಾ ಪ್ರಯತ್ನಗಳನ್ನು ಮಾಡಬೇಕೆಂದು' ವಿಧಿಸುತ್ತದೆ. ಮಹಿಳಾ ಒಪ್ಪಂದದ ಅನುಷ್ಠಾನದ

ಉಸ್ತುವಾರಿ ಸಮಿತಿಯು ವಿವಾಹ ಯೋಗ್ಯ ವಯಸ್ಸು ಸ್ತ್ರೀ ಪುರುಷರಿಬ್ಬರಿಗೂ ೧೮ ವರ್ಷಗಳು ಆಗಿರಬೇಕು ಎಂದು ಸಲಹೆ ಮಾಡಿದೆ. ಅಲ್ಲದೆ ಹೆಣ್ಣುಮಕ್ಕಳ ವಿರುದ್ಧ ತಾರತಮ್ಯವೆಸಗುವ ಎಲ್ಲಾ ಕಾನೂನುಗಳನ್ನು ನಿರಸಗೊಳಿಸಬೇಕೆಂದು ಮತ್ತು ಹೆಣ್ಣು ಮಕ್ಕಳಿಗೆ ತೊಂದರೆಯುಂಟುಮಾಡುವ ಎಲ್ಲ ಆಚರಣೆಗಳನ್ನು ಹಾಗೂ ರೂಢಿಗಳನ್ನು ನಿಲ್ಲಿಸಬೇಕೆಂದು ಸಹ ರಾಷ್ಟ್ರಗಳಿಗೆ ಒತ್ತಾಯಿಸಿದೆ" (ಗೀತಾ ಕೃಷ್ಣಮೂರ್ತಿ,೨೦೦೯, ಪು-೧೪೩). ಬಾಲ್ಯ ವಿವಾಹ ಪದ್ಧತಿಯು ಕೇವಲ ಭಾರತ ದೇಶಕ್ಕಷ್ಟೇ ಸೀಮಿತವಾಗಿಲ್ಲ. ಇದು ಪ್ರಪಂಚದಾದ್ಯಂತ ಹರಡಿಕೊಂಡಿದೆ. ಹಾಗಾಗಿ ಈ ವಿವಾಹ ಪದ್ಧತಿಯನ್ನು ನಿರ್ಮೂಲನೆ ಮಾಡಲು ಅಂತರಾಷ್ಟ್ರೀಯ ಮಟ್ಟದಲ್ಲಿಯೂ ಬಹಳಷ್ಟು ಪ್ರಯತ್ನಗಳು ನಡೆದಿರುವುದನ್ನು ಕಾಣಬಹುದು. ಮುಖ್ಯವಾಗಿ ಮಾನವ ಹಕ್ಕುಗಳ ನೆಲೆಯಲ್ಲಿ ಈ ವಿವಾಹ ಪದ್ದತಿಯನ್ನು ಗ್ರಹಿಸುವ ಕೆಲಸ ನಡೆಯುತ್ತದೆ. ಅಂದರೆ ಬಾಲ್ಯ ವಿವಾಹ ಪದ್ಧತಿಯು ಮಕ್ಕಳ ಹಕ್ಕುಗಳನ್ನು ಕಿತ್ತುಕೊಳ್ಳುತ್ತದೆ ಎಂಬ ನೆಲೆಯಲ್ಲಿ ನೋಡಲಾಗುತ್ತದೆ. ಈ ಕಾರಣಕ್ಕಾಗಿ ಹಲವಾರು ನಿಯಮಗಳು ಜಾರಿಯಲ್ಲಿವೆ. ಮುಖ್ಯವಾಗಿ ಬಾಲ್ಯದಲ್ಲಿ ವಿವಾಹ ಮಾಡುವುದರಿಂದ ಹೆಣ್ಣು ಮಕ್ಕಳು ಮಾನಸಿಕವಾಗಿ, ಭಾವನಾತ್ಮಕವಾಗಿ ಮತ್ತು ದೈಹಿಕವಾಗಿ ಪ್ರಬುದ್ಧರಾಗಿರುವುದಿಲ್ಲ ಮತ್ತು ಅವರು ಮದುವೆಯ ನಂತರ ಗಂಡನ ಮನೆಯಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಾರೆ. ಇವುಗಳೆಲ್ಲವೂ ಮಾನವ ಹಕ್ಕುಗಳ ಉಲ್ಲಂಘನೆ ಮಾಡಿದಂತಾಗುತ್ತದೆ. ಹಾಗಾಗಿ ಅಂತರಾಷ್ಟ್ರೀಯ ಮಟ್ಟದಲ್ಲಿ ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸುವುದು ಮಾನವ ಹಕ್ಕುಗಳ ಆಧಾರದ ಮೇಲೆಯೇ. ಹಾಗಾಗಿ ಕೆಲವು ಒಪ್ಪಂದಗಳು, ಕರಾರುಗಳು, ದಸ್ತಾವೇಜುಗಳು, ಘೋಷಣೆಗಳು ಮತ್ತು ಒಡಂಬಡಿಕೆಗಳು ಹಲವು ಕಾರ್ಯಗಳನ್ನು ಮಾಡಿರುವುದು ಕಂಡುರುತ್ತವೆ. ಅವುಗಳಲ್ಲಿ ಮುಖ್ಯವಾಗಿ,

1. The Universal Declaretion of Human rights ( UDHR), 1948.
2. Inter National Convent on Civil and Political Rights ( ICCPR) 1966.
3. International Covenant on Economic , Social and Cultural Rights (ICESCR), 1966.
4. Convenction on the Elimination of All Forms of Discrimination against Women ( CEDAW) 1979.
5. Millennium Development Goals ( MDGs),2000."

ಈ ಮೇಲಿನವುಗಳೆಲ್ಲವೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಾಲ್ಯ ವಿವಾಹವನ್ನು ತಡೆಯಲು ಹಲವು ನಿಯಮಗಳನ್ನು ರೂಪಿಸಿವೆ. ಮುಖ್ಯವಾಗಿ ಮಕ್ಕಳು ತಮ್ಮ ಹಕ್ಕುಗಳನ್ನು ಸ್ವತಂತ್ರವಾಗಿ ಚಲಾಯಿಸಲು ಈ ಬಾಲ್ಯ ವಿವಾಹ ಪದ್ದತಿಯು ಅಡ್ಡಿಪಡಿಸುತ್ತದೆ. ಹಾಗಾಗಿ ಇದನ್ನು ಬುಡ ಸಮೇತ ಕಿತ್ತು ಹಾಕಲು ಅಂತರಾಷ್ಟ್ರೀಯ ಮಟ್ಟದಲ್ಲಿ ಕಾರ್ಯಗಳು ನಡೆಯುತ್ತಲೇ ಇವೆ. ಇನ್ನು ಭಾರತದಲ್ಲಿ ಜಾರಿಯಾದ ಬಾಲ್ಯ ವಿವಾಹ ನಿಷೇಧ ಕಾಯಿದೆ–

೨೦೦೬ ವ್ಯವಸ್ಥೆಯಲ್ಲಿ ಜಾರಿಯಲ್ಲಿದ್ದರೂ ಅವ್ಯಾಹತವಾಗಿ ನಡೆಯುತ್ತಲೇ ಇವೆ. ಇವುಗಳನ್ನು ಬುಡ ಸಮೇತ ಕಿತ್ತುಹಾಕಲು ಸರಕಾರಿ ಮತ್ತು ಸರಕಾರೇತರ ಸಂಘ ಸಂಸ್ಥೆಗಳ ಮೂಲಕ ಇಂದಿಗೂ ಪ್ರಯತ್ನಗಳು ನಡೆಯುತ್ತಲೇ ಇವೆ. ಮುಖ್ಯವಾಗಿ ಗ್ರಾಮೀಣ ಭಾಗಗಳಲ್ಲಿ ಈ ಬಗೆಯ ವಿವಾಹಗಳು ಹೆಚ್ಚಾಗಿ ನಡೆಯುತ್ತಿದ್ದು, ಇವುಗಳು ಸ್ಥಳೀಯ ಅಧಿಕಾರಿಗಳ ಗಮನಕ್ಕೂ ಬಂದಿರುವುದಿಲ್ಲ. ಹಾಗಾಗಿ ವ್ಯವಸ್ಥೆಯಲ್ಲಿ ಈ ಬಗೆಯ ಬಾಲ್ಯ ವಿವಾಹಗಳನ್ನು ಗುರುತಿಸುವುದು ಕಷ್ಟಕರವಾಗಿದೆ.

ಬಾಲ್ಯ ವಿವಾಹವು ಜಾರಿಯಾದುದು ಅಥವಾ ಹುಟ್ಟಿಕೊಂಡಿದುದು ಒಂದು ಅನಿವಾರ್ಯ ಕಾರಣದಿಂದ ಎಂದು ತಿಳಿದುಬಂದರೂ, ಅದರ ಹಿಂದಿನ ಉದ್ದೇಶ ಮಾತ್ರ ತುಂಬಾ ಕಠೋರವಾದುದು. ಕ್ರಿಸ್ತಪೂರ್ವದ ಕಾಲದಿಂದ ಹಿಡಿದು ಇಲ್ಲಿಯವರೆಗೂ ಈ ವಿವಾಹ ಸಂಸ್ಥೆ ಹೆಣ್ಣು ಮಕ್ಕಳನ್ನು ಬಾಧಿಸುತ್ತಲೇ ಬಂದಿರುವ ಅಂಶಗಳು ಗೋಚರಿಸುತ್ತವೆ. ಮುಖ್ಯವಾಗಿ ಹತ್ತೊಂಬತ್ತನೆಯ ಶತಮಾನದ ಸಂದರ್ಭದಲ್ಲಿ ಈ ಬಾಲ್ಯ ವಿವಾಹ ಪದ್ದತಿಯನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡಲು ಹಲವಾರು ಸಾಮಾಜಿಕ ಹೋರಾಟಗಳು ನಡೆದವು. ಆದರೆ ಆ ಸಂದರ್ಭದಲ್ಲಿ ಇದಕ್ಕೆ ವ್ಯವಸ್ಥೆಯಿಂದ ದೊಡ್ಡ ಮಟ್ಟದ ವಿರೋಧ ವ್ಯಕ್ತವಾಗಿತ್ತು. ಆದರೂ ಸುಧಾರಣಾವಾದಿಗಳು ಈ ವಿರೋಧಗಳ ಮಧ್ಯೆಯೇ ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸುವ ಕಾನೂನನ್ನು ಜಾರಿಗೆ ತರುವಲ್ಲಿ ಯಶಸ್ವಿಯಾದರು. ಮೊದಮೊದಲು ಗಂಡು ಮತ್ತು ಹೆಣ್ಣು ಲೈಂಗಿಕ ಕ್ರಿಯೆಗೆ ತೊಡಗಲು ನಿರ್ಧರಿಸುವ ವಯಸ್ಸಿಗೆ ಸಂಬಂಧಿಸಿದಂತೆ ಬಹಳಷ್ಟು ಚರ್ಚೆಗೆ ಒಳಪಟ್ಟಿತು. ಅದಕ್ಕೆ ವಯಸ್ಸಿನ ಅಂತರದಲ್ಲಿಯೂ ಸಾಕಷ್ಟು ಬದಲಾವಣೆಗಳನ್ನು ತರಲಾಯಿತು. ಆದರೆ ವಿಧವಾ ಸಮಸ್ಯೆ, ಸತಿ ಸಹಗಮನ ಸಮಸ್ಯೆಗಳಂಥವುಗಳಲ್ಲಿ ಬದಲಾವಣೆಗಳು ಆಗಲಿಲ್ಲ. ಹಾಗಾಗಿ ಗಂಡು ಹೆಣ್ಣಿನ ಲೈಂಗಿಕತೆಯ ವಯಸ್ಸನ್ನಲ್ಲದೇ ವಿವಾಹವಾಗುವ ವಯಸ್ಸಿನಲ್ಲಿ ಬದಲಾವಣೆಯನ್ನು ತಂದಾಗ ಮಾತ್ರ ಬಾಲ್ಯ ವಿವಾಹವನ್ನು ಮತ್ತು ಅದಕ್ಕೆ ಸಂಬಂಧಿಸಿದಂತೆ ಹುಟ್ಟಿಕೊಂಡ ವಿಧವಾ ಸಮಸ್ಯೆಯನ್ನು ಕಿತ್ತು ಹಾಕಬಹುದು ಎಂಬುದು ತಿಳಿದುಬಂದಿತು. ನಂತರದಲ್ಲಿ ವಿವಾಹ ವಯಸ್ಸಿಗೆ ಸಂಬಂಧಿಸಿದಂತೆ ಪ್ರತಿಭಟನೆಗಳು ನಡೆದವು. ಬ್ರಿಟಿಷರು ಭಾರತೀಯ ಸಮಾಜದೊಂದಿಗೆ ಒಂದು ಅಂತರವನ್ನು ಕಾಯ್ದುಕೊಂಡೇ ಬಂದಿದ್ದರು. ಭಾರತೀಯ ಸಂಸ್ಕೃತಿಗೆ ಧಕ್ಕೆ ಬಾರದಂತೆ ಅತ್ಯಂತ ನಾಜೂಕಾಗಿ ಪರಿಸ್ಥಿತಿಗಳನ್ನು ನಿರ್ವಹಿಸುತ್ತಿದ್ದರು. ಹೀಗೆ ಇವುಗಳೆಲ್ಲದರ ಪರಿಣಾಮವಾಗಿ ಬಾಲ್ಯ ವಿವಾಹವನ್ನು ತಡೆಯಲು ಕಾನೂನಿನಲ್ಲಿ ಹಲವಾರು ಬದಲಾವಣೆಗಳಾದವು. ಭಾರತಕ್ಕೆ ಸ್ವತಂತ್ರ ದೊರೆತ ನಂತರ ಈ ಬಾಲ್ಯ ವಿವಾಹ ನಿಷೇಧ ಕಾಯಿದೆಯಲ್ಲಿ ಹಲವಾರು ತಿದ್ದುಪಡಿಗಳಾದವು. ಆ ಮೂಲಕ ಬಾಲ್ಯ ವಿವಾಹ ನಿಷೇಧ ಕಾಯಿದೆಯನ್ನು ಬಲಿಷ್ಠಗೊಳಿಸಲಾಯಿತು. ಪ್ರಸ್ತುತ ಬಾಲ್ಯ ವಿವಾಹ ನಿಷೇಧ ಕಾಯಿದೆ ೨೦೦೬ ಜಾರಿಯಲ್ಲಿದ್ದು, ಈ ವಿವಾಹಗಳನ್ನು ತಡೆಯಲು ಹಲವಾರು ಪ್ರಯತ್ನಗಳು ನಿರಂತರವಾಗಿ ನಡೆದೇ ಇವೆ.

## ಉಲ್ಲೇಖಗಳು


೧. ಉಷಾ ಎಂ, ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಗೀತಾ ಕೃಷ್ಣಮೂರ್ತಿ, ೨೦೦೯, ಮಹಿಳಾ ಹಕ್ಕುಗಳು ಮಾನವ ಹಕ್ಕುಗಳ ನೆಲೆಯಲ್ಲಿ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಚಿದಾನಂದಮೂರ್ತಿ ಎಂ, ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನ ಬುಕ್ ಹೌಸ್, ಬೆಂಗಳೂರು.

೪. ಪ್ರೀತಿ ಶುಭಚಂದ್ರ, ೨೦೦೨, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಶೈಲಜ ಹಿರೇಮಠ, ೨೦೧೬, ಕುಟುಂಬ, ಮಹಿಳೆ,ದೌರ್ಜನ್ಯ ಮತ್ತು ಕಾನೂನು ಪರ್ಯಾಯ ಸಾಧ್ಯತೆಗಳಿಗಿರುವ ತೊಡಕುಗಳು, ಸಂವಾದ, ಎಸ್.ಆರ್.ಗೋವಿಂದು, ಸ್ಫೂರ್ತಿಧಾಮ, ಬೆಂಗಳೂರು.

೬. ಹಾಲತಿ ಸೋಮಶೇಖರ್, ೨೦೦೭, ಮಹಿಳಾ ಚಳವಳಿ ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು.

# ಅಧ್ಯಾಯ : ಎಂಟು

# ಬಾಲ್ಯ ವಿವಾಹ ಪದ್ಧತಿ ನಿಷೇಧ : ಸರ್ಕಾರದ ಕ್ರಮಗಳು ಮತ್ತು ಸಾಂಸ್ಥಿಕ ಪ್ರಯತ್ನಗಳು

೮.೧. ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸುವಲ್ಲಿ ಸರ್ಕಾರಿ ಇಲಾಖೆಗಳ ಪಾತ್ರ

೮.೨. ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸುವಲ್ಲಿ ಸರ್ಕಾರೇತರ ಸಂಸ್ಥೆ/ಸಂಘ ಸಂಸ್ಥೆಗಳ ಪಾತ್ರ

೮.೩. ವೈಯಕ್ತಿಕ ನೆಲೆಯಲ್ಲಿ ಬಾಲ್ಯ ವಿವಾಹ ಪದ್ಧತಿಯನ್ನು ವಿರೋಧಿಸಿದವರು

೮.೪. ಬಾಲ್ಯ ವಿವಾಹ ಪದ್ಧತಿ ನಿಷೇಧ ಕಾನೂನು ಅರಿವು ಮೂಡಿಸುವಲ್ಲಿ ಶಿಕ್ಷಣ ವ್ಯವಸ್ಥೆಯ ಪಾತ್ರ

೮.೫. ಬಾಲ್ಯ ವಿವಾಹ ಪದ್ಧತಿ ನಿಷೇಧ ಕಾನೂನು ಅರಿವು ಮೂಡಿಸುವಲ್ಲಿ ಮಾಧ್ಯಮಗಳ ಪಾತ್ರ

೮.೬. ಬಾಲ್ಯ ವಿವಾಹ ಪದ್ಧತಿ ನಿಷೇಧಿಸುವಲ್ಲಿ ನ್ಯಾಯಾಂಗ ವ್ಯವಸ್ಥೆಯ ಪಾತ್ರ

೮.೭. ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸುವಲ್ಲಿ ಧಾರ್ಮಿಕ ಸಂಸ್ಥೆಗಳ ಪಾತ್ರ

## ಅಧ್ಯಾಯ : ಎಂಟು

# ಬಾಲ್ಯ ವಿವಾಹ ಪದ್ಧತಿ ನಿಷೇಧ : ಸರ್ಕಾರದ ಕ್ರಮಗಳು ಮತ್ತು ಸಾಂಸ್ಥಿಕ ಪ್ರಯತ್ನಗಳು

ಸಮಾಜದಲ್ಲಿ ಸ್ತ್ರೀಯರ ಮತ್ತು ಪುರುಷರ ನಡುವಿನ ಸಂಬಂಧಗಳು ತೋರಿಕೆಗೆ ಸಹಜವಾಗಿರುವಂತೆ ಕಂಡುಬಂದರೂ, ಆಂತರಿಕವಾಗಿ ಲಿಂಗರಾಜಕಾರಣದಿಂದ ಕೂಡಿದವುಗಳಾಗಿವೆ. ಪುರುಷಪ್ರಧಾನ ವ್ಯವಸ್ಥೆಯು ಪುರುಷಾಧಿಪತ್ಯವನ್ನು ಸೃಷ್ಟಿಸಿ ಅದನ್ನು ಕಾಪಾಡಿಕೊಳ್ಳಲು ಪುರುಷರನ್ನು ಪ್ರಧಾನರೆಂದು, ಮಹಿಳೆಯರನ್ನು ಅಧೀನರೆಂದು ನಿರ್ಧರಿಸಿಬಿಟ್ಟಿದೆ. ಜಗತ್ತಿನ ಎಲ್ಲ ಸಮುದಾಯಗಳಲ್ಲೂ ಮಹಿಳೆಯರು ಅಧೀನರಾಗಿಯೇ ಉಳಿದಿದ್ದಾರೆ. ಸಮಾಜದಲ್ಲಿ ಸ್ಥಾಪಿತ ಜ್ಞಾನವಲಯಗಳೆಲ್ಲವೂ ಪುರುಷ ನಿರ್ಮಿತವೇ ಆಗಿವೆ. ಹಾಗಾಗಿ ಈಗಾಗಲೇ ನಿರ್ಮಿಸಲ್ಪಟ್ಟ ಜ್ಞಾನವಲಯದಲ್ಲಿಯೇ ಮಹಿಳೆಯರು ಬದುಕಬೇಕಾದ ಅನಿವಾರ್ಯತೆಯನ್ನು ಹೊಂದಿದ್ದಾರೆ. ಪುರುಷಪ್ರಧಾನ ವ್ಯವಸ್ಥೆಯು ಮಹಿಳೆಯರನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಹಲವಾರು ಆಚರಣಾತ್ಮಕ ವಿಧಿ ವಿಧಾನ, ಪದ್ಧತಿಗಳನ್ನು ಜಾರಿಗೆ ತಂದಿತು. ಇವುಗಳು ಮಹಿಳೆಯರ ಎಲ್ಲ ಬಗೆಯ ಸ್ವಾತಂತ್ರ್ಯವನ್ನು ಕಿತ್ತುಕೊಂಡವು. ಇದಕ್ಕೆ ಕಾರಣ ಲಿಂಗ ಅಸಮಾನತೆ. ಸಮಾಜದಲ್ಲಿನ ಲಿಂಗ ಅಸಮಾನತೆಯ ಕುರಿತಂತೆ ಚರ್ಚಿಸಬೇಕಾದರೆ ಮೊದಲು ಕುಟುಂಬದ ಹಂತದಿಂದಲೇ ಆರಂಭಿಸಬೇಕಾಗುತ್ತದೆ. ಏಕೆಂದರೆ ಮಹಿಳೆಯರ ಜೀವನದ ಎಲ್ಲ ಆಗುಹೋಗುಗಳಿಗೆ ಕುಟುಂಬವೇ ಕಾರಣ. ಹಾಗಾಗಿಯೇ ಮಹಿಳೆಗೆ ಸಂಬಂಧಿಸಿದ ಯಾವುದೇ ವಿಷಯವನ್ನು ಮಾತನಾಡಿದರೂ, ಅದು ಕುಟುಂಬದಿಂದಲೇ ಆರಂಭವಾಗುತ್ತದೆ. ಈ ಹಿನ್ನೆಲೆಯಲ್ಲಿ ಮಹಿಳೆಯರ ಪರವಾದ ಹಲವಾರು ಕಾನೂನುಗಳು ಮತ್ತು ಈ ಕಾನೂನುಗಳ ಕುರಿತಂತೆ ಮಹಿಳೆಯರ ಅರಿವಿನಂತಹ ವಿಷಯವೂ ಕುಟುಂಬದಿಂದೇನೂ ಹೊರತಾಗಿಲ್ಲ. ಆ ಕಾರಣಕ್ಕಾಗಿಯೇ ಮಹಿಳೆಯರ ಅರಿವಿಗೆ ಸಂಬಂಧಿಸಿದಂತೆ ಮಾತನಾಡುವಾಗ ಅದು ಕುಟುಂಬದಿಂದಲೇ ಆರಂಭಿಸಬೇಕಾದ ಅನಿವಾರ್ಯತೆ ಇದೆ. ಮಗು ಹುಟ್ಟಿನಿಂದಲೇ ಸಾಮಾಜೀಕರಣದ ಪ್ರಕ್ರಿಯೆಗೆ ಒಳಗಾಗಿ ಲಿಂಗ ಅಸಮಾನತೆಯ ಅಂಶಗಳನ್ನು ಮೈಗೂಡಿಸಿಕೊಳ್ಳುತ್ತಿರುತ್ತದೆ. ಈ ಹಂತದಿಂದಲೇ ಆರಂಭವಾಗುವ ಅರಿವು ಪ್ರಕ್ರಿಯೆ

ಮುಂದೆ ಆ ಮಗು ಸಾಯುವವರೆಗೂ ಅಸಮಾನ ನೆಲೆಯಲ್ಲಿಯೇ ಬದುಕಬೇಕಾದ ಅನಿವಾರ್ಯತೆಯನ್ನು ವ್ಯವಸ್ಥೆ ಒದಗುಮಾಡಿದೆ. ಅಂದರೆ ಲಿಂಗಾಧಾರಿತ ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಕುಟುಂಬದಲ್ಲಿನ ಹಿರಿಯರು ಚಿಕ್ಕ ಮಕ್ಕಳಿಗೆ ತಮ್ಮ ಪಾತ್ರ ಮಾದರಿಗಳನ್ನು ಸಿದ್ಧಗೊಳಿಸುತ್ತಾರೆ. ಹಾಗಾಗಿ ಚಿಕ್ಕವರು ಹಿರಿಯರನ್ನು ಅನುಕರಣೆ ಮಾಡುತ್ತಲೇ ಬೆಳೆಯುತ್ತವೆ. ಮುಖ್ಯವಾಗಿ ಗಂಡು ಮಗುವನ್ನು ತಂದೆಯ ಪಾತ್ರದಲ್ಲಿ ಮತ್ತು ಹೆಣ್ಣು ಮಗುವನ್ನು ತಾಯಿಯ ಪಾತ್ರದಲ್ಲಿ ಬೆಳೆಸುವುದು ಕುಟುಂಬದ ಮೊದಲ ಪಾತ್ರ ಹಂಚಿಕೆಯಾಗಿರುತ್ತದೆ. ಇದೆಲ್ಲಾ ನಡೆಯುವುದು ಸಾಮಾಜೀಕರಣದ ಮೂಲಕ. ಹಾಗಾಗಿಯೇ ಕುಟುಂಬದಲ್ಲಿನ ಈ ಬಗೆಯ ತಾರತಮ್ಯ ಮುಂದೆ ಮಹಿಳೆಯರ ಬದುಕಿನಲ್ಲಿ ಗಂಭೀರವಾದ ಪರಿಣಾಮವನ್ನು ಉಂಟುಮಾಡುತ್ತದೆ.

ವ್ಯವಸ್ಥೆಯಲ್ಲಿನ ಹಲವಾರು ರೂಢಿ, ಸಂಪ್ರದಾಯ, ಆಚರಣೆಗಳ ರೂಪದಲ್ಲಿ ಇಂದಿಗೂ ಮಾನವರಲ್ಲಿ ಹಾಸುಹೊಕ್ಕಾಗಿವೆ. ಇವುಗಳು ಅಸಮಾನ ನೆಲೆಗಳನ್ನು ಹೊಂದಿದ್ದು ಇದರಿಂದ ಹೊರಬರಲು ಪುರುಷಪ್ರಧಾನ ವ್ಯವಸ್ಥೆ ಪ್ರಯತ್ನಿಸುವುದಿಲ್ಲ. ಏಕೆಂದರೆ ಇವುಗಳು ಉದ್ದೇಶ ಪೂರ್ವಕವಾಗಿಯೇ ಜಾರಿಯಲ್ಲಿರುವಂತವುಗಳಾಗಿವೆ. ಹಾಗಾಗಿ ಪುರುಷಪ್ರಧಾನ ವ್ಯವಸ್ಥೆ ಇದನ್ನು ಹಾಗೆಯೇ ಮುಂದುವರೆಸಿಕೊಂಡು ನಡೆದಿದೆ. ಆದರೆ ಜಾರಿಯಲ್ಲಿರುವ ಆಚರಣೆಗಳು ಮಹಿಳೆಯರ ಮೇಲೆ ಹಲವಾರು ಕೆಟ್ಟ ಪರಿಣಾಮಗಳನ್ನು ಬೀರಿರುವುದು ಮತ್ತು ಬೀರುತ್ತಿರುವುದು ವಾಸ್ತವ. ಸಮಾಜದಲ್ಲಿನ ಮೂಢನಂಬಿಕೆಗಳು, ಅನಿಷ್ಠ ಪದ್ಧತಿಗಳು ಮಹಿಳೆಯರ ಮನೋಸ್ಥೈರ್ಯವನ್ನು ಧೃತಿಗೆಡಿಸಿವೆ. ಹಾಗಾಗಿ ಬಾಲ್ಯ ವಿವಾಹಗಳ ವಿರುದ್ಧವಾಗಿ ಮಾತನಾಡುವ ಸಾಹಸಕ್ಕೂ ಕೈಹಾಕದಿರುವಂತಹ ಸ್ಥಿತಿ ಮಹಿಳೆಯರದ್ದಾಗಿದೆ. ಈ ಹಿನ್ನೆಲೆಯಲ್ಲಿ ಬಾಲ್ಯ ವಿವಾಹವೂ ಹಿಂದಿನಿಂದಲೂ ಜಾರಿಯಲ್ಲಿರುವ ಒಂದು ಸಾಮಾಜಿಕ ಪಿಡುಗಾಗಿದೆಯಾದರೂ ಇದನ್ನು ಮುಂದುವರೆಸಿಕೊಂಡೇ ಹೋಗಬೇಕೆನ್ನುವ ಮನೋಭಾವ ಪುರುಷ ವ್ಯವಸ್ಥೆಯದ್ದು. ಏಕೆಂದರೆ, ಹೆಣ್ಣಿನ ಲೈಂಗಿಕತೆಯನ್ನು ಬಹು ಬೇಗನೇ ತನ್ನ ವಶದಲ್ಲಿ ತೆಗೆದುಕೊಳ್ಳಬೇಕು ಆಗಲೇ ಮಹಿಳೆಯರು ತನ್ನ ದಾಸಿಯರಾಗುತ್ತಾರೆ ಎಂಬ ಮನೋಭಾವ ವ್ಯವಸ್ಥೆಯದ್ದು. ಹಾಗಾಗಿಯೇ ಹೆಣ್ಣಿನ ಕನ್ಯತ್ವವನ್ನು ಕಾಪಾಡುವ ನೆಪವನ್ನೊಡ್ಡಿ ಬಾಲ್ಯ ವಿವಾಹಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ. ಆದ್ದರಿಂದಲೇ ಹಿಂದೆ ಋತುಮತಿಯಾಗುವ ಮುನ್ನವೇ ಮದುವೆ ಮಾಡಲು ಹವಣಿಸುತ್ತಿದ್ದರು. ಆದರೆ ಇದು ಸ್ವಲ್ಪ ಬದಲಾಗಿ ಈಗ ಋತುಮತಿಯಾದ ಹೆಣ್ಣನ್ನು ಬಹಳ ದಿನಗಳವರೆಗೆ ಕುಟುಂಬದಲ್ಲಿ ಇರಗೊಡಬಾರದು ಎಂಬ ನೆಪವೊಡ್ಡಿ ಬಹು ಬೇಗನೇ ವಿವಾಹ ಮಾಡಿಬಿಡುತ್ತಾರೆ. ಇದರಿಂದ ಮಹಿಳೆಯರ ಮೇಲೆ ಅಗಾಧವಾದ ದುಷ್ಪರಿಣಾಮಗಳು ಸಂಭವಿಸುತ್ತಲೇ ಇವೆ. ಈ ಬಗೆಯ ವಿವಾಹಗಳನ್ನು ತಡೆಯುವುದಕ್ಕೋಸ್ಕರ ಬಾಲ್ಯ ವಿವಾಹ ಪದ್ದತಿ ನಿಷೇಧ ಕಾಯಿದೆಯನ್ನು ಜಾರಿಗೆ ತರಲಾಗಿದೆ. ಆದರೆ ಇದರ ಕುರಿತು ಜನರಲ್ಲಿ ಅರಿವು ಇಲ್ಲದಾಗಿದೆ.

ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮದ ಕುರಿತು ಮತ್ತು ಬಾಲ್ಯ ವಿವಾಹ ನಿಷೇಧ ಕಾಯಿದೆಯ ಕುರಿತ ಅರಿವನ್ನು ಪಡೆಯುವುದಕ್ಕೆ ಸಂಬಂಧಿಸಿದಂತೆ ಮಹಿಳೆಯರು ಪುರುಷರಷ್ಟೇ ಸಮಾನ ಹಕ್ಕುಗಳನ್ನುಳ್ಳವರಾಗಿದ್ದಾರೆ. ಹಾಗಾಗಿ ಮಹಿಳೆಯರನ್ನು ಪರಾವಲಂಬಿಗಳೆಂದು ಗ್ರಹಿಸಿಕೊಂಡು ಆ ನೆಲೆಯಲ್ಲಿಯೇ ಮಹಿಳೆಯರನ್ನು ನಡೆಸಿಕೊಳ್ಳುವ ವ್ಯವಸ್ಥೆಯ ನಿಲುವುಗಳಲ್ಲಿ ತೀವ್ರ ಬದಲಾವಣೆಗಳಾಗಬೇಕಾಗಿದೆ. ಈ ನೆಲೆಯಲ್ಲಿ ಸ್ತ್ರೀ ಪುರುಷರಿಬ್ಬರೂ ಹೆಚ್ಚಿನ ರೀತಿಯಲ್ಲಿ ಇದರ ಅರಿವನ್ನು ಪಡೆಯುವಂತಾಗಬೇಕು ಮತ್ತು ಕಾನೂನನ್ನು ಸಮರ್ಥವಾಗಿ ಜಾರಿಗೊಳಿಸುವಂತಾಗಬೇಕು. ಈ ನಿಟ್ಟಿನಲ್ಲಿ ವ್ಯವಸ್ಥೆಯಲ್ಲಿ ಹಲವಾರು ಕಾರ್ಯಚಟುವಟಿಕೆಗಳು ನಡೆಯಬೇಕಾದ ಅನಿವಾರ್ಯತೆ ಇದೆ. ಮುಖ್ಯವಾಗಿ ಸಮಾನತೆಯ ಅರಿವನ್ನು ಮೂಡಿಸುವಲ್ಲಿ ಶಿಕ್ಷಣ, ಮಾಧ್ಯಮ, ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳು, ನ್ಯಾಯಾಂಗ ವ್ಯವಸ್ಥೆ ಇವುಗಳ ಪಾತ್ರ ಬಹು ದೊಡ್ಡದಿದೆ. ಇವುಗಳು ಯಾವ ಬಗೆಯಲ್ಲಿ ಕಾರ್ಯ ನಿರ್ವಹಿಸಿದರೆ ಬಾಲ್ಯವಿವಾಹಗಳನ್ನು ತಡೆಯಬಹುದು ಮತ್ತು ಆ ಮೂಲಕ ಮಹಿಳೆಯರ ಅಭಿವೃದ್ಧಿ ಸಾಧ್ಯವಾಗುತ್ತದೆ ಎಂಬುದನ್ನು ಮುಂದಿನ ಹಂತದಲ್ಲಿ ಒಂದೊಂದಾಗಿ ವಿವರಿಸಲಾಗಿದೆ. ಮುಖ್ಯವಾಗಿ ಸರ್ಕಾರಿ ಇಲಾಖೆಗಳು ಮತ್ತು ಸರ್ಕಾರೇತರ ಸಂಸ್ಥೆಗಳು ಬಾಲ್ಯವಿವಾಹಗಳನ್ನು ತಡೆಯುವುದಕ್ಕೋಸ್ಕರ ಈಗಾಗಲೇ ಕೈಗೊಂಡಿರುವ ಕ್ರಮಗಳಾವುವು ಎಂಬುದನ್ನು ಚರ್ಚಿಸುವ ಅಗತ್ಯತೆ ಇದೆ.

### ೮.೧. ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸುವಲ್ಲಿ ಸರ್ಕಾರಿ ಇಲಾಖೆಗಳ ಪಾತ್ರ

ಸಂವಿಧಾನ ಬದ್ಧವಾದ ಕಾನೂನುಗಳನ್ನು ಸಮಾಜದಲ್ಲಿ ಜಾರಿಗೊಳಿಸುವಲ್ಲಿ ಸರ್ಕಾರಿ ಇಲಾಖೆಗಳ ಪಾತ್ರ ಬಹು ದೊಡ್ಡದಿದೆ. ಏಕೆಂದರೆ, ಸರ್ಕಾರದ ಇಲಾಖೆಗಳು ಪ್ರತಿಯೊಂದು ಕಾನೂನನ್ನು ಜನರ ಬಳಿಗೆ ತಲುಪಿಸಲು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತವೆ. ರಾಜ್ಯ ಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ, ತಾಲೂಕು ಮಟ್ಟದಲ್ಲಿ, ಹಾಗೆಯೇ ಗ್ರಾಮ ಪಂಚಾಯತಿ ಮಟ್ಟದಲ್ಲಿ. ಹೀಗೆ ಪ್ರತಿಯೊಂದು ಹಂತದಲ್ಲಿಯೂ ಅಧಿಕಾರಗಳ ವಿಕೇಂದ್ರೀಕರಣ ಆಗಿರುವುದರಿಂದ ಸಮಾಜದ ಸ್ವಾಸ್ಥ್ಯವನ್ನು ಹಾಳುಮಾಡುತ್ತಿರುವ ಎಲ್ಲ ಬಗೆಯ ಅನಿಷ್ಠ ಆಚರಣೆಗಳನ್ನು, ಪದ್ಧತಿಗಳನ್ನು ನಿರ್ಮೂಲನೆ ಮಾಡಲು ಸಹಕಾರಿಯಾಗಿದೆ. ಮುಖ್ಯವಾಗಿ ಬಾಲ್ಯ ವಿವಾಹ ಪದ್ಧತಿಯನ್ನು ನಿರ್ಮೂಲನೆ ಮಾಡಲು ಸರ್ಕಾರಿ ಇಲಾಖೆಗಳು ಪ್ರತೀ ವರ್ಷ ಕೋಟಿಗಟ್ಟಲೆ ಹಣವನ್ನು ಖರ್ಚು ಮಾಡುತ್ತಲೇ ಇವೆ. ಆದರೆ ಬಾಲ್ಯ ವಿವಾಹಗಳು ಸಂಪೂರ್ಣವಾಗಿ ನಿಂತಿಲ್ಲ. ಆದರೂ ಪ್ರಯತ್ನಗಳು ನಡೆದೇ ಇವೆ. ಬಾಲ್ಯ ವಿವಾಹಗಳನ್ನು ನಿಷೇಧಿಸುವ ಸಲುವಾಗಿ ಸರ್ಕಾರದ ಮಟ್ಟದಲ್ಲಿ ಪ್ರತ್ಯೇಕ ಅಧಿಕಾರಿಗಳೇ ಇದ್ದಾರೆ. ಬಾಲ್ಯ ವಿವಾಹ ನಿಷೇಧ ಕಾಯಿದೆ ೨೦೦೬ರ ಪ್ರಕಾರ ರಾಜ್ಯ ಮಟ್ಟದಲ್ಲಿ, ಜಿಲ್ಲಾ, ತಾಲೂಕು ಮತ್ತು ಗ್ರಾಮಪಂಚಾಯತಿ ಮಟ್ಟದಲ್ಲಿ ಪ್ರತ್ಯೇಕವಾದ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ. ಇವರುಗಳನ್ನು ಹೆಸರಿಸುವುದಾದರೆ,

ರಾಜ್ಯ ಮಟ್ಟದ ಬಾಲ್ಯವಿವಾಹ ನಿಷೇಧ ಅಧಿಕಾರಿಗಳು: ನಿರ್ದೇಶಕರು, ಯೋಜನಾ ನಿರ್ದೇಶಕರು, ಐಸಿಪಿಎಸ್, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಇನ್ಸ್‌ಪೆಕ್ಟರ್ ಜೆನರಲ್ ಆಫ್ ಪೊಲೀಸ್, ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ನಿರ್ದೇಶಕರು, ಪಂಚಾಯತ್ ರಾಜ್ ಮತ್ತು ಗ್ರಾಮೀಣಾಭಿವೃದ್ಧಿ ಇಲಾಖೆ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಆಯುಕ್ತರು, ಕಾರ್ಮಿಕ ಇಲಾಖೆ, ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ನಿರ್ದೇಶಕರು, ಬುಡಕಟ್ಟು ಅಭಿವೃದ್ಧಿ ಇಲಾಖೆ ಇವರುಗಳೆಲ್ಲ ರಾಜ್ಯಮಟ್ಟದಲ್ಲಿ ಬಾಲ್ಯವಿವಾಹಗಳನ್ನು ತಡೆಯುವುದಕ್ಕೋಸ್ಕರ ಕಾರ್ಯನಿರ್ವಹಿಸುವ ಅಧಿಕಾರಿಗಳಾಗಿದ್ದಾರೆ. ಹಾಗೆಯೇ ಜಿಲ್ಲಾ ಮಟ್ಟದಲ್ಲಿಯೂ ಬಾಲ್ಯ ವಿವಾಹಗಳನ್ನು ತಡೆಯುವುದರ ಸಲುವಾಗಿ ಅಧಿಕಾರಿಗಳು ಕಾರ್ಯಪ್ರವೃತ್ತರಾಗಿದ್ದಾರೆ. ಅವರುಗಳೆಂದರೆ,

ಜಿಲ್ಲಾ ಮಟ್ಟದ ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳು: ಜಿಲ್ಲಾಧಿಕಾರಿಗಳು, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು, ಹಿರಿಯ ಮಕ್ಕಳ ಅಭಿವೃದ್ಧಿ ಅಧಿಕಾರಿ, ಸ್ಪೆಷಲ್ ಜುವೆನೈಲ್ ಪೊಲೀಸ್ ಯೂನಿಟ್, ಪೊಲೀಸ್ ಇಲಾಖೆ, ಉಪ ನಿರ್ದೇಶಕರು, ನಿರೂಪಣಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಅಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಅಭಿವೃದ್ಧಿ ಇಲಾಖೆ, ಪ್ರಾಜೆಕ್ಟ್ ಡೆವೆಲೆಪ್‌ಮೆಂಟ್ ಆಫೀಸರ್, ಬುಡಕಟ್ಟು ಅಭಿವೃದ್ಧಿ ಇಲಾಖೆ, ಜಿಲ್ಲಾ ಮಕ್ಕಳ ಸಂರಕ್ಷಣಾಧಿಕಾರಿ, ಐಸಿಪಿಎಸ್, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. ಈ ಮೇಲಿನ ಎಲ್ಲಾ ಅಧಿಕಾರಿಗಳು ಜಿಲ್ಲಾ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಾರೆ. ಇನ್ನು ತಾಲೂಕು ಮಟ್ಟದಲ್ಲಿನ ಬಾಲ್ಯವಿವಾಹಗಳನ್ನು ತಡೆಯುವ ಅಧಿಕಾರಿಗಳನ್ನು ಗುರುತಿಸುವುದಾದರೆ, ತಹಶೀಲ್ದಾರರು, ಕಾರ್ಮಿಕಾಧಿಕಾರಿಗಳು, ಕಾರ್ಮಿಕ ಇಲಾಖೆ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಸಂರಕ್ಷಣಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ತಾಲೂಕು ವೈದ್ಯಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಸರ್ಕಲ್ ಇನ್ಸ್‌ಪೆಕ್ಟರ್, ಪೊಲೀಸ್ ಇಲಾಖೆ, ಕಾರ್ಯ ನಿರ್ವಹಣಾಧಿಕಾರಿ, ತಾಲೂಕು ಪಂಚಾಯತಿ, ತಾಲೂಕು ಸಮಾಜ ಕಲ್ಯಾಣಾಧಿಕಾರಿ, ವಿಸ್ತರಣಾಧಿಕಾರಿ, ಹಿಂದುಳಿದ ವರ್ಗಗಳ ಅಭಿವೃದ್ಧಿ ಇಲಾಖೆ.

ಗ್ರಾಮ ಪಂಚಾಯಿತಿ/ನಗರಸಭೆ/ಪುರಸಭೆ ಮಟ್ಟದ ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳು : ಶಾಲಾ ಮುಖ್ಯೋಪಾಧ್ಯಾಯರು, ಕಂದಾಯ ನಿರೀಕ್ಷಕರು, ಆರೋಗ್ಯ ಅಧಿಕಾರಿಗಳು, ಗ್ರಾಮ ಲೆಕ್ಕಿಗರು, ಕಂದಾಯಾಧಿಕಾರಿಗಳು. ಹೀಗೆ ಬಾಲ್ಯ ವಿವಾಹ ಪದ್ಧತಿಯನ್ನು ತಡೆಗಟ್ಟಲು ಸಂವಿಧಾನ ಬದ್ಧವಾದ ಹಲವಾರು ನಿಯಮಗಳನ್ನು ರೂಪಿಸಲಾಗಿದೆ. ಆದರೆ

ಇವುಗಳನ್ನು ಸಂಪೂರ್ಣವಾಗಿ ತಡೆಗಟ್ಟಲು ಸಾಧ್ಯವಾಗುತ್ತಿಲ್ಲ ಎಂಬುದು ವಿಷಾಧನೀಯ ಸಂಗತಿಯಾಗಿದೆ.

ಹೀಗೆ ಬಾಲ್ಯ ವಿವಾಹ ಪದ್ಧತಿಯನ್ನು ಸಮಾಜದಿಂದ ಬುಡ ಸಮೇತ ಕಿತ್ತುಹಾಕಲು ರಾಜ್ಯಾದ್ಯಂತ ಪ್ರತ್ಯೇಕ ಅಧಿಕಾರಿಗಳ ತಂಡವೇ ರಚನೆಗೊಂಡಿದೆ. ಆದರೂ ಇವರುಗಳೆಲ್ಲರ ಕಾರ್ಯಪ್ರವೃತ್ತದ ನಡುವೆಯೂ ಬಾಲ್ಯ ವಿವಾಹಗಳು ಸಂಭವಿಸುತ್ತಿವೆ. ಇದಕ್ಕೆ ಹಲವಾರು ಕಾರಣಗಳಿರುವುದನ್ನು ಈಗಾಗಲೇ ವಿವರಿಸಿಕೊಳ್ಳಲಾಗಿದೆ. ಕಾನೂನಿನ ಅರಿವಿಗೆ ಸಂಬಂಧಿಸಿದಂತೆ ಮೇಲೆ ಸೂಚಿಸಿದ ಎಲ್ಲಾ ಸರ್ಕಾರಿ ಅಧಿಕಾರಿಗಳಿಗೂ ಮತ್ತು ಜನರ ನಡುವೆ ಬಹುದೊಡ್ಡ ಕಂದಕವಿದೆ. ಹಾಗಾಗಿ ಸರಿಯಾದ ರೀತಿಯಲ್ಲಿ ಜಾಗೃತಿ ಮೂಡಿಸಲಾಗುತ್ತಿಲ್ಲ ಮತ್ತು ಜನರು ಜಾಗೃತಗೊಳ್ಳುತ್ತಿಲ್ಲ. ಈ ಕಾರಣಕ್ಕಾಗಿ ಕೆಲವೊಂದು ಅನಿಷ್ಠ ಪದ್ಧತಿಗಳು ಹಾಗೆಯೇ ಮುಂದುವರೆದುಕೊಂಡು ಬಂದಿವೆ. ಈ ಎಲ್ಲವುಗಳ ನಡುವೆ ಬಾಲ್ಯ ವಿವಾಹದ ಕುರಿತು ಅರಿವನ್ನು ಮೂಡಿಸುವ ಸಲುವಾಗಿ ಸರ್ಕಾರಿ ಇಲಾಖಾ ಅಧಿಕಾರಿಗಳು ಹಲವಾರು ಕ್ರಮಗಳನ್ನು ಕೈಗೊಂಡಿರುವುದು ಕಂಡುಬರುತ್ತದೆ. ಮುಖ್ಯವಾಗಿ ಸರ್ಕಾರವು ಬಾಲ್ಯ ವಿವಾಹಗಳನ್ನು ತಡೆಯುವ ಸಲುವಾಗಿ ಪ್ರತ್ಯೇಕವಾದ ಅನುದಾನವನ್ನೇ ಮೀಸಲಿಟ್ಟಿದೆ. ಹೀಗೆ ಮೀಸಲಿಟ್ಟ ಅನುದಾನದಡಿಯಲ್ಲಿ ಸರ್ಕಾರಿ ಇಲಾಖಾ ಅಧಿಕಾರಿಗಳು ಮಾಡುವ ಕಾರ್ಯಗಳೆಂದರೆ,

ತಮ್ಮ ಮಕ್ಕಳನ್ನು ಬಾಲ್ಯ ವಿವಾಹಕ್ಕೆ ಒಳಗು ಮಾಡುವ ಪಾಲಕರಿಗೆ ಬಾಲ್ಯ ವಿವಾಹ ನಿಷೇಧ ಕಾನೂನಿನ ಬಗ್ಗೆ ಸಂಪೂರ್ಣವಾದ ಅರಿವನ್ನು ನೀಡುವ ಕಾರ್ಯ ಮಾಡಲಾಗುತ್ತಿದೆ. ಸಾಮೂಹಿಕ ವಿವಾಹಗಳಲ್ಲಿ ಬಾಲ್ಯ ವಿವಾಹಗಳು ನಡೆಯುತ್ತವೆಯಾದ್ದರಿಂದ ಯಾರು ಸಾಮೂಹಿಕ ವಿವಾಹಗಳನ್ನು ಏರ್ಪಡಿಸುತ್ತಿದ್ದಾರೆ ಅವರ ಬಗೆಗೆ ಸಂಪೂರ್ಣವಾದ ಮಾಹಿತಿಯನ್ನು ಸಂಗ್ರಹಿಸುವುದು ಮತ್ತು ಅವರಿಗೆ ಬಾಲ್ಯವಿವಾಹ ನಿಷೇಧ ಕಾಯಿದೆಯ ಬಗೆಗೆ ಅರಿವನ್ನು ಮೂಡಿಸುವ ಕಾರ್ಯ ನಡೆದಿದೆ. ಹಾಗೆಯೇ ಜಿಲ್ಲೆಯಲ್ಲಿ ವಿವಿಧ ಕಾಯ್ದೆಗಳಡಿ ನೋಂದಣಿಯಾಗಿರುವ ವಿವಿಧ ಸಂಘಗಳ ಕುರಿತಾಗಿ ಮಾಹಿತಿಯನ್ನು ಸಂಗ್ರಹಿಸುವ ಮತ್ತು ಕಾಯಿದೆಯ ಬಗೆಗೆ ತಿಳಿಯಪಡಿಸುವ ಕಾರ್ಯವನ್ನು ಮಾಡಲಾಗುತ್ತಿದೆ. ಬಾಲ್ಯ ವಿವಾಹಗಳ ಕುರಿತಾಗಿ ಪ್ರತೀ ಮೂರು ತಿಂಗಳಿಗೊಮ್ಮೆ ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಿಂದ ಮಾಹಿತಿಯನ್ನು ಸಂಗ್ರಹಿಸುವುದು. ಇಂತಹ ಹಲವಾರು ಕಾರ್ಯಗಳನ್ನು ಮಾಡಲಾಗುತ್ತಿದೆ. ಬಾಲ್ಯವಿವಾಹ ನಡೆಯುತ್ತಿರುವ ಸಂದರ್ಭದಲ್ಲಿ ಅಧಿಕಾರಿಗಳ ಪ್ರಥಮ ಗುರಿ ಕುಟುಂಬದ ಘನತೆ, ಗೌರವಕ್ಕೆ ಧಕ್ಕೆ ಬಾರದಂತೆ ಕುಟುಂಬದ ಸದಸ್ಯರಿಗೆ ಇದರಿಂದಾಗುವ ದುಷ್ಪರಿಣಾಮಗಳ ಬಗೆಗೆ ಮತ್ತು ಬಾಲ್ಯ ವಿವಾಹ ನಿಷೇಧ ಕಾಯಿದೆಯ ಬಗೆಗೆ ತಿಳಿಸಬೇಕು. ನಂತರ ಜನರು ಇದಕ್ಕೆ ಜಗ್ಗದೇ ಹೋದಲ್ಲಿ ಪ್ರಾಸಿಕ್ಯೂಷನ್‌ಗೆ ಪ್ರಯತ್ನಿಸಬೇಕು. ಸೆಕ್ಷನ್ ೩,೪,೫ ಹಾಗೂ ೧೩ರ ಅಡಿಯಲ್ಲಿ ನ್ಯಾಯಾಲಯಕ್ಕೆ ದೂರು ಸಲ್ಲಿಸುವ ಅಧಿಕಾರವನ್ನು ಬಾಲ್ಯ ವಿವಾಹ ನಿಷೇದಾಧಿಕಾರಿಗಳು ಹೊಂದಿರುತ್ತಾರೆ. ಸೆಕ್ಷನ್ ೧೬ರಂತೆ ಹೀಗೆ ಬಾಲ್ಯ ವಿವಾಹ ನಿಷೇಧ

ಅಧಿನಿಯಮವು ಅದರಡಿಯಲ್ಲಿ ಮಾಡಿರುವ ಆದೇಶವನ್ನು ಅಥವಾ ನಿಯಮಗಳನ್ನು ಪಾಲಿಸುವ ಸದುದ್ದೇಶದಿಂದ ಮಾಡಿದ ಕೆಲಸಗಳನ್ನು ಆಧರಿಸಿ ಬಾಲ್ಯ ವಿವಾಹ ನಿಷೇಧ ಅಧಿಕಾರಿಯ ಮೇಲೆ ಯಾವುದೇ ಮೊಕ್ಕದ್ದಮೆ, ಕಟ್ಟಳೆ ಅಥವಾ ಕಾನೂನು ಕ್ರಮಗಳನ್ನಾಗಲೀ ಜರುಗಿಸುವಂತಿಲ್ಲ. ಹೀಗೆ ಅಧಿಕಾರಿಗಳಿಗೆ ವಿಶೇಷ ಅಧಿಕಾರಗಳನ್ನು ಕೊಡಲಾಗಿದೆ.

ಬಾಲ್ಯ ವಿವಾಹ ನಿಷೇಧ ಕಾಯಿದೆ ೨೦೦೬ನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ಸಲುವಾಗಿ ಕರ್ನಾಟಕ ಉಚ್ಚನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ:೧೧೫೪/೨೦೦೬ರಲ್ಲಿ ನೀಡಿದ ನಿರ್ದೇಶನದಂತೆ ಕ್ರಿಯಾ ಯೋಜನೆಯನ್ನು ತಯಾರಿಸಲು ಸರ್ಕಾರವು ಭಾರತದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳಾದ ಜಸ್ಟೀಸ್ ಶಿವರಾಜ್ ವಿ ಪಾಟೀಲ್ ಇವರ ಅಧ್ಯಕ್ಷತೆಯಲ್ಲಿ ಕೋರ್ ಕಮಿಟಿಯನ್ನು ರಚಿಸಿದ್ದು, ಈ ಕಮಿಟಿಯು ದಿನಾಂಕ ೩೦-೦೬-೨೦೧೧ರಂದು ಅಂತಿಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ. ಈ ವರದಿಯ ಪ್ರಕಾರ ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧ ಮೂಡಲು ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದೆ. ಮುಖ್ಯವಾಗಿ ಸರ್ಕಾರವು ಇದಕ್ಕಾಗಿಯೇ ಪ್ರತ್ಯೇಕವಾದ ಅನುದಾನವನ್ನು ಮೀಸಲಿಟ್ಟಿರುವುದು ಕಂಡುಬರುತ್ತದೆ. ಈ ವರದಿಯ ಪ್ರಕಾರ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯದಲ್ಲಿ ಒಬ್ಬರು ಉಪನಿರ್ದೇಶಕರು, ಒಬ್ಬರು ಸಹಾಯಕ ನಿರ್ದೇಶಕರು, ಇಬ್ಬರು ಪ್ರಥಮ ದರ್ಜೆ ಸಹಾಯಕರು, ಇಬ್ಬರು ಗಣಕಯಂತ್ರ ಸಹಾಯಕರು ಮತ್ತು ಒಬ್ಬರು ಸೇವಕರನ್ನೊಳಗೊಂಡಂತೆ ಉಸ್ತುವಾರಿ ಕೋಶವನ್ನು ಸ್ಥಾಪಿಸಲಾಗಿದೆ. ಬಾಲ್ಯ ವಿವಾಹ ನಿಷೇಧ ಕಾಯಿದೆಯ ಅನುಷ್ಠಾನಕ್ಕಾಗಿ ೨೦೧೨-೧೩ನೇ ಸಾಲಿನಲ್ಲಿ ರೂ ೧೫೦ ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಇದರಲ್ಲಿ ರೂ.೧೧೦.೬೨ ಲಕ್ಷಗಳನ್ನು ಇದುವರೆಗೆ ವಿವಿಧ ಕಾರ್ಯಕ್ರಮಗಳಿಗಾಗಿ ವೆಚ್ಚ ಮಾಡಲಾಗಿದೆ.

ಬಾಲ್ಯ ವಿವಾಹ ನಿಷೇಧ ಕುರಿತಂತೆ ಆಕಾಶವಾಣಿಯಲ್ಲಿ "ಜೀವನ ಮಲ್ಲಿಗೆ ಅರಳಲಿ ಮೆಲ್ಲಗೆ" ಎಂಬ ಸರಣಿ ಕಾರ್ಯಕ್ರಮವನ್ನು ಪ್ರತೀ ಶುಕ್ರವಾರ ಬೆಳಿಗ್ಗೆ ೭-೧೫ ನಿಮಿಷದಿಂದ ೭-೩೦ರ ವರೆಗೆ ಪ್ರಸಾರ ಮಾಡಲಾಗುತ್ತಿದೆ. ಹಾಗೂ ಎಫ್.ಎಂ.ರೈನ್‌ಬೋದಲ್ಲಿ ಪ್ರತೀ ಶನಿವಾರ ಬೆಳಿಗ್ಗೆ ೮-೪೫ರಿಂದ ೯-೦೦ವರೆಗೆ ಪ್ರಸಾರ ಮಾಡಲಾಗುತ್ತಿದೆ. ಈ ಎಲ್ಲಾ ಕಾರ್ಯಕ್ರಮಗಳಿಗೆ ರೂ.೧೦,೮೦,೫೧೭/-ಗಳನ್ನು ಬಿಡುಗಡೆ ಮಾಡಲಾಗಿದೆ. ಹಾಗೆಯೇ ಜೀವನ ಮಲ್ಲಿಗೆ ಅರಳಲಿ ಮೆಲ್ಲಗೆ ಕಾರ್ಯಕ್ರಮದಲ್ಲಿ ಪ್ರತೀ ವಾರ ಒಂದು ಪ್ರಶ್ನೆಯನ್ನು ಕೇಳಲಾಗುತ್ತದೆ. ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ನೀಡುವ ಶ್ರೋತೃಗಳಿಗೆ ರೂ.೫೦೦ಗಳನ್ನು ಬಹುಮಾನವಾಗಿ ನೀಡಲಾಗುತ್ತಿದೆ. ಹೀಗೆ ಮಾಡುವುದರಿಂದ ಜನರು ಈ ಕಾರ್ಯಕ್ರಮವನ್ನು ತಪ್ಪದೇ ಕೇಳುತ್ತಾರೆ, ಆ ಮೂಲಕ ಬಾಲ್ಯ ವಿವಾಹದ ಕುರಿತು ಅರಿವನ್ನು ಪಡೆಯುತ್ತಾರೆ ಎಂಬ ಆಶಯವಿದೆ.

ಜಿಲ್ಲಾ ಮತ್ತು ತಾಲೂಕು ಮಟ್ಟದಲ್ಲಿ ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಕುರಿತು ಮತ್ತು ಕಾಯಿದೆಯ ಕುರಿತು ಗೋಡೆ ಬರಹಗಳನ್ನು ಬರೆಸಲಾಗಿದೆ. ಇದಕ್ಕೆ ರೂ.

೧೦,೭೫,೦೦೦ಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಹಾಗೆಯೇ ೧೭ ಜಿಲ್ಲೆಗಳಲ್ಲಿ ಬಾಲ್ಯ ವಿವಾಹ ನಿಷೇಧದ ಕುರಿತು ಜನರಲ್ಲಿ ಅರಿವು ಮೂಡಿಸುವ ಸಲುವಾಗಿ ಬೀದಿ ನಾಟಕ, ಕಲಾಜಾಥಾ ಮತ್ತು ಸೈಕಲ್ ಜಾಥಾಗಳ ಮೂಲಕ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಈ ಎಲ್ಲಾ ಕಾರ್ಯಕ್ರಮಗಳಿಗೆ ೭,೧೪,೦೦೦ ರೂಪಾಯಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಜೊತೆಗೆ ಜಸ್ಟೀಸ್ ಶಿವರಾಜ್ ವಿ ಪಾಟೀಲ್‌ರವರು ನೀಡಿದ ವರದಿಯನ್ನು ಕನ್ನಡದಲ್ಲಿ ಭಾಷಾಂತರಿಸಲು ರೂ.೧,೧೫,೦೦೦ಗಳನ್ನು ವೆಚ್ಚ ಮಾಡಲಾಗಿದೆ. ಇದರಿಂದ ೧೦,೦೦೦ ಪ್ರತಿಗಳನ್ನು ಮುದ್ರಿಸಲಾಗಿದೆ. ಮುದ್ರಣಕ್ಕೆ ಸುಮಾರು ೭,೯೪,೮೮೫ ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ.

ಶಾಲಾ ಕಾಲೇಜುಗಳಲ್ಲಿ ಬಾಲ್ಯ ವಿವಾಹ ನಿಷೇಧ ಕಾಯಿದೆಯ ಬಗೆಗೆ ಅರಿವನ್ನು ಮೂಡಿಸುವ ಸಲುವಾಗಿ ಪ್ರೌಢಶಾಲೆ ಮತ್ತು ಪದವಿಪೂರ್ವ ಕಾಲೇಜು ವಿದ್ಯಾರ್ಥಿಗಳಿಗೆ ಭಾಷಣ ಸ್ಪರ್ಧೆಗಳನ್ನು ಏರ್ಪಡಿಸಲಾಗಿದೆ. ಈ ಕಾರ್ಯಕ್ರಮಗಳಿಗೆ ೧೭,೦೪,೯೦೦ ರೂಪಾಯಿಗಳನ್ನು ಬಿಡುಗಡೆ ಮಾಡಲಾಗಿದೆ. ಬಾಲ್ಯ ವಿವಾಹ ನಿಷೇಧದ ಕುರಿತು ಬ್ರೋಷರ್ಗಳು, ಎಫ್.ಎ.ಕ್ಯೂಗಳನ್ನು ಮುದ್ರಿಸಿ ಜಿಲ್ಲೆಗಳಿಗೆ ಹಂಚಿಕೆ ಮಾಡಲಾಗಿದೆ. ಹಾಗೆಯೇ ಯುನಿಸೆಫ್ ಸಂಸ್ಥೆಯ ಜೊತೆಗೂಡಿ ೫ ಬಗೆಯ ಪೋಸ್ಟರ್‌ಗಳನ್ನು ಮುದ್ರಿಸಿ ಪ್ರತೀ ಜಿಲ್ಲೆಗೂ ಹಂಚಿಕೆ ಮಾಡಲಾಗಿದೆ. ಹೀಗೆ ಬಾಲ್ಯ ವಿವಾಹ ನಿಷೇಧ ಕುರಿತ ಪೋಸ್ಟರ್‌ಗಳು ಮತ್ತು ಸ್ಟಿಕ್ಕರ್‌ಗಳ ಮುದ್ರಣಕ್ಕಾಗಿ ೩೦,೨೯,೯೨೦ ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ. ೩೦ ಜಿಲ್ಲೆಗಳ ಜಿಲ್ಲಾ ಮಟ್ಟದ ಬಾಲ್ಯ ವಿವಾಹ ನಿಷೇಧಾಧಿಕಾರಿಗಳಿಗೆ ಬೆಂಗಳೂರಿನಲ್ಲಿ ವಿಶೇಷ ತರಬೇತಿಯನ್ನು ನೀಡಲಾಗಿದೆ. ಹಾಗೆಯೇ ೧೫ ಜಿಲ್ಲೆಗಳ ತಾಲೂಕು ಮಟ್ಟದ ಬಾಲ್ಯ ವಿವಾಹ ನಿಷೇಧಾಧಿಕಾರಿಗಳಿಗೆ ತರಬೇತಿಗಳನ್ನು ನಡೆಸಲಾಗಿದೆ. ಇದಕ್ಕೆ ಸುಮಾರು ೨.೬೯ ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ. ಜೊತೆಗೆ ಉಳಿದ ಜಿಲ್ಲೆಗಳಲ್ಲಿ ತರಬೇತಿಯನ್ನು ಹಮ್ಮಿಕೊಳ್ಳಲು ಕ್ರಮ ಕೈಗೊಳ್ಳಲಾಗಿದೆ.

ಬಾಲ್ಯ ವಿವಾಹ ನಿಷೇಧ ಕುರಿತು "ಕಮಲಿ" ಎಂಬ ಸಾಕ್ಷಚಿತ್ರವನ್ನು ತಯಾರಿಸಿದ್ದು, ಇದಕ್ಕಾಗಿ ೧.೫೦ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ. ಹಾಗೆಯೇ ೨೧,೧೫,೦೦೦ ರೂಪಾಯಿಗಳ ವೆಚ್ಚದಲ್ಲಿ ರಾಜ್ಯದ ವಾರ್ತಾ ಇಲಾಖೆಯ ವಿವಿಧ ಸ್ಥಳಗಳಲ್ಲಿ ೩೦೦ ಫಲಕಗಳನ್ನು ಬಾಲ್ಯ ವಿವಾಹದ ವಿರುದ್ಧ ಪ್ರದರ್ಶಿಸಲಾಗಿದೆ. ಈ ಎಲ್ಲಾ ಕ್ರಮಗಳನ್ನು ಕೈಗೊಂಡ ಪರಿಣಾಮವಾಗಿ ೦೧.೦೪.೨೦೧೨ರಿಂದ ೩೧.೦೩.೨೦೧೩ರ ವರೆಗೆ ೧೪೭ ಬಾಲ್ಯ ವಿವಾಹಗಳನ್ನು ತಡೆಗಟ್ಟಲಾಗಿದೆ. ಹೀಗೆ ಸರ್ಕಾರಿ ಇಲಾಖೆಗಳು ಅದರಲ್ಲಿಯೂ ಮುಖ್ಯವಾಗಿ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಮಾಡಬೇಕಾದ ಕಾರ್ಯಗಳು ಯಾವುವು ಎಂಬುದನ್ನು ಖಚಿತವಾಗಿ ತಿಳಿಸಲಾಗಿದೆ. ಈ ಇಲಾಖೆಯ ಜೊತೆಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಪೊಲೀಸ್ ಇಲಾಖೆ, ಶಿಕ್ಷಣ ಇಲಾಖೆ ಮುಂತಾದವೂ ಬಾಲ್ಯ ವಿವಾಹಗಳನ್ನು

ತಡೆಗಟ್ಟುವ ಸಲುವಾಗಿ ತಮ್ಮದೇ ಆದ ಕಾರ್ಯಕ್ರಮಗಳನ್ನು ರೂಪಿಸುವುದರ ಮೂಲಕ ಕಾರ್ಯಪ್ರವೃತ್ತವಾಗಿವೆ. ಆರೋಗ್ಯ ಇಲಾಖೆಯ ವ್ಯಾಪ್ತಿಗೆ ಬರುವ ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಪ್ರತ್ಯೇಕವಾದ ಸಮಿತಿಗಳನ್ನೇ ರಚಿಸಲಾಗಿರುತ್ತದೆ. ಈ ಸಮಿತಿಯು ತನ್ನ ವ್ಯಾಪ್ತಿ ಪ್ರದೇಶದಲ್ಲಿ ನಡೆಯುವ ಬಾಲ್ಯ ವಿವಾಹಗಳ ಬಗೆಗೆ ಸದಾ ಜಾಗೃತವಾಗಿರುತ್ತದೆ ಮತ್ತು ಆರೋಗ್ಯ ಕೇಂದ್ರಕ್ಕೆ ತಪಾಸಣೆಗೆ ಬರುವಂತಹ ಗರ್ಭಿಣಿ ಮಹಿಳೆಯರ ಕುರಿತಾಗಿ ವಿಶೇಷ ಕಾಳಜಿಯನ್ನು ವಹಿಸುವುದರ ಮೂಲಕ ಅವರ ಮತ್ತು ಗಂಡನ ವಯಸ್ಸು, ಹುಟ್ಟಿದ ಮತ್ತು ವಿವಾಹದ ದಿನಾಂಕಗಳನ್ನು ಕಡ್ಡಾಯವಾಗಿ ನಮೂಧಿಸಲಾಗುತ್ತಿದೆ. ಆ ಸಂದರ್ಭದಲ್ಲಿ ಅವರು ಯಾವ ವಯಸ್ಸಿನಲ್ಲಿ ವಿವಾಹವಾಗಿದ್ದಾರೆ ಎಂಬುದು ತಿಳಿದು ಬರುತ್ತದೆ. ಒಂದುವೇಳೆ ಬಾಲ್ಯ ವಿವಾಹಕ್ಕೆ ಒಳಗಾಗಿದ್ದರೆ, ಅಂಥ ಕುಟುಂಬ ಸದಸ್ಯರ ಜೊತೆ ಮಾತನಾಡುವುದರ ಮೂಲಕ ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಕುರಿತು ಮತ್ತು ಬಾಲ್ಯ ವಿವಾಹ ನಿಷೇಧ ಕಾಯಿದೆಯ ಕುರಿತು ತಿಳಿ ಹೇಳುವಂತಹ ಕಾರ್ಯ ನಡೆದಿದೆ. ಇದರಿಂದ ಮುಂದೆ ಆ ಕುಟುಂಬದಲ್ಲಿ ನಡೆಯಬಹುದಾದ ಬಾಲ್ಯ ವಿವಾಹಗಳನ್ನು ತಪ್ಪಿಸಿದಂತಾಗುತ್ತದೆ. ಹೀಗೆ ಸರ್ಕಾರಿ ಇಲಾಖೆಗಳಲ್ಲಿ ಬಾಲ್ಯ ವಿವಾಹ ನಿಷೇಧದ ಕುರಿತು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ಬಾಲ್ಯ ವಿವಾಹಗಳನ್ನು ನಿರ್ಮೂಲನೆ ಮಾಡಲು ಬಾಲ್ಯ ವಿವಾಹ ನಿಷೇಧ ಕಾಯಿದೆ ಜಾರಿಯಲ್ಲಿರುವಂತೆ ಇದಕ್ಕೆ ಪೂರಕವಾಗಿ ಹಲವಾರು ಯೋಜನೆಗಳನ್ನು ಜಾರಿಗೆ ತರಲಾಗಿದೆ. ಮುಖ್ಯವಾಗಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಹೆಣ್ಣುಮಕ್ಕಳ ಶಿಕ್ಷಣ ಮಟ್ಟವನ್ನು ಹೆಚ್ಚಿಸುವ ಸಲುವಾಗಿ ಮತ್ತು ಅವರ ಅಭಿವೃದ್ಧಿಯ ಕಾರಣವನ್ನಿಟ್ಟುಕೊಂಡು ಯೋಜನೆಗಳನ್ನು ರೂಪಿಸಿವೆ. ಈ ಯೋಜನೆಗಳು ಬಾಲ್ಯ ವಿವಾಹಗಳನ್ನು ನಿಷೇಧಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿವೆ. ಅವುಗಳನ್ನು ಎರಡು ನೆಲೆಗಳಲ್ಲಿ ಗುರುತಿಸಲಾಗುವುದು. ೧. ರಾಷ್ಟ್ರೀಯ ಯೋಜನೆಗಳು ೨. ರಾಜ್ಯಮಟ್ಟದ ಯೋಜನೆಗಳು. ಇವುಗಳನ್ನು ಒಂದೊಂದಾಗಿ ಮುಂದಿನಂತೆ ವಿವರಿಸಿಕೊಳ್ಳಲಾಗಿದೆ.

**೮.೧.೧. ರಾಷ್ಟ್ರೀಯ ಯೋಜನೆಗಳು** : ದೇಶದಲ್ಲಿ ಹಲವಾರು ಯೋಜನೆಗಳು ಮಹಿಳೆಯರ ಮತ್ತು ಹೆಣ್ಣುಮಕ್ಕಳ ಅಭಿವೃದ್ಧಿಗಾಗಿಯೇ ರೂಪಿತಗೊಂಡಿರುವುದು ಕಂಡುಬರುತ್ತದೆ. ಮುಖ್ಯವಾಗಿ ಹೆಣ್ಣುಮಕ್ಕಳ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಬೆಳವಣಿಗೆಗೆ ಈ ಯೋಜನೆಗಳು ಸಹಕಾರಿಯಾಗಿವೆ. ಸಮಾಜದಲ್ಲಿ ಹೆಣ್ಣನ್ನು ಹೊರೆಯೆಂದು ಭಾವಿಸುವ ಕುಟುಂಬದ ಸದಸ್ಯರ ಮನೋಭಾವನೆಗಳನ್ನು ಬದಲಾಯಿಸುವಲ್ಲಿ ಈ ಯೋಜನೆಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಅವುಗಳೆಂದರೆ ಬಾಲಿಕಾ ಸಮೃದ್ಧಿ ಯೋಜನೆ, ಸ್ವಯಂಸಿದ್ಧ ಯೋಜನೆ, ಸ್ವಾಧಾರ್ ಯೋಜನೆ, ಕಿಶೋರಿಶಕ್ತಿ ಯೋಜನೆ, ಉಜ್ವಲ ಯೋಜನೆ ಹೀಗೆ ಹಲವಾರು ಯೋಜನೆಗಳು

ಹೆಣ್ಣುಮಕ್ಕಳ ಅಭಿವೃದ್ಧಿಗಾಗಿ ರೂಪಿತಗೊಂಡಿವೆ. ಇವುಗಳು ಸರಿಯಾದ ರೀತಿಯಲ್ಲಿ ಜನರಿಗೆ ತಲುಪಿದಲ್ಲಿ ಬಾಲ್ಯ ವಿವಾಹಗಳ ಸಂಖ್ಯೆಯೂ ಕಡಿಮೆಯಾಗುತ್ತದೆ.

**೮.೧.೨. ರಾಜ್ಯಮಟ್ಟದ ಯೋಜನೆಗಳು** : ಪ್ರತಿಯೊಂದು ರಾಜ್ಯವೂ ಹೆಣ್ಣುಮಕ್ಕಳ ಸಬಲೀಕರಣಕ್ಕೆ ತಮ್ಮದೇ ಆದ ಯೋಜನೆಗಳನ್ನು ರೂಪಿಸಿಕೊಳ್ಳುತ್ತವೆ. ಕರ್ನಾಟಕದಲ್ಲಿ ಹೀಗೆ ರೂಪಿತಗೊಂಡ ಹಲವು ಯೋಜನೆಗಳು ಹೆಣ್ಣುಮಕ್ಕಳ ಮತ್ತು ಮಹಿಳೆಯರ ಏಳಿಗೆಗಾಗಿ ಜಾರಿಯಾಗಿವೆ. ಆದರೆ ಇವುಗಳು ಎಷ್ಟು ಫಲಕಾರಿಯಾಗಿವೆ ಎಂಬುದು ಬೇರೊಂದು ಚರ್ಚೆಯನ್ನು ಬಯಸುತ್ತದೆ. ಬದಲಾಗಿ ಕರ್ನಾಟಕದಲ್ಲಿ ಮಹಿಳೆಯರ ಅಭಿವೃದ್ಧಿಗಾಗಿ ಇರುವ ಯೋಜನೆಗಳನ್ನು ತಿಳಿಯುವುದರ ಜೊತೆಗೆ ಈ ಯೋಜನೆಗಳಿಗೂ ಮತ್ತು ಬಾಲ್ಯ ವಿವಾಹಕ್ಕೂ ಇರುವ ಸಂಬಂಧಗಳನ್ನು ಗುರುತಿಸಲಾಗುವುದು. ಹಾಗೆಯೇ ಈ ಯೋಜನೆಗಳಿಂದಾಗಿ ಬಾಲ್ಯವಿವಾಹಗಳನ್ನು ಹೇಗೆ ತಡೆಗಟ್ಟಬಹುದು ಎಂಬುದನ್ನು ವಿಶ್ಲೇಷಿಸಲಾಗುವುದು.

**ಅ. ಭಾಗ್ಯಲಕ್ಷ್ಮಿ ಯೋಜನೆ** : ಹೆಣ್ಣುಮಕ್ಕಳ ಉತ್ತಮ ಭವಿಷ್ಯಕ್ಕಾಗಿ ರೂಪಿತಗೊಂಡಿರುವ ಈ ಯೋಜನೆಯು ರಾಜ್ಯದಲ್ಲಿ ೨೦೦೬ರಿಂದಲೇ ಜಾರಿಯಲ್ಲಿದೆ. ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿ ಜನಿಸಿರುವ ಹೆಣ್ಣು ಮಗುವಿಗಾಗಿ ರೂಪಿಸಲಾಗಿರುವ ಯೋಜನೆಯಾಗಿದೆ. ಮಾರ್ಚ ೩೧, ೨೦೦೬ರ ನಂತರ ಜನಿಸಿರುವ ಬಡತನ ರೇಖೆಗಿಂತ ಕೆಳಗಿನ ಹೆಣ್ಣುಮಕ್ಕಳು ಈ ಯೋಜನೆಯ ಫಲಾನುಭವಿಗಳಾಗಿರುತ್ತಾರೆ. ಈ ಯೋಜನೆ ಕೆಲವು ಷರತ್ತುಗಳನ್ನು ಹಾಕಿದೆ. ಮುಖ್ಯವಾಗಿ ಮಗುವಿನ ಜನನ ಸರ್ಕಾರಿ ಆಸ್ಪತ್ರೆಯಲ್ಲಿಯೇ ಆಗಿರಬೇಕು, ಅಂಗನವಾಡಿ ಕೇಂದ್ರದಲ್ಲಿ ನಮೂದಾಗಿರಬೇಕು, ಶಿಕ್ಷಣ ಇಲಾಖೆಯಿಂದ ಮಾನ್ಯತೆ ಪಡೆದ ಅಥವಾ ಸರ್ಕಾರಿ ಶಾಲೆಗಳಲ್ಲಿ ಓದಿಗಾಗಿ ದಾಖಲಾಗಿರಬೇಕು, ಬಾಲ ಕಾರ್ಮಿಕರಾಗಿರಬಾರದು ಮತ್ತು ೧೮ ವರ್ಷ ವಯಸ್ಸಿನೊಳಗೆ ವಿವಾಹ ಮಾಡಬಾರದು. ಈ ಎಲ್ಲಾ ಷರತ್ತುಗಳಿಗೆ ಒಳಪಟ್ಟಾಗ ಈ ಯೋಜನೆಯ ಫಲಾನುಭವಿಯಾಗಬಹುದು. ಇದು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವ್ಯಾಪ್ತಿಗೆ ಒಳಪಡುತ್ತದೆ. ಈ ಇಲಾಖೆಯಲ್ಲಿ ದಾಖಲೆಗಳನ್ನು ಪರಿಶೀಲಿಸಿದ ನಂತರವೇ ಈ ಯೋಜನೆಗೆ ಒಳಪಡಿಸಲಾಗುತ್ತದೆ. ಇದೊಂದು ಉತ್ತಮ ಯೋಜನೆಯಾಗಿದ್ದು, ಬಾಲ್ಯ ವಿವಾಹವನ್ನು ತಡೆಯಲು ಸಹಕಾರಿಯಾಗಿದೆ. ಏಕೆಂದರೆ ಸಮಾಜದಲ್ಲಿ ಹೆಣ್ಣನ್ನು ಹೊರೆಯೆಂದು ಭಾವಿಸುವ ಸಂದರ್ಭದಲ್ಲಿ ಈ ಯೋಜನೆಯ ಜಾರಿ ಈ ಮನೋಭಾವವನ್ನು ದೂರ ಮಾಡುವಲ್ಲಿ ಯಶಸ್ವಿಯಾಗುತ್ತದೆ. ಹೆಣ್ಣುಮಗು ತನಗೆ ೧೮ ವರ್ಷಗಳು ತುಂಬುವವರೆಗೂ ಶಾಲೆಯಿಂದ ದೂರ ಉಳಿಯುವ ಹಾಗಿಲ್ಲ. ೧೮ ವರ್ಷ ತುಂಬಿದ ನಂತರವೇ ವಿವಾಹಕ್ಕೆ ಒಳಪಡಬೇಕಾಗುತ್ತದೆ. ಹಾಗಾಗಿ ಈ ಷರತ್ತು ಬಾಲ್ಯ ವಿವಾಹಗಳಿಗೆ ಕಡಿವಾಣ ಹಾಕುತ್ತದೆ.

**ಆ. ಹೆಣ್ಣುಮಕ್ಕಳಿಗೆ ವಸತಿನಿಲಯಗಳ ವ್ಯವಸ್ಥೆ** : ಗ್ರಾಮೀಣ ಹೆಣ್ಣುಮಕ್ಕಳು ಉನ್ನತ ಶಿಕ್ಷಣವನ್ನು ಪಡೆಯುವ ಸಲುವಾಗಿ ಮತ್ತು ಶಾಲೆ ಬಿಡುವವರ ಸಂಖ್ಯೆಯನ್ನು ಕಡಿಮೆ ಮಾಡುವುದರ ಸಲುವಾಗಿ ಈ ಯೋಜನೆಯನ್ನು ಜಾರಿಗೆ ತರಲಾಗಿದೆ. ಕುಟುಂಬದ ವಾರ್ಷಿಕ ಆದಾಯ

೧೦,೦೦೦ಕ್ಕಿಂತ ಕಡಿಮೆ ಇರುವ ಕುಟುಂಬಗಳ ಹೆಣ್ಣುಮಕ್ಕಳಿಗಾಗಿ ಹಾಸ್ಟೆಲ್ ಸೌಲಭ್ಯವನ್ನು ಮಾಡಿಕೊಡಲಾಗಿದೆ. ಇದರಿಂದಾಗಿ ಅವರ ಶಿಕ್ಷಣ ಮೊಟಕುಗೊಳ್ಳುವುದಿಲ್ಲ. ೬ನೆಯ ತರಗತಿಯಿಂದ ಹಿಡಿದು ಪಿಯುಸಿ ಹಂತದವರೆಗೂ ಹಾಸ್ಟೆಲ್ ಸೌಲಭ್ಯವನ್ನು ಒದಗಿಸಿಕೊಡಲಾಗಿದೆ. ಇದರ ಮುಖ್ಯ ಉದ್ದೇಶ ಯಾವ ಕುಟುಂಬ ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ಕೊಡಿಸುವುದರಲ್ಲಿ ಹಿಂದೇಟಾಕುತ್ತಿದೆಯೋ ಅಂತಹ ಕುಟುಂಬದ ಹೆಣ್ಣುಮಕ್ಕಳು ಉನ್ನತ ಶಿಕ್ಷಣವನ್ನು ಪಡೆಯಬೇಕು, ಆ ಮೂಲಕ ಅವರು ಅಭಿವೃದ್ಧಿಯನ್ನು ಹೊಂದಬೇಕು ಎಂಬುದು ಇದರ ಆಶಯವಾಗಿದೆ. ಹೀಗೆ ಮಾಡುವುದರಿಂದ ಹೆಣ್ಣುಮಕ್ಕಳು ಶಿಕ್ಷಣ ಪಡೆಯುವುದರೊಂದಿಗೆ ಬಾಲ್ಯ ವಿವಾಹಗಳಿಂದಲೂ ಮುಕ್ತಿ ಪಡೆಯುತ್ತಾರೆ.

ಇ. **ಶಾಲೆಗಳಲ್ಲಿ ಹಾಜರಾತಿಗೆ ಅನುಗುಣವಾಗಿ ಗ್ರಾಮೀಣ ಹೆಣ್ಣುಮಕ್ಕಳಿಗೆ ಧನ ಸಹಾಯ ಯೋಜನೆ** : ಗ್ರಾಮೀಣ ಭಾಗಗಳಲ್ಲಿ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವುದೇ ಕಡಿಮೆ. ಒಂದುವೇಳೆ ಕಳುಹಿಸಿದರೂ ಅವರು ಪ್ರಾಥಮಿಕ ಶಿಕ್ಷಣವನ್ನು ಸರಿಯಾಗಿ ಪೂರೈಸುತ್ತಾರೆ ಎಂಬ ನಂಬಿಕೆ ಇಲ್ಲ. ಏಕೆಂದರೆ ಹೆಣ್ಣುಮಕ್ಕಳು ಶಾಲೆ ಕಲಿತು ಏನು ಮಾಡುವುದಿದೆ, ಅವರಿಗೆ ಮುಸುರೆ ತಿಕ್ಕುವುದಂತೂ ತಪ್ಪುವುದಿಲ್ಲ ಎಂಬ ಮನೋಭಾವ ಗ್ರಾಮೀಣ ಜನರಲ್ಲಿದೆ. ಹಾಗಾಗಿ ಶಾಲೆಯನ್ನು ಅರ್ಧಕ್ಕೆ ನಿಲ್ಲಿಸಿ ವಿವಾಹ ಮಾಡುವ ಜನರೂ ಇದ್ದಾರೆ. ಇಂತಹ ಸಂದರ್ಭದಲ್ಲಿ ರಾಜ್ಯದಲ್ಲಿ ಒಂದು ಯೋಜನೆಯನ್ನು ಜಾರಿಗೆ ತಂದಿದೆ. ಯಾವ ಹೆಣ್ಣುಮಗು ಶಾಲೆಗೆ ದಾಖಲಾಗಿ ಶೇ.೮೦ರಷ್ಟು ಹಾಜರಾತಿಯನ್ನು ಹೊಂದಿರುತ್ತದೆಯೋ ಮತ್ತು ಪರೀಕ್ಷೆಯನ್ನು ಪೂರ್ಣಗೊಳಿಸಿರುತ್ತದೆಯೋ ಅಂತಹ ಹೆಣ್ಣುಮಗುವಿಗೆ ಪ್ರತೀ ತಿಂಗಳು ಧನ ಸಹಾಯವನ್ನು ನೀಡುವ ಯೋಜನೆಯನ್ನು ಜಾರಿಗೆ ತಂದಿದೆ. ಇದಕ್ಕೆ ಕೆಲವು ಷರತ್ತುಗಳಿವೆ. ಅಂದರೆ ಈ ಯೋಜನೆಯ ಫಲಾನುಭವಿಯಾಗಲು ಕುಟುಂಬದ ವಾರ್ಷಿಕ ಆದಾಯ ೧೦,೦೦೦ಕ್ಕಿಂತ ಅಧಿಕವಿರಬಾರದು. ಹಾಗೂ ಹೆಣ್ಣುಮಗು ವಾಸಿಸುವ ಗ್ರಾಮದ ಜನಸಂಖ್ಯೆ ೨೦,೦೦೦ಕ್ಕಿಂತ ಕಡಿಮೆ ಇರಬೇಕು. ಹೀಗಿದ್ದಾಗ ೫ರಿಂದ ೭ನೆಯ ತರಗತಿ ಓದುವ ಹೆಣ್ಣುಮಗುವಿಗೆ ಪ್ರತೀ ತಿಂಗಳು ೨೫ ರೂಪಾಯಿಗಳು ಮತ್ತು ೮ರಿಂದ ೧೦ನೆಯ ತರಗತಿ ಓದುವ ಹೆಣ್ಣುಮಗುವಿಗೆ ಪ್ರತೀ ತಿಂಗಳು ೫೦ ರೂಪಾಯಿಗಳ ಧನ ಸಹಾಯವನ್ನು ನೀಡಲಾಗುತ್ತದೆ. ಒಂದುವೇಳೆ ಹೆಣ್ಣುಮಗು ಶಿಕ್ಷಣದಿಂದ ಹಿಂದುಳಿದರೆ ಅಂತಹ ಸಂದರ್ಭದಲ್ಲಿ ಕುಟುಂಬದ ಸದಸ್ಯರೊಂದಿಗೆ ಮಾತನಾಡುವುದರ ಮೂಲಕ ಹೆಣ್ಣುಮಗುವನ್ನು ಮತ್ತೆ ಶಾಲೆಗೆ ಕಡ್ಡಾಯವಾಗಿ ಮತ್ತು ನಿರಂತರವಾಗಿ ಹಾಜರಾಗುವಂತೆ ಮಾಡಲಾಗುತ್ತದೆ. ಹೀಗೆ ಮಾಡುವುದರಿಂದ ಹೆಣ್ಣುಮಗುವಿನ ವಿವಾಹದ ವಯಸ್ಸು ಕೂಡ ಮುಂದೂಡಲ್ಪಡುತ್ತದೆ. ಹಾಗಾಗಿ ಬಾಲ್ಯವಿವಾಹಗಳು ಇದರಿಂದಲೂ ಕಡಿಮೆಯಾಗುತ್ತವೆ.

ಈ. **೧ರಿಂದ ನಾಲ್ಕನೇ ತರಗತಿಯವರೆಗೆ ಓದುವ ಮಕ್ಕಳಿಗಾಗಿ ಉತ್ತೇಜಿತ ಶಿಷ್ಯವೇತನ** : ಈ ಯೋಜನೆಯು ಮುಖ್ಯವಾಗಿ ಪರಿಶಿಷ್ಟ ಜಾತಿಯ ಹೆಣ್ಣುಮಕ್ಕಳಿಗಾಗಿ ರೂಪಿತಗೊಂಡಿದೆ. ಪ್ರತಿಯೊಂದು ಹೆಣ್ಣು ಮಗುವಿಗೂ ವಾರ್ಷಿಕ ೭೫ ರೂಪಾಯಿಗಳ ಶಿಷ್ಯವೇತನವನ್ನು

ಕೊಡಲಾಗುತ್ತದೆ. ಈ ಯೋಜನೆ ಸಮಾಜ ಕಲ್ಯಾಣ ಇಲಾಖೆಯ ಸುಪರ್ಧಿಯಲ್ಲಿರುತ್ತದೆ. ಪರಿಶಿಷ್ಟ ಜಾತಿಗೆ ಸೇರಿದ ಹೆಣ್ಣುಮಗು ಸರ್ಕಾರ, ಅನುದಾನಿತ ಶಾಲೆಗಳಲ್ಲಿ ಓದುತ್ತಿರಬೇಕು. ಅಂಥ ಹೆಣ್ಣುಮಕ್ಕಳು ಈ ಯೋಜನೆಯ ಫಲಾನುಭವಿಗಳಾಗಿರುತ್ತಾರೆ.

ಉ. **ಮೂರು ತಿಂಗಳ ಚಿಣ್ಣರ ಅಂಗಳ ವಿಶೇಷ ತರಬೇತಿ ಕಾರ್ಯಕ್ರಮ** : ಈ ಯೋಜನೆ ಮುಖ್ಯವಾಗಿ ಶಾಲೆಯಿಂದ ಹೊರಗುಳಿದ ಮತ್ತು ಶಾಲೆಯನ್ನು ಅರ್ಧಕ್ಕೆ ತೊರೆದ ಮಕ್ಕಳಿಗಾಗಿ ಜಾರಿಯಾಗಿದೆ. ೧೪ ವರ್ಷಕ್ಕಿಂತ ಕಡಿಮೆ ಇರುವ ಮಕ್ಕಳು ಇದರ ಲಾಭವನ್ನು ಪಡೆಯಬಹುದಾಗಿದೆ. ಈ ಕಾರ್ಯಕ್ರಮ ಬೇಸಿಗೆಯ ರಜಾ ದಿನಗಳಲ್ಲಿ ೩ ತಿಂಗಳುಗಳ ಕಾಲ ಹಮ್ಮಿಕೊಳ್ಳಲಾಗುತ್ತದೆ. ಇದರ ಮುಖ್ಯ ಉದ್ದೇಶ ಶಾಲೆಯನ್ನು ಅರ್ಧಕ್ಕೆ ತೊರೆದ ಮಕ್ಕಳನ್ನು ಮತ್ತೆ ಶಾಲೆಗೆ ಹಾಜರಾಗುವಂತೆ ಮಾಡುವುದು ಮತ್ತು ಶಾಲೆಯಿಂದ ಹೊರಗುಳಿದ ಮಕ್ಕಳು ಈ ಕಾರ್ಯಕ್ರಮದಿಂದ ಉತ್ತೇಜಿತಗೊಂಡು ಶಾಲೆಗೆ ಸೇರುವಂತಾಗಬೇಕು ಎಂಬುದಾಗಿದೆ. ಮಕ್ಕಳು ಶಾಲೆಗೆ ಸೇರುವುದರಿಂದ ಬಾಲ್ಯ ವಿವಾಹಗಳ ಸಂಖ್ಯೆ ಕಡಿಮೆಯಾಗುತ್ತದೆ.

ಹೀಗೆ ರಾಜ್ಯಮಟ್ಟದ ಯೋಜನೆಗಳು ಜಾರಿಯಲ್ಲಿದ್ದು, ಇವುಗಳೆಲ್ಲವೂ ಹೆಣ್ಣುಮಕ್ಕಳ ಅಭಿವೃದ್ಧಿಗಾಗಿ ಜಾರಿಯಾಗಿವೆ. ಆದರೆ ವಾಸ್ತವದಲ್ಲಿ ಯಾವ ಉದ್ದೇಶಗಳನ್ನು ಹೊಂದಿ ಯೋಜನೆಗಳು ಜಾರಿಯಾಗಿವೆಯೋ ಆ ಉದ್ದೇಶಗಳು ಸಂಪೂರ್ಣವಾಗಿ ಈಡೇರಿಲ್ಲದಿರುವುದು ಕಂಡುಬರುತ್ತದೆ. ಏಕೆಂದರೆ ಇವುಗಳ ಕುರಿತಾದ ಜ್ಞಾನ ಜನರಲ್ಲಿ ಇಲ್ಲದಾಗಿದೆ. ಮುಖ್ಯವಾಗಿ ಗ್ರಾಮೀಣ ಭಾಗಗಳಲ್ಲಿಯಾಗಲೀ ಅಥವಾ ನಗರ ಪ್ರದೇಶಗಳಲ್ಲಿಯಾಗಲೀ ಭಾಗ್ಯಲಕ್ಷ್ಮಿ ಯೋಜನೆಯೊಂದನ್ನು ಬಿಟ್ಟರೆ ಉಳಿದ ಯೋಜನೆಗಳ ಬಗೆಗೆ ಜನರಲ್ಲಿ ಯಾವುದೇ ಅರಿವು ಇಲ್ಲದಾಗಿದೆ. ಸರ್ಕಾರದ ಇಲಾಖೆಗಳು ಈ ಯೋಜನೆಗಳ ಕುರಿತಾಗಿ ಜನರಲ್ಲಿ ಅರಿವು ಮೂಡಿಸುವ ಕಾರ್ಯ ಮಾಡುತ್ತಿವೆಯಾದರೂ ಅವುಗಳು ಸರಿಯಾಗಿ ನಿರ್ವಹಣೆಯಾಗುತ್ತಿಲ್ಲ. ಹಾಗಾಗಿ ಈ ಯೋಜನೆಗಳ ಫಲಾನುಭವಿಗಳ ಸಂಖ್ಯೆ ತುಂಬಾನೇ ಕಡಿಮೆ ಎಂದು ಹೇಳಬಹುದು. ಹಾಗೆಯೇ ಹೆಣ್ಣುಮಕ್ಕಳಿಗೆ ನೀಡುವ ಶಿಷ್ಯವೇತನದ ಮೊತ್ತ ತುಂಬಾನೇ ಕಡಿಮೆ ಎಂದು ಹೇಳಬಹುದು. ಏಕೆಂದರೆ ಇಂದಿನ ಆಧುನಿಕ ಯುಗದಲ್ಲಿ ಆಹಾರ ಧಾನ್ಯಗಳು, ವಸ್ತುಗಳ ಬೆಲೆಗಳು ಗಗನಕ್ಕೇರಿವೆ. ಇಂತಹ ಸಂದರ್ಭದಲ್ಲಿ ಬಡ ಕುಟುಂಬಗಳು ಜೀವನ ನಡೆಸುವುದೇ ತುಂಬಾ ಕಷ್ಟದ ಸಂಗತಿಯಾಗಿರುತ್ತದೆ. ಪ್ರತಿಯೊಂದು ಬಡ ಕುಟುಂಬದ ಸದಸ್ಯರು ದಿನಗೂಲಿ ಮಾಡುತ್ತಾ ಅದರಿಂದ ಬಂದ ಕೂಲಿಯ ಹಣದಿಂದ ಜೀವನ ನಡೆಸುತ್ತಿರುತ್ತಾರೆ. ಇಂತಹ ಸಂದರ್ಭದಲ್ಲಿ ಅವರಿಗೆ ಹೆಣ್ಣು ಮಗುವಿದ್ದರೆ, ಆ ಮಗುವಿಗೆ ಬಹು ಬೇಗನೇ ವಿವಾಹ ಮಾಡುವುದೊಂದೇ ಅವರ ಆದ್ಯ ಕರ್ತವ್ಯವಾಗಿರುತ್ತದೆಯೇ ಹೊರತು, ಶಿಕ್ಷಣ ಕೊಡಿಸುವ ವ್ಯವಧಾನ ಅವರಲ್ಲಿರುವುದಿಲ್ಲ. ಹಾಗೆಯೇ ಸರ್ಕಾರವು ಕೊಡುವಂತಹ ಶಿಷ್ಯವೇತನ ಅವರಿಗೆ ಅಲ್ಪ ಪ್ರಮಾಣದ್ದಾಗಿರುತ್ತದೆ. ಹಾಗಾಗಿ ಇದರ ಕಡೆಗೆ ಆಲೋಚಿಸುವುದಿಲ್ಲ. ಒಟ್ಟಾರೆಯಾಗಿ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಹೆಣ್ಣುಮಕ್ಕಳ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳು ಜಾರಿಯಲ್ಲಿವೆ. ಇವುಗಳು ಸರಿಯಾಗಿ ಜಾರಿಯಾದಲ್ಲಿ ಅಥವಾ ಈ ಯೋಜನೆಗಳ ಸಂಪೂರ್ಣ ಅರಿವನ್ನು

ಜನರು ಪಡೆದದ್ದೇ ಆದಲ್ಲಿ ಬಾಲ್ಯ ವಿವಾಹಗಳ ಸಂಖ್ಯೆ ಕಡಿಮೆಯಾಗುವುದರಲ್ಲಿ ಸಂಶಯವಿಲ್ಲ. ಏಕೆಂದರೆ ಎಲ್ಲಾ ಯೋಜನೆಗಳು ಬಾಲ್ಯ ವಿವಾಹ ನಿಷೇಧಕ್ಕೆ ಹತ್ತಿರದ ಸಂಬಂಧವನ್ನು ಹೊಂದಿವೆ. ಹಾಗಾಗಿ ಸರ್ಕಾರಿ ಇಲಾಖೆಗಳು ಬಾಲ್ಯ ವಿವಾಹ ನಿಷೇಧ ಕಾಯಿದೆಯ ಬಗೆಗೆ ಅರಿವನ್ನು ಮೂಡಿಸುವುದರ ಜೊತೆಗೆ ಹೆಣ್ಣುಮಕ್ಕಳಿಗಾಗಿಯೇ ರೂಪಿಸಲ್ಪಟ್ಟಿರುವ ಇತರೆ ಯೋಜನೆಗಳ ಕುರಿತು ಜನರಲ್ಲಿ ಜಾಗೃತಿಯನ್ನುಂಟು ಮಾಡಬೇಕಾದ ಅನಿವಾರ್ಯತೆ ಇದೆ.

ಮಹಿಳಾ ಪರವಾದ ಕಾನೂನಾದ ಬಾಲ್ಯ ವಿವಾಹ ನಿಷೇಧ ಕಾಯಿದೆಯ ಬಗೆಗೆ ಸರಕಾರಿ ಇಲಾಖೆಗಳಾದ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಶಿಕ್ಷಣ ಇಲಾಖೆ, ಪೊಲೀಸ್ ಇಲಾಖೆ, ಕಂದಾಯ ಇಲಾಖೆ ಇವುಗಳೆಲ್ಲವೂ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಿದೆ. ಮುಖ್ಯವಾಗಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ತನ್ನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಮಹಿಳೆಯರನ್ನು (ಗ್ರಾಮೀಣ ಮಟ್ಟದಿಂದ ಹಿಡಿದು ಜಿಲ್ಲಾ ಮಟ್ಟದವರೆಗಿನ) ಒಗ್ಗೂಡಿಸಿ ಅವರಿಗೆ ಶಿಕ್ಷಣದ ಬಗೆಗೆ ಮತ್ತು ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಬಗೆಗೆ ಮಾಹಿತಿ ಸಿಗುವಂತೆ ಮಾಡಬೇಕು. ಅಂದರೆ ಈ ಇಲಾಖೆಯ ಅಡಿಯಲ್ಲಿ ಪ್ರತಿಯೊಂದು ಗ್ರಾಮಗಳಲ್ಲಿಯೂ ಮಹಿಳಾ ಸಂಘಗಳು, ಸ್ತ್ರೀಶಕ್ತಿ ಸಂಘಗಳು ಇರುವುದು ಕಂಡುಬರುತ್ತದೆ. ಇವುಗಳನ್ನು ಒಗ್ಗೂಡಿಸಿ ಅವರಿಗೆ ಕಾನೂನು ತಜ್ಞರ ಜೊತೆ ಮುಕ್ತವಾಗಿ ಮಾತುಕತೆ ನಡೆಯುವ ಹಾಗೆ ಮಾಡಬೇಕು. ಹಾಗೆಯೇ ಗ್ರಾಮೀಣ ಭಾಗಗಳಲ್ಲಿನ ಅಂಗನವಾಡಿ ಕೇಂದ್ರಗಳಲ್ಲಿ ಕೆಲಸ ಮಾಡುವ ಕಾರ್ಯಕರ್ತೆಯರಿಗೆ ಮತ್ತು ಆಶಾ ಕಾರ್ಯಕರ್ತೆಯರಿಗೆ ವಿಶೇಷವಾಗಿ ಬಾಲ್ಯ ವಿವಾಹ ನಿಷೇಧ ಕಾನೂನಿನ ಕುರಿತು ತರಬೇತಿಗಳನ್ನು ಏರ್ಪಡಿಸಬೇಕು. ಈ ಬಗೆಯ ತರಬೇತಿಗಳು ಪ್ರತಿ ತಿಂಗಳಿಗೊಮ್ಮೆ ಅಥವಾ ಎರಡು, ಮೂರು ತಿಂಗಳಿಗೊಮ್ಮೆ ನಡೆಸಬೇಕು ಅಂದಾಗ ಮಾತ್ರ ಈ ಕಾಯಿದೆಯ ಕುರಿತು ಮಹಿಳೆಯರಲ್ಲಿ ಅರಿವು ಮೂಡಿಸಲು ಸಾಧ್ಯವಾಗುತ್ತದೆ. ಗ್ರಾಮೀಣ ಮಟ್ಟದಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಮತ್ತು ಆಶಾ ಕಾರ್ಯಕರ್ತೆಯರು ಸರಕಾರಿ ಸೌಲಭ್ಯಗಳು, ಕಾನೂನುಗಳು ಮತ್ತು ಜನರ ನಡುವೆ ಸೇತುವೆಯಂತೆ ಕಾರ್ಯ ನಿರ್ವಹಿಸುತ್ತಾರೆ. ಹಾಗಾಗಿ ಇವರನ್ನು ಚೆನ್ನಾಗಿ ತರಬೇತಿಗೊಳಿಸಿದರೆ ತಮ್ಮ ತಮ್ಮ ಗ್ರಾಮಗಳಲ್ಲಿನ ಜನರಲ್ಲಿ ಇವರು ಜಾಗೃತಿಯನ್ನು ಮೂಡಿಸಲು ಮುಂದಾಗುತ್ತಾರೆ. ಮುಖ್ಯವಾಗಿ ಬಾಲ್ಯ ವಿವಾಹಗಳನ್ನು ತಡೆಯಲು ಗ್ರಾಮೀಣ ಮಟ್ಟದಲ್ಲಿ ಅಂಗನವಾಡಿ ಕಾರ್ಯಕರ್ತೆಯರನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಿರುತ್ತಾರೆ. ಈ ಸಮಿತಿಯು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಡಿ ಕಾರ್ಯ ನಿರ್ವಹಿಸುತ್ತದೆ. ಇವುಗಳು ಕೇವಲ ಮಹಿಳೆಯರಿಗೆ ಮಾತ್ರವಲ್ಲದೆ ಸ್ತ್ರೀಪುರುಷರಿಬ್ಬರಿಗೂ ಸಮಾನವಾಗಿ ಕಾನೂನುಗಳ ಅರಿವನ್ನು ಮೂಡಿಸುವ ಕಾರ್ಯ ಮಾಡಬೇಕಿದೆ. ಹಾಗೆಯೇ ಸರಕಾರದ ಒಂದು ಅಧೀನ ಸಂಸ್ಥೆಯಾದ ರಾಜ್ಯ ಮಹಿಳಾ ಆಯೋಗವು ಮಹಿಳೆಯರ ಸಂಕಷ್ಟಗಳಿಗೆ ಧ್ವನಿಯಾಗಿದೆ. ಮಹಿಳಾ ಆಯೋಗವು ಮಹಿಳೆಯರ ಕಷ್ಟಗಳಿಗೆ ಸ್ಪಂದಿಸುತ್ತಲೇ ಬಂದಿದೆ. ಈ ಸಂಸ್ಥೆಯು ಬಾಲ್ಯ ವಿವಾಹವನ್ನು ಸಮಾಜದಿಂದ ಬೇರು ಸಹಿತ ಕಿತ್ತುಹಾಕಲು ಹಲವಾರು ಕಾರ್ಯಕ್ರಮಗಳನ್ನು

ಹಮ್ಮಿಕೊಂಡಿದೆ. ಹಾಗೆಯೇ ಬಾಲ್ಯ ವಿವಾಹ ನಿಷೇಧ ಕಾನೂನಿನ ಕುರಿತು ಗ್ರಾಮೀಣ ಮಟ್ಟದಿಂದ ಹಿಡಿದು ನಗರ ಪ್ರದೇಶಗಳವರೆಗೂ ಆಯೋಗದ ಅಡಿಯಲ್ಲಿ ಕೆಲವು ಸಮಿತಿಗಳನ್ನು ರಚಿಸುವುದರ ಮೂಲಕ ಮಹಿಳೆಯರ ಏಳಿಗೆಗೆ ಶ್ರಮಿಸಬೇಕಾಗಿದೆ. ರಾಜ್ಯ ಮಕ್ಕಳ ಹಕ್ಕುಗಳ ಆಯೋಗವು ತನ್ನ ವ್ಯಾಪ್ತಿಯಡಿಯಲ್ಲಿ ಮಕ್ಕಳಿಗಾಗಿಯೇ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ. ಇನ್ನು ವಿಶ್ವವಿದ್ಯಾಲಯಗಳೂ ಜನರ ನಡುವೆ ಹೋಗಿ ಜನರಲ್ಲಿನ ಲಿಂಗ ತಾರತಮ್ಯವನ್ನು ಹೋಗಲಾಡಿಸಲು ಶ್ರಮಿಸಬೇಕಾದ ಅನಿವಾರ್ಯತೆ ಇದೆ. ಮುಖ್ಯವಾಗಿ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಮಹಿಳಾ ಪರವಾದ ಕಾನೂನುಗಳ ಕುರಿತಂತೆ ವಿಚಾರ ಸಂಕಿರಣಗಳನ್ನು ಏರ್ಪಡಿಸುವುದು, ಈ ವಿಚಾರ ಸಂಕಿರಣಗಳಿಗೆ ಮಹಿಳೆಯರು ಹೆಚ್ಚು ಹೆಚ್ಚು ಭಾಗವಹಿಸುವಂತೆ ಮಾಡುವುದು. ಹಾಗೆಯೇ ಲಿಂಗ ಸೂಕ್ಷ್ಮತೆಯನ್ನು ಹೊಂದಿರುವ ತಜ್ಞರ ಜೊತೆ ಮಹಿಳೆಯರು ಚರ್ಚೆಯಲ್ಲಿ ತೊಡಗುವಂತೆ ಮಾಡುವುದು. ಹೀಗೆ ನಾನಾ ವಿಧದಲ್ಲಿ ಕೆಲಸಗಳನ್ನು ಮಾಡಬೇಕಾಗಿದೆ. ಹೀಗೆ ಮಾಡುವುದರ ಮೂಲಕ ಮಹಿಳೆಯರಲ್ಲಿ ಕಾನೂನು ಕುರಿತು ಅರಿವು ಹೆಚ್ಚಾಗುವ ಸಾಧ್ಯತೆ ಇದೆ. ಜೊತೆಗೆ ಬಾಲ್ಯ ವಿವಾಹವನ್ನು ಸಮಾಜದಿಂದ ತೊಲಗಿಸಲು ಸಹಕಾರಿಯಾಗುತ್ತದೆ.

ಕೊಪ್ಪಳದ ಜಿಲ್ಲಾಡಳಿತವು ಮಕ್ಕಳ ಹಕ್ಕುಗಳ ರಕ್ಷಣೆ ವಿಷಯದಲ್ಲಿ ರಾಜ್ಯದಲ್ಲಿಯೇ ಮಾದರಿ ಎಂಬಂತೆ ಕಾರ್ಯನಿರ್ವಹಿಸುತ್ತಿದೆ. ಮುಖ್ಯವಾಗಿ "೧೮೯೮ ಪ್ಲಸ್" ಮಕ್ಕಳ ರೆಡ್ ಅಲರ್ಟ್ಸ್ ಮೇಲ್ವಿಚಾರಣಾ ವ್ಯವಸ್ಥೆಯು ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ಕೊಪ್ಪಳ ಜಿಲ್ಲಾಡಳಿತ ರೂಪಿಸಿರುವ ಒಂದು ವಿಶಿಷ್ಟ ಕಾರ್ಯಕ್ರಮವಾಗಿದೆ. ಮುಖ್ಯವಾಗಿ ಐದು ರೆಡ್ ಅಲರ್ಟ್ಸ್‌ಗಳ ಬಗ್ಗೆ ಅಥವಾ ಸಂಕಷ್ಟದಲ್ಲಿರುವ ಯಾವುದೇ ಮಗುವಿನ ಬಗೆಗೆ ಮಾಹಿತಿ ತಿಳಿದು ಬಂದರೆ, ತಕ್ಷಣ ೧೮೯೮ ನಂಬರಿಗೆ ಕರೆ ಮಾಡುವುದರ ಮೂಲಕ ಆ ಮಕ್ಕಳನ್ನು ರಕ್ಷಿಸುವ ಕಾರ್ಯವನ್ನು ಮಾಡಬಹುದಾಗಿದೆ. ಇಲ್ಲಿ ಐದು ರೆಡ್ ಅಲರ್ಟ್ಸ್‌ಗಳೆಂದರೆ ತಾಯಿ ಮರಣ, ಶಿಶು ಮರಣ, ರಕ್ತಹೀನತೆಯಿಂದ ಬಳಲುತ್ತಿರುವ ಗರ್ಭಿಣಿ ಮತ್ತು ಬಾಣಂತಿಯರು, ಬಾಲ್ಯ ವಿವಾಹಕ್ಕೆ ಒಳಗಾದ ಅಥವಾ ಒಳಪಡುತ್ತಿರುವ ಮಕ್ಕಳು, ಕಾಣೆಯಾದ ಮಕ್ಕಳು. ಇವುಗಳ ಕುರಿತಂತೆ ಯಾವುದಾದರೂ ಘಟನೆ ನಡೆದಲ್ಲಿ ೧೮೯೮ ನಂಬರಿಗೆ ಕರೆ ಮಾಡಬಹುದಾಗಿದೆ. ಈ ಸೌಲಭ್ಯವನ್ನು ಕೊಪ್ಪಳ ಜಿಲ್ಲಾಡಳಿತ ಜನರಿಗಾಗಿ ಒದಗಿಸಿಕೊಟ್ಟಿದೆ. ಹೀಗೆ ಸರ್ಕಾರಿ ಅಧಿಕಾರಿಗಳು ಬಾಲ್ಯ ವಿವಾಹವನ್ನು ತಡೆಯುವ ಸಲುವಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿರುವುದು ಕಂಡುಬರುತ್ತಿದೆ. ಬಳ್ಳಾರಿ, ಗದಗ ಮತ್ತು ಬಾಗಲಕೋಟೆ ಜಿಲ್ಲೆಗಳ ಜಿಲ್ಲಾಡಳಿತ ಮತ್ತು ತಾಲೂಕು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗಳು ಬಾಲ್ಯ ವಿವಾಹವನ್ನು ತೊಡೆದು ಹಾಕಲು ಶ್ರಮಿಸುತ್ತಿರುವುದು ಕಂಡುಬರುತ್ತದೆ. ಆರೋಗ್ಯ ಇಲಾಖೆ, ಶಿಕ್ಷಣ ಇಲಾಖೆ, ಪೋಲಿಸ್ ಇಲಾಖೆಗಳಲ್ಲಿ ಇದಕ್ಕಾಗಿಯೇ ಪ್ರತ್ಯೇಕವಾದ ಸಮಿತಿಗಳನ್ನು ರಚಿಸಲಾಗಿದೆ. ಆ ಮೂಲಕ ಬಾಲ್ಯ ವಿವಾಹ ನಿಷೇಧ ಕಾನೂನಿನ ಅರಿವನ್ನು ಜನರಲ್ಲಿ ಮೂಡಿಸುವ ಕಾರ್ಯ ನಡೆದಿದೆ.

ಜಸ್ಟೀಸ್ ಶಿವರಾಜ್‌ಪಾಟೀಲ್‌ರವರು ಬಾಲ್ಯ ವಿವಾಹಗಳನ್ನು ಸಮಾಜದಿಂದ ಬುಡ ಸಮೇತ ಕಿತ್ತು ಹಾಕಬೇಕೆಂದರೆ ಸರ್ಕಾರದ ಹಲವು ಇಲಾಖೆಗಳು ಕಾರ್ಯಪ್ರವೃತ್ತರಾಗಬೇಕು ಎಂದು ತಮ್ಮ ವರದಿಯಲ್ಲಿ ತಿಳಿಸಿದ್ದಾರೆ. ಮುಖ್ಯವಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಕಂದಾಯ ಇಲಾಖೆ, ಪೊಲೀಸ್ ಇಲಾಖೆ, ಕಾನೂನು ಪ್ರಾಧಿಕಾರ, ಸಮಾಜ ಕಲ್ಯಾಣ ಇಲಾಖೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್, ಎನ್.ಜಿ.ಓ., ಸಮುದಾಯಗಳು ಇವುಗಳೆಲ್ಲವೂ ತಮ್ಮ ತಮ್ಮ ವ್ಯಾಪಿಯಲ್ಲಿ ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸಲು ಕಾರ್ಯಪ್ರವೃತ್ತಾಗಬೇಕು ಎಂಬುದನ್ನು ತಿಳಿಸುತ್ತಾರೆ. ಮೇಲೆ ತಿಳಿಸಿದ ಎಲ್ಲ ಇಲಾಖೆಗಳನ್ನು ಕೆಳಗೆ ರೇಖಾಚಿತ್ರದ ಮೂಲಕ ಸೂಚಿಸಲಾಗಿದೆ. ಈ ಇಲಾಖೆಗಳು ತಮ್ಮ ತಮ್ಮ ಕಾರ್ಯವ್ಯಾಪ್ತಿಯಲ್ಲಿ ಬಾಲ್ಯ ವಿವಾಹ ನಿಷೇಧಕ್ಕೆ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬಹುದಾಗಿದೆ. ಈ ಎಲ್ಲಾ ಇಲಾಖೆಗಳು ಒಂದಕ್ಕೊಂದು ಸಹಕಾರಿ ಮನೋಭಾವನೆಯನ್ನು ಹೊಂದಿ ಒಮ್ಮುಖತೆಯನ್ನು ಸಾಧಿಸಬೇಕು. ಅಂದಾಗ ಮಾತ್ರ ಬಾಲ್ಯ ವಿವಾಹಗಳನ್ನು ನಿಷೇಧಿಸಬಹುದಾಗಿದೆ. ಈ ಎಲ್ಲ ಇಲಾಖೆಗಳ ಕರ್ತವ್ಯಗಳು ಮತ್ತು ಜವಾಬ್ದಾರಿಗಳಾವುವು ಎಂಬುದನ್ನು ಜಸ್ಟೀಸ್ ಶಿವರಾಜ್ ವಿ ಪಾಟೀಲ್‌ರವರ ವರದಿಯಲ್ಲಿ ಸವಿವರವಾಗಿ ತಿಳಿಸಲಾಗಿದೆ.




**ಮೂಲ : ಕರ್ನಾಟಕ ರಾಜ್ಯದಲ್ಲಿನ ಬಾಲ್ಯ ವಿವಾಹ ತಡೆ ಬಗೆಗಿನ ವರದಿ, ಕರ್ನಾಟಕ ಸರ್ಕಾರ.**

ಮಕ್ಕಳ ಸಮಗ್ರ ಅಭಿವೃದ್ಧಿ ಹಾಗೂ ಸಂರಕ್ಷಣೆ ದೃಷ್ಟಿಯಲ್ಲಿ ಮಕ್ಕಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಕೈಗೆತ್ತಿಕೊಂಡು ಪಂಚಾಯತಿಯಿಂದಲೇ ಬಗೆಹರಿಸಿ, ಎಲ್ಲಾ ಮಕ್ಕಳು ಅವರ ಹಕ್ಕುಗಳನ್ನು ಅನುಭವಿಸುವಂತೆ ಮಾಡಲು ಮಕ್ಕಳ ಹಕ್ಕುಗಳ ರಕ್ಷಣಾ ಸಮಿತಿಯನ್ನು

ಪಂಚಾಯತಿ ಮಟ್ಟದಲ್ಲಿ ರಚಿಸಲಾಗಿದೆ. ಇದರ ಮೂಲಕ ಬಾಲ್ಯ ವಿವಾಹ, ಬಾಲ ಕಾರ್ಮಿಕ ಪದ್ಧತಿ, ಜೀತ ಪದ್ಧತಿ ಹಾಗೂ ಮಹಿಳೆಯರ ಮತ್ತು ಮಕ್ಕಳ ಸಾಗಾಟ ಮತ್ತು ಮಾರಾಟ ತಡೆ ಸಮಿತಿಗಳನ್ನೂ ಸೇರಿಸಿ, ಸಮಗ್ರ ಮಕ್ಕಳ ರಕ್ಷಣಾ ಸಮಿತಿಯನ್ನು ರಚಿಸಿ, ಬಲಪಡಿಸಿ ಕಾರ್ಯರೂಪಕ್ಕೆ ತರಲಾಗಿದೆ. ಹೀಗೆ ಹಲವಾರು ಕಾರ್ಯಕ್ರಮಗಳನ್ನು ಗ್ರಾಮ ಪಂಚಾಯತಿಯ ಮಟ್ಟದಲ್ಲಿ ಹಮ್ಮಿಕೊಳ್ಳುವುದರ ಮೂಲಕ ಬಾಲ್ಯ ವಿವಾಹಗಳನ್ನು ತಡೆಯುವ ಪ್ರಯತ್ನವನ್ನು ಮಾಡಲಾಗುತ್ತಿದೆ.

**೮.೨. ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸುವಲ್ಲಿ ಸರ್ಕಾರೇತರ ಸಂಸ್ಥೆ/ಸಂಘ ಸಂಸ್ಥೆಗಳ ಪಾತ್ರ**

ಸರ್ಕಾರಿ ಇಲಾಖೆಗಳು ಬಾಲ್ಯ ವಿವಾಹಗಳನ್ನು ತಡೆಯಲು ಹೇಗೆ ಕೆಲಸಗಳನ್ನು ಮಾಡುತ್ತಿವೆಯೋ ಹಾಗೆಯೇ ಸರ್ಕಾರೇತರ ಸಂಸ್ಥೆಗಳು ಸಹ ಕಾರ್ಯ ನಿರ್ವಹಿಸುತ್ತಿವೆ. ಮುಖ್ಯವಾಗಿ ಇವುಗಳು ಧನ ಸಹಾಯದ ಆಧಾರದಲ್ಲಿ ಕಾರ್ಯನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಅಧ್ಯಯನ ಕ್ಷೇತ್ರವ್ಯಾಪ್ತಿಯಲ್ಲಿ ಹಲವು ಸಂಸ್ಥೆಗಳು ಮಕ್ಕಳ ಹಕ್ಕುಗಳ ಬಗೆಗೆ ಹೋರಾಡುತ್ತಿರುವುದು ತಿಳಿದುಬರುತ್ತದೆ. ಎಲ್ಲಾ ಸರ್ಕಾರೇತರ ಸಂಸ್ಥೆಗಳಲ್ಲಿ ಮುಖ್ಯವಾಗಿ ಯುನಿಸೆಫ್ ಸಂಸ್ಥೆಯು ಮೊದಲ ಸ್ಥಾನದಲ್ಲಿ ನಿಲ್ಲುತ್ತದೆ. ಹಾಗಾಗಿ ಇದರ ಕಾರ್ಯ ವೈಖರಿಯನ್ನು ತಿಳಿಯುವುದು ಬಹು ಮುಖ್ಯವಾಗಿದೆ.

**೮.೨.೧. ಬಾಲ್ಯ ವಿವಾಹ ನಿಷೇಧದಲ್ಲಿ ಯುನಿಸೆಫ್ ಸಂಸ್ಥೆಯ ಪಾತ್ರ :** ಯುನಿಸೆಫ್ ಸಂಸ್ಥೆಯು ಮಕ್ಕಳ ಹಕ್ಕುಗಳನ್ನು ರಕ್ಷಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದೆ. ಮುಖ್ಯವಾಗಿ ಕರ್ನಾಟಕದಲ್ಲಿನ ಮಕ್ಕಳ ಹಕ್ಕುಗಳ ಕುರಿತಂತೆ ಜನರಲ್ಲಿ ಜಾಗೃತಿಯನ್ನು ಮೂಡಿಸುವ ಮತ್ತು ಹಕ್ಕುಗಳ ರಕ್ಷಣೆ ಮಾಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ ಎಂದೇ ಹೇಳಬಹುದು. ಇದೊಂದು ವಿಶ್ವಸಂಸ್ಥೆಯ ಅಧೀನ ಸಂಸ್ಥೆಯಾಗಿದ್ದು, ಮಕ್ಕಳ ಹಕ್ಕು ಮತ್ತು ಅವರ ಅಧಿಕಾರಕ್ಕೆ ಚ್ಯುತಿಬಾರದಂತೆ ಮತ್ತು ಮಕ್ಕಳ ಮೇಲಿನ ಹಿಂಸೆಯನ್ನು ತಪ್ಪಿಸುವುದಕ್ಕೋಸ್ಕರ ಹುಟ್ಟಿಕೊಂಡ ಸಂಸ್ಥೆಯಾಗಿದೆ. ಈ ಸಂಸ್ಥೆಯನ್ನು ೧೯೪೯ರಲ್ಲಿ ಭಾರತದಲ್ಲಿ ಆರಂಭಿಸಲಾಯಿತು. ಇದರ ಪ್ರಧಾನ ಕಛೇರಿ ದೆಹಲಿಯಲ್ಲಿದೆ. ಇಂದು ದೇಶದ ೧೬ ರಾಜ್ಯಗಳಲ್ಲಿ ಈ ಸಂಸ್ಥೆ ಕಾರ್ಯನಿರ್ವಹಿಸುತ್ತಿದೆ. ಯುನಿಸೆಫ್ ಸಂಸ್ಥೆಯು ೨೦೦೧ರಲ್ಲಿ ಎಳೆಯ ಮಕ್ಕಳ ಮೇಲೆ ನಡೆಯುತ್ತಿರುವ ಬೃಹತ್ ಪ್ರಮಾಣದ ಶೋಷಣೆ ನಿಲ್ಲಬೇಕು. ಅವರಿಗೆ ಜೀವಿಸಲು ಸಮಾನ ಹಕ್ಕು ದೊರೆಯಬೇಕು ಎಂಬ ಧ್ಯೇಯವನ್ನು ಹೊಂದಿ ಒಂದು ಕಾಯ್ದೆ ಸ್ವರೂಪದ ಮಸೂದೆಯನ್ನು ಸಿದ್ಧಪಡಿಸಿತ್ತು. ಇದರ ಹೆಸರು "ಸೇ ಎಸ್ ಫಾರ್ ಚಿಲ್ಡ್ರನ್" ಎಂಬುದಾಗಿತ್ತು. ಇದು ೨೦೦೧ನೆಯ ಸಾಲಿನ ಸೆಪ್ಟೆಂಬರ್ ೧೯ರಿಂದ ವಿಶ್ವದಾದ್ಯಂತ ಜಾರಿಗೆ ಬಂದಿತ್ತು. ಮಕ್ಕಳ ಹಕ್ಕು ಮತ್ತು ಅಧಿಕಾರಕ್ಕಾಗಿರುವ ಈ ಮಹತ್ವಪೂರ್ಣ ವಿಶೇಷ ಚಳುವಳಿಗೆ ವಿಶ್ವ ಮಟ್ಟದಲ್ಲಿ ಬೆಂಬಲ ನೀಡಲು ನಿಕೆಲ್ಡೋನ್ ಎಂಬ ಮಕ್ಕಳಿಗಾಗಿಯೇ ಇರುವ ಟೆಲಿವಿಜನ್ ನೆಟ್‌ವರ್ಕ್

ಸಂಸ್ಥೆ ನಿರ್ಧರಿಸಿತ್ತು. ಮಕ್ಕಳಿಗಾಗಿಯೇ ಕಾರ್ಯಕ್ರಮ ರೂಪಿಸಿ ಪ್ರಸ್ತುತ ಪಡಿಸುವ ಜಗತ್ತಿನ ಅಗ್ರಗಣ್ಯ ಟಿವಿ ನೆಟ್‌ವರ್ಕ್ ಎಂದು ಖ್ಯಾತಿ ಪಡೆದಿರುವ ನಿಕೆಲ್ಲೋನ್ ೧೪೦ಕ್ಕೂ ಹೆಚ್ಚಿನ ದೇಶಗಳಲ್ಲಿ ತನ್ನ ಜಾಲವನ್ನು ಹೊಂದಿದೆ. ವಿಶೇಷವಾಗಿ ಮಕ್ಕಳಿಗಾಗಿ ಹೊಸ ವಿಚಾರದ ಕಾರ್ಯಕ್ರಮ ಆಯೋಜಿತಗೊಳಿಸಿ ಈ ಕ್ಷೇತ್ರದಲ್ಲಿ ಒಂದು ವಿಶೇಷ ಛಾಪು ಮೂಡಿಸಿದೆ. ಯುನಿಸೆಫ್‌ನ ಹತ್ತಂಶದ ಕಾರ್ಯಕ್ರಮ ಪಟ್ಟಿಯನ್ನು ಸಿದ್ಧಪಡಿಸಿತ್ತು. ಅದರಲ್ಲಿನ ಅಂಶಗಳು ಕೆಳಗಿನಂತಿವೆ.

೧. ಲಿಂಗ ಸಮಾನತೆ–ಸಮಾನ ಅಧಿಕಾರ : ಹುಟ್ಟಿದ ಪ್ರತಿಯೊಂದು ಮಕ್ಕಳಲ್ಲಿ ಗಂಡು–ಹೆಣ್ಣೆಂದು ಬೇಧ–ಭಾವ ಮಾಡದೆ, ಅವರಿಗೆ ಲಿಂಗ ಸಮಾನತೆ ಹಾಗೂ ಸಮಾನ ಅಧಿಕಾರ ದೊರೆಯಬೇಕು ಎಂಬುದು ಮೊದಲನೆಯ ಅಂಶವಾಗಿದೆ. ಈ ಮೂಲಕ ವ್ಯವಸ್ಥೆಯಲ್ಲಿನ ಲಿಂಗ ಅಸಮಾನತೆಯನ್ನು ತೊಡೆದು ಹಾಕುವ ಕಾರ್ಯಕ್ಕೆ ಮುಂದಾಯಿತು. ಹಾಗೆಯೇ ಮಕ್ಕಳ ಹಕ್ಕುಗಳ ಕುರಿತಂತೆ ಜನರಲ್ಲಿ ಜಾಗೃತಿಯನ್ನು ಮೂಡಿಸುವ ಕೆಲಸವನ್ನು ಆರಂಭಿಸಿತು. ಮಕ್ಕಳ ಅಧಿಕಾರಗಳು ಯಾವುವು ಎಂಬುದನ್ನು ತಿಳಿಯಪಡಿಸುವುದು ಮತ್ತು ಆ ಮೂಲಕ ಮಕ್ಕಳ ಹಕ್ಕುಗಳನ್ನು ರಕ್ಷಿಸುವ ಕೆಲಸ ನಡೆಯಿತು.

೨. ಮಕ್ಕಳಿಗೆ ಪ್ರಥಮ ಆಧ್ಯತೆ : ಜಗತ್ತಿನ ಪ್ರತಿಯೊಂದು ದೇಶ, ಪ್ರತಿಯೊಂದು ಸಂಸ್ಥೆ, ಪ್ರತಿಯೊಬ್ಬ ನಾಗರಿಕ, ಪ್ರತಿಯೊಬ್ಬ ಪಾಲಕರು ಮಕ್ಕಳಿಗೆ ಮತ್ತು ಅವರ ಅಧಿಕಾರಗಳಿಗೆ ಪ್ರಥಮ ಪ್ರಾಧಾನ್ಯತೆಯನ್ನು ನೀಡಬೇಕು ಎಂಬುದನ್ನು ತಿಳಿಸುವುದಾಗಿದೆ.

೩. ಪ್ರತಿಯೊಬ್ಬ ಮಕ್ಕಳ ಕಾಳಜಿ : ಮಕ್ಕಳು ನಮ್ಮ ದೇಶದ ಭವಿಷ್ಯ. ಅವರ ಸರ್ವಾಂಗೀಣ ಪ್ರಗತಿ ಹಾಗೂ ವಿಕಾಸಕ್ಕಾಗಿ ಅವರ ಆರೋಗ್ಯಕ್ಕೆ ಸಂಬಂಧಪಟ್ಟಂತೆ ಸೌಲಭ್ಯ ದೊರಕಿಸಿಕೊಡುವುದು ಹಾಗೂ ಪೋಷಕ ವಾತಾವರಣವನ್ನು ನಿರ್ಮಿಸಲು ಬದ್ಧರಾಗಿರಬೇಕು.

೪. ಏಡ್ಸ್ ಕುರಿತು ಜನಜಾಗೃತಿ : ಮಕ್ಕಳು, ಅವರ ಪಾಲಕರು ಹಾಗೂ ಕುಟುಂಬ ವರ್ಗದವರಲ್ಲಿ ಏಡ್ಸ್ ನಂತಹ ಭಯಾನಕ ರೋಗದಿಂದ ಪಾರು ಮಾಡಲು ಜನಜಾಗೃತಿ ಕೈಗೊಳ್ಳಲಾಗಿದೆ.

೫. ಮಕ್ಕಳ ಶೋಷಣೆ ತಪ್ಪಿಸಿ : ಮಕ್ಕಳಿಗೆ ತಮ್ಮ ಇಚ್ಛೆಯಂತೆ ಇರುವ ಅಧಿಕಾರವಿದ್ದು, ಈ ಅಧಿಕಾರದ ಮೇಲೆ ಒತ್ತಡ ತಂದು ಶೋಷಣೆ ಮಾಡುತ್ತಿರುವುದನ್ನು ತಪ್ಪಿಸುವುದು.

೬. ಮಕ್ಕಳ ಅಭಿಪ್ರಾಯ ಆಲಿಸಿ : ಪ್ರತಿಯೊಬ್ಬ ಮಗುವಿಗೂ ತಮ್ಮ ಅಭಿಪ್ರಾಯವನ್ನು ಮಂಡಿಸುವ ಸ್ವಾತಂತ್ರ್ಯವಿದ್ದು ಅವರ ಕಲ್ಪನೆ ಹಾಗೂ ಅಭಿಪ್ರಾಯದ ಬಗ್ಗೆ ನಿಮಗೆ ಗೌರವವಿರಲಿ. ಅವರ ಅನಿಸಿಕೆ ಏನು ಎಂಬುದನ್ನು ತಪ್ಪದೇ ಆಲಿಸಬೇಕು.

೭. ಪ್ರತಿಯೊಂದು ಮಗುವಿಗೂ ಶಿಕ್ಷಣ ಕೊಡಿ : ಪ್ರತಿಯೊಬ್ಬ ಹುಡುಗ, ಹುಡುಗಿಗೆ ಶಿಕ್ಷಣ ಕೊಡಿ, ಅವರಿಗೆ ಕಡ್ಡಾಯ ಹಾಗೂ ಪೂರಕ ಪ್ರಾಥಮಿಕ ಶಿಕ್ಷಣದ ಸೌಲಭ್ಯ ದೊರಕಿಸಿಕೊಡಿ.

೮. ಯುದ್ಧದಿಂದ ರಕ್ಷಣೆ ಕೊಡಿ : ಯುದ್ಧ ಹಾಗೂ ಸಶಸ್ತ್ರ ಸಂಘರ್ಷದಿಂದ ಮಕ್ಕಳನ್ನು ದೂರವಿಡಬೇಕು ಮತ್ತು ಆ ಮೂಲಕ ಅವರನ್ನು ರಕ್ಷಿಸಬೇಕು.

೯. ಪರಿಸರ ಕಾಳಜಿ : ಮುಂಬರುವ ಪೀಳಿಗೆಗಾಗಿ ಉತ್ತಮ ಹಾಗೂ ಮಾಲಿನ್ಯರಹಿತ ವಾತಾವರಣ ದೊರೆಯುವಂತೆ ಮಾಡಲು ಪ್ರತಿಯೊಬ್ಬರೂ ಪರಿಸರ ಅಭಿವೃದ್ಧಿಯತ್ತ ಗಮನ ನೀಡಬೇಕು.

೧೦. ಬಡತನ ಎದುರಿಸಿ : ಬಡತನ ಇದು ಬಹಳಷ್ಟು ಮಕ್ಕಳಿಗೆ ದೊರೆತ ಒಂದು ಶಾಪ. ಇದರಿಂದ ಮಕ್ಕಳನ್ನು ಮುಕ್ತಗೊಳಿಸಿ, ಅವರು ಶಾಲೆಗೆ ಹೋಗುವಂತೆ ಮಾಡಲು ಹಾಗೂ ಕನಿಷ್ಠ ಆರೋಗ್ಯ ಸೌಲಭ್ಯಗಳು ದೊರೆಯುವಂತೆ ನೋಡಿಕೊಳ್ಳಬೇಕು"(ದಿಕ್ಸೂಚಿ, ಸೆಪ್ಟೆಂಬರ್ ೨೦೦೧, ಪು–೨೯). ಹೀಗೆ ಯುನಿಸೆಫ್ ಸಂಸ್ಥೆಯು ೨೦೦೧ರಲ್ಲಿಯೇ ಹತ್ತು ಅಂಶಗಳ ಪಟ್ಟಿಯನ್ನು ತಯಾರಿಸಿ ವಿಶ್ವದ ಗಮನವನ್ನು ಸೆಳೆದಿತ್ತು. ಈಗಲೂ ಈ ಸಂಸ್ಥೆ ಇದೇ ಅಂಶಗಳ ಆಧಾರದಲ್ಲಿ ಕಾರ್ಯ ನಿರ್ವಹಿಸುತ್ತಿದೆ. ನಂತರ ೨೦೦೫ರಲ್ಲಿ ಮತ್ತೆ ಕೆಲವು ಗುರಿಗಳನ್ನು ಹೊಂದಿತ್ತು. ಮುಖ್ಯವಾಗಿ ಹಿಂದೆ ನಿರ್ಧರಿಸಿದ್ದ ಗುರಿಗಳೇ ಮುಂದುವರೆದವಾದರೂ, ಅವುಗಳಲ್ಲಿ ಸ್ವಲ್ಪ ಬದಲಾವಣೆಯನ್ನು ಮಾಡಲಾಗಿತ್ತು. ಇದಕ್ಕೆ "ದ ಮಿಲೇನಿಯಮ್ ಡೆವೆಲಪ್‌ಮೆಂಟ್ ಗೋಲ್ಸ್ ಫಾರ್ ೨೦೧೫" ಎಂದು ಕರೆಯಲಾಯಿತು. ಇವುಗಳಲ್ಲಿ ಮುಖ್ಯವಾಗಿ ಎಂಟು ಗೋಲುಗಳನ್ನು ಹೊಂದಿತ್ತು. ಅವುಗಳೆಂದರೆ, ೧. ಬಡತನ ಮತ್ತು ಹಸಿವನ್ನು ತೊಲಗಿಸುವುದು ೨. ಎಲ್ಲರಿಗೂ ಪ್ರಾಥಮಿಕ ಶಿಕ್ಷಣವನ್ನು ಒದಗಿಸುವುದು ೩. ಲಿಂಗ ಸಮಾನತೆಯನ್ನು ಸಾಧಿಸುವುದು ಮತ್ತು ಮಹಿಳೆಯರನ್ನು ಸಬಲೀಕರಣಗೊಳಿಸುವುದು ೪. ಮಕ್ಕಳ ಮರಣ ಪ್ರಮಾಣವನ್ನು ಕಡಿಮೆ ಮಾಡುವುದು ೫. ತಾಯಂದಿರ ಆರೋಗ್ಯವನ್ನು ಸುಧಾರಿಸುವುದು ೬. ಎಚ್.ಐ.ವಿ/ಏಡ್ಸ್, ಮಲೇರಿಯಾದಂತಹ ರೋಗಗಳನ್ನು ತಡೆಯುವುದು ೭. ಪರಿಸರ ನೈರ್ಮಲ್ಯವನ್ನು ಕಾಪಾಡುವುದು ೮. ಜಾಗತಿಕ ಸಹಭಾಗಿತ್ವವನ್ನು ಉತ್ತೇಜಿಸುವುದು ಮತ್ತು ಅಭಿವೃದ್ಧಿಗೊಳಿಸುವುದು. ಹೀಗೆ ಎಂಟು ಬಗೆಯ ಗುರಿಗಳನ್ನು ಹೊಂದಿ ಇಂದಿಗೂ ಇವುಗಳನ್ನು ಸಾಧಿಸಲು ಕಾರ್ಯಪ್ರವೃತ್ತವಾಗಿದೆ. ಮುಖ್ಯವಾಗಿ ರಾಜ್ಯದ ಕೊಪ್ಪಳ ಜಿಲ್ಲೆಯಲ್ಲಿ ಈ ಸಂಸ್ಥೆ ಹಲವು ಕಾರ್ಯಗಳನ್ನು ಮಾಡುತ್ತಾ ಬಂದಿದೆ. ಈ ಭಾಗದಲ್ಲಿನ ಬಾಲ ಕಾರ್ಮಿಕ ಪದ್ಧತಿಯನ್ನು ಮತ್ತು ಬಾಲ್ಯ ವಿವಾಹ ಪದ್ಧತಿಯನ್ನು ನಿರ್ಮೂಲನೆ ಮಾಡುವಲ್ಲಿ ಬಹಳಷ್ಟು ಪ್ರಯತ್ನಗಳು ನಡೆದಿವೆ. ಹಾಗೆಯೇ ಈ ಪ್ರಯತ್ನ ಯಶಸ್ವಿಯನ್ನೂ ಕಂಡಿದೆ ಎಂದು ಹೇಳಬಹುದು. ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ಯುನಿಸೆಫ್ ಸಂಸ್ಥೆಯ ಜಿಲ್ಲಾ ಮಕ್ಕಳ ರಕ್ಷಣಾ ಯೋಜನೆಯನ್ನು ರೂಪಿಸಿದೆ. ಇದು ಜಿಲ್ಲಾಡಳಿತದೊಂದಿಗಿನ ಸಹಯೋಗದೊಂದಿಗೆ ಕಾರ್ಯನಿರ್ವಹಿಸುತ್ತಿದೆ. ಹಲವಾರು ಬಾಲ್ಯ ವಿವಾಹಗಳನ್ನು ತಡೆಗಟ್ಟುವುದರ ಮೂಲಕ ಜನರಲ್ಲಿ ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಕುರಿತು ಅರಿವು ಮೂಡಿಸುವ ಕಾರ್ಯವನ್ನು ಮಾಡುತ್ತಿದೆ. ಕೊಪ್ಪಳದ ಯುನಿಸೆಫ್‌ನ ಅಧಿಕಾರಿಯಾಗಿರುವ ಹರೀಶ್ ಅವರು ಹೇಳುವಂತೆ " ಯುನಿಸೆಫ್ ಸಂಸ್ಥೆಯು ೨೦೧೦ರಲ್ಲಿ ಕೊಪ್ಪಳದಲ್ಲಿ ಕಾರ್ಯವನ್ನು ಆರಂಭಿಸಿತು. ಮೊದಲು ಈ ಜಿಲ್ಲೆಯಲ್ಲಿ ಬಾಲ್ಯ ವಿವಾಹ, ಬಾಲ ಕಾರ್ಮಿಕ ಪ್ರಕರಣಗಳು ಬಹಳಷ್ಟು ಕಂಡುಬರುತ್ತಿದ್ದವು. ಇವುಗಳನ್ನು ಬುಡ ಸಮೇತ ಕಿತ್ತು ಹಾಕಲು ಬಹಳಷ್ಟು ಕಾರ್ಯತಂತ್ರಗಳನ್ನು ರೂಪಿಸಲಾಗಿತ್ತು.

ಆ ಕಾರಣಕ್ಕಾಗಿ ಇಂದು ಇವುಗಳು ಒಂದು ಹಂತದಲ್ಲಿ ನಿಯಂತ್ರಣಕ್ಕೆ ಬಂದಿವೆ ಎಂದೇ ಹೇಳಬಹುದು. ಇಂದಿಗೂ ಜನರಲ್ಲಿ ಜಾಗೃತಿಯನ್ನು ಮೂಡಿಸುತ್ತಲೇ ಇದ್ದೇವೆ. ಹಲವು ಹೆಣ್ಣುಮಕ್ಕಳು ಸ್ವಯಂ ಪ್ರೇರಿತರಾಗಿ ನಮಗೆ ಕರೆ ಮಾಡಿ ಬಾಲ್ಯ ವಿವಾಹದಿಂದ ತಪ್ಪಿಸಿ ಎಂದು ಹೇಳುವ ಹಂತಕ್ಕೆ ತಲುಪಿದ್ದಾರೆ. ೨೦೧೧ರಿಂದ ಇಲ್ಲಿಯವರೆಗೂ ಬಹಳಷ್ಟು ಬಾಲ್ಯ ವಿವಾಹಗಳನ್ನು ತಡೆಹಿಡಿಯಲಾಗಿದೆ. ಇದನ್ನು ವಿರೋಧಿಸಿದ ಜನರ ವಿರುದ್ಧ ಕಾನೂನು ಕ್ರಮಗಳನ್ನು ಸಹ ಕೈಗೊಳ್ಳಲಾಗಿದೆ. ಒಟ್ಟು ೧೨ ಕೇಸ್‌ಗಳು ಇಂದಿಗೂ ನ್ಯಾಯಾಲಯದಲ್ಲಿ ವಿಚಾರಣೆಯ ಹಂತದಲ್ಲಿವೆ. ಜನರು ನಿಧಾನವಾಗಿ ಎಚ್ಚೆತ್ತುಕೊಳ್ಳುತ್ತಿದ್ದಾರೆ. ಜಾಗೃತಿ ಕಾರ್ಯಕ್ರಮಗಳು ಹೀಗೆಯೇ ಮುಂದುವರೆದರೆ ಕೊಪ್ಪಳದಲ್ಲಿ ಬಾಲ್ಯ ವಿವಾಹಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತವೆ" ಎಂದು ಹೇಳಿದರು. ಯುನಿಸೆಫ್ ಸಂಸ್ಥೆಯು ಮೂಲತಃ ಮಕ್ಕಳ ಹಕ್ಕುಗಳನ್ನು ರಕ್ಷಿಸುವ ಸಂಸ್ಥೆಯಾಗಿದ್ದು, ಕೊಪ್ಪಳ ಜಿಲ್ಲೆಯಲ್ಲಿ ಬಾಲ್ಯ ವಿವಾಹಗಳನ್ನು ತಡೆಯುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ.

ಸರ್ಕಾರೇತರ ಸಂಸ್ಥೆಗಳೂ ಬಾಲ್ಯ ವಿವಾಹ ಪದ್ಧತಿಯನ್ನು ನಿರ್ಮೂಲನೆ ಮಾಡಲು ಬಹಳಷ್ಟು ಶ್ರಮಿಸುತ್ತಿರುವುದು ಕಂಡುಬರುತ್ತದೆ. ಡಾನ್ಬಾಸ್ಕೋ, ಸಖಿ, ಸ್ನೇಹ, ಸಮೂಹ, ಪೋಸ್ಟಲ್ ಸೋಷಿಯಾಲಜಿ ಇನ್ಸಿಟ್ಯೂಟ್(ಪಿಎಸ್‌ಐ) ಹೀಗೆ ಹಲವಾರು ಸಂಸ್ಥೆಗಳು ಬಾಲ್ಯ ವಿವಾಹದ ವಿರುದ್ಧ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿವೆ. ವಾಸ್ತವದಲ್ಲಿ ಸರ್ಕಾರಿ ಸಂಸ್ಥೆಗಳಿಗಿಂತ ಸರ್ಕಾರೇತರ ಸಂಸ್ಥೆಗಳು ಜನರ ಬಳಿ ನೇರವಾದ ಸಂಬಂಧವನ್ನು ಹೊಂದಿರುತ್ತವೆ. ಹಾಗಾಗಿಯೇ ಸರ್ಕಾರೇತರ ಸಂಸ್ಥೆಗಳ ಮೇಲೆ ಹೆಚ್ಚಿನ ಜವಾಬ್ದಾರಿಯಿರುತ್ತದೆ. ಮುಖ್ಯವಾಗಿ ಪ್ರತಿಯೊಂದು ಸಂಸ್ಥೆಯು ಮೊದಲು ತನ್ನ ವ್ಯಾಪ್ತಿ ಪ್ರದೇಶದಲ್ಲಿ ಜನರನ್ನು ಸಂಘಟಿಸುವಂತಹ ಕಾರ್ಯವನ್ನು ಮಾಡುತ್ತದೆ. ಅದರಲ್ಲಿಯೂ ಮುಖ್ಯವಾಗಿ ಮಹಿಳೆಯರನ್ನು ಗಮನದಲ್ಲಿರಿಸಿಕೊಂಡು ಸಂಘಗಳನ್ನು ರೂಪಿಸುತ್ತವೆ. ಆ ಮೂಲಕ ಸಂವಿಧಾನಬದ್ಧವಾದ ಕಾನೂನುಗಳ ಕುರಿತು ಅರಿವು ಮುಡಿಸುವಂತಹ ಕಾರ್ಯವನ್ನು ಮಾಡುತ್ತಿವೆ. ಅದರಲ್ಲಿ ಬಾಲ್ಯ ವಿವಾಹ ನಿಷೇಧ ಕಾನೂನು ಸಹ ಒಂದಾಗಿದೆ. ಈ ಕಾನೂನಿನ ಕುರಿತು ಮತ್ತು ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಕುರಿತು ಜನರಲ್ಲಿ ಅರಿವು ಮೂಡಿಸುವ ಕಾರ್ಯ ಮಾಡುತ್ತಿವೆ. ಹಾಗೆಯೇ ವ್ಯವಸ್ಥೆಯಲ್ಲಿ ಎಲ್ಲಿಯಾದರೂ ಬಾಲ್ಯ ವಿವಾಹಗಳು ನಡೆಯುತ್ತಿವೆ ಎಂಬುದು ತಿಳಿದು ಬಂದರೆ ಅವುಗಳನ್ನು ತಕ್ಷಣವೇ ತಡೆಯುವಂತಹ ಕಾರ್ಯವನ್ನು ಮಾಡುತ್ತಿವೆ. ಜಾಥಾಗಳನ್ನು ಮಾಡುವುದು, ವಿಚಾರ ಸಂಕಿರಣಗಳನ್ನು ಏರ್ಪಡಿಸುವುದು, ಪೋಸ್ಟರ್‌ಗಳನ್ನು ಹಚ್ಚುವುದು, ಬಿತ್ತಿ ಪತ್ರಗಳನ್ನು ಹಂಚುವುದು, ಹಾಗೆಯೇ ಸಾರ್ವಜನಿಕ ಸ್ಥಳಗಳಲ್ಲಿ ಗೋಡೆ ಬರಹಗಳನ್ನು ಬರೆಯುವುದು ಹೀಗೆ ಎಲ್ಲ ಬಗೆಯ ಕಾರ್ಯಗಳನ್ನು ಮಾಡುವ ಮೂಲಕ ಜನರಲ್ಲಿ ಜಾಗೃತಿಯನ್ನುಂಟು ಮಾಡುತ್ತಿವೆ.

೮.೩. ವೈಯಕ್ತಿಕ ನೆಲೆಯಲ್ಲಿ ಬಾಲ್ಯ ವಿವಾಹ ಪದ್ಧತಿಯನ್ನು ವಿರೋಧಿಸಿದವರು

ಬಾಲ್ಯ ವಿವಾಹದ ವಿರುದ್ಧ ಧ್ವನಿ ಎತ್ತಿರುವ ಹಲವು ಮಹಿಳೆಯರು ಅಧ್ಯಯನ ಕ್ಷೇತ್ರವ್ಯಾಪ್ತಿಯಲ್ಲಿ ಕಂಡುಬಂದಿದ್ದಾರೆ. ಇದರಲ್ಲಿ ಪ್ರಮುಖವಾದ ಕೆಲವು ಪ್ರಕರಣಗಳನ್ನು ಇಲ್ಲಿ ವಿವರಿಸಿಕೊಳ್ಳಲಾಗಿದೆ. ಬಾಗಲಕೋಟೆ ಜಿಲ್ಲೆಯ ಶಿರೂರಿನ ಗೌರಮ್ಮ ಸಂಕಿನ ಎಂಬ ಮಹಿಳೆಯನ್ನು ೪ನೆಯ ತರಗತಿಯಲ್ಲಿ ಓದುತ್ತಿದ್ದಾಗಲೇ ೪೦ವರ್ಷದ ವ್ಯಕ್ತಿಗೆ ಕೊಟ್ಟು ವಿವಾಹ ಮಾಡಲಾಗಿದೆ. ಆಕೆಗೆ ಈಗ ೬೦ ವರ್ಷ ವಯಸ್ಸಾಗಿದೆ. ಗಂಡ ಇಲ್ಲ. ಮರಣಿಸಿದ್ದಾನೆ. ಬಾಲ್ಯ ವಿವಾಹದಿಂದಾಗಿ ಹಲವಾರು ತೊಂದರೆಗಳನ್ನು ಎದುರಿಸಿರುವ ಗೌರಮ್ಮನವರು. ಸಮಾಜದ ಯಾವುದೇ ಹೆಣ್ಣುಮಗುವಿಗೆ ತನ್ನ ಕಷ್ಟ ಬರಬಾರದು. ಹಾಗಾಗಬೇಕಿದ್ದರೆ, ಬಾಲ್ಯ ವಿವಾಹಗಳನ್ನು ತಡೆಯಬೇಕು ಎಂಬ ನಿರ್ಧಾರವನ್ನು ಹೊಂದಿ, ಆ ಕಾರ್ಯದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದಾರೆ. ಇವರು ಹೇಳುವಂತೆ "ಬಾಲ್ಯ ವಿವಾಹ ಅನ್ನದು ನನ್ನ ಜೀವ್ನನ ಹಾಳು ಮಾಡಿಬಿಡ್ತು. ನಾನು ಇನ್ನ ನಾಕ್ನೆ ಕ್ಲಾಸು ಓದ್‌ತಿದ್ದೆ. ಆವಾಗ್ಲೇ ನನಿಗೆ ೪೦ ವರ್ಸದ ಮುದುಕನ್ನ ತಂದು ಕಟ್ಟಿದ್ರು. ಏನ್ ಮಾಡಾದು ಮದುವಿ ಆದ್ ಮ್ಯಾಲ ಸಂಸಾರ ಮಾಡ್ಲೇ ಬೇಕಲ್ಲ ಅಂತೇಳಿ ಜೀವ್ನನಾ ಹಂಗೇ ಸಾಗಿಸ್ತಿದ್ದೆ. ಆದ್ರೆ ಗಂಡನ ಮನ್ಯಾಗ ಬಾಳ ತೊಂದ್ರಿ ಅನುಬೋವಿಸೇನಿ. ಗಂಡ ಕುಡ್ದು ಬಂದು ಹೊಡಿಯಾದು, ಕೆಟ್ ಕೆಟ್‌ದಾಗಿ ಬೈಯೋದು ಮಾಡ್ತಿದ್ದ. ಇದನ್ನೆಲ್ಲಾ ಸುಧಾರ್ಸಿಕೆಂಡೇ ಜೀವ್ನ ಮಾಡೇನಿ. ಈಗ ನನಿಗಿ ಗಂಡ ಇಲ್ಲ. ನನಿಗಿ ಆದ ತೊಂದ್ರಗೋಳು ಬ್ಯಾರೆ ಹೆಣ್ಮಕ್ಳು ಅನುಬೋಸ್ಬಾರ್ದು ಅಂತೇಳಿ. ಬಾಲ್ಯ ವಿವಾಹದ ವಿರುದ್ಧ ಜನ್ರಿಗಿ ತಿಳಿ ಹೇಳಾಕ ಮುಂದಾಗೇನಿ. ಮತ್ತೆ ಕಾನೂನೊಂದೇ ಇದನ್ನ ಸರಿಪಡ್ಸಾಕ ಆಗಂಗಿಲ್ಲ. ಬದ್ಲಿಗಿ ಸಮಾಜದ ಜನ್ರು ಸತೆ ಇದಕ್ಕ ಸಹಕರ್ಸಬೇಕು ಅಂದಾಗ ಮಾತ್ರ ಇದನ್ನ ನಿಲ್ಸಬೋದು" ಎಂದು ಹೇಳುತ್ತಾರೆ. ಇವರು ಬಾಲ್ಯ ವಿವಾಹದ ವಿರುದ್ಧದ ಕಾರ್ಯಕ್ರಮಗಳು ಎಲ್ಲಿಯೇ ನಡೆದರೂ ಅವುಗಳಲ್ಲಿ ತಪ್ಪದೇ ಭಾಗವಹಿಸುತ್ತಾರೆ. ಮತ್ತು ತನಗಾದ ಅನುಭವಗಳನ್ನು ಜನರೊಂದಿಗೆ ಹಂಚಿಕೊಳ್ಳುತ್ತಾರೆ. ಹೀಗೆ ಬಾಲ್ಯ ವಿವಾಹದ ವಿರುದ್ಧ ಅರಿವು ಮೂಡಿಸುವ ಕಾರ್ಯ ಗೌರಮ್ಮನವರಿಂದ ನಿರಂತರವಾಗಿ ಸಾಗಿದೆ.

ಕೊಪ್ಪಳದ ರುಕ್ಮಿಣಿಯು ಸಹ ಬಾಲ್ಯ ವಿವಾಹದ ಕುರಿತು ಜಾಗೃತಿ ಮೂಡಿಸುವ ಕಾರ್ಯದಲ್ಲಿ ತೊಡಗಿಕೊಂಡಿದ್ದಾಳೆ. ಮುಖ್ಯವಾಗಿ ತಾನು ೧೦ನೆಯ ತರಗತಿಯ ವಾರ್ಷಿಕ ಪರೀಕ್ಷೆಯನ್ನು ಮುಗಿಸಿದಾಗ ತನಗೆ ೧೬ ವರ್ಷ ೧೦ ತಿಂಗಳುಗಳಾಗಿದ್ದವು. ಈ ವಯಸ್ಸಿನಲ್ಲಿಯೇ ಅವರ ತಂದೆ ತಾಯಿ ಮದುವೆ ಮಾಡಲು ಮುಂದಾಗಿದ್ದರು. ಇದನ್ನು ವಿರೋಧಿಸಿದ ರುಕ್ಮಿಣಿ ಮನೆಯವರಿಂದ ಬೈಗುಳಗಳನ್ನು ಅನುಭವಿಸಿದಳು. ಇದರಿಂದ ಬೇಸತ್ತ ರುಕ್ಮಿಣಿ ಯುನಿಸೆಫ್‌ನ ಮಕ್ಕಳ ಸಹಾಯವಾಣಿಗೆ ಕರೆ ಮಾಡಿ ತನ್ನ ಕಷ್ಟಗಳನ್ನು ಹೇಳಿಕೊಂಡಿದ್ದಾಳೆ. ಹಾಗಾಗಿ ಯುನಿಸೆಫ್, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿಗಳು, ಪೊಲೀಸ್ ಇಲಾಖೆ ಮತ್ತು ಮಹಿಳಾ ಸಮಖ್ಯಾದ ಅಧಿಕಾರಿಗಳ ತಂಡ ರುಕ್ಮಿಣಿಯ ತಂದೆ ತಾಯಂದಿರ ಮನವೊಲಿಸಲು ಮುಂದಾಗಿದ್ದಾರೆ. ಆದರೆ ಅವರು

ಒಪ್ಪದಿದ್ದಾಗ ರುಕ್ಮಿಣಿಯನ್ನು ಬಾಲ ಮಂದಿರದಲ್ಲಿ ಇರಿಸಿದ್ದಾರೆ. ಮುಂದೆ ಆಕೆಯ ಇಷ್ಟವನ್ನು ಅರಿತು ಅಧಿಕಾರಗಳು ವಿದ್ಯಾಭ್ಯಾಸ ಕೊಡಿಸಿದ್ದಾರೆ. ಈಗ ರುಕ್ಮಿಣಿ ಬಿ.ಕಾಂ. ಪದವಿಯನ್ನು ಓದುತ್ತಿದ್ದಾಳೆ. ಜೊತೆಗೆ ಬಾಲ್ಯ ವಿವಾಹದ ವಿರುದ್ಧ ಸಮರವನ್ನು ಸಾರಿದ್ದಾಳೆ. ತನಗೆ ಅವಕಾಶ ಸಿಕ್ಕಾಗಲೆಲ್ಲಾ ಗ್ರಾಮೀಣ ಭಾಗದ ಹೆಣ್ಣುಮಕ್ಕಳಿಗೆ ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಬಗೆಗೆ ಮತ್ತು ಮಕ್ಕಳ ಹಕ್ಕುಗಳ ಬಗೆಗೆ ಜಾಗೃತಿಯನ್ನು ಮೂಡಿಸುತ್ತಿದ್ದಾಳೆ. ರುಕ್ಮಿಣಿ ಹೇಳುವ ಮಾತು ಹೀಗಿದೆ "ಶಿಕ್ಷಣ ಮುಗಿಸಿ ಏನಾದರೂ ಸಾಧನೆ ಮಾಡಿ ತೋರಿಸಬೇಕೆನ್ನುವ ಛಲ ನನ್ನಲ್ಲಿದೆ. ಬಾಲ್ಯ ವಿವಾಹದ ಕಪಿ ಮುಷ್ಟಿಗೆ ಒಳಗಾಗಿ ನರಳುವುದಕ್ಕಿಂತ ಅದನ್ನು ವಿರೋಧಿಸಬೇಕೆನ್ನುವುದು ನಾನು ಕಲಿತಿರುವ ಪಾಠವಾಗಿದೆ. ನನ್ನ ಈ ನಿರ್ಧಾರವನ್ನು ನನ್ನ ಮನೆಯವರು ಅರ್ಥ ಮಾಡಿಕೊಳ್ಳುತ್ತಾರೆಂಬ ವಿಶ್ವಾಸ ನನ್ನಲ್ಲಿದೆ. ಹೆಣ್ಣುಮಕ್ಕಳು ೧೮ ವರ್ಷದ ಒಳಗಡೆ ದೈಹಿಕವಾಗಿ, ಮಾನಸಿಕವಾಗಿ ಮತ್ತು ಸಾಮಾಜಿಕವಾಗಿ ಬೆಳೆದಿರುವುದಿಲ್ಲ. ಆದುದರಿಂದ ಅವರಿಗೆ ಅವರ ಬಾಲ್ಯದ ಹಕ್ಕುಗಳನ್ನು ಅನುಭವಿಸುತ್ತಾ ಶಿಕ್ಷಣವನ್ನು ಮುಂದುವರೆಸಲು ಅವಕಾಶ ನೀಡಿ ಎಂದು ನಾನು ನಿಮ್ಮೆಲ್ಲರಲ್ಲಿ ವಿನಂತಿಸುತ್ತೇನೆ"(ವಾಣಿ ಪೆರಿಯೋಡಿ, ೨೦೧೫,ಪು-೫೭). ಹೀಗೆ ಬಾಲ್ಯ ವಿವಾಹದ ವಿರುದ್ಧ ಸಮರ ಸಾರಿರುವಂತಹ ಮಹಿಳೆಯರು, ಮಕ್ಕಳು ಗ್ರಾಮೀಣ ಭಾಗಗಳಲ್ಲಿ ಕಂಡುಬರುತ್ತಿದ್ದಾರೆ. ಮುಖ್ಯವಾಗಿ ಗೌರಮ್ಮ ಬಾಲ್ಯ ವಿವಾಹದ ಬಲಿಗೆ ಸಿಲುಕಿ ಹಲವು ತೊಂದರೆಗಳನ್ನು ಅನುಭವಿಸಿ, ಅದರಿಂದ ಬೇಸತ್ತಿರುವ ಮಹಿಳೆಯಾಗಿದ್ದಾಳೆ. ಹಾಗೆಯೇ ರುಕ್ಮಿಣಿ ಬಾಲ್ಯ ವಿವಾಹದ ಕದ ತಟ್ಟಿ ಬಂದಿರುವ ಹೆಣ್ಣುಮಗುವಾಗಿದೆ. ಇವರಿಬ್ಬರ ಗುರಿ ಬಾಲ್ಯ ವಿವಾಹದಿಂದ ಹೆಣ್ಣುಮಕ್ಕಳನ್ನು ರಕ್ಷಿಸುವುದೇ ಆಗಿದೆ. ಮಕ್ಕಳ ಹಕ್ಕುಗಳ ಬಗೆಗೆ ಮತ್ತು ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಬಗೆಗೆ ಜನರಲ್ಲಿ ಅರಿವು ಮೂಡಿಸುವ ಕಾರ್ಯ ಇವರಿಬ್ಬರಿಂದ ನಡೆಯುತ್ತಲೇ ಇದೆ.

ದೇಶದ ಇತರೆ ರಾಜ್ಯಗಳಲ್ಲಿಯೂ ಬಾಲ್ಯ ವಿವಾಹದ ವಿರುದ್ಧ ಧಂಗೆ ಎದ್ದಿರುವ ಹೆಣ್ಣುಮಕ್ಕಳನ್ನು ಕಾಣಬಹುದಾಗಿದೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಛತ್ತೀಸ್‌ಗಡ ರಾಜ್ಯದ ರಾಜಾನಂದ್‌ಗಾಂವ್ ಜಿಲ್ಲೆಯ ಅಮಿತ ಎಂಬ ಬಾಲಕಿ ೭ನೆಯ ತರಗತಿಯಲ್ಲಿ ಓದುತ್ತಿದ್ದು, ಈ ಬಾಲಕಿಯ ತಂದೆ ತಾಯಿ ಇವಳ ವಿವಾಹ ಮಾಡಲು ನಿಶ್ಚಯಿಸಿದ್ದರು. ಆದರೆ ತಾನಿನ್ನು ಓದಬೇಕೆಂಬ ಕಾರಣವನ್ನು ಮುಂದಿಟ್ಟು ವಿವಾಹವನ್ನು ವಿರೋಧಿಸಿದಳು. ಆದರೆ ತಂದೆ ತಾಯಿ ತುಂಬಾ ಒತ್ತಾಯಪಡಿಸಿದ್ದಾರೆ. ಇದೆಲ್ಲವನ್ನೂ ವಿರೋಧಿಸಿದ ಅಮಿತ, ತನ್ನಂತೆಯೇ ಬಾಲ್ಯ ವಿವಾಹವನ್ನು ವಿರೋಧಿಸುವ ಸಾವಿರಾರು ಬಾಲಕಿಯರನ್ನು ಒಟ್ಟುಗೂಡಿಸಿದಳು. ಇವರೆಲ್ಲರೂ ಸೇರಿ ತಾವು ಪ್ರಾಪ್ತವಯಸ್ಕರಾಗುವವರೆಗೆ ಅಂದರೆ ೧೮ ವರ್ಷ ವಯಸ್ಸು ಆಗುವವರೆಗೆ ವಿವಾಹವಾಗುವುದಿಲ್ಲ ಎಂಬ ಘೋಷಣಾ ಪತ್ರಕ್ಕೆ ಸಹಿ ಮಾಡಿದರು. ಅಷ್ಟೇ ಅಲ್ಲದೆ ಆ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ಸಲ್ಲಿಸಿದ್ದಾರೆ. ಈ ಬಾಲಕಿಯರೆಲ್ಲಾ ಸೇರಿ "ಕಿಶೋರಿ ವಾಹಿನಿ" ಎಂಬ ಹೆಸರಿನಲ್ಲಿ ಈಗ ಸಂಘಟಿತರಾಗಿದ್ದಾರೆ. ಆ ಮೂಲಕ ಬಾಲ್ಯ ವಿವಾಹದ ವಿರುದ್ಧ ಚಳುವಳಿಯನ್ನೇ ಆರಂಭಿಸಿದ್ದಾರೆ. ಹಾಗೆಯೇ ಹಳ್ಳಿ ಹಳ್ಳಿಗೆ

ಸಂಚರಿಸಿ ೧೮ವರ್ಷ ತುಂಬುವ ಮುನ್ನ ಮಾಡುವ ವಿವಾಹವನ್ನು ಪ್ರತಿರೋಧಿಸುವಂತೆ ತಮ್ಮ ಸಹೋದರಿಯರನ್ನು ಪ್ರಚೋದಿಸುವ ಕಾರ್ಯದಲ್ಲಿ ತೊಡಗಿದ್ದಾರೆ. ಹೀಗೆ ಕರ್ನಾಟಕ ರಾಜ್ಯ ಮಾತ್ರವಲ್ಲದೆ, ದೇಶದ ಇತರೆಡೆಗಳಲ್ಲಿಯೂ ಬಾಲ್ಯ ವಿವಾಹದ ವಿರುದ್ಧ ಸಮರ ಸಾರಿರುವಂತಹ ಹೆಣ್ಣುಮಕ್ಕಳು ಕಾಣಸಿಗುತ್ತಾರೆ.

ಮಕ್ಕಳ ಹಕ್ಕುಗಳ ಸಂರಕ್ಷಣೆಯಲ್ಲಿ ತೊಡಗಿ ವಿಶ್ವದಾದ್ಯಂತ ಹೆಸರನ್ನು ಗಳಿಸಿರುವ ಮತ್ತು ರಾಷ್ಟ್ರ ಪ್ರಶಸ್ತಿಗಳನ್ನು ಗಳಿಸಿರುವ ಹೆಣ್ಣುಮಕ್ಕಳೂ ಇದ್ದಾರೆ. ಇಂತಹ ಸಾಲಿನಲ್ಲಿ ಪಶ್ಚಿಮ ಬಂಗಾಳದ ಹುಡುಗಿಯೊಬ್ಬಳು ಸೇರಿದ್ದಾಳೆ. ರಾಜ್ಯದ "ಪುರುಲಿಯಾ ಜಿಲ್ಲೆಯ ಹಳ್ಳಿಯೊಂದರ ಹನ್ನೆರಡು ವರ್ಷದ ರೇಖಾ ಈ ಪ್ರಸಸ್ತಿಗೆ ಭಾಜನಳಾಗಿದ್ದಾಳೆ. ರೇಖಾ ೬ನೆಯ ತರಗತಿಯಲ್ಲಿ ಓದುತ್ತಿದ್ದಾಗ ಈಕೆಯ ತಂದೆ ತಾಯಿ ವಿವಾಹ ಮಾಡಲು ಮುಂದಾಗಿದ್ದಾರೆ. ಆದರೆ ರೇಖಾ ಇದನ್ನು ವಿರೋಧಿಸಿ ಶಿಕ್ಷಣವನ್ನು ಮುಂದುವರೆಸುತ್ತೇನೆ ಎಂದು ದೃಢವಾಗಿ ಹೇಳಿದ್ದಾಳೆ. ಇದಕ್ಕೆ ವಿರೋಧ ವ್ಯಕ್ತವಾದಾಗ ನಂತರ ಕುಟುಂಬದಲ್ಲಿ ಪ್ರತಿಭಟನೆಯ ಕಿಚ್ಚು ಹತ್ತಿಸಿದ ರೇಖಾಳ ವಿಷಯ ಇಡೀ ರಾಜ್ಯದ ತುಂಬಾ ಹಬ್ಬಿದೆ. ರೇಖಾಳ ಈ ನಡೆಯಿಂದಾಗಿ ಪುರುಲಿಯಾ ಜಿಲ್ಲೆಯೊಂದರಲ್ಲಿಯೇ ೧೦ ಸಾವಿರ ಮಕ್ಕಳು ಶಾಲೆಗಳ ಹಾದಿ ಹಿಡಿದಿದ್ದಾರೆ. ಅವರೆಲ್ಲಾ ಬಾಲ್ಯವಿವಾಹದ ವಿರುದ್ಧ ಧ್ವನಿಯೆತ್ತಿರುವುದು ಒಂದು ಚರಿತ್ರಾರ್ಹ ಸಂಗತಿ. ರೇಖಾಳ ಈ ದಿಟ್ಟತನದ ವಿಷಯ ರಾಷ್ಟ್ರಪತಿಭವನಕ್ಕೂ ತಲುಪಿ ಅಂದಿನ ರಾಷ್ಟ್ರಪತಿಗಳಾದ ಪ್ರತಿಭಾ ಪಾಟೀಲ್ ಈ ಬಾಲಕಿಗೆ "ಶೌರ್ಯ ಪ್ರಶಸ್ತಿ"ಯನ್ನು ನೀಡಿ ಗೌರವಿಸಿದ್ದಾರೆ. ಹಾಗೆಯೇ ರೇಖಾಳ ಈ ಸಾಧನೆಯಿಂದಾಗಿ ನೆದರ್‌ಲ್ಯಾಂಡಿನ ಪತ್ರಕರ್ತ ಮತ್ತು ಲೇಖಕರಾದ ಅಲೆಟ್‌ಆಂಡ್ರಿ ತಮ್ಮ "ಚಿಲ್ಡ್ರನ್ ಹೂ ಚೇಂಜ್ ದಿ ವರ್ಲ್ಡ್" ಎಂಬ ಕೃತಿಯಲ್ಲಿ ದಾಖಲಿಸಿದ್ದಾರೆ. ವಿದೇಶಿ ಲೇಖಕನ ಪುಸ್ತಕದಲ್ಲಿ ಸಾಮಾಜಿಕ ಕಾಳಜಿಯನ್ನು ಒಳಗೊಂಡಿರುವ ೨೦ ಮಕ್ಕಳ ಸಾಧನೆಯ ಯಶೋಗಾಥೆ ಇದೆ. ಇದರಲ್ಲಿ ರೇಖಾ ಸ್ಥಾನ ಪಡೆದಿರುವ ಏಕೈಕ ಭಾರತೀಯ ಹುಡುಗಿಯಾಗಿದ್ದಾಳೆ"(ಪ್ರಜಾವಾಣಿ ೮ನೇ ಸೆಪ್ಟೆಂಬರ್ ೨೦೧೪). ಹೀಗೆ ಬಾಲ್ಯ ವಿವಾಹಗಳನ್ನು ತಡೆದು ಅವುಗಳ ವಿರುದ್ಧ ಸಮರ ಸಾರಿರುವ ಹೆಣ್ಣುಮಕ್ಕಳೂ ಕಾಣಸಿಗುತ್ತಾರೆ. ಇಂತಹ ಮಕ್ಕಳ ಸಾಧನೆಗಳು ಸಮಾಜದ ಇನ್ನುಳಿದ ಮಕ್ಕಳಿಗೆ ಪ್ರೇರಣೆಯಾಗುತ್ತವೆ. ಮುಖ್ಯವಾಗಿ ಇಂತಹ ಪದ್ಧತಿಯನ್ನು ನಿರ್ಮೂಲನೆ ಮಾಡಬೇಕಾದ ಕರ್ತವ್ಯ ಸಮಾಜದ ಎಲ್ಲರ ಮೇಲಿದೆ.

ಕೆಲವು ರಾಜ್ಯಗಳಲ್ಲಿ ಬಾಲ್ಯ ವಿವಾಹಗಳನ್ನು ತಡೆಗಟ್ಟಲು ಜನರು ಕೆಲವು ಸಂಕಲ್ಪಗಳನ್ನು ಮಾಡುವುದರ ಮೂಲಕ ಅದರ ವಿರುದ್ಧ ಸಮರ ಸಾರಿದ್ದಾರೆ. ಇದಕ್ಕೆ ಒಂದು ಉದಾಹರಣೆಯೆಂದರೆ ರಾಜಸ್ಥಾನದ ೪೭ ಸಾವಿರ ಮಂದಿ ಟೆಂಟ್ ಮಾಲೀಕರು ವಿವಾಹ ಸಮಾರಂಭಗಳಿಗೆ ಟೆಂಟ್ ಪೂರೈಸುವ ಮೊದಲು ವಧು-ವರರ ವಯಸ್ಸು ದೃಢೀಕರಣಪತ್ರವನ್ನು ಪಡೆಯಲು ನಿರ್ಧರಿಸಿದ್ದಾರೆ. ಒಂದು ವೇಳೆ ಹುಡುಗ ಹುಡುಗಿ ಅಪ್ರಾಪ್ತರಾಗಿದ್ದರೆ ಪೊಲೀಸರಿಗೆ ವಿಷಯ ಮುಟ್ಟಿಸಲು ತೀರ್ಮಾನಿಸಿದ್ದಾರೆ. ಇದು ಉತ್ತಮ ನಡೆಯಾಗಿದೆ. ಹೀಗೆ ಸಮಾಜದ

ಜನರ ಸಹಕಾರದೊಂದಿಗೆ ಬಾಲ್ಯವಿವಾಹಗಳನ್ನು ಸುಲಭವಾಗಿ ತಡೆಯಬಹುದಾಗಿದೆ. ಬಾಲ್ಯ ವಿವಾಹ ನಿಷೇಧ ಕಾಯಿದೆಯ ಕುರಿತಂತೆ ಸಮಾಜದ ಜನರಲ್ಲಿ ಅರಿವನ್ನು ಮೂಡಿಸುವ ಕೆಲಸ ಮೊದಲು ನಡೆಯಬೇಕಾಗಿದೆ. ಇದರಲ್ಲಿ ಯಾವ ಯಾವ ಸಂಸ್ಥೆಗಳ ಪಾತ್ರ ಮುಖ್ಯವಾಗಿರುತ್ತದೆ ಎಂಬುದನ್ನು ಕೆಳಗಿನಂತೆ ವಿವರಿಸಲಾಗಿದೆ.

**೮.೪.ಬಾಲ್ಯ ವಿವಾಹ ಪದ್ಧತಿ ನಿಷೇಧ ಕಾನೂನು ಅರಿವು ಮೂಡಿಸುವಲ್ಲಿ ಶಿಕ್ಷಣದ ಪಾತ್ರ**

ಗ್ರಾಮೀಣ ಪ್ರದೇಶಗಳಲ್ಲಿನ ಜನರ ಶಿಕ್ಷಣದ ಮಟ್ಟ ತುಂಬಾನೇ ಕಡಿಮೆ ಇರುವುದು ವಾಸ್ತವ. ಹಾಗಾಗಿ ಅಲ್ಲಿನ ಜನರಿಗೆ ಉತ್ತಮ ರೀತಿಯ ಶಿಕ್ಷಣದ ಸೌಲಭ್ಯವನ್ನು ಒದಗಿಸಿದರೆ ಅವರು ಮೂಢನಂಬಿಕೆಗಳಿಂದ ಮತ್ತು ಬಾಲ್ಯವಿವಾಹದಂತಹ ಅನಿಷ್ಠ ಪದ್ಧತಿಗಳಿಂದ ಹೊರಬರಲು ಸಾಧ್ಯವಾಗುತ್ತದೆ. ಈ ನಿಟ್ಟನಲ್ಲಿ ಶಿಕ್ಷಣ ಇಲಾಖೆಯು ಮುನ್ನುಡಿಯನ್ನಿಡಬೇಕು. ಶಿಕ್ಷಣವು ಸಮಾಜದ ಜನರಿಗೆ ಜ್ಞಾನ ಮತ್ತು ತಿಳುವಳಿಕೆಯನ್ನು ನೀಡುತ್ತದೆ. ಹಾಗೆಯೇ ಸಮಾಜದಲ್ಲಿ ಆದರ್ಶಪ್ರಾಯವಾಗಿ ಬದುಕಲು ಅಗತ್ಯವಾದ ಕೌಶಲ್ಯಗಳನ್ನು ಒದಗಿಸಿಕೊಡುತ್ತದೆ. ಶಿಕ್ಷಣದ ಮುಖ್ಯ ಉದ್ದೇಶ ತಿಳಿಯುವುದು, ಗಳಿಸುವುದು ಮತ್ತು ಬೆಳೆಯುವುದು. ಅಂದರೆ ವ್ಯಕ್ತಿತ್ವ ವಿಕಾಸ. ಇಂತಹ ಒಂದು ಮುಖ್ಯ ಸಂಸ್ಥೆಯಿಂದ ಮಹಿಳೆಯರನ್ನು ಸಂಪೂರ್ಣವಾಗಿ ಹೊರಗಿಟ್ಟಂಥದ್ದು ಪುರುಷಶಾಹಿ ವ್ಯವಸ್ಥೆ. ಶಿಕ್ಷಣದಿಂದ ವಂಚಿತರಾದ ಮಹಿಳೆಯರು ವ್ಯವಸ್ಥೆಯಲ್ಲಿನ ಎಲ್ಲ ಬಗೆಯ ಅವಕಾಶಗಳಿಂದ ವಂಚಿತರಾಗಿದ್ದಾರೆ. ಮುಖ್ಯವಾಗಿ ಯಾವ ಮಹಿಳೆಯರು ಶಿಕ್ಷಣದಿಂದ ವಂಚಿಸಲ್ಪಟ್ಟಿದ್ದಾರೋ ಅಂತಹವರು ಸಂವಿಧಾನ ಬದ್ಧವಾಗಿ ರೂಪಿಸಲ್ಪಟ್ಟ ಕಾನೂನುಗಳ ಬಗೆಗಿನ ಅರಿವನ್ನು ಪಡೆಯದಾಗಿದ್ದಾರೆ ಮತ್ತು ಆ ಕಾರಣಕ್ಕಾಗಿಯೇ ಹಲವು ಬಗೆಯ ಸೌಲಭ್ಯಗಳಿಂದ ವಂಚಿಸಲ್ಪಟ್ಟಿದ್ದಾರೆ. ಮಹಿಳಾ ಶಿಕ್ಷಣಕ್ಕೆ ಪ್ರಥಮ ಸ್ಥಾನವನ್ನು ಒದಗಿಸಿಕೊಟ್ಟವರಲ್ಲಿ ಜ್ಯೋತಿ ಬಾ ಫುಲೆ ಮತ್ತು ಸಾವಿತ್ರಿಬಾಯಿ ಫುಲೆಯವರು ಮೊದಲಿಗರು. ಇವರು ಹಾಕಿಕೊಟ್ಟ ಶಿಕ್ಷಣದ ಬುನಾದಿಯ ಮೇಲೆ ಮಹಿಳೆಯರು ಇಂದು ಶಿಕ್ಷಣದಲ್ಲಿ ಸಾಕಷ್ಟು ಮುಂದುವರೆದಿದ್ದಾರೆ. ಆದರೆ ಮಹಿಳೆಯರು ಎಷ್ಟೇ ಶಿಕ್ಷಣವನ್ನು ಪಡೆದುಕೊಂಡಿದ್ದರೂ ಸಾಮಾಜಿಕ ಮೌಲ್ಯಗಳಿಂದ ಮಾತ್ರ ಹೊರ ಬಂದಿಲ್ಲದಿರುವುದು ಕಂಡುಬರುತ್ತಿದೆ. ಅಧ್ಯಯನದ ವ್ಯಾಪ್ತಿ ಪ್ರದೇಶವಾದಂತಹ ಬಳ್ಳಾರಿ, ಕೊಪ್ಪಳ, ಗದಗ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಮಹಿಳಾ ಶಿಕ್ಷಣದ ಪ್ರಮಾಣ ಹಿಂದಿಗಿಂತಲೂ ಅಧಿಕವಾಗಿದೆಯಾದರೂ ಕಾನೂನುಗಳ ಕುರಿತ ಅರಿವು ಮಾತ್ರ ತುಂಬಾ ನಿಧಾನಗತಿಯದ್ದಾಗಿದೆ. ಹಾಗಾಗಿಯೇ ಬಾಲ್ಯವಿವಾಹಗಳು ಇಂದಿಗೂ ಚಾಲ್ತಿಯಲ್ಲಿರುವುದು ಕಂಡುಬರುತ್ತದೆ.

ಉತ್ತರ ಕರ್ನಾಟಕ ಪ್ರದೇಶದ ವ್ಯಾಪಿಗೆ ಒಳಪಡುವ ಪ್ರದೇಶಗಳು ಶೈಕ್ಷಣಿಕವಾಗಿ ಹಿಂದುಳಿದಿರುವ ಪ್ರದೇಶಗಳಾಗಿವೆ. ವಸಾಹತು ಕಾಲದ ಸಂದರ್ಭದಲ್ಲಿ ಜಾರಿಯಾದ ಪಾಶ್ಚಾತ್ಯ ಶಿಕ್ಷಣದ ಕಾರಣವಾಗಿ ರಾಜ್ಯದ ಹಲವಾರು ಪ್ರದೇಶಗಳು ಗಣನೀಯವಾಗಿ ಪ್ರಗತಿಯಲ್ಲಿರುವುದನ್ನು ಕಾಣಬಹುದು. ಆದರೆ ಉತ್ತರ ಕರ್ನಾಟಕ ಪ್ರದೇಶ ಇದಕ್ಕೆ

ವಿರುದ್ಧವಾಗಿದೆ. ಗ್ರಾಮೀಣ ಪ್ರದೇಶಗಳು ಅಧಿಕವಾಗಿರುವುದರಿಂದ ಇಲ್ಲಿನ ಜನರು ಬಡತನ, ಅಪೌಷ್ಟಿಕತೆ, ಮೂಲಭೂತ ಸೌಕರ್ಯಗಳ ಕೊರತೆ, ನಿರುದ್ಯೋಗಗಳಂಥ ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಇವು ಶಿಕ್ಷಣದ ಮೇಲೆ ನೇರ ಪರಿಣಾಮ ಬೀರುತ್ತವೆ. ಹಾಗಾಗಿ ಇಲ್ಲಿನ ಜನರು ಮೊದಲು ಈ ಸಮಸ್ಯೆಗಳಿಂದ ಹೊರಬರಲು ಮುಂದಾಗುತ್ತಾರೆಯೇ ಹೊರತು ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸುವುದರ ಕಡೆಗೆ ಗಮನ ಹರಿಸುವುದು ತುಂಬಾ ವಿರಳ ಎಂದೇ ಹೇಳಬಹುದು. ಬಡತನದಿಂದ ಬಳಲುತ್ತಿರುವ ಕುಟುಂಬಗಳಲ್ಲಿನ ಮಕ್ಕಳ ಶಿಕ್ಷಣಕ್ಕಾಗಿ ಸರಕಾರಗಳು ಹಲವಾರು ಯೋಜನೆಗಳನ್ನು ರೂಪಿಸುತ್ತಲೇ ಬಂದಿವೆ. ಆದರೆ ಇದರ ಉಪಯೋಗವನ್ನು ಸಮರ್ಪಕವಾಗಿ ಬಳಸಿಕೊಳ್ಳುವಲ್ಲಿ ಜನರು ವಿಫಲರಾಗುತ್ತಿದ್ದಾರೆ. ಇದು ಒಂದೆಡೆಯಾದರೆ ಇನ್ನೊಂದೆಡೆ ಖಾಸಗೀ ಶಿಕ್ಷಣ ಸಂಸ್ಥೆಗಳು ಉನ್ನತ ಮತ್ತು ಮೇಲ್ ಮಧ್ಯಮ ವರ್ಗದ ಜನರನ್ನು ಸೆಳೆಯುತ್ತಿವೆ.

ಭಾರತದಲ್ಲಿ ಪಾರಂಪರಿಕವಾಗಿ ಮಹಿಳೆಯರನ್ನು ಸಾಕ್ಷರತೆಯಿಂದ ವಂಚಿತರನ್ನಾಗಿ ಮಾಡಲಾಗಿದೆ. ನಮ್ಮ ಪರಂಪರೆಯಲ್ಲಿ ಮಹಿಳೆಯರು ಶಿಕ್ಷಣವನ್ನು ಪಡೆಯುವುದು ಸಾಮಾಜಿಕ ಭದ್ರತೆಯ ದೃಷ್ಟಿಯಿಂದ ಅಪಾಯಕಾರಿ ಎಂದು ಭಾವಿಸಲಾಗಿತ್ತು. ಆ ಕಾರಣಕ್ಕಾಗಿ ಮಹಿಳೆಯರಿಗೆ ಶಿಕ್ಷಣವನ್ನು ಕೊಡುತ್ತಿರಲಿಲ್ಲ. ಈ ಹಿಂದೆಯೇ ಹೇಳಿದಂತೆ ಜ್ಯೋತಿ ಬಾ ಫುಲೆಯವರು ಮಹಿಳಾ ಶಿಕ್ಷಣಕ್ಕೆ ಮೊಟ್ಟ ಮೊದಲ ಬಾರಿಗೆ ಆದ್ಯತೆಯನ್ನು ನೀಡಿದರು. ನಂತರದ ಕಾಲಾವಧಿಯಲ್ಲಿ ಅಂದರೆ ೨೦ನೆಯ ಶತಮಾನದ ಕಾಲಾವಧಿಯಲ್ಲಿ ಮಹಿಳೆಯರನ್ನು ಸಾಕ್ಷರರನ್ನಾಗಿಸುವ ಕೆಲಸದಲ್ಲಿ ವೇಗ ಹೆಚ್ಚಾಯಿತು. ಆದರೂ ಸ್ವಾತಂತ್ರ್ಯ ನಂತರವೂ ಜನಸಂಖ್ಯೆಯ ಏರಿಕೆಗೆ ತಕ್ಕಂತೆ ಮಹಿಳೆಯರ ಶಿಕ್ಷಣದಲ್ಲಿ ಯಾವುದೇ ರೀತಿಯ ಏರಿಕೆ ಕಂಡುಬರಲಿಲ್ಲ. ಗ್ರಾಮೀಣ ಭಾಗಗಳಲ್ಲಿನ ಮಹಿಳೆಯರು ಮತ್ತು ಪರಿಶಿಷ್ಟ ಮಹಿಳೆಯರು ಇಂದಿಗೂ ಶಿಕ್ಷಣದಿಂದ ವಂಚಿತರಾಗಿದ್ದಾರೆ. ಇದಕ್ಕೆ ಕಾರಣ ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಪುರುಷಶಾಹಿ ಮೌಲ್ಯಗಳು. ಯಾರು ಶಿಕ್ಷಣವನ್ನು ಪಡೆದಿಲ್ಲವೋ ಅವರು ಅನಿಷ್ಠ ಪದ್ಧತಿಗಳಿಗೆ ಮತ್ತು ಮೂಢನಂಬಿಕೆಗಳಿಗೆ ಸುಲಭವಾಗಿ ಬಲಿಯಾಗುತ್ತಿದ್ದಾರೆ. ಅವರಲ್ಲಿ ಯಾವುದೇ ಬಗೆಯ ಅಭಿವೃದ್ಧಿ ಹೊಂದಬಹುದಾದ ಆಲೋಚನೆಗಳಾಗಲೀ ಅಥವಾ ವೈಯಕ್ತಿಕ ಹಕ್ಕುಗಳನ್ನು ಚಲಾಯಿಸುವಂತಹ ಆಲೋಚನೆಗಳಾಗಲೀ ಬರುವುದಿಲ್ಲ. ಹಾಗಾಗಿ ಗ್ರಾಮೀಣ ಭಾಗಗಳಲ್ಲಿ ಇಂದಿಗೂ ಬಾಲ್ಯ ವಿವಾಹಗಳು ನಡೆಯುತ್ತಿವೆ ಎಂದಾದರೆ ಅದಕ್ಕೆ ಜನರಲ್ಲಿ ಶಿಕ್ಷಣ ಇಲ್ಲದಿರುವುದೇ ಕಾರಣ ಎನ್ನಬಹುದು. ಶಿಕ್ಷಣಕ್ಕೂ ಸಂವಿಧಾನ ಬದ್ಧವಾಗಿ ರಚಿಸಲ್ಪಟ್ಟ ಕಾನೂನುಗಳಿಗೂ ನೇರವಾದ ಸಂಬಂಧವಿದೆ. ಯಾರು ಶಿಕ್ಷಣವನ್ನು ಪಡೆದಿದ್ದಾರೋ ಅವರು ಕಾನೂನುಗಳನ್ನು ಅರಿಯುವಲ್ಲಿ ಸಫಲರಾಗುತ್ತಾರೆ ಮತ್ತು ತಮ್ಮ ಹಕ್ಕುಗಳ ಬಗೆಗೆ ಜಾಗೃತರಾಗುತ್ತಾರೆ ಎಂದು ಹೇಳಬಹುದು. ಆದರೆ ವಾಸ್ತವದಲ್ಲಿ ಸ್ತ್ರೀಯರು ಶಿಕ್ಷಣವನ್ನು ಪಡೆದಿದ್ದಾರೆ ಅಥವಾ ಅವರ ಶೈಕ್ಷಣಿಕ ಮಟ್ಟ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ ಎಂದು

ಹೇಳಲಾಗುತ್ತಿದೆಯಾದರೂ, ಮಹಿಳಾ ಪರವಾದ ಹಲವಾರು ಕಾನೂನುಗಳನ್ನು ಬಳಸಿಕೊಳ್ಳುವಲ್ಲಿ ಅವರ ಪಾತ್ರ ಎಷ್ಟಿದೆ ಎಂಬುದನ್ನು ಗಮನಿಸಬೇಕಾದ ಅನಿವಾರ್ಯತೆ ಇದೆ. ಏಕೆಂದರೆ ವ್ಯವಸ್ಥೆಯಲ್ಲಿನ ಲಿಂಗ ಅಸಮಾನತೆಯ ಮೌಲ್ಯಗಳು ಜೀವನ ಕ್ರಮದ ರೂಢಿಯಲ್ಲಿ ಹಾಸುಹೊಕ್ಕಾಗಿದ್ದರೂ ಶೈಕ್ಷಣಿಕ ವಾತಾವರಣದ ಸಂದರ್ಭದಲ್ಲಿಯೂ ಇವುಗಳು ಕೆಲಸ ಮಾಡುತ್ತಿರುವುದು ಕಂಡುಬರುತ್ತಿವೆ. ಹಾಗಾಗಿ ಬಾಲ್ಯ ವಿವಾಹ ನಿಷೇಧ ಕಾನೂನಿನ ಬಗೆಗೆ ಮತ್ತು ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಬಗೆಗೆ ಸ್ತ್ರೀ ಪುರುಷರಿಬ್ಬರಿಗೂ ಅರಿವನ್ನು ಮೂಡಿಸಬೇಕಾದರೆ ಶಿಕ್ಷಣ ವ್ಯವಸ್ಥೆಯಲ್ಲಿ ಅಮೂಲಾಗ್ರವಾದ ಬದಲಾವಣೆ ಮಾಡಬೇಕಾದ ಅನಿವಾರ್ಯತೆಯಿದೆ. ಮುಖ್ಯವಾಗಿ ಶಿಕ್ಷಣದ ಪ್ರಾಥಮಿಕ ಹಂತದಿಂದಲೇ ಮಹಿಳಾ ಕಾನೂನುಗಳ ಕುರಿತಂತೆ ಪಠ್ಯಕ್ರಮಗಳನ್ನು ರಚಿಸಬೇಕು. ಹಾಗೆಯೇ ಪ್ರೌಢಶಿಕ್ಷಣದ ಹಂತದಿಂದ ಪ್ರತೀ ತರಗತಿಯಲ್ಲೂ ಒಂದೊಂದು ಕಾನೂನನ್ನು ಪಠ್ಯಕ್ರಮದಲ್ಲಿ ಪರಿಚಯಿಸಬೇಕು. ಮುಖ್ಯವಾಗಿ ಹೆಣ್ಣುಮಕ್ಕಳ ಜೀವಕ್ಕೆ ಅಪಾಯವೆನಿಸಿರುವ ಬಾಲ್ಯ ವಿವಾಹ ನಿಷೇಧ ಕಾನೂನಿನ ಕುರಿತು ಸಮಗ್ರವಾದ ಪಠ್ಯ ರಚನೆಯಾಗಬೇಕು. ಸಮಾಜದಲ್ಲಿ ಬಾಲ್ಯ ವಿವಾಹಕ್ಕೆ ಒಳಗಾದ ಮಕ್ಕಳ ಪರಿಸ್ಥಿತಿಗಳನ್ನು ಉದಾಹರಿಸುವುದರ ಮೂಲಕ ಮಕ್ಕಳಲ್ಲಿ ಜಾಗೃತಿಯನ್ನುಂಟು ಮಾಡಬೇಕು. ಈ ಸಂದರ್ಭದಲ್ಲಿ ಎರಡು ಬಗೆಯ ಸಮಸ್ಯೆಗಳು ಎದುರಾಗುತ್ತವೆ. ಒಂದು ಪಠ್ಯಕ್ರಮಗಳ ರಚನೆ ಮತ್ತು ರಚಿಸಲ್ಪಟ್ಟಂತಹ ಪಠ್ಯಕ್ರಮವನ್ನು ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳಿಸುವುದು. ಇವುಗಳಿಗೆ ಸಂಬಂಧಿಸಿದಂತೆ ತುಂಬಾ ಎಚ್ಚರಿಕೆಯ ಹೆಜ್ಜೆಗಳನ್ನಿಡಬೇಕಾಗುತ್ತದೆ. ಏಕೆಂದರೆ ಸಂವಿಧಾನ ಬದ್ಧವಾಗಿ ರೂಪಿಸಲ್ಪಟ್ಟ ಕಾನೂನನ್ನು ಯಥಾವತ್ತಾಗಿ ಪಠ್ಯಕ್ರಮದಲ್ಲಿ ಜಾರಿಗೆ ತರುವ ಕೆಲಸ ಮೊದಲಾಗಬೇಕು. ಆ ಸಂದರ್ಭದಲ್ಲಿ ಸ್ತ್ರೀ ಪುರುಷರು ಸಮಾನರು ಎಂದು ತಿಳಿದುಕೊಂಡಿರುವ ಸಮಾನ ಮನಸ್ಕರರನ್ನು ಪಠ್ಯಕ್ರಮ ರಚನೆಯಲ್ಲಿ ತೊಡಗಿಸಬೇಕು. ಆಗ ಮಾತ್ರ ಪುರುಷ ಮೌಲ್ಯಗಳು ಪಠ್ಯಕ್ರಮದೊಳಗೆ ಸೇರಿಕೊಳ್ಳಲು ಅವಕಾಶವಿಲ್ಲದಂತಾಗುತ್ತದೆ. ನಂತರ ರಚನೆಗೊಂಡ ಪಠ್ಯಕ್ರಮ ಸರಿಯಾದ ದಿಕ್ಕಿನಲ್ಲಿ ಚಲಿಸುವಂತೆ ಪಾಠ ಬೋಧನೆಯಾಗಬೇಕು. ಇಲ್ಲಿಯೂ ಯಾವುದೇ ಬಗೆಯ ಪುರುಷಶಾಹಿ ಮೌಲ್ಯಗಳು ಓದುಗರ ಮೇಲೆ ಪ್ರಭಾವ ಬೀರದಂತೆ ಜಾಗೃತಿ ವಹಿಸಬೇಕು. ಅಂದರೆ ಪಾಠ ಭೋದಕರಿಗೂ ಸ್ತ್ರೀ ಪುರುಷರ ಸಮಾನತೆಯ ಕುರಿತಂತೆ ಅಂದರೆ ಲಿಂಗ ಸಂವೇದನೆಗೆ ಸಂಬಂಧಿಸಿದಂತೆ ತರಬೇತಿಯನ್ನು ನೀಡಬೇಕು. ಅಂದಾಗ ಮಾತ್ರ ಸ್ತ್ರೀ ಪುರುಷರ ನಡುವಿನ ಅಂತರ ಸಡಿಲಗೊಳ್ಳಲು ಸಹಕಾರಿಯಾಗುತ್ತದೆ. ಹಾಗಾಗಿ ಈ ಬಗೆಯ ಶಿಕ್ಷಣದ ಅನಿವಾರ್ಯತೆ ಇದೆ. ಬಾಲ್ಯ ವಿವಾಹ ನಿಷೇಧ ಕಾನೂನಿನ ಕುರಿತು ಸಂಪೂರ್ಣವಾದ ಜ್ಞಾನ ಪ್ರಾಥಮಿಕ ಮತ್ತು ಪ್ರೌಢ ಹಂತದಲ್ಲಿಯೇ ದೊರೆಯುತ್ತದೆ. ಆದರೆ ಪ್ರಸ್ತುತ ಈ ಬಗೆಯ ಯಾವುದೇ ಕ್ರಮಗಳು ಜರುಗುತ್ತಿಲ್ಲ. ಹಾಗಾಗಿಯೇ ಮಹಿಳೆಯರು ಶಿಕ್ಷಣ ಕ್ಷೇತ್ರದಲ್ಲಿ ಪುರುಷರಿಗಿಂತ ಮುಂದೆ ಬರುತ್ತಿದ್ದಾರೆ ಎಂದು ಹೇಳಿಕೊಂಡರೂ, ಅವರೆಲ್ಲರೂ ಉನ್ನತ ಶಿಕ್ಷಣಕ್ಕೆ ಕಾಲಿಡುತ್ತಾರೆ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಗ್ರಾಮೀಣ ಪ್ರದೇಶಗಳಲ್ಲಿ ಪ್ರೌಢಶಿಕ್ಷಣವೇ ಅಂತಿಮವಾಗಿರುತ್ತದೆ.

ಅದು ಕೊನೆಗೊಂಡರೆ ಸಾಕು ಹೆಣ್ಣುಮಕ್ಕಳಿಗೆ ವಿವಾಹ ಮಾಡಿಬಿಡಲಾಗುತ್ತದೆ. ಹೆಣ್ಣುಮಕ್ಕಳ ಶಿಕ್ಷಣ ಬಹಳಷ್ಟು ಸಂದರ್ಭಗಳಲ್ಲಿ ಪ್ರೌಢ ಶಿಕ್ಷಣಕ್ಕೂ ತೆರೆದುಕೊಳ್ಳದೇ ಪ್ರಾಥಮಿಕ ಹಂತದಲ್ಲಿಯೇ ವಿದ್ಯಾಭ್ಯಾಸ ಕೊನೆಗೊಳ್ಳುತ್ತದೆ. ಆ ಕಾರಣಕ್ಕಾಗಿಯೇ ಪ್ರಾಥಮಿಕ ಮತ್ತು ಪ್ರೌಢ ಹಂತದ ಶಿಕ್ಷಣದಲ್ಲಿಯೇ ಬಾಲ್ಯ ವಿವಾಹ ಪದ್ಧತಿಯಿಂದಾಗುವ ದುಷ್ಪರಿಣಾಮಗಳು ಮತ್ತು ಬಾಲ್ಯ ವಿವಾಹ ನಿಷೇಧ ಕಾನೂನಿನ ಕುರಿತು ಪಠ್ಯದ ಮೂಲಕ ತಿಳಿಸುವುದರಿಂದ ಮಕ್ಕಳು ಜಾಗೃತಗೊಳ್ಳುತ್ತಾರೆ ಮತ್ತು ಒಂದುವೇಳೆ ಪ್ರೌಢಶಿಕ್ಷಣದ ನಂತರ ಅವರಿಗೇನಾದರೂ ವಿವಾಹ ಮಾಡಲು ಬಯಸಿದರೆ ಅದರ ವಿರುದ್ಧ ಧ್ವನಿ ಎತ್ತುವ ಸಾಮರ್ಥ್ಯ ಅವರಲ್ಲಿ ಬರುತ್ತದೆ. ಹೀಗೆ ಆಗುವುದೊಂದು ಸಂಚಲನಾತ್ಮಕ ಸಂಗತಿಯಾಗಿದೆ.

ವ್ಯವಸ್ಥೆಯಲ್ಲಿ ಶಿಕ್ಷಣವು ಎರಡು ಬಗೆಯಲ್ಲಿ ನಡೆಯುತ್ತದೆ. ಒಂದು ಔಪಚಾರಿಕ ಶಿಕ್ಷಣ ಮತ್ತು ಅನೌಪಚಾರಿಕ ಶಿಕ್ಷಣ. ಈ ಎರಡೂ ಸಂದರ್ಭಗಳಲ್ಲಿಯೂ ಬಾಲ್ಯ ವಿವಾಹ ನಿಷೇಧ ಕಾನೂನಿಗೆ ಸಂಬಂಧಿಸಿದಂತೆ ಸ್ತ್ರೀ ಪುರುಷರಿಬ್ಬರಿಗೂ ಸಮಾನವಾಗಿ ಅರಿವು ಮೂಡಿಸುವ ಅಗತ್ಯತೆ ಇದೆ. ಮಗು ಹುಟ್ಟಿನಿಂದಲೇ ಅನೌಪಚಾರಿಕ ಶಿಕ್ಷಣಕ್ಕೆ ಒಳಗಾಗುತ್ತದೆ. ಆ ಸಂದರ್ಭದಲ್ಲಿಯೇ ಲಿಂಗ ಸಮಾನತೆಯನ್ನು ಒಳಗೊಂಡಿರುವ ಸಾಮಾಜೀಕರಣದ ಪ್ರಕ್ರಿಯೆಯ ಅವಶ್ಯಕತೆ ಇದೆ. ಹಾಗಾದಾಗ ಮಾತ್ರ ವ್ಯವಸ್ಥೆಯಲ್ಲಿ ಮಹಿಳೆಯರು ಸ್ವಾವಲಂಬಿಗಳಾಗಿ ಜೀವಿಸಲು ಸಹಕಾರಿಯಾಗುತ್ತದೆ. ಹೀಗೆ ಬಾಲ್ಯ ವಿವಾಹ ನಿಷೇಧ ಕಾನೂನಿನ ಅರಿವನ್ನು ಪಡೆಯಲು ಶಿಕ್ಷಣದ ಪಾತ್ರ ದೊಡ್ಡದಾಗಿದೆ. ಪ್ರೌಢ ಶಿಕ್ಷಣವನ್ನು ಪಡೆದ ಮಹಿಳೆಯರು ತಮಗೆ ಇಷ್ಟವಿಲ್ಲದ ವಿವಾಹವನ್ನು ವಿರೋಧಿಸಿ ಪುನಃ ಶಿಕ್ಷಣವನ್ನು ಪಡೆಯುತ್ತಿರುವ ಪ್ರಕರಣಗಳು ಅಧ್ಯಯನದ ವ್ಯಾಪ್ತಿ ಪ್ರದೇಶದಲ್ಲಿ ಕಂಡುಬಂದಿವೆ. "ಕೊಪ್ಪಳ ತಾಲೂಕಿನ ಇಂದಿರಾನಗರ ತಾಂಡಾದ ಹೆಣ್ಣುಮಗು ಬಾಲ್ಯ ವಿವಾಹದ ಕುಣಿಕೆಯಿಂದ ಹೊರಬಿದ್ದು ಉನ್ನತ ಶಿಕ್ಷಣವನ್ನು ಮುಂದುವರೆಸಿದ್ದಾಳೆ. ೨೦೧೨ರಲ್ಲಿ ಮೊರಾರ್ಜಿ ದೇಸಾಯಿ ವಸತಿ ಶಾಲೆಯಲ್ಲಿ ಓದುತ್ತಿದ್ದ ವಿದ್ಯಾರ್ಥಿನಿ ಎಸ್.ಎಸ್.ಎಲ್.ಸಿ ಪರೀಕ್ಷೆಯನ್ನು ಮುಗಿಸಿ ಮನೆಗೆ ಬಂದಾಗ, ಮನೆಯಲ್ಲಿ ಆಕೆಗೆ ಮದುವೆ ಮಾಡಲು ಸಿದ್ಧತೆ ನಡೆಸಿದ್ದರು. ಇದು ಆಕೆಗೆ ತಿಳಿದಿರಲಿಲ್ಲ. ಈ ವಿದ್ಯಾರ್ಥಿಯನ್ನು ಯಲಬುರ್ಗಾ ತಾಲೂಕಿನ ಇಟಗಿ ಗ್ರಾಮದ ಯುವಕನೊಬ್ಬನ ಜೊತೆ ವಿವಾಹ ಮಾಡಲು ನಿಶ್ಚಯಿಸಿದ್ದರು. ಆದರೆ ಈ ವಿವಾಹ ಆಕೆಗೆ ಇಷ್ಟವಿರಲಿಲ್ಲ. ಬದಲಾಗಿ ಓದಬೇಕೆಂಬ ಆಸೆಯಿತ್ತು. ಇದನ್ನು ತನ್ನ ಸ್ನೇಹಿತೆಗೆ ತಿಳಿಸಿದಾಗ ಆಕೆ ಯುನಿಸೆಫ್‌ಗೆ ಕರೆ ಮಾಡಿ ಬಾಲ್ಯ ವಿವಾಹವಾಗುತ್ತಿರುವುದರ ಬಗೆಗೆ ತಿಳಿಸಿದ್ದಾಳೆ. ಈ ವಿಷಯ ತಿಳಿದ ಕೂಡಲೇ ಯುನಿಸೆಫ್, ಮಹಿಳಾ ಸಾಮಖ್ಯ ಹಾಗೂ ಪೊಲೀಸ್ ಅಧಿಕಾರಿಗಳೊಂದಿಗೆ ಸ್ಥಳಕ್ಕೆ ಭೇಟಿ ಕೊಟ್ಟು ಪರಿಶೀಲಿಸಿ, ಆ ವಿದ್ಯಾರ್ಥಿನಿಯರ ತಂದೆ ತಾಯಿಗೆ ಬುದ್ಧಿವಾದ ಹೇಳಿದ್ದಾರೆ. ಆದರೆ ಅವರು ತಮ್ಮ ಮಗಳಿಗೇ ಬೈದು ಮನೆಯಿಂದ ಹೊರಗಟ್ಟಿದ್ದಾರೆ. ಯುನಿಸೆಫ್ ತಂಡ ಆ ವಿದ್ಯಾರ್ಥಿನಿಗೆ ಬಾಲ ಮಂದಿರದಲ್ಲಿ ತಾತ್ಕಾಲಿಕವಾಗಿ ಆಶ್ರಯ ನೀಡಿದ್ದಾರೆ. ನಂತರ ಆಕೆಯ ಮುಂದಿನ

ವಿದ್ಯಾಭ್ಯಾಸಕ್ಕಾಗಿ ಜಿಲ್ಲಾಡಳಿತ ಎಲ್ಲ ತರಹದ ಕ್ರಮವನ್ನು ಕೈಗೊಂಡಿದೆ. ನಂತರ ಆಕೆಯನ್ನು ಮೂಡಬಿದರೆಯ ಆಳ್ವಾಸ್ ಕಾಲೇಜಿಗೆ ಪಿಯುಸಿಗೆ ಸೇರಿಸಿದ್ದಾರೆ. ಪಿಯುಸಿಯಲ್ಲಿ ಶೇ.೭೨ರಷ್ಟು ಅಂಕಗಳೊಂದಿಗೆ ತೇರ್ಗಡೆ ಹೊಂದಿದ್ದಾಳೆ. ನಂತರ ಮಂಗಳೂರಿನ ರೋಸರಿಯೋ ಕಾಲೇಜಿನಲ್ಲಿ ಬಿಕಾಂ ಪದವಿಗಾಗಿ ಓದುತ್ತಿದ್ದಾಳೆ. ಆ ವಿದ್ಯಾರ್ಥಿನಿಯ ತಂದೆ ತಾಯಿ ತಾವು ಮಾಡಿದ ತಪ್ಪಿಗೆ ಪಶ್ಚಾತ್ತಾಪ ಪಟ್ಟು ತಮ್ಮ ಮಗಳನ್ನು ಮನೆಗೆ ಕರೆದುಕೊಂಡಿದ್ದಾರೆ. ಈಗ ಆ ವಿದ್ಯಾರ್ಥಿನಿ ಕಾಲೇಜು ರಜಾ ದಿನಗಳಲ್ಲಿ ಮನೆಗೆ ಬಂದು ಹೋಗುವುದು ಮಾಡುತ್ತಿದ್ದಾಳೆ" (ವಿಜಯ ಕರ್ನಾಟಕ, ೮.೧೨.೨೦೧೫). ಇದರ ಜೊತೆಗೆ ಹೆಣ್ಣುಮಕ್ಕಳು ತಮಗೆ ನಿಶ್ಚಯಿಸಿದ ವಿವಾಹ ಇಷ್ಟವಿಲ್ಲವೆಂದು ಹೇಳಿ ೧೦೯೮ಕ್ಕೆ ಕರೆ ಮಾಡುವುದರ ಮೂಲಕ ದೂರು ನೀಡಿ ಬಾಲ್ಯ ವಿವಾಹದಿಂದ ಹೊರಗುಳಿದ ಮತ್ತು ಶಿಕ್ಷಣವನ್ನು ಮುಂದುವರೆಸಿದ ಪ್ರಕರಣಗಳು ಅಧ್ಯಯನ ಕ್ಷೇತ್ರ ವ್ಯಾಪ್ತಿಯಲ್ಲಿ ಕಂಡುಬಂದಿವೆ.

ಹೆಣ್ಣುಮಕ್ಕಳಿಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಕೊಡುವುದರಿಂದ ಅವರು ಮುಂದಿನ ಭವಿಷ್ಯಕ್ಕಾಗಿ ಆಲೋಚಿಸುವ ಜ್ಞಾನವನ್ನು ಪಡೆದುಕೊಳ್ಳುತ್ತಾರೆ. ಈ ಶಿಕ್ಷಣದಿಂದ ಅವರಲ್ಲಿ ಆತ್ಮಸ್ಥೈರ್ಯ ಬರುತ್ತದೆ. ಅದರಿಂದಾಗಿ ಪ್ರಶ್ನಿಸುವ ಮನೋಭಾವ ಅವರಲ್ಲಿ ಬೆಳೆಯುತ್ತದೆ. ಇಂತಹ ಸಂದರ್ಭದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ಪಠ್ಯಕ್ರಮದಲ್ಲಿ, ಬಾಲ್ಯ ವಿವಾಹ ಮಾಡುವುದರಿಂದ ಮಕ್ಕಳ ಮೇಲಾಗುವ ದುಷ್ಪರಿಣಾಮಗಳ ಕುರಿತು ಮತ್ತು ಬಾಲ್ಯ ವಿವಾಹ ನಿಷೇಧ ಕಾನೂನಿನ ಕುರಿತು ಪಠ್ಯವನ್ನು ರಚಿಸಿದ್ದೇ ಆದಲ್ಲಿ ಮಕ್ಕಳು ತಮ್ಮ ತಂದೆ ತಾಯಂದಿರ ಮನವೊಲಿಸಲು ಮುಂದಾಗುತ್ತಾರೆ. ಹಾಗಾಗಿ ಬಾಲ್ಯ ವಿವಾಹದ ಕುರಿತ ಪಠ್ಯ ರಚನೆಯಾಗಬೇಕು ಎಂಬುದು ಇಲ್ಲಿನ ಆಶಯ.

### ೮.೫. ಬಾಲ್ಯ ವಿವಾಹ ಪದ್ಧತಿ ನಿಷೇಧ ಕಾನೂನು ಅರಿವು ಮೂಡಿಸುವಲ್ಲಿ ಮಾಧ್ಯಮಗಳ ಪಾತ್ರ

ವ್ಯವಸ್ಥೆಯಲ್ಲಿನ ಓರೆಕೋರೆಗಳನ್ನು ತಿದ್ದುವಲ್ಲಿ ಮಾಧ್ಯಮಗಳ ಪಾತ್ರ ಬಹುದೊಡ್ಡದಿದೆ. ಇಂದು ಜಗತ್ತಿನ ಎಲ್ಲ ಆಗುಹೋಗುಗಳು ಜನರಿಗೆ ತಲುಪಿಸುವ ಏಕೈಕ ಮಾರ್ಗವೆಂದರೆ ಅದು ಮಾಧ್ಯಮ ಮಾತ್ರ. ಇಂದು ಜನರು ವ್ಯವಸ್ಥೆಯಲ್ಲಿನ ಹೊಸ ಹೊಸ ವಿಷಯಗಳನ್ನು ತಿಳಿದುಕೊಳ್ಳಲು ಮಾಧ್ಯಮಗಳ ಮೊರೆ ಹೋಗುತ್ತಿದ್ದಾರೆ. ಇಂದು ಮಾಧ್ಯಮಗಳು ಇಡೀ ಸಮಾಜ ವ್ಯವಸ್ಥೆಗೆ ಮಾರ್ಗದರ್ಶಕರಂತೆ ರೂಪುಗೊಳ್ಳುತ್ತಿವೆ. ವ್ಯವಸ್ಥೆಯಲ್ಲಿ ನಡೆಯುವ ಪ್ರತಿಯೊಂದು ಘಟನೆಯನ್ನು ಪ್ರತಿಯೊಬ್ಬ ಪ್ರಜೆಗೂ ತಲುಪಿಸುವ ಜವಾಬ್ದಾರಿ ಈ ಮಾಧ್ಯಮಗಳಿಗಿದೆ. ಹಾಗಾಗಿ ಸಮಾಜವನ್ನು ತಿದ್ದುವ ಕೆಲಸದಲ್ಲಿ ಮಾಧ್ಯಮಗಳ ಪಾತ್ರ ದೊಡ್ಡದಿದೆ ಎಂದೇ ಹೇಳಬೇಕಾಗುತ್ತದೆ. ಮಾಧ್ಯಮಗಳಲ್ಲಿ ಪತ್ರಿಕಾ ಮಾಧ್ಯಮಗಳು ಮತ್ತು ಎಲೆಕ್ಟ್ರಾನಿಕ್ಸ್ ಮಾಧ್ಯಮಗಳಿವೆ. ಈ ಎರಡೂ ಮಾಧ್ಯಮ ಪ್ರಕಾರಗಳು ಜನರ ಮೇಲೆ ತುಂಬಾ ಪರಿಣಾಮಗಳನ್ನು ಬೀರುತ್ತವೆ. ಆದರೆ ಮಹಿಳಾ ಸಂಬಂಧಿ ಕಾನೂನುಗಳ ಬಗೆಗೆ ಈ ಮಾಧ್ಯಮಗಳು ಯಾವ ಬಗೆಯ ಧೋರಣೆಯನ್ನು ಹೊಂದಿವೆ? ಎಂಬ ಪ್ರಶ್ನೆಯನ್ನು

ಕೇಳಿಕೊಳ್ಳಬೇಕಾದ ಅನಿವಾರ್ಯತೆ ಇದೆ. ಹಾಗೆಯೇ ಸಮಾಜದಲ್ಲಿ ಬೇರೂರಿರುವ ಬಾಲ್ಯ ವಿವಾಹದಂತಹ ಅನಿಷ್ಠ ಪದ್ಧತಿಗಳನ್ನು ತೊಡೆದು ಹಾಕುವಲ್ಲಿ ಮಾಧ್ಯಮಗಳ ಪಾತ್ರ ಏನು ಎಂಬುದು ಇಲ್ಲಿನ ಮುಖ್ಯ ಚರ್ಚೆಯಾಗಿದೆ. ಏಕೆಂದರೆ ಮಾಧ್ಯಮಗಳು ಬಿತ್ತರಿಸುತ್ತಿರುವ ಕಾರ್ಯಕ್ರಮಗಳು ಪಿತೃಪ್ರಧಾನ ಮೌಲ್ಯಗಳನ್ನು ಸ್ಥಿರೀಕರಿಸುವ ಮತ್ತು ಜನರನ್ನು ಸಾಂಪ್ರದಾಯಿಕ ನೆಲೆಯಲ್ಲಿಯೇ ಜೀವಿಸುವ ಹಾಗೆ ಮಾಡುತ್ತಿವೆ. ಇವುಗಳ ಕಡೆಗೆ ಗಮನಹರಿಸಬೇಕಾದ ಅವಶ್ಯಕತೆ ಇದೆ. ಮುಖ್ಯವಾಗಿ ಜನರನ್ನು ತಲುಪುತ್ತಿರುವ ಈ ಮಾಧ್ಯಮ ಕಾರ್ಯಕ್ರಮಗಳ ರೂಪುರೇಷೆ ಬದಲಾಗಬೇಕಿದೆ.

ಪತ್ರಿಕಾ ಮಾಧ್ಯಮಗಳ ವ್ಯಾಪ್ತಿಗೆ ದಿನಪತ್ರಿಕೆಗಳು, ವಾರ ಪತ್ರಿಕೆಗಳು, ಮಾಸಿಕ ಪತ್ರಿಕೆಗಳು, ತ್ರೈಮಾಸಿಕ, ಅರ್ದವಾರ್ಷಿಕ ಮತ್ತು ವಾರ್ಷಿಕ ಪತ್ರಿಕೆಗಳು ಬರುತ್ತವೆ. ಮುಖ್ಯವಾಗಿ ದಿನ ಪತ್ರಿಕೆಗಳು ಪ್ರತಿಯೊಂದು ಹಳ್ಳಿಗೂ ತಲುಪುತ್ತವೆಯಾದ್ದರಿಂದ ಈ ಪತ್ರಿಕೆಗಳಲ್ಲಿ ಇಂದು ಹೆಚ್ಚಾಗಿ ಮಹಿಳೆಯರ ಮೇಲೆ ನಡೆಯುವ ಹಿಂಸೆ, ಅತ್ಯಾಚಾರ, ಆಸಿಡ್ ಎರಚಿದ ಸಂಗತಿಗಳು ರೋಚಕವಾಗಿ ವರದಿಯಾಗುವಷ್ಟು ಮಹಿಳೆಯರಿಗೆ ಸಂಬಂಧಿಸಿದ ಪ್ರಗತಿಯ ವರದಿಗಳು ಸುದ್ದಿಯಾಗುವುದಿಲ್ಲ. ಸಮಾಜದಲ್ಲಿ ನಡೆಯುವ ಬಾಲ್ಯ ವಿವಾಹಗಳನ್ನು ತಡೆಯುವಲ್ಲಿ ಪತ್ರಿಕಾ ಮಾಧ್ಯಮಗಳು ಹೆಚ್ಚಿನ ರೀತಿಯಲ್ಲಿ ಕಾರ್ಯ ನಿರ್ವಹಿಸಬೇಕಿದೆ. ಮುಖ್ಯವಾಗಿ ಪತ್ರಿಕೆಗಳಲ್ಲಿ ಬಾಲ್ಯ ವಿವಾಹಕ್ಕೆ ಸಂಬಂಧಿಸಿದಂತೆ ಘಟನೆಯ ಕುರಿತು ವರದಿ ರೂಪದ ವಿಷಯಗಳು ಮಾತ್ರ ಬಿತ್ತರಗೊಳ್ಳುತ್ತವೆ. ಬದಲಾಗಿ ಅದರ ಕುರಿತಾಗಿ ಸುಧೀರ್ಘವಾದ ಚರ್ಚೆಗಳು ನಡೆದ ಉದಾಹರಣೆಗಳು ಇಲ್ಲದಾಗಿದೆ. ಆ ಕಾರಣಕ್ಕಾಗಿ ಬಾಲ್ಯ ವಿವಾಹಕ್ಕೆ ಸಂಬಂಧಿಸಿ ಯಾವುದೇ ಘಟನೆ ನಡೆದರೂ, ಅದರ ಕುರಿತು ಸಮಗ್ರವಾದ ಚರ್ಚೆ ನಡೆಯಬೇಕಿದೆ. ಪ್ರತಿಯೊಂದು ದಿನ ಪತ್ರಿಕೆಯು ಮಹಿಳೆಯರಿಗಾಗಿಯೇ ಪ್ರತ್ಯೇಕವಾದ ಪುಟಗಳನ್ನು ಹೊಂದಿವೆ. ಆದರೆ ಇದುವರೆಗೂ ಆ ಪುಟಗಳಲ್ಲಿ ಬಾಲ್ಯ ವಿವಾಹಕ್ಕೆ ಸಂಬಂಧಿಸಿದ ಮಾಹಿತಿ ಬಂದಿರುವುದು ತುಂಬಾ ವಿರಳವೆಂದೇ ಹೇಳಬಹುದು. ಮಹಿಳಾ ವಿಷಯಗಳಿಗಾಗಿಯೇ ಮೀಸಲಿಟ್ಟ ಪ್ರತ್ಯೇಕ ಪುಟಗಳಲ್ಲಿ ಮಹಿಳಾ ಆರೋಗ್ಯಕ್ಕೆ ಸಂಬಂಧಿಸಿದಂತೆ, ಮಹಿಳಾ ಸೌಂದರ್ಯಕ್ಕೆ ಸಂಬಂಧಿಸಿದಂತೆ ಅತ್ಯಾಕರ್ಷಕ ಶಿಕ್ಷಣದ ಕುರಿತಂತೆ ಹೆಚ್ಚಿನ ಮಾಹಿತಿಗಳಿರುತ್ತವೆಯಷ್ಟೇ. ಏಕೆಂದರೆ ಪತ್ರಿಕೆಗಳು ತುಂಬಾ ವಾಣಿಜ್ಯೀಕರಣಗೊಂಡಿವೆ. ಹಾಗಾಗಿಯೇ ಮಹಿಳಾ ಪರವಾದ ಕಾನೂನುಗಳ ಕುರಿತಂತೆ ಯಾವೊಂದು ಚರ್ಚೆಗಳು ಕಂಡುಬರುತ್ತಿಲ್ಲ. ಹಾಗೆಯೇ ವಾರಪತ್ರಿಕೆಗಳು, ಮಾಸಿಕ ಪತ್ರಿಕೆಗಳು, ಅರ್ಧವಾರ್ಷಿಕ ಪತ್ರಿಕೆಗಳೂ ತಮ್ಮದೇ ನೆಲೆಯಲ್ಲಿ ಕಾರ್ಯಗಳನ್ನು ಮಾಡುತ್ತಿವೆ. ಆದರೆ ಇಲ್ಲಿ ಕೊರತೆ ಇರುವುದು ಏನೆಂದರೆ ಇವುಗಳಾವುವೂ ಮಹಿಳೆಯರ ಕಾನೂನಾತ್ಮಕ ಹೋರಾಟಗಳಿಗೆ ಸಂಬಂಧಿಸಿದಂತೆ ಮತ್ತು ಮಕ್ಕಳ ಹಕ್ಕುಗಳು ಮತ್ತು ಬಾಲ್ಯ ವಿವಾಹ ನಿಷೇಧಕ್ಕೆ ಸಂಬಂಧಿಸಿದಂತೆ ಯಾವೊಂದು ಮಾಹಿತಿಯನ್ನೂ ಬಿತ್ತರಿಸುತ್ತಿಲ್ಲ. ಒಂದುವೇಳೆ ಬಿತ್ತರಿಸುತ್ತಿದ್ದರೂ ಅವುಗಳು ಜನಸಾಮಾನ್ಯರ ನಡುವೆ ಚರ್ಚಿತಗೊಳ್ಳುತ್ತಿಲ್ಲ. ಇತ್ತೀಚಿನ ದಿನಗಳಲ್ಲಿ ಮಹಿಳೆಯರಿಗೆ

ಸಂಬಂಧಿಸಿದಂತೆ ಪ್ರತ್ಯೇಕ ಪತ್ರಿಕೆಗಳೂ ಆರಂಭಗೊಂಡಿವೆ. ಇವುಗಳು ತಮ್ಮದೇ ಆದ ವ್ಯಾಪ್ತಿಯಲ್ಲಿ ಮಹಿಳೆಯರ ಅಭಿವೃದ್ಧಿಗೆ ದುಡಿಯುತ್ತಿವೆ. ಇವು ಇನ್ನೂ ಹೆಚ್ಚಿನ ರೀತಿಯಲ್ಲಿ ತಮ್ಮ ಕಾರ್ಯಗಳನ್ನು ಚುರುಕುಗೊಳಿಸಬೇಕಾಗಿದೆ. ಮುಖ್ಯವಾಗಿ ಸಮಾಜದ ಅನಿಷ್ಠ ಪಿಡುಗಾಗಿರುವ ಬಾಲ್ಯ ವಿವಾಹ ಪದ್ಧತಿಯನ್ನು ನಿವಾರಿಸಬೇಕಾದ ಅನಿವಾರ್ಯತೆಯಕಡೆ ಹೆಚ್ಚಿನ ಗಮನಹರಿಸಬೇಕಿದೆ.

ಮಕ್ಕಳ ಹಕ್ಕುಗಳಿಗಾಗಿಯೇ ದುಡಿಯುವ ಪ್ರತ್ಯೇಕ ಪತ್ರಿಕೆಯ ಅಗತ್ಯತೆ ಇದೆ. ಹೀಗೆ ಮಕ್ಕಳ ಹಕ್ಕುಗಳಿಗಾಗಿಯೇ ರೂಪಿತಗೊಂಡಿರುವ ಒಂದು ಪತ್ರಿಕೆಯೆಂದರೆ "ಸಕಾಲ ಸ್ಪಂದನ" ತ್ರೈಮಾಸಿಕ ಪತ್ರಿಕೆ. ಇದು ಕೊಪ್ಪಳ ಜಿಲ್ಲಾಡಳಿತ ರೂಪಿಸಿರುವ ವಿಶಿಷ್ಟ ಕಾರ್ಯಕ್ರಮ ೧೦೯೮ ಪ್ಲಸ್ ಮಕ್ಕಳ ರೆಡ್ ಅಲರ್ಟ್ಸ್ ಮೇಲ್ವಿಚಾರಣಾ ವ್ಯವಸ್ಥೆಯ ಸುದ್ದಿ ಸಂಚಿಕೆಯಾಗಿದೆ. ಈ ಪತ್ರಿಕೆಯಲ್ಲಿ ಬಾಲ್ಯ ವಿವಾಹಕ್ಕೆ ಒಳಗಾದ ಮಕ್ಕಳ ಪ್ರಕರಣಗಳನ್ನು, ಬಾಲ ಕಾರ್ಮಿಕ ಪದ್ಧತಿಯನ್ನು ಹೋಗಲಾಡಿಸುವ ಸುದ್ದಿಗಳು, ಹಾಗೆಯೇ ತಾಯಿ ಮರಣ ಮತ್ತು ಶಿಶು ಮರಣ ಪ್ರಮಾಣಗಳನ್ನು ಕಡಿಮೆ ಮಾಡುವ ಬಗೆಗಿನ ವಿಷಯಗಳು ಹೆಚ್ಚಿನ ರೀತಿಯಲ್ಲಿ ಚರ್ಚಿಸಲ್ಪಡುತ್ತವೆ. ಮುಖ್ಯವಾಗಿ ಮಕ್ಕಳ ಹಕ್ಕುಗಳನ್ನು ರಕ್ಷಿಸುವ ಉದ್ದೇಶದಿಂದಲೇ ಈ ಪತ್ರಿಕೆ ರೂಪುಗೊಂಡಿದೆ. ಹಾಗೆಯೇ ಬಾಲ್ಯ ವಿವಾಹಗಳನ್ನು ತಡೆದ ಪ್ರಕರಣಗಳ ಜೊತೆಗೆ ಆ ವಿವಾಹಗಳನ್ನು ತಡೆದ ಅಧಿಕಾರಿಗಳ ಅನುಭವಗಳನ್ನು ಮತ್ತು ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಯವರು ನಿರ್ವಹಿಸುತ್ತಿರುವ ಕಾರ್ಯಗಳನ್ನು ವಿವರಿಸುವ ಕೆಲಸಗಳು ನಡೆಯುತ್ತವೆ. ಇಲ್ಲಿ ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಕುರಿತಾಗಿ ಮತ್ತು ಕಾನೂನಿನ ಕುರಿತಾಗಿ ಸಮಗ್ರವಾದ ಮಾಹಿತಿ ದೊರೆಯುತ್ತದೆ. ಹೀಗೆ ಮಾಡುವುದರಿಂದ ಸಮಾಜದಲ್ಲಿ ಬಾಲ್ಯ ವಿವಾಹಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತವೆ.

ಮೇಲಿನ ಮಾಹಿತಿಯೆಲ್ಲವೂ ಪತ್ರಿಕಾ ಮಾಧ್ಯಮಕ್ಕೆ ಸಂಬಂಧಿಸಿದವುಗಳಾದರೆ, ಇನ್ನು ಎಲೆಕ್ಟ್ರಾನಿಕ್ಸ್ ಮಾಧ್ಯಮಗಳು ಬಿತ್ತರಿಸುತ್ತಿರುವ ಕಾರ್ಯಕ್ರಮಗಳಲ್ಲಿ ಬಾಲ್ಯ ವಿವಾಹಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳು ಇಲ್ಲವೆಂದೇ ಹೇಳಬಹುದು. ಕೆಲವು ಧಾರವಾಹಿಗಳ ರೂಪದಲ್ಲಿ ಬಾಲ್ಯ ವಿವಾಹ ಪದ್ಧತಿಯ ಬಗೆಗೆ ವಿಷಯಗಳನ್ನು ಬಿತ್ತರಿಸುತ್ತಿವೆ. ಹೀಗೆ ಬಿತ್ತರಗೊಳ್ಳುವುದರಲ್ಲಿ ಲಿಂಗ ಸಮಾನತೆಯ ಅಂಶಗಳು ಕಂಡುಬರುತ್ತವೆಯೇ ಎಂಬುದನ್ನು ಗಮನಿಸಬೇಕಾದ ಅಂಶವಾಗಿದೆ. ಏಕೆಂದರೆ, ಎಲೆಕ್ಟ್ರಾನಿಕ್ಸ್ ಮಾಧ್ಯಮಗಳಾದ ಚಲನಚಿತ್ರ, ದೂರದರ್ಶನ ಮತ್ತು ಆಕಾಶವಾಣಿಗಳಲ್ಲಿ ಬಿತ್ತರಗೊಳ್ಳುವ ವಿಷಯಗಳು ಕೇವಲ ಮನರಂಜನೆಯ ವಿಷಯಗಳಾಗಿರುತ್ತವೆ. ಮುಖ್ಯವಾಗಿ ಚಲನಚಿತ್ರಗಳು ಕೇವಲ ಮನರಂಜನೆಯ ಒಂದು ಉಧ್ಯಮವಾಗಿ ಮಾರ್ಪಟ್ಟಿವೆ. ಕನ್ನಡದ ಸಂದರ್ಭದಲ್ಲಿ ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸುವ ನೆಲೆಯಲ್ಲಿ ರೂಪಿತಗೊಂಡಿರುವ ಚಲನಚಿತ್ರಗಳು ಇಲ್ಲವೆಂದೇ ಹೇಳಬಹುದು.

ಹಾಗೆಯೇ ದೂರದರ್ಶನಗಳಲ್ಲಿ ಬಿತ್ತರಗೊಳ್ಳುವ ಧಾರವಾಹಿಗಳು ಜನರ ಅದರಲ್ಲಿಯೂ ಮಹಿಳೆಯರ ಮೇಲೆ ಇನ್ನಿಲ್ಲದಂತೆ ಪ್ರಭಾವ ಮತ್ತು ಪರಿಣಾಮವನ್ನು ಬೀರುತ್ತವೆ. ಬಿತ್ತರಗೊಳ್ಳುತ್ತಿರುವ ಈ ಧಾರವಾಹಿಗಳು ಮಹಿಳೆಯರನ್ನು ಮತ್ತೆ ಸಾಂಪ್ರದಾಯಿಕ ಚೌಕಟ್ಟಿಗೆ ಕೊಂಡೊಯ್ಯುವಂತಹವುಗಳಾಗಿವೆ. ಮುಖ್ಯವಾಗಿ ಮಹಿಳೆಯರನ್ನು ತುಂಬಾ ಸಾಂಪ್ರದಾಯಿಕ ನೆಲೆಯಲ್ಲಿ ಚಿತ್ರಿಸುವುದು ಮತ್ತು ಅತ್ಯುಗ್ರವಾದ ರೀತಿಯಲ್ಲಿ ಚಿತ್ರಿಸುವ ಧಾರಾವಾಹಿಗಳು ಹೆಚ್ಚೆಚ್ಚು ಮೂಡಿಬರುತ್ತಿವೆ. ಆದರೆ ಸಾಮಾಜಿಕ ಕಾಳಜಿಯನ್ನಿಟ್ಟುಕೊಂಡು ಧಾರವಾಹಿಗಳು ಮೂಡಿಬರಬೇಕಾದ ಅನಿವಾರ್ಯತೆ ಇದೆ. ಅಂದರೆ ಸಮಾಜಕ್ಕೆ ಅನಿಷ್ಟವಾಗಿರುವ ಪದ್ಧತಿಗಳನ್ನು ಆಧರಿಸಿದ ಧಾರವಾಹಿಗಳು ಬಿತ್ತರಗೊಳ್ಳಬೇಕು. ಇತ್ತೀಚೆಗೆ ಕೆಲವು ಚಾನೆಲ್‌ಗಳಲ್ಲಿ ಗಂಗಾ, ಪುಟ್ಟಗೌರಿ ಮದುವೆ ಧಾರವಾಹಿಗಳು ಬಾಲ್ಯ ವಿವಾಹವನ್ನು ಕೇಂದ್ರವಾಗಿಸಿಕೊಂಡು ಬಿತ್ತರಗೊಳ್ಳುತ್ತಿವೆಯಾದರೂ, ಅವುಗಳು ಮತ್ತೆ ಸಾಂಪ್ರದಾಯಿಕ ಚೌಕಟ್ಟಿನಿಂದ ಆಚೆ ಬರದಿರುವುದು ಕಂಡುಬರುತ್ತದೆ. ಮಕ್ಕಳ ಹಕ್ಕುಗಳ ರಕ್ಷಣೆಯ ಹಿನ್ನೆಲೆಯಲ್ಲಿ ಕಾರ್ಯಕ್ರಮಗಳು ರೂಪುಗೊಳ್ಳುವ ಅಗತ್ಯತೆ ಇದೆ.

ಆಕಾಶವಾಣಿಯೂ ಸಮಾಜದ ಬದಲಾವಣೆಗೆ ತನ್ನದೇ ಆದ ಪಾತ್ರವನ್ನು ವಹಿಸುತ್ತದೆ. ಮುಖ್ಯವಾಗಿ ಬಾಲ್ಯವಿವಾಹಕ್ಕೆ ಸಂಬಂಧಿಸಿದಂತೆ “ಜೀವನ ಮಲ್ಲಿಗೆ ಅರಳಲಿ ಮೆಲ್ಲಗೆ” ಮತ್ತು “ನಗು ಕಂದ” ಎಂಬ ಕಾರ್ಯಕ್ರಮಗಳು ಎಫ್‌ಎಮ್‌ನಲ್ಲಿ ಪ್ರಸಾರವಾಗುತ್ತದೆ. ಬಾಲ್ಯ ವಿವಾಹ ನಿಷೇಧದಲ್ಲಿ ಇದೊಂದು ಪ್ರಮುಖ ಹೆಜ್ಜೆಯಾಗಿದೆ ಎಂದು ಹೇಳಬಹುದು. ಜೊತೆಗೆ ಕೆಲವು ಸಾಕ್ಷ್ಯಚಿತ್ರಗಳೂ ಮೂಡಿಬಂದಿವೆ. ಹೀಗೆ ಬಾಲ್ಯ ವಿವಾಹವನ್ನು ಸಮಾಜದಿಂದ ನಿಷೇಧಿಸಲು ಹಲವಾರು ಮಾಧ್ಯಮಗಳು ಕಾರ್ಯ ನಿರ್ವಹಿಸಬೇಕಾದ ಅಗತ್ಯತೆ ಇದೆ.

ಒಟ್ಟಾರೆಯಾಗಿ ಮಾಧ್ಯಮವು ಇಂದು ಉಧ್ಯಮವಾಗಿ ಪರಿವರ್ತನೆಗೊಂಡ ಪರಿಣಾಮವಾಗಿ ಕೇವಲ ಲಾಭ ಗಳಿಕೆಯೇ ಮುಖ್ಯ ಉದ್ದೇಶವನ್ನಿಟ್ಟುಕೊಂಡು ಕಾರ್ಯಕ್ರಮಗಳು ರೂಪಿತಗೊಳ್ಳುತ್ತಿವೆ ಮತ್ತು ಪ್ರಸಾರವಾಗುತ್ತಿವೆ. ಆದರೆ ಇವುಗಳ ಮಧ್ಯೆಯೇ ಮಹಿಳಾ ಕಾನೂನುಗಳ ಬಗೆಗೆ ಹಾಗೂ ಮಕ್ಕಳ ಹಕ್ಕುಗಳನ್ನು ಉತ್ತೇಜಿಸುವ ಕಾನೂನುಗಳ ಬಗೆಗೆ ಮತ್ತು ಬಾಲ್ಯ ವಿವಾಹ ನಿಷೇಧ ಕಾನೂನಿನ ಕುರಿತು ಜನರಲ್ಲಿ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ಪ್ರಸಾರ ಮಾಡಬೇಕು. ಎಲೆಕ್ಟ್ರಾನಿಕ್ ಮಾಧ್ಯಮವಾಗಲೀ ಅಥವಾ ಪತ್ರಿಕಾ ಮಾಧ್ಯಮವಾಗಲೀ ಸ್ಥಳೀಯ ಮಟ್ಟದಲ್ಲಿ ವರದಿಯಾಗುವ ಬಾಲ್ಯ ವಿವಾಹದ ಪ್ರಕರಣಗಳನ್ನು ವರದಿ ಮಾಡುವ ಮೂಲಕ ಸ್ಥಳೀಯ ಜನರಲ್ಲಿ ಅದರ ಕುರಿತು ಅರಿವನ್ನು ಮೂಡಿಸುವಂತಾಗಬೇಕು. ಅಂದಾಗ ಮಾತ್ರ ಜನರಲ್ಲಿ ಬಾಲ್ಯವಿವಾಹ ನಿಷೇಧ ಕಾನೂನಿನ ಬಗೆಗೆ ಅರಿವು ಮೂಡಲು ಸಾಧ್ಯ.

### ೮.೬. ಬಾಲ್ಯ ವಿವಾಹ ಪದ್ಧತಿ ನಿಷೇಧಿಸುವಲ್ಲಿ ನ್ಯಾಯಾಂಗ ವ್ಯವಸ್ಥೆಯ ಪಾತ್ರ

ಭಾರತದ ನ್ಯಾಯಾಂಗ ವ್ಯವಸ್ಥೆಯಲ್ಲಿ ಜಾರಿಗೊಂಡಿರುವ ಕಾಯಿದೆಗಳು ಕಾಲಕಾಲಕ್ಕೆ ಬದಲಾವಣೆಗೆ ಒಳಪಟ್ಟಿವೆ. ಇದಕ್ಕೆ ಪ್ರಮುಖ ಉದಾಹರಣೆಯೆಂದರೆ ಬಾಲ್ಯ ಪಿವಾಹ ಪದ್ಧತಿ ನಿಷೇಧ ಕಾಯಿದೆ, ವರದಕ್ಷಿಣೆ ನಿಷೇಧ ಕಾನೂನು ಇತ್ಯಾದಿ. ಈ ಕಾನೂನುಗಳು ಜಾರಿಯಲ್ಲಿವೆ ನಿಜ. ಆದರೆ ಇವುಗಳ ಅನುಷ್ಠಾನದ ವಿಷಯಕ್ಕೆ ಬಂದರೆ ತುಂಬಾ ನಿರಾಸೆಯಾಗುತ್ತದೆ. ಏಕೆಂದರೆ ಈ ಹಂತದಲ್ಲಿ ಹಲವಾರು ಸಮಸ್ಯೆಗಳು ಎದುರಾಗುತ್ತವೆ. ಕಾನೂನುಗಳು, ಸಂವಿಧಾನ ಮತ್ತು ಜನರ ನಡುವೆ ವಾಹಕದಂತೆ ಕಾರ್ಯ ನಿರ್ವಹಿಸುವ ನ್ಯಾಯಾಲಯಗಳು, ನ್ಯಾಯಾಧೀಶರುಗಳು ಮತ್ತು ವಕೀಲರುಗಳು ಈ ಕಾನೂನುಗಳನ್ನು ಸರಿಯಾದ ದಾರಿಯಲ್ಲಿ ಚಲಿಸುವಂತೆ ಮಾಡಬೇಕಾಗಿದೆ. ಏಕೆಂದರೆ ನ್ಯಾಯಾಲಯದ ತೀರ್ಪುಗಳಾಗಿರಬಹುದು, ವಕೀಲರುಗಳ ವಾದಗಳು/ಹೇಳಿಕೆಗಳಾಗಿರಬಹುದು, ಇವುಗಳು ಜನರ ಮೇಲೆ ನೇರವಾದ ಪರಿಣಾಮವನ್ನು ಬೀರುತ್ತವೆ. ಈ ನಿಟ್ಟಿನಲ್ಲಿ ನ್ಯಾಯಾಲಯಗಳ ಪ್ರಾಧಿಕಾರ ಸಮಿತಿಯು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿರುವುದು ಕಂಡುಬರುತ್ತದೆ. ಈ ಸಮಿತಿಯು ಸಂವಿಧಾನ ಬದ್ಧವಾಗಿ ಜಾರಿಯಲ್ಲಿರುವ ಕಾನೂನುಗಳ ಬಗೆಗೆ ಜನರಲ್ಲಿ ಅರಿವು ಮೂಡಿಸುವ ಕೆಲಸವನ್ನು ಮಾಡುತ್ತಿದೆ. ಮುಖ್ಯವಾಗಿ ಪ್ರಾಧಿಕಾರ 'ಜನಸಾಮಾನ್ಯರಿಗಾಗಿ ಕಾನೂನು' ಎಂಬ ಒಂದು ಪುಸ್ತಕವನ್ನೂ ಹೊರತಂದಿದೆ. ಈ ಪುಸ್ತಕವನ್ನು ಜನ ಸಾಮಾನ್ಯರಿಗೆ ಉಚಿತವಾಗಿ ಹಂಚಲಾಗುತ್ತದೆ. ಹೀಗೆ ಜನರಿಗೆ ಅರಿವು ಮೂಡಿಸುವ ಕೆಲಸ ನಡೆಯುತ್ತದೆ. ಹಾಗೆಯೇ ಪ್ರತೀ ತಾಲೂಕು ನ್ಯಾಯಾಲಯಗಳಲ್ಲಿ 'ಉಚಿತ ಕಾನೂನು ಸಲಹಾ ಕೇಂದ್ರ'ಗಳಿವೆ ಮತ್ತು 'ಮಧ್ಯಸ್ತಿಕೆ ಕೇಂದ್ರ'ಗಳೂ ಇವೆ. ಇವುಗಳ ಮೂಲಕವೂ ಕಾನೂನಿನ ಕುರಿತಂತೆ ಉಚಿತವಾಗಿ ಸಲಹೆಗಳನ್ನು ನೀಡಲಾಗುತ್ತದೆ. ಇವುಗಳ ಲಾಭವನ್ನು ಸಮಾಜದ ಪ್ರತಿಯೊಬ್ಬ ನಾಗರಿಕರೂ ಪಡೆಯಬಹುದಾಗಿದೆ. ಕೆಲವು ಸಂದರ್ಭಗಳಲ್ಲಿ ಜಿಲ್ಲಾ ನ್ಯಾಯಾಧೀಶರೂ ಸೇರಿದಂತೆ ಅವರ ತಂಡವೂ ಸಹ ಕಾನೂನು ಅರಿವನ್ನು ಮೂಡಿಸಲು ಗ್ರಾಮೀಣ ಪ್ರದೇಶಗಳಿಗೆ ತೆರಳುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಾಗಲೀ ಅಥವಾ ನಗರ ಪ್ರದೇಶಗಳಲ್ಲಾಗಲೀ ಬಹು ಬೇಗನೇ ಸಿಗುವವರೆಂದರೆ ಮಹಿಳಾ ಸ್ವಸಹಾಯ ಸಂಘದವರು. ಹಾಗಾಗಿ ಅವರನ್ನು ಒಗ್ಗೂಡಿಸುವ ಕೆಲಸವನ್ನು ಪಟ್ಟಣ ಪಂಚಾಯತಿಯವರೋ, ನಗರಸಭೆಯವರೋ ಅಥವಾ ಅಂಗನವಾಡಿ ಕೇಂದ್ರಗಳೋ ಮಾಡುತ್ತವೆ. ಹಾಗಾಗಿ ಬಹಳಷ್ಟು ಸ್ವ–ಸಹಾಯ ಸಂಘಗಳು ಇದರ ಲಾಭವನ್ನು ಪಡೆದುಕೊಂಡಿವೆ. ಮುಖ್ಯವಾಗಿ ವರದಕ್ಷಿಣೆ ನಿಷೇಧ ಕಾಯಿದೆ, ಬಾಲ್ಯ ವಿವಾಹ ನಿಷೇಧ ಕಾಯಿದೆ, ಡಿ.ವಿ.ಎ, ಆಸ್ತಿಹಕ್ಕು ಅಧಿನಿಯಮ ಹೀಗೆ ಎಲ್ಲಾ ಕಾನೂನುಗಳ ಕುರಿತಂತೆ

ಮಾಹಿತಿಯನ್ನು ನೀಡಲಾಗುತ್ತದೆ. ಹಾಗಾಗಿ ಗ್ರಾಮೀಣ ಭಾಗಗಳಲ್ಲಿ ಜನರು ಇದರ ಲಾಭವನ್ನು ಪಡೆದುಕೊಳ್ಳಲು ಮುಂದಾಗಬೇಕಿದೆ.

ನ್ಯಾಯಾಲಯಗಳು ನೀಡುವ ತೀರ್ಪುಗಳು ವ್ಯವಸ್ಥೆಯಲ್ಲಿ ಆಮೂಲಾಗ್ರವಾದ ಬದಲಾವಣೆಯನ್ನು ತರುತ್ತವೆ. ಮುಖ್ಯವಾಗಿ ನ್ಯಾಯತೀರ್ಮಾನಗಳು ಯಾವುದೇ ಒಂದು ಧರ್ಮಕ್ಕಾಗಲೀ ಅಥವಾ ಜನಾಂಗಕ್ಕಾಗಲೀ ಸೀಮಿತಗೊಂಡಿರುವುದಿಲ್ಲ. ಧರ್ಮದ ನಿಯಮಗಳಿಗೆ ಕಟ್ಟುಬಿದ್ದು ನ್ಯಾಯತೀರ್ಮಾನಗಳನ್ನು ನೀಡುವುದಿಲ್ಲ. ಬದಲಾಗಿ ಸಂವಿಧಾನದ ಆಶಯದಂತೆ ಕಾನೂನು ಏನನ್ನು ಹೇಳಿದೆಯೋ ಅದರ ಆಧಾರದಲ್ಲಿ ನ್ಯಾಯತೀರ್ಮಾನಗಳು ನಡೆಯುತ್ತವೆ. ಹೀಗೊಂದು ಪ್ರಕರಣ ಕೊಪ್ಪಳ ಜಿಲ್ಲೆಯಲ್ಲಿ ನಡೆದಿದೆ. ಇದು ಬಾಲ್ಯ ವಿವಾಹಕ್ಕೆ ಸಂಬಂಧಿಸಿದಂತೆ ನ್ಯಾಯಾಲಯವು ಸಂಚಲನಾತ್ಮಕ ತೀರ್ಪನ್ನು ನೀಡಿರುವುದು ಕಂಡುಬರುತ್ತದೆ. ಇದು ಧರ್ಮಾತೀತವಾದ ತೀರ್ಮಾನವಾಗಿದೆ. ಅಂದರೆ ಯಾವುದೇ ಧರ್ಮದವರಿರಲೀ ಅವರು ಕಾನೂನಿನ ಮುಂದೆ ಎಲ್ಲರೂ ಸಮಾನರೇ ಎಂಬುದನ್ನು ತೋರಿಸಿದೆ. ಆ ಪ್ರಕರಣದ ಕುರಿತು ತಿಳಿಯುವುದು ಅವಶ್ಯವಾಗಿದೆ. ಮುಸ್ಲಿಂ ಕಾನೂನಿನ ಪ್ರಕಾರ ಯಾವುದೇ ಹೆಣ್ಣು ಮಗಳು ಮಾನಸಿಕಳಾಗಿ ಸ್ವಸ್ಥಳಾಗಿದ್ದು ಮೈನೆರೆದಿದ್ದರೆ (ಪ್ರೌಢಾವಸ್ಥೆಗೆ ತಲುಪಿದ್ದರೆ) ಅವಳು ವಿವಾಹ ಯೋಗ್ಯಳಾಗಿರುತ್ತಾಳೆ. ಇದನ್ನು ಆಧಾರವಾಗಿಟ್ಟುಕೊಂಡು ಮುಸ್ಲಿಂ ಸಮುದಾಯದಲ್ಲಿ ವಿವಾಹಗಳು ನಡೆಯುತ್ತವೆ. ಇಂತಹ ಒಂದು ವಿವಾಹ ಪ್ರಕರಣ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಗ್ರಾಮವೊಂದರಲ್ಲಿ ಕಂಡುಬಂದಿದೆ. ಅಲ್ಲಿನ ಒಂದು ಮುಸ್ಲಿಂ ಕುಟುಂಬವು ಹದಿನೈದು ವರ್ಷ ವಯಸ್ಸಿನ ಫಾತಿಮಾ ಬೇಗಂ(ಹೆಸರು ಬದಲಾಯಿಸಲಾಗಿದೆ) ಎಂಬ ಬಾಲಕಿಯ ವಿವಾಹವನ್ನು ಮಾಡಲು ಮುಂದಾಗಿದ್ದರು. ಇದನ್ನು ತಡೆಹಿಡಿಯಲಾಗಿದೆ. ಇದರ ಹಿನ್ನೆಲೆಯನ್ನು ತಿಳಿಯುವುದಾದರೆ, ದಿನಾಂಕ ೨೫ ಅಕ್ಟೋಬರ್ ೨೦೧೨ರಂದು ಕೊಪ್ಪಳದ ಜಿಲ್ಲಾಧಿಕಾರಿಯಾಗಿದ್ದ ತುಳಸಿ ಮದ್ದಿನೇನಿ ಅವರು ರೂಪಿಸಿದ್ದ ವಿಶೇಷ ಕಾರ್ಯತಂತ್ರ ೧೦೯೮ ಪ್ಲಸ್ ರೆಡ್ ಅಲರ್ಟ್ಸ್ ಮೇಲ್ವಿಚಾರಣಾ ಘಟಕಕ್ಕೆ ಒಂದು ಕರೆ ಬಂದಿದೆ. ಫೋನ್ ಮಾಡಿರುವುದು ಅನಾಮಧೇಯ ವ್ಯಕ್ತಿ. ಈತನು ಕರೆ ಮಾಡಿ ಗಂಗಾವತಿ ತಾಲೂಕಿನ ಕನಕಗಿರಿ ಹೋಬಳಿಯ ಗ್ರಾಮವೊಂದರಲ್ಲಿ ಹದಿನೈದು ಹದಿನಾರು ವರ್ಷದ ಫಾತೀಮಾ ಬೇಗಂ ಎಂಬ ಬಾಲಕಿಗೆ ನವೆಂಬರ್ ೪, ೨೦೧೨ರಂದು ವಿವಾಹ ಏರ್ಪಡಿಸಲಾಗಿದೆ. ಇದೊಂದು ಬಾಲ್ಯ ವಿವಾಹ. ಕುಟುಂಬದವರ ಮನವೊಲಿಸಿ ವಿವಾಹವನ್ನು ಮುಂದೂಡುವುದು ಸಾಧ್ಯವೇ? ಎಂದು ತಿಳಿಸಲಾಗಿದೆ. ಈ ಪ್ರಕರಣವನ್ನು ದಾಖಲಿಸಿಕೊಂಡ ರೆಡ್ ಅಲರ್ಟ್ಸ್ ಘಟಕ ಸಂಬಂಧಪಟ್ಟ ನೋಡಲ್ ಅಧಿಕಾರಿಗಳಾದ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ ಕಛೇರಿಯ ಡಿಸಿಐಬಿ ಇನ್‌ಸ್ಪೆಕ್ಟರ್, ಮಕ್ಕಳ ವಿಶೇಷ ಪೋಲೀಸ್ ಘಟಕ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪನಿರ್ದೇಶಕರು, ಜಿಲ್ಲಾ ಮಕ್ಕಳ ರಕ್ಷಣಾಧಿಕಾರಿ, ಮಕ್ಕಳ ಸಹಾಯವಾಣಿ ೧೦೯೮ ಮತ್ತು ಯುನಿಸೆಫ್ ಜಿಲ್ಲಾ ಮಕ್ಕಳ ರಕ್ಷಣಾ ಯೋಜನೆಯ ಸಂಯೋಜಕರು ಇವರುಗಳಿಗೆಲ್ಲಾ

ಮಾಹಿತಿಯನ್ನು ರವಾನಿಸಲಾಯಿತು. ನಂತರ ಅಧಿಕಾರಿಗಳ ತಂಡ ಮೊದಲು ಮಾಹಿತಿ ಸತ್ಯವೋ ಅಥವಾ ಸುಳ್ಳೋ ಎಂಬುದನ್ನು ಪರಿಶೀಲಿಸಿದ ನಂತರ ವಿವಾಹ ನಡೆಯುವುದು ಖಚಿತಪಡಿಸಿಕೊಂಡು ಫಾತಿಮಾ ಬೇಗಂಳ ಮನೆಗೆ ಭೇಟಿಮಾಡಿದೆ. ನಂತರ ಫಾತಿಮಾಳ ವಯಸ್ಸಿನ ದಾಖಲಾತಿಗಳನ್ನು ಪರಿಶೀಲಿಸಿದಾಗ ಅವಳಿಗಿನ್ನು ೧೬ ವರ್ಷಗಳು ಆಗಿರುವುದು ಕಂಡುಬಂದಿದೆ. ಆಗ ಅಧಿಕಾರಿಗಳು ಕುಟುಂಬದವರೊಂದಿಗೆ ಮಾತುಕತೆ ನಡೆಸಿದೆ. ಇದು ಚಿಕ್ಕ ವಯಸ್ಸಿನಲ್ಲೇ ಮಾಡುವ ಮದುವೆ. ಕಾನೂನಿನ ಪ್ರಕಾರ ಮತ್ತು ಫಾತಿಮಾ ಬೇಗಂಳ ಬೆಳವಣಿಗೆ, ಆರೋಗ್ಯ ಮತ್ತು ಅವಳು ಬಾಳಿಬದುಕಬೇಕಾದ ದೃಷ್ಟಿಕೋನದಲ್ಲಿ ನೋಡುವುದಾದರೆ ಇದನ್ನು ಮಾಡಬಾರದು ಇನ್ನೆರಡು ವರ್ಷಗಳವರೆಗೆ ಮದುವೆಯನ್ನು ಮುಂದೂಡಬೇಕು ಎಂದು ಅವರಿಗೆ ತಿಳಿ ಹೇಳಿದೆ. ಆದರೆ ಕುಟುಂಬದವರು ಇದನ್ನೆಲ್ಲಾ ತಿರಸ್ಕರಿಸಿದ್ದಾರೆ. ಏಕೆಂದರೆ ತಾವು ಮಾಡುವುದು ಮುಸ್ಲಿಂ ಕಾನೂನಿನ ಪ್ರಕಾರ. ಇದು ಕಾನೂನು ಬದ್ಧ. ಹಾಗಾಗಿ ಮದುವೆಯನ್ನು ಮಾಡುವುದರಲ್ಲಿ ಯಾವುದೇ ತಪ್ಪಿಲ್ಲ ಎಂಬುದು ಅವರ ವಾದವಾಗಿದೆ. ಆದರೆ ಅಧಿಕಾರಿಗಳು ಬಾಲ್ಯ ವಿವಾಹ ನಿಷೇಧ ಕಾನೂನು ೨೦೦೬ರ ಪ್ರಕಾರ ಇದು ತಪ್ಪು ಎಂಬುದನ್ನು ತಿಳಿಸಿದ್ದಾರೆ. ಕುಟುಂಬದವರ ಮತ್ತು ಅಧಿಕಾರಿಗಳ ಮಧ್ಯೆ ಮಾತಿನ ಚಕಮಕಿ ನಡೆದಿದೆ. ಇದಕ್ಕೆ ಬಗ್ಗದ ಫಾತಿಮಾ ಬೇಗಂಳ ಕುಟುಂಬದವರು ಸಮುದಾಯದ ಕೆಲವು ಮುಖಂಡರನ್ನು ಕರೆದುಕೊಂಡು ವಯಸ್ಸಿನ ಪ್ರಮಾಣ ಪತ್ರದೊಂದಿಗೆ ಮತ್ತು ಮುಸ್ಲಿಂ ಕಾನೂನು ವಿವರಗಳೊಂದಿಗೆ ಜಿಲಾಧಿಕಾರಿಗಳನ್ನು ಭೇಟಿಯಾಗಿದೆ. ಆದರೆ ಜಿಲ್ಲಾಧಿಕಾರಿಗಳೂ ಸಹ ನೀವು ಮಾಡುತ್ತಿರುವುದು ಬಾಲ್ಯ ವಿವಾಹ ಇದು ಕಾನೂನಿಗೆ ವಿರುದ್ಧವಾದುದು ಎಂಬುದನ್ನು ತಿಳಿಸಿದ್ದಾರೆ. ಹಾಗೆಯೇ ಫಾತಿಮಾ ಬೇಗಂಳಿಗೆ ಹದಿನೆಂಟು ವರ್ಷ ಆಗುವವರೆಗೆ ವಿವಾಹ ಮಾಡಬೇಡಿ. ಸದ್ಯಕ್ಕೆ ಅವಳ ರಕ್ಷಣೆಗಾಗಿ ಮಗುವನ್ನು ಮಕ್ಕಳ ಕಲ್ಯಾಣ ಸಮಿತಿಗೆ ಹಾಜರುಪಡಿಸಿ ಎಂದು ಜಿಲ್ಲಾ ದಂಡಾಧಿಕಾರಿಗಳೂ ಆದ ಜಿಲ್ಲಾಧಿಕಾರಿಗಳು ಆದೇಶಿಸಿದ್ದಾರೆ. ಆದರೆ ಫಾತಿಮಾಳ ಆರೋಗ್ಯ ಸರಿಯಿಲ್ಲವೆಂದು ಬಹಳ ತಡವಾಗಿ ಹಾಜರುಪಡಿಸಿದ್ದಾರೆ. ನಂತರ ಹದಿನೆಂಟು ವರ್ಷ ತುಂಬುವವರೆಗೂ ಮದುವೆ ಮಾಡುವುದಿಲ್ಲ ಎಂದು ಮುಚ್ಚಳಿಕೆ ಪತ್ರವನ್ನು ಬರೆದುಕೊಟ್ಟಿದ್ದಾರೆ. ಆದರೆ ಫಾತಿಮಾ ಬೇಗಂಳ ಕುಟುಂಬವು ಇದನ್ನು ಸಹಿಸದೆ ನ್ಯಾಯಾಲಯದ ಮೆಟ್ಟಿಲೇರಿತು.

ಫಾತಿಮಾ ಬೇಗಂಳಿಂದಲೇ ಖುದ್ದು ಕೇಸನ್ನು ದಾಖಲಿಸಿದ್ದಾರೆ. ಅಂದರೆ ಇಸ್ಲಾಂ ಧಾರ್ಮಿಕ ಕಾನೂನಿನ ಪ್ರಕಾರ ಯಾವುದೇ ಹೆಣ್ಣು ಮಾನಸಿಕವಾಗಿ ಸ್ವಸ್ಥವಾಗಿದ್ದು ಪ್ರೌಢಾವಸ್ಥೆಯಲ್ಲಿದ್ದರೆ ಅವಳಿಗೆ ವಿವಾಹವಾಗುವ ಹಕ್ಕು ದೊರೆಯುತ್ತದೆ. ಹಾಗಾಗಿ ೧೬ ವರ್ಷದ ನನಗೆ ವಿವಾಹದ ಹಕ್ಕು ಇದೆ. ನನ್ನ ವಿವಾಹಕ್ಕೆ ಅವಕಾಶ ಕಲ್ಪಿಸಿಕೊಡಬೇಕು ಎಂದು ತಕರಾರು ಅರ್ಜಿಯನ್ನು ಸಲ್ಲಿಸಿದ್ದಾಳೆ. ಹಾಗೆಯೇ ಈ ಕೇಸ್‌ನಲ್ಲಿ ಕೊಪ್ಪಳ ಜಿಲ್ಲಾ ಮಕ್ಕಳ ರಕ್ಷಣಾ ಯೋಜನೆಯ ಸಂಯೋಜಕರು, ಕನಕಗಿರಿಯ ಪಿ.ಎಸ್.ಐ. ಕೊಪ್ಪಳ ಜಿಲ್ಲಾ ಉಪ ಪೊಲೀಸ್ ವರಿಷ್ಠಾಧಿಕಾರಿ, ಕೊಪ್ಪಳ ಜಿಲ್ಲಾಧಿಕಾರಿ ಮತ್ತು ಕರ್ನಾಟಕ ಸರ್ಕಾರದ ಮಹಿಳಾ ಮತ್ತು ಮಕ್ಕಳ

ಅಭಿವೃದ್ಧಿ ಇಲಾಖೆಯ ಕಾರ್ಯದರ್ಶಿಯನ್ನು ವಿವಾಹಕ್ಕೆ ಅಡ್ಡಿಪಡಿಸಿ ಕುಟುಂಬವನ್ನು ಓಂಸಿಸಿದ ಆರೋಪದ ಮೇಲೆ ಆರೋಪಿಗಳನ್ನಾಗಿ ಮಾಡಿ ಧಾರವಾಡ ಹೈಕೋರ್ಟ್ ಸಂಚಾರಿ ಪೀಠಕ್ಕೆ ಅರ್ಜಿಯನ್ನು ಸಲ್ಲಿಸಿದ್ದಾರೆ. ನ್ಯಾಯಮೂರ್ತಿ ಅಶೋಕ್ ಬಿ. ಹಂಚಿಗೇರಿಯವರಿದ್ದ ಏಕ ಸದಸ್ಯ ಸಂಚಾರಿ ಪೀಠವು ದಿನಾಂಕ ೭ ಫೆಬ್ರುವರಿ ೨೦೧೩ರಂದು ತಕರಾರು ಅರ್ಜಿಯನ್ನು ಕೈಗೆತ್ತಿಕೊಂಡು ವಿಚಾರಣೆಯನ್ನು ಫೆಬ್ರುವರಿ ೧೪ಕ್ಕೆ , ತದನಂತರ ೨೦ಕ್ಕೆ ನಂತರ ೨೬ಕ್ಕೆ ಮುಂದೂಡಲಾಯಿತು.

ಇಸ್ಲಾಂ ಕಾನೂನಿನ ಪ್ರಕಾರ ೧೬ ವರ್ಷದ ಫಾತಿಮಾ ಬೇಗಂ ವಿವಾಹ ಯೋಗ್ಯಳು. ಆದರೆ ಬಾಲ್ಯ ವಿವಾಹ ನಿಷೇಧ ಕಾಯ್ದೆ ೨೦೦೬ರ ಪ್ರಕಾರ ಈ ಮದುವೆಗೆ ಅವಳಿಗೆ ೧೮ ವರ್ಷ ಆಗುವವರೆಗೆ ನಡೆದದ್ದೇ ಆದಲ್ಲಿ ಅದೊಂದು ಅಪರಾಧ ಎನಿಸುತ್ತದೆ. ಫೆಬ್ರುವರಿ ೨೬ಕ್ಕೆ ನಡೆದ ಅಂತಿಮ ವಿಚಾರಣೆಯಲ್ಲಿ ಸರ್ಕಾರದ ಪರ ವಾಧಿಸಿದ ಅಡ್ವೊಕೇಟ್ ಜನರಲ್ ಕೆ.ಎಂ.ನಟರಾಜ್ ಬಾಲ್ಯ ವಿವಾಹ ಒಂದು ಸಾಮಾಜಿಕ ಪಿಡುಗು. ಅದನ್ನು ನಿವಾರಿಸಲು ಬಾಲ್ಯ ವಿವಾಹ ನಿಷೇಧ ಕಾಯ್ದೆ ೨೦೦೬ ಎನ್ನುವ ಶಾಸನಾತ್ಮಕ ಕಾನೂನನ್ನು ಜಾರಿಗೆ ತರಲಾಗಿದೆ. ಈ ಕಾನೂನಿನ ನಿಯಮದ ಪ್ರಕಾರ ಬಾಲ್ಯ ವಿವಾಹ ಒಂದು ಶಿಕ್ಷಾರ್ಹ ಅಪರಾಧ. ಹೀಗಾಗಿ ಇದನ್ನು ಧಾರ್ಮಿಕ ಚೌಕಟ್ಟಿನಲ್ಲಿ ನೋಡುವ ಅಗತ್ಯವಿಲ್ಲ. ಅಲ್ಲದೆ ಇಸ್ಲಾಂ ಕಾನೂನು ಒಂದು ವೈಯಕ್ತಿಕ ಕಾನೂನು. ವೈಯಕ್ತಿಕ ಕಾನೂನಿಗಿಂತಲೂ ಶಾಸನಬದ್ಧ ಕಾನೂನಿಗೆ ಹೆಚ್ಚಿನ ಮಹತ್ವ ಇರುತ್ತದೆ. ಹಾಗಾಗಿ ಅರ್ಜಿಯನ್ನು ಮಾನ್ಯ ಮಾಡಬಾರದು. ಹಾಗೊಂದು ವೇಳೆ ಅಪ್ರಾಪ್ತ ವಯಸ್ಸಿನಲ್ಲಿ ವಿವಾಹಕ್ಕೆ ಅವಕಾಶ ಕಲ್ಪಿಸಿದಲ್ಲಿ ಅಪರಾಧ ಎಸಗಲು ಧರ್ಮವೇ ಬೆಂಬಲ ನೀಡಿದಂತಾಗುತ್ತದೆ ಎಂದು ಆಕ್ಷೇಪಿಸಿದರು.

ಈ ಎಲ್ಲಾ ವಾದ ವಿವಾದಗಳನ್ನು ಆಲಿಸಿದ ಹೈಕೋರ್ಟ್ ಬಾಲ್ಯ ವಿವಾಹ ನಿಷೇಧ ಕಾಯ್ದೆ ಸಮಾಜದ ಎಲ್ಲ ಜಾತಿ, ಧರ್ಮ ಮತ್ತು ವರ್ಗಕ್ಕೂ ಅನ್ವಯವಾಗುತ್ತದೆ. ಇದರಿಂದ ಯಾವುದೇ ಧರ್ಮ ಹೊರಗುಳಿಯಲು ಸಾಧ್ಯವಿಲ್ಲ ಎಂಬ ವಾದವನ್ನು ಪರಿಗಣಿಸಿದ ಪೀಠ ತಕರಾರು ಅರ್ಜಿಯನ್ನು ವಜಾಗೊಳಿಸಿ "ಬಾಲ್ಯವನ್ನು ಅನುಭವಿಸುವುದು ಎಲ್ಲ ಮಕ್ಕಳ ಹಕ್ಕಾಗಿದ್ದು, ಯಾವುದೇ ಧರ್ಮದ ವೈಯಕ್ತಿಕ ಕಾನೂನಿನಡಿ ಬಾಲ್ಯ ವಿವಾಹದ ಸಮರ್ಥನೆ ಸಲ್ಲದು" ಎಂದು ಧಾರವಾಡ ಉಚ್ಚ ನ್ಯಾಯಾಲಯದ ಸಂಚಾರಿ ಪೀಠ ಸ್ಪಷ್ಟ ಅಭಿಪ್ರಾಯ ಕೊಟ್ಟಿತು. ಈ ಕೇಸ್‌ನ ಕುರಿತ ಮಾಹಿತಿಯನ್ನು ಯುನಿಸೆಫ್‌ನ ಮಲ್ಲಿಕಾರ್ಜುನ ಗೌಡರವರು ತಿಳಿಸಿದ್ದರು. ನಂತರ ಸಕಾಲ ಸ್ಪಂದನದ ಸಂಪುಟ–೨, ಸಂಚಿಕೆ–೧, ಜೂನ್ ಜುಲೈ೨೦೧೩ರ ತ್ರೈಮಾಸಿಕ ಪತ್ರಿಕೆಯಲ್ಲಿ ಸಂಪೂರ್ಣವಾದ ಮಾಹಿತಿಯನ್ನು ನೀಡಲಾಗಿತ್ತು. ಇದನ್ನು ಆಧರಿಸಿಯೇ ಮೇಲಿನ ಎಲ್ಲ ಮಾಹಿತಿಯನ್ನು ದಾಖಲಿಸಲಾಗಿದೆ.

ಹೀಗೆ ಉಚ್ಚನ್ಯಾಯಾಲಯ ನೀಡಿದ ತೀರ್ಪು ಮಹತ್ವಪೂರ್ಣವಾದದ್ದಾಗಿದೆ. ಧರ್ಮದ ಹೆಸರಿನಲ್ಲಿ ಚಿಕ್ಕ ಮಕ್ಕಳಿಗೆ ವಿವಾಹ ಮಾಡುವುದು ಕಾನೂನು ರೀತ್ಯ ತಪ್ಪು. ಧರ್ಮದ

ನಿಯಮಗಳಿಗೂ ಮತ್ತು ಸಂವಿಧಾನಬದ್ಧ ಕಾನೂನುಗಳಿಗೂ ತುಂಬಾನೇ ವ್ಯತ್ಯಾಸವಿದೆ. ಏಕೆಂದರೆ ಧರ್ಮದ ನಿಯಮಗಳು ಯಾವಾಗಲೂ ಪುರುಷ ಪರವಾಗಿರುತ್ತವೆ. ಇವುಗಳು ಯಾವಾಗಲೂ ಪುರುಷರಿಗೆ ಹಕ್ಕು ಮತ್ತು ಅಧಿಕಾರವನ್ನು ನೀಡಿದ್ದರೆ, ಮಹಿಳೆಯರಿಗೆ ಇವುಗಳನ್ನು ನೀಡಿರುವುದೇ ಇಲ್ಲ. ಆದರೆ ಸಂವಿಧಾನದ ನಿಯಮಗಳು ಮಾತ್ರ ಸ್ತ್ರೀಪುರುಷರಿಬ್ಬರನ್ನೂ ಸಮಾನರೆಂದು ಭಾವಿಸುತ್ತದೆ. ಹಕ್ಕುಗಳು ಮತ್ತು ಅಧಿಕಾರಗಳು ಇಬ್ಬರಿಗೂ ಸಮಾನವಾಗಿರುತ್ತವೆ ಎಂಬುದನ್ನು ತಿಳಿಸುತ್ತವೆ. ಹೀಗೆ ನ್ಯಾಯಾಲಯಗಳು ನೀಡುವ ತಿರ್ಪು ಸಮಾಜದ ಇನ್ನಿತರ ಸಮುದಾಯಗಳಿಗೆ ಮಾದರಿಗಳಾಗಿರುತ್ತವೆ. ಇಂತಹ ತೀರ್ಪುಗಳನ್ನು ಪದೇ ಪದೇ ಜನರ ನಡುವೆ ಚರ್ಚಿಸಬೇಕಾದ ಅನಿವಾರ್ಯತೆ ಇದೆ. ಏಕೆಂದರೆ ನೈಜ ಜೀವನದಲ್ಲಿನ ಘಟನೆಗಳನ್ನು ಜನರು ಬಹು ಬೇಗನೇ ನಂಬುತ್ತಾರೆ. ಹಾಗಾಗಿ ಇಂತಹ ತೀರ್ಪುಗಳು ಬಾಲ್ಯ ವಿವಾಹಗಳನ್ನು ಮಾಡುವಂತಹ ಜನರಲ್ಲಿ ಎಚ್ಚರಿಕೆಯ ಘಂಟೆಯನ್ನು ಬಾರಿಸುತ್ತವೆ. ಒಟ್ಟಾರೆಯಾಗಿ ನ್ಯಾಯಾಲಯಗಳು ಬಾಲ್ಯ ವಿವಾಹ ಪದ್ಧತಿಯನ್ನು ತೊಡೆದು ಹಾಕುವಲ್ಲಿ ಪ್ರಮುಖ ಪಾತ್ರ ವಹಿಸಿವೆ.

ಕುಟುಂಬದ ಸಂಪನ್ಮೂಲಗಳಾದ ಆಸ್ತಿ (ಸ್ಥಿರ ಮತ್ತು ಚರ), ಶಿಕ್ಷಣಾವಕಾಶ, ಉತ್ಪಾದನೆ, ಅಧಿಕಾರ ಮತ್ತು ಜವಾಬ್ದಾರಿಗಳು ಇವುಗಳೆಲ್ಲವೂ ಸಮಾನವಾಗಿ ಹಂಚಿಕೆಯಾಗಿಲ್ಲದೇ ಇರುವುದರಿಂದಾಗಿ ಮಹಿಳೆಯರು ಕುಟುಂಬದಲ್ಲಿ ಹಿಂಸೆಗೆ ಒಳಗಾಗುತ್ತಿದ್ದಾರೆ. ಹಾಗೆಯೇ ವಿವಾಹ ಎಂಬ ಸಂಸ್ಥೆಯೂ ಲಿಂಗ ಅಸಮಾನತೆ ಗಟ್ಟಿಯಾಗಿ ನೆಲೆಯೂರಲು ವಾಹಕದಂತೆ ಕೆಲಸ ಮಾಡುತ್ತಿದೆ. ವಿವಾಹದ ಮೂಲಕ ಮಹಿಳೆಯರನ್ನು ಸಾಮಾಜಿಕ ಬಂಧನಕ್ಕೆ ಸಿಲುಕಿಸಲಾಗಿದೆ. ಈ ವಿವಾಹ ಸಂಸ್ಥೆಯಿಂದ ವರದಕ್ಷಿಣೆ ಸಮಸ್ಯೆ, ಬಾಲ್ಯ ವಿವಾಹ, ಸತಿಪದ್ದತಿ, ವೈಧವ್ಯಗಳಂಥ ಸಮಸ್ಯೆಗಳು ಮಹಿಳೆಯರನ್ನು ಕಾಡತೊಡಗಿವೆ. ಮಹಿಳೆಗೆ ಸ್ಥಿರಮಾದರಿ ಪಾತ್ರಗಳನ್ನು ಸೃಷ್ಟಿಸುವುದರ ಮೂಲಕ ಕುಟುಂಬಕ್ಕೆ ಮಾತ್ರ ಸೀಮಿತಳನ್ನಾಗಿ ಮಾಡಲಾಯಿತು. ಈ ಎಲ್ಲಾ ಅಂಶಗಳು ಮಹಿಳೆಯರ ಜ್ಞಾನ ವಿಸ್ತರಣೆಗೆ ಅಡ್ಡಿಯಾದವು. ಹಾಗಾಗಿ ಮಹಿಳೆಯರು ಇಂದಿಗೂ ವ್ಯವಸ್ಥೆಯಲ್ಲಿ ನಡೆಯಬಹುದಾದ ಎಲ್ಲಾ ವಿಧ್ಯಮಾನಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದು ಗ್ರಾಮೀಣ ಮಹಿಳೆಯರಿಗೆ ಸಂಪೂರ್ಣವಾಗಿ ಅನ್ವಯಿಸುತ್ತದೆ. ನಗರ ಪ್ರದೇಶದಲ್ಲಿ ವಾಸಿಸುವ ವಿದ್ಯಾವಂತ ಮಹಿಳೆಯರು ಇದಕ್ಕೆ ಸ್ವಲ್ಪ ಹೊರತಾಗಿ ಇದ್ದಾರೆ ಎಂದು ಕಂಡುಬಂದರೂ ಕುಟುಂಬದ ಮುಖಂಡನಾದ ಪುರುಷನ ಅಪ್ಪಣೆಯಿಲ್ಲದೇ ಏನನ್ನೂ ಮಾಡುವಂತಿಲ್ಲ. ಈ ಬಗೆಯ ಅನಿವಾರ್ಯತೆಗೆ ಮಹಿಳೆಯರು ಒಳಗಾಗಿರುವುದನ್ನು ಕಾಣಬಹುದಾಗಿದೆ. ಹಾಗಾಗಿ ಮಹಿಳೆಯರ ಪರವಾದ ಹಲವಾರು ಕಾನೂನುಗಳು ವ್ಯವಸ್ಥೆಯಲ್ಲಿ ಜಾರಿಯಲ್ಲಿದ್ದರೂ ಮಹಿಳೆಯರು ಅವುಗಳ ಸಂಪೂರ್ಣವಾದ ಜ್ಞಾನವನ್ನು ಪಡೆಯುವಲ್ಲಿ ಮತ್ತು ಅವುಗಳನ್ನು ಹಕ್ಕಿನ ರೂಪದಲ್ಲಿ ಕೇಳುವಲ್ಲಿ ಹಿಂದುಳಿದಿದ್ದಾರೆ. ಕೆಲವು ವಿದ್ಯಾವಂತ ಮಹಿಳೆಯರಿಗೆ ಈ ಬಗೆಯ ಮಹಿಳಾ ಪರವಾದ ಕಾನೂನುಗಳ ಅರಿವಿದೆಯಾದರೂ

ಅವುಗಳನ್ನು ತಮ್ಮ ಅನುಕೂಲಕ್ಕೆ ಸರಿಯಾಗಿ ಪಡೆಯುವಲ್ಲಿ ವಿಫಲರಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಮಹಿಳಾ ಪರವಾದ ಕಾನೂನುಗಳಲ್ಲಿ ಒಂದಾದ ಬಾಲ್ಯ ವಿವಾಹ ಪದ್ಧತಿ ನಿಷೇಧ ಕಾಯಿದೆಯ ಕುರಿತ ಅರಿವು ಬಹಳಷ್ಟು ಮಹಿಳೆಯರಿಗೆ ಇಲ್ಲವಾಗಿದೆ. ಇದಕ್ಕೆ ಕಾರಣ ಮಹಿಳೆಯರಲ್ಲ. ಬದಲಾಗಿ ಅವರು ಬದುಕುತ್ತಿರುವ ಸಾಮಾಜಿಕ ವ್ಯವಸ್ಥೆ ಮತ್ತು ಅವರನ್ನು ಆಳುತ್ತಿರುವ ಪುರುಷ ಪ್ರಧಾನ ಮೌಲ್ಯಗಳು. ಆ ಕಾರಣಕ್ಕಾಗಿ ಮಹಿಳೆಯರು ಈ ಬಗೆಯ ಕಾನೂನುಗಳ ಅರಿವನ್ನು ಪಡೆಯುವುದರಿಂದ ದೂರವೇ ಉಳಿದಿರುವುದು ಕಂಡುಬರುತ್ತದೆ. ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಮಹಿಳೆಯರಿಗಂತೂ ಈ ಕಾನೂನು ಕೈಗೆ ಎಟುಕಲಾರದ ಸ್ಥಿತಿಯನ್ನು ವ್ಯವಸ್ಥೆ ನಿರ್ಮಿಸಿ ಬಿಟ್ಟಿದೆ. ಕುಟುಂಬದಲ್ಲಿನ ಭಾವನಾತ್ಮಕ ನೆಲೆಗಳು ಮತ್ತು ಸಾಮಾಜಿಕ ಕಟ್ಟಳೆಗಳು ಮಹಿಳೆಯರನ್ನು ಇನ್ನಿಲ್ಲದಂತೆ ಹಿಂಸಿಸತೊಡಗಿವೆ. ಹಾಗಾಗಿಯೇ ಮಹಿಳೆಯರು ಇಂದಿಗೂ ಮನೆಯಿಂದ ಆಚೆ ಬರಲೂ ಕುಟುಂಬದ ಪುರುಷನ ಅಪ್ಪಣೆಯನ್ನು ಪಡೆಯಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಿದ್ದಾರೆ. ಆದರೂ ಕೆಲವು ಮಹಿಳೆಯರು ಈ ಬಗೆಯ ಸಾಮಾಜಿಕ ಕಟ್ಟಳೆಗಳನ್ನು ಮೀರಿ ಸ್ವಾವಲಂಬಿ ಜೀವನವನ್ನು ನಡೆಸುತ್ತಿದ್ದಾರೆ. ಆದರೆ ಇವರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ. ಬಹುಪಾಲು ಮಹಿಳೆಯರು ಪರಾವಲಂಬಿಗಳೇ ಆಗಿದ್ದಾರೆ.

### ೮.೭. ಬಾಲ್ಯ ವಿವಾಹ ಪದ್ಧತಿಯನ್ನು ನಿಷೇಧಿಸುವಲ್ಲಿ ಧಾರ್ಮಿಕ ಸಂಸ್ಥೆಗಳ ಪಾತ್ರ

ಭಾರತವು ಹಲವು ಧರ್ಮಗಳ ತವರೂರು. ಇಲ್ಲಿನ ಪ್ರತಿಯೊಂದು ಧರ್ಮವೂ ತನ್ನದೇ ಆದ ಪ್ರತ್ಯೇಕ ಧಾರ್ಮಿಕ ನಿಯಮಗಳನ್ನು ಹೊಂದಿವೆ. ಆದರೆ ಈ ನಿಯಮಗಳಾವುವೂ ಮಹಿಳೆಯರಿಗೆ ಸ್ವತಂತ್ರ ಅಸ್ತಿತ್ವವನ್ನು ಕೊಡದೇ ಇರುವುದು ವಿಪರ್ಯಾಸದ ಸಂಗತಿ. ಮುಖ್ಯವಾಗಿ ಹಿಂದೂ ಧರ್ಮದಲ್ಲಿ ಮಠಗಳು, ಕ್ರಿಶ್ಚಿಯನ್ ಧರ್ಮದಲ್ಲಿ ಮಂದಿರಗಳಲ್ಲಿ ತಮ್ಮ ಧರ್ಮೀಯ ಜನರ ವಿವಾಹ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತಿರುತ್ತದೆ. ಮುಖ್ಯವಾಗಿ ಮಠಗಳು ಪ್ರತೀ ವರ್ಷ ಸಾಮೂಹಿಕ ವಿವಾಹಗಳನ್ನು ಏರ್ಪಡಿಸುತ್ತಿರುವುದು ವಾಡಿಕೆಯಾಗಿದೆ. ಹಾಗೆಯೇ ಮಠಗಳ ಮೇಲೆ ಜನರು ಭಾವನಾತ್ಮಕ ಸಂಬಂಧವನ್ನು ಹೊಂದಿರುತ್ತಾರೆ. ಹಾಗಾಗಿಯೇ ಮಠಾಧೀಶರ ಮಾತುಗಳೆಂದರೆ ಜನರಿಗೆ ವೇದವಾಕ್ಯವಾಗಿರುತ್ತದೆ. ಆ ಕಾರಣಕ್ಕಾಗಿ ಮಠಗಳಲ್ಲಿನ ಮಠಾಧೀಶರು ಬಾಲ್ಯ ವಿವಾಹಗಳನ್ನು ತಡೆಯಲು ಮುಂದಾಗಬೇಕಾದ ಜರೂರಿದೆ. ಏಕೆಂದರೆ ಧರ್ಮ, ಧರ್ಮವನ್ನು ಮುನ್ನಡೆಸುತ್ತಿರುವ ಮಠಾಧಿಪತಿಗಳ ಮಾತುಗಳನ್ನು ಜನರು ಸುಲಭವಾಗಿ ಪಾಲಿಸುತ್ತಾರೆ. ಹಾಗಾಗಿಯೇ ಮಠಗಳು ಈ ಬಗೆಯ ನಡೆಯನ್ನು ಹೊಂದಬೇಕು. ಜೊತೆಗೆ ಕ್ರಿಶ್ಚಿಯನ್ ಧರ್ಮದ ಪಾದ್ರಿಗಳು, ಮುಸ್ಲಿಂ ಧರ್ಮದ ಮೌಲ್ವಿಗಳು ಇವರೆಲ್ಲರುಗಳಿಗೆ ಬಾಲ್ಯ ವಿವಾಹ ನಿಷೇಧ ಕಾಯಿದೆಯ ಕುರಿತು ಅರಿವು ಮೂಡಿಸಬೇಕಾದ ಅಗತ್ಯತೆ ಇದೆ. ಹೀಗೆ ಆಗುವುದರಿಂದ ಪ್ರತಿಯೊಂದು ಧರ್ಮದಲ್ಲಿಯೂ ನಡೆಯುವ ಬಾಲ್ಯ ವಿವಾಹಗಳ ಸಂಖ್ಯೆಯನ್ನು ಕಡಿಮೆ ಮಾಡಬಹುದು. ಈ ಕಾರ್ಯ ಅಷ್ಟು ಸುಲಭದ್ದಲ್ಲ. ಏಕೆಂದರೆ

ಪ್ರತಿಯೊಂದು ಧರ್ಮದ ಧಾರ್ಮಿಕ ಮುಖಂಡರು ತಮ್ಮ ಧರ್ಮದ ನಿಯಮಗಳನ್ನು ಮೀರಿ ಹೋಗಲು ಯೋಚಿಸುವುದಿಲ್ಲ. ಆದರೂ ಅವರ ಮನವೊಲಿಸುವ ಕಾರ್ಯ ಮಾಡಬಹುದಾಗಿದೆ. ಇದಕ್ಕೆ ಒಂದು ಉತ್ತಮ ಉದಾಹರಣೆಯೆಂದರೆ ಕೊಪ್ಪಳದ ಗವಿಮಠ. ಇದು ಬಾಲ್ಯ ವಿವಾಹ ನಿಷೇಧಕ್ಕೆ ಸಂಬಂಧಿಸಿದಂತೆ ಒಂದು ಮಹತ್ವದ ಹೆಜ್ಜೆಯನ್ನಿಟ್ಟಿರುವುದು ಸಂತೋಷದ ಸಂಗತಿಯಾಗಿದೆ. ಪ್ರತೀ ವರ್ಷದ ಜಾತ್ರೆಯಲ್ಲಿ ಒಂದು ಸಂಕಲ್ಪವನ್ನು ಹೊಂದಿ ಸಮಾಜಮುಖಿ ಕಾರ್ಯದಲ್ಲಿ ತೊಡಗುತ್ತಾ ಬಂದಿದೆ. ಅದರಂತೆಯೇ ಈ ವರ್ಷದಲ್ಲಿಯೂ ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳನ್ನು ಕುರಿತು ಜನರಲ್ಲಿ ಅರಿವು ಮೂಡಿಸುವ ಕಾರ್ಯಕ್ಕೆ ಚಾಲನೆಯನ್ನು ನೀಡಿದೆ. ಮುಖ್ಯವಾಗಿ ಈ ಗವಿಮಠದ ಜಾತ್ರಾ ಮಹೋತ್ಸವಕ್ಕೆ ಕೊಪ್ಪಳದ ಸುತ್ತಮುತ್ತಲಿನ ಸಾವಿರಾರು ಭಕ್ತರು ಬಂದು ಸೇರುತ್ತಾರೆ. ಹಾಗೆಯೇ ಕೊಪ್ಪಳದಿಂದಾಚೆಗೂ ಭಕ್ತ ಸಮೂಹವನ್ನು ಗವಿಮಠ ಹೊಂದಿದೆ. ಈ ಎಲ್ಲ ಜನರಿಗೆ ಬಾಲ್ಯ ವಿವಾಹದ ಕುರಿತು ಅರಿವು ಮೂಡಿಸುವ ಕಾರ್ಯವನ್ನು ಮಾಡಿತು. ಇದು ಕೇವಲ ಜಾತ್ರಾದಿನಕ್ಕೆ ಮಾತ್ರ ಸೀಮಿತವಾಗಲಿಲ್ಲ. ಬದಲಾಗಿ ಇಡೀ ಒಂದು ತಿಂಗಳು ಕೊಪ್ಪಳ ಜಿಲ್ಲೆಯ ಪ್ರತಿಯೊಂದು ಗ್ರಾಮದಲ್ಲಿಯೂ ಅರಿವು ಮೂಡಿಸುವ ಕಾರ್ಯಕ್ಕೆ ಚಾಲನೆಯನ್ನು ನೀಡಿತ್ತು. ಇದೊಂದು ಚರಿತ್ರಾರ್ಹ ಕಾರ್ಯವಾಗಿದೆ. ಏಕೆಂದರೆ ಮಠಗಳು ಸಮಾಜದಲ್ಲಿನ ಅನಿಷ್ಠ ಪದ್ಧತಿಗಳ ವಿರುದ್ಧ ಒಂದು ತಿಂಗಳುಗಳ ಕಾಲ ಜಾಥಾಗಳನ್ನು ಮಾಡುವುದು ಸುಲಭದ ಸಂಗತಿಯಲ್ಲ. ಹಾಗಾಗಿ ಕೊಪ್ಪಳದ ಗವಿಮಠವು ಈ ನಡೆಗೆ ಮುನ್ನುಡಿಯನ್ನಿಟ್ಟಿತು. ಹೀಗೆ ಮಠ, ಮಂದಿರ, ಮಸೀದಿಗಳು ಈ ಬಗೆಯ ಕಾರ್ಯಗಳನ್ನು ಮಾಡಬೇಕಾದ ಔದಾರ್ಯವನ್ನು ತೋರಬೇಕಾಗಿದೆ. ಈ ನಿಟ್ಟಿನಲ್ಲಿ ಸರ್ಕಾರಿ ಅಧಿಕಾರಿಗಳು ಪ್ರತಿಯೊಂದು ಧರ್ಮದ ಧಾರ್ಮಿಕ ಮುಖಂಡರನ್ನು ಮನವೊಲಿಸುವ ಕಾರ್ಯ ಮಾಡಬೇಕಾಗಿದೆ.

ಪ್ರತಿಯೊಂದು ಧರ್ಮದ ಧಾರ್ಮಿಕ ಮುಖಂಡರು ಬಾಲ್ಯ ವಿವಾಹ ಕುರಿತು ಜಾಗೃತಿಯನ್ನು ಹೊಂದುವುದರ ಮೂಲಕ ಮಕ್ಕಳ ಹಕ್ಕುಗಳನ್ನು ರಕ್ಷಿಸುವ ಕಾರ್ಯದಲ್ಲಿ ತೊಡಗಬೇಕು. ಹೀಗೆ ಆದಲ್ಲಿ ಬಹು ಬೇಗನೇ ಈ ಅನಿಷ್ಠ ಪದ್ಧತಿಯನ್ನು ಸಮಾಜದಿಂದ ನಿರ್ಮೂಲನೆ ಮಾಡಬಹುದು.

ಸಮಾಜದಲ್ಲಿ ಸಾಮೂಹಿಕ ವಿವಾಹಗಳನ್ನು ಮಾಡುವ ಹಲವಾರು ಸಂಘಟನೆಗಳು, ಸಂಸ್ಥೆಗಳು ಇರುವುದು ಕಂಡುಬರುತ್ತದೆ. ಇವುಗಳು ಪ್ರತೀ ವರ್ಷ ಸಾಮೂಹಿಕ ವಿವಾಹಗಳನ್ನು ಮಾಡುತ್ತಲೇ ಬರುತ್ತಿರುತ್ತವೆ. ಹೀಗೆ ಆಯೋಜಿಸುವ ಆಯೋಜಕರಿಗೂ ಬಾಲ್ಯ ವಿವಾಹ ನಿಷೇಧದ ಕುರಿತು ಅರಿವನ್ನು ಮೂಡಿಸಬೇಕು. ಕಾನೂನು ಸಹ ಸಾಮೂಹಿಕ ವಿವಾಹಗಳನ್ನು ಏರ್ಪಡಿಸುವವರಿಗೆ ಕೆಲವು ಷರತ್ತುಗಳನ್ನು ಹಾಕಿರುವುದು ಕಂಡುಬರುತ್ತದೆ. ಅಂದರೆ ಸಾಮೂಹಿಕ ವಿವಾಹ ಏರ್ಪಡಿಸುವ ವ್ಯಕ್ತಿಗಳು, ಟ್ರಸ್ಟ್‌ಗಳು, ದೇವಸ್ಥಾನಗಳು ಜಿಲ್ಲಾ ನೋಂದಣಾಧಿಕಾರಿಯಲ್ಲಿ ಕಡ್ಡಾಯವಾಗಿ ನೋಂದಣಿ ಮಾಡಿಕೊಳ್ಳಬೇಕು. ನೋಂದಣಿ ಇಲ್ಲದಿದ್ದರೆ ವಿವಾಹ ಏರ್ಪಡಿಸುವಂತಿಲ್ಲ. ನೋಂದಣಿ ಮಾಡಿಕೊಂಡ ಸಂಸ್ಥೆಗಳು, ವ್ಯಕ್ತಿಗಳು

ಕಾರ್ಯಕ್ರಮ ಏರ್ಪಡಿಸುವ ಮುನ್ನ ತಹಸೀಲ್ದಾರ್ ಅವರ ಅನುಮತಿಯನ್ನು ಪಡೆಯಬೇಕು. ಅನುಮತಿ ನೀಡಬೇಕಾದರೆ ಮದುವೆಯಾಗುವ ಎಲ್ಲ ವಧು ವರರ ಪ್ರತ್ಯೇಕ ಫೋಟೋ, ವಯಸ್ಸು ದೃಢೀಕರಣ ಪತ್ರ, ಪಡಿತರ/ಮತದಾನ ಚೀಟಿ ಸೇರಿದಂತೆ ವಾಸಸ್ಥಳ ಪ್ರಮಾಣಪತ್ರ, ವಧು ವರರು ಅಥವಾ ಅವರ ಪೋಷಕರಿಂದ ಅಫಿಡವಿಟ್ ಸಲ್ಲಿಸಬೇಕು. ೧೦೦ ಜೋಡಿ ಮದುವೆಯಾಗುವುದಿದ್ದರೆ ೨೦ ದಿನ, ೨೦೦ ಜೋಡಿ ವಿವಾಹವಾಗುವುದಿದ್ದರೆ ೪೦ ದಿನ ಹಾಗೂ ೨೦೦ಕ್ಕೂ ಹೆಚ್ಚು ಜೋಡಿ ಸಾಮೂಹಿಕ ವಿವಾಹವಾಗುವುದಿದ್ದರೆ ೬೦ ದಿನ ಮೊದಲು ಈ ಎಲ್ಲಾ ದಾಖಲೆಗಳನ್ನು ಕಡ್ಡಾಯವಾಗಿ ಒದಗಿಸಬೇಕು. ಪರಿಶೀಲನಾ ಸಮಿತಿಯಿಂದ ಅನುಮೋದನೆ ಪಡೆಯದೇ ಯಾವುದೇ ಜೋಡಿ ಮದುವೆಗೆ ಅವಕಾಶ ನೀಡುವಂತಿಲ್ಲ. ಸಾಮೂಹಿಕ ಮದುವೆಯು ವಿಡೀಯೋ ಚಿತ್ರೀಕರಣ ನಡೆಸಿ ಏಳು ದಿನಗಳೊಳಗೆ ತಹಸೀಲ್ದಾರ್ ಅಥವಾ ಶಿಶು ಅಭಿವೃದ್ಧಿ ಯೋಜನಾಧಿಕಾರಿಗೆ ನೀಡಬೇಕಾಗುತ್ತದೆ. ಹೀಗೆ ಸಾಮೂಹಿಕ ವಿವಾಹಗಳನ್ನು ಏರ್ಪಡಿಸುವ ಎಲ್ಲರಿಗೂ ಕಾನೂನು ಕೆಲವು ನಿಯಮಗಳನ್ನು ಹಾಕಿದೆ. ಇವುಗಳನ್ನು ತಪ್ಪದೇ ಪಾಲಿಸಬೇಕು. ಇಲ್ಲವಾದರೆ ಅಂತಹ ವ್ಯಕ್ತಿ, ಟ್ರಸ್ಟ್ ಅಥವಾ ಸಂಸ್ಥೆಗಳ ವಿರುದ್ಧ ಕಾನೂನು ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಹೀಗೆ ಮಾಡುವುದರಿಂದಾಗಿ ಇಂದು ಸಾಮೂಹಿಕ ವಿವಾಹಗಳಲ್ಲಿ ಬಾಲ್ಯ ವಿವಾಹಗಳಾಗುತ್ತಿರುವುದು ಕಡಿಮೆಯಾಗುತ್ತವೆ ಎಂದು ಹೇಳಬಹುದು.

ಮಹಿಳೆಯರನ್ನು ಹಿಂದಿನಿಂದಲೂ ದ್ವಿತೀಯ ದರ್ಜೆಯ ಪ್ರಜೆಯಂತೆಯೇ ಪರಿಭಾವಿಸಿಕೊಂಡು ಬರಲಾಗಿದೆ. ಇದರಲ್ಲಿ ಯಾವ ಬದಲಾವಣೆಯೂ ಆಗದಂತೆ ಅವುಗಳನ್ನು ಪುನರ್ ರೂಪಿಸುವ/ಸ್ಥಿರೀಕರಿಸುವ ರೀತಿಯಲ್ಲಿ ಹಲವು ಕಾರ್ಯಕ್ರಮಗಳು ವ್ಯವಸ್ಥೆಯಲ್ಲಿ ರೂಪುಗೊಳ್ಳುತ್ತಿರುವುದು ಕಂಡುಬರುತ್ತಿದೆ. ಆ ಕಾರಣಕ್ಕಾಗಿ ನಮ್ಮ ಸಮಾಜದಲ್ಲಿ ಇಂದಿಗೂ ಬಾಲ್ಯ ವಿವಾಹಗಳಾಗುತ್ತಿವೆ. ಈ ವಿವಾಹಗಳಿಂದಾಗಿ ಹೆಣ್ಣುಮಕ್ಕಳು ಪರಾವಲಂಬಿಗಳಾಗಿಯೇ ಜೀವಿಸುತ್ತಿದ್ದಾರೆ. ಈ ರೀತಿಯ ಸ್ಥಿತಿಗೆ ಮುಖ್ಯ ಕಾರಣ ಪಿತೃಪ್ರಧಾನ ವ್ಯವಸ್ಥೆಯೇ ಆಗಿದೆ. ಹೀಗೆ ಮಹಿಳೆಯರು ಮನುಷ್ಯ ಜಾತಿಯ ಅರ್ಧದಷ್ಟಿದ್ದಾರೆ. ಅವರಿಗೂ ಸಮಾನತೆಯ ಬದುಕನ್ನು ಹೊಂದುವ, ಜೀವಿಸುವ ಹಕ್ಕಿದೆ ಎಂಬ ಅರಿವು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮೂಡಬೇಕಾದ ಅನಿವಾರ್ಯತೆಯಿದೆ. ಹಾಗಾಗದ ಹೊರತು, ಲಿಂಗ ಸಮಾನತೆಯನ್ನು ಸಾಧಿಸುವುದು ಕಷ್ಟಸಾಧ್ಯ. ಇದರಿಂದಾಗಿ ಬಾಲ್ಯ ವಿವಾಹಗಳು ಯಾವುದೇ ಆತಂಕಗಳಿಲ್ಲದೇ ನಿರಾತಂಕವಾಗಿ ನಡೆಯುತ್ತಲೇ ಇರುತ್ತವೆ. ಇದು ಹಾಗಾಗಬಾರದು. ಬಾಲ್ಯ ವಿವಾಹಗಳಿಂದಾಗುವ ದುಷ್ಪರಿಣಾಮಗಳ ಬಗೆಗೆ ಜನರಲ್ಲಿ ಜಾಗೃತಿಯನ್ನುಂಟು ಮಾಡಬೇಕು ಮತ್ತು ಬಾಲ್ಯ ವಿವಾಹ ನಿಷೇಧ ಕಾನೂನಿನ ಅರಿವುಂಟಾಗಬೇಕು. ಅಂದಾಗ ಮಾತ್ರ ಈ ವಿವಾಹಗಳ ಪ್ರಮಾಣ ಕಡಿಮೆಯಾಗಲು ಸಾಧ್ಯತೆಯಿದೆ. ಸರ್ಕಾರ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ಹಾಗೂ ವ್ಯಕ್ತಿಗತ ನೆಲೆಯಲ್ಲಿ ಬಾಲ್ಯ ವಿವಾಹ ಪದ್ಧತಿಯ ನಿಷೇಧಕ್ಕಾಗಿ ವಿಭಿನ್ನ

ನೆಲೆಯಲ್ಲಿ ಪ್ರಯತ್ನಗಳನ್ನು ನಡೆಸಿದರೂ, ಬಾಲ್ಯ ವಿವಾಹ ಪದ್ಧತಿ ಇವತ್ತಿಗೂ ಜ್ವಲಂತ ಸಮಸ್ಯೆಯಾಗಿ ಯಾಕೆ ಕಾಡುತ್ತಿದೆ?, ಸಂವಿಧಾನದಲ್ಲಿರುವ ಜೆಂಡರ್ ಸಮಾನ ಹಕ್ಕುಗಳು, ಬಾಲ್ಯ ವಿವಾಹ ತಡೆ ಕಾನೂನು, ಬಾಲ್ಯ ವಿವಾಹ ಪದ್ಧತಿಯನ್ನು ಯಾಕೆ ತಡೆಯಲಾಗುತ್ತಿಲ್ಲ? ಇವುಗಳ ಕಾರಣ ಶೋಧಗಳನ್ನು ಮತ್ತು ಈ ಕಾರಣಗಳೇ ಹೇಗೆ ಬಾಲ್ಯ ವಿವಾಹ ನಿಷೇಧ ಕಾನೂನಿನ ಅನುಷ್ಠಾನಕ್ಕೆ ಹೇಗೆ ತೊಡಕಾಗಿವೆ ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಉಲ್ಲೇಖಗಳು**


೧. ವಾಣಿ ಪೆರಿಯೋಡಿ, ೨೦೧೫, ಚಂದದ ಬದುಕು: ಕಿಶೋರಿಯರಿಗೆ ಜೀವನ ಕೌಶಲ್ಯ ಮಾಹಿತಿ ಕೈಪಿಡಿ, ಜಿಲ್ಲಾಡಳಿತ, ಕೊಪ್ಪಳ.

೨. ಶಿವರಾಜ್ ವಿ ಪಾಟೀಲ್, ೨೦೧೧, ಕರ್ನಾಟಕ ರಾಜ್ಯದಲ್ಲಿನ ಬಾಲ್ಯವಿವಾಹ ತಡೆ ಬಗೆಗಿನ ವರದಿ, ಕರ್ನಾಟಕ ಸರ್ಕಾರ.

೩. ದಿಕ್ಸೂಚಿ ಮಾಸ ಪತ್ರಿಕೆ, ಸೆಪ್ಟೆಂಬರ್ ೨೦೦೧.

೪. ಪ್ರಜಾವಾಣಿ ದಿನಪತ್ರಿಕೆ ೮ನೇ ಸೆಪ್ಟೆಂಬರ್ ೨೦೧೪.

೫. ವಿಜಯ ಕರ್ನಾಟಕ, ದಿನಪತ್ರಿಕೆ, ೮ನೇ ಡಿಸೆಂಬರ್ ೨೦೧೫.

### ಅಧ್ಯಾಯ : ಒಂಬತ್ತು

# ಬಾಲ್ಯ ವಿವಾಹ ನಿಷೇಧ ಕಾಯಿದೆ : ಅನುಷ್ಠಾನ ಸಂದರ್ಭದಲ್ಲಿನ ತೊಡಕುಗಳು

೯.೧. ಕೌಟುಂಬಿಕ ತೊಡಕುಗಳು
೯.೨. ಸಾಮಾಜಿಕ ತೊಡಕುಗಳು
೯.೩. ಆರ್ಥಿಕ ತೊಡಕುಗಳು
೯.೪. ಸಾಂಪ್ರದಾಯಿಕ ನಂಬಿಕೆಗಳು
೯.೫. ವಲಸೆ ಕಾರಣಗಳು
೯.೬. ಶೈಕ್ಷಣಿಕ ವ್ಯವಸ್ಥೆಯಲ್ಲಿನ ಕೊರತೆಗಳು
೯.೭. ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳ ಅನುಷ್ಠಾನದ ಕ್ರಮಗಳು : ಎದುರಾದ ತೊಡಕುಗಳು
೯.೮. ಇತರೆ ತೊಡಕುಗಳು

## ಅಧ್ಯಾಯ : ಒಂಬತ್ತು

# ಬಾಲ್ಯ ವಿವಾಹ ನಿಷೇಧ ಕಾಯಿದೆ : ಅನುಷ್ಠಾನ ಸಂದರ್ಭದಲ್ಲಿನ ತೊಡಕುಗಳು

ಬಾಲ್ಯ ವಿವಾಹ ನಿಷೇಧ ಕಾನೂನು ೧೯೨೯ರಲ್ಲಿ ಮೊದಲ ಬಾರಿಗೆ ಜಾರಿಯಾಗಿ ನಂತರ ಹಲವಾರು ತಿದ್ದುಪಡಿಗಳಿಗೆ ಒಳಪಟ್ಟಿತು. ಆದರೆ ಬಾಲ್ಯ ವಿವಾಹಗಳ ಸಂಖ್ಯೆಯಲ್ಲಿ ಗಮನಾರ್ಹ ಬದಲಾವಣೆಗಳಾಗದಿದ್ದರೂ ಸ್ವಲ್ಪ ಪ್ರಮಾಣದ ಬದಲಾವಣೆಗಳು ನಡೆದಿವೆ. ಅಂದರೆ ಸರ್ಕಾರಿ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ಬಾಲ್ಯ ವಿವಾಹ ನಿಷೇಧ ಕಾನೂನಿನ ಬಗೆಗೆ ಜನರಲ್ಲಿ ಅರಿವನ್ನು ಮೂಡಿಸುವ ಸಲುವಾಗಿ ನಿರಂತರ ಪ್ರಯತ್ನಗಳನ್ನು ಮಾಡುತ್ತಲೇ ಇವೆ. ಈ ನಿಟ್ಟಿನಲ್ಲಿ ಹಲವು ಬಾಲ್ಯ ವಿವಾಹಗಳನ್ನು ತಡೆಗಟ್ಟಿವೆ. ಆದರೂ ಬಾಲ್ಯ ವಿವಾಹ ನಿಷೇಧ ಕಾನೂನಿನ ಅನುಷ್ಠಾನದ ಸಂದರ್ಭದಲ್ಲಿ ಹಲವಾರು ತೊಡಕುಗಳು ಎದುರಾಗಿರುವುದನ್ನು ಕಾಣಬಹುದಾಗಿದೆ. ಮುಖ್ಯವಾಗಿ ಕೌಟುಂಬಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಉದ್ಯೋಗವನ್ನರಸಿ ವಲಸೆ ಹೋಗುವುದು, ಸಾಂಪ್ರದಾಯಿಕ ನಂಬಿಕೆಗಳು ಹೀಗೆ ಹಲವಾರು ಅಂಶಗಳು ಕಾಯಿದೆಯ ಅನುಷ್ಠಾನಕ್ಕೆ ತೊಡಕುಗಳನ್ನು ನಿರ್ಮಿಸಿವೆ. ವ್ಯಕ್ತಿಗಳು ವಿವಾಹದ ಮೂಲಕ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಕಾರ್ಯಗಳನ್ನು ನಿರ್ವಹಿಸುತ್ತಾರೆ. ವ್ಯವಸ್ಥೆಯಲ್ಲಿ ಪುರುಷ ಪ್ರಧಾನತೆ ಜಾರಿಯಲ್ಲಿರುವ ಕಾರಣ ವಿವಾಹವಾದ ನಂತರ ಮಹಿಳೆ ಗಂಡನ ಮನೆಯನ್ನು ಸೇರಬೇಕಾಗುತ್ತದೆ. ಮಹಿಳೆಗೆ ವ್ಯವಸ್ಥೆಯಲ್ಲಿ ಹಲವಾರು ನಿರ್ಬಂಧಗಳು ಏರ್ಪಟ್ಟಿರುತ್ತವೆ. ವಿವಾಹವಾಗಿ ಗಂಡನ ಮನೆಗೆ ಸೇರಿದಾಗ ಮನೆಯಲ್ಲಿ ಅತ್ತೆ, ಮಾವ, ಗಂಡ ಇವರಿಗೆ ಹೆದರಿಕೊಂಡು ಜೀವಿಸಬೇಕಾದ ಅನಿವಾರ್ಯತೆಗೆ ಒಳಗಾಗಿರುತ್ತಾಳೆ. ಎಲ್ಲರೊಡನೆಯೂ ಹೊಂದಿಕೊಳ್ಳಬೇಕು ಹಾಗೂ ಗಂಡು ಮಕ್ಕಳನ್ನು ಹೊತ್ತು ಹೆತ್ತು ಪೋಷಿಸಬೇಕು. ಇವೇ ಹೆಣ್ಣಿನ ಜೀವನದ ಯಶಸ್ಸನ್ನು ಸೂಚಿಸುವ ಅಂಶಗಳಾಗಿವೆ ಎಂಬುದಾಗಿ ನಂಬಿಸಲಾಗಿದೆ. ಮುಖ್ಯವಾಗಿ

ವಿವಾಹ ಎಂಬ ಸಂಸ್ಥೆಯು ಮಹಿಳೆಯರನ್ನು ಸ್ವತಂತ್ರ ಹೀನರನ್ನಾಗಿ ಮಾಡಿದೆ. ವಿವಾಹವು ಮಹಿಳೆಯರನ್ನು ಕನಿಷ್ಠಗೊಳಿಸುತ್ತಾ ಸಾಗುತ್ತದೆ. ಇಲ್ಲಿ ಪುರುಷರು ಶ್ರೇಷ್ಠರೆನಿಸಿಕೊಳ್ಳುತ್ತಾರೆ. ಈ ಸಂಸ್ಥೆಯು ಮಹಿಳೆಯರ ಪಾತಿವ್ರತ್ಯವನ್ನು ಮತ್ತು ವಿಧೇಯತೆಯನ್ನು ಬಯಸುತ್ತದೆ. ಹಾಗಾಗಿಯೇ ಗಂಡು ಮತ್ತು ಹೆಣ್ಣಿನ ನಡುವಿನ ಸಾಮಾಜಿಕ ಭಿನ್ನತೆ ಹಾಗೆಯೇ ಮುಂದುವರೆದುಕೊಂಡು ಬಂದಿರುವುದು ವಿಪರ್ಯಾಸದ ಸಂಗತಿ. ಈ ವಿವಾಹ ಸಂಸ್ಥೆಯ ಬಗೆಗೆ ಹಲವಾರು ಸಮಾಜಶಾಸ್ತ್ರಜ್ಞರು ತಮ್ಮದೇ ಹೇಳಿಕೆಗಳನ್ನು ನೀಡಿದ್ದಾರೆ.

ವೆಸ್ಟರ್ ಮಾರ್ಕ್‌ರವರ ಪ್ರಕಾರ "ವಿವಾಹವು ಸಂತತಿಯ ಜನನದ ನಂತರವೂ ಉಳಿದುಕೊಳ್ಳುವ ಸ್ತ್ರೀ ಪುರುಷರ ಹೆಚ್ಚು ಕಡಿಮೆ ಸ್ಥಿರ ರೂಪದ ಸಂಬಂಧವಾಗಿದೆ"

ಜೇಕಬ್ ಮತ್ತು ಸ್ಟರ್ನ್‌ರವರ ಪ್ರಕಾರ "ವಿವಾಹವು ಪತಿ ಪತ್ನಿಯರು ಇಲ್ಲವೇ ಬಹುಸಂಖ್ಯಾತ ದಂಪತಿಗಳ ಸಾಮಾಜಿಕ ಸಂಬಂಧವನ್ನು ಹಾಗೂ ವೈವಾಹಿಕ ಸಂಗಾತಿಗಳ ಸಂಯೋಗದ ಆಚರಣೆಯನ್ನು ಸೂಚಿಸುವ ಪದವಾಗಿದೆ".

ಎ.ಜೆ.ಕೆಲ್ಲರ್‌ರವರ ಪ್ರಕಾರ "ವಿವಾಹ ಸಂಸ್ಥೆಯು ಸ್ತ್ರೀ ಪುರುಷರಲ್ಲಿ ನೈತಿಕ ಸಂಬಂಧವನ್ನು ನಿರ್ಮಿಸುವ ಸಾಂಸ್ಕೃತಿಕ ವ್ಯವಸ್ಥೆ. ಅದರ ಮುಖ್ಯ ಉದ್ದೇಶಗಳು ಮಕ್ಕಳಿಗೆ ಜನ್ಮ ಕೊಡುವುದು ಮತ್ತು ಅವುಗಳನ್ನು ಪೋಷಿಸುವುದು".

ಮಾಲಿನೌಸ್ಕಿರವರ ಪ್ರಕಾರ "ವಿವಾಹವು ಸ್ತ್ರೀ ಪುರುಷರ ನಡುವೆ ಲೈಂಗಿಕ ಅಪೇಕ್ಷೆಯ ಪೂರೈಕೆಗಾಗಿ ಮತ್ತು ಸಂತಾನೋತ್ಪತ್ತಿಗಾಗಿ ಉದ್ದೇಶ ಪೂರ್ವಕವಾಗಿ ಏರ್ಪಡಿಸಿಕೊಂಡ ಒಪ್ಪಂದವಾಗಿದೆ".

ಲುಂಡ್‌ಬರ್ಗ್ ಹೇಳುವಂತೆ "ವಿವಾಹವು ಪತಿ ಪತ್ನಿಯರು ಪರಸ್ಪರ ಹೊಂದಿರಬೇಕಾದ ಹಕ್ಕು, ಕರ್ತವ್ಯ ಮತ್ತು ಸವಲತ್ತುಗಳನ್ನು ವ್ಯಾಖ್ಯಾನಿಸುವ ನಿಯಮ ನಿಬಂಧನೆಗಳನ್ನು ಒಳಗೊಂಡಿರುತ್ತದೆ".

ಗಿಲಿನ್ ಮತ್ತು ಗಿಲಿನ್‌ರವರ ಪ್ರಕಾರ "ಸಂತಾನೋತ್ಪತ್ತಿ ಮಾಡುವ ಕುಟುಂಬವನ್ನು ಸ್ಥಾಪಿಸಲು ಸಮಾಜದಿಂದ ಮನ್ನಣೆಯನ್ನು ಪಡೆದ ಮಾರ್ಗವೇ ವಿವಾಹ"(ಬೈರಪ್ಪ ಕೆ, ೧೯೯೭, ಪು– ೮೨, ೮೩).

"ಮಾನವಶಾಸ್ತ್ರಜ್ಞರ ಪ್ರಕಾರ ವಿವಾಹ ಎನ್ನುವುದು ಹೆಣ್ಣು–ಗಂಡಿನ ನಡುವೆ ಏರ್ಪಡುವ ಲೈಂಗಿಕ ಶಾಶ್ವತ ಸಂಬಂಧ, ಮಕ್ಕಳ ಸೃಷ್ಟಿ ಹಾಗೂ ಅವುಗಳ ಪೋಷಣೆಗಾಗಿ ಮಾಡಿಕೊಂಡಿರುವ ಒಪ್ಪಂದವಾಗಿದೆ"(ಶೈಲಜ ಹಿರೇಮಠ, ೨೦೦೩, ಪು–೩) ಎಂದು ಹೇಳುತ್ತಾರೆ. ಹೀಗೆ ಪ್ರತಿಯೊಬ್ಬರೂ ಸಹ ವಿವಾಹದ ಕುರಿತಂತೆ ತಮ್ಮದೇ ಆದ ಹೇಳಿಕೆಗಳನ್ನು ನೀಡಿರುವುದು ಕಂಡುಬರುತ್ತದೆ. ಮೇಲಿನ ಎಲ್ಲಾ ಹೇಳಿಕೆಗಳನ್ನು ಗಮನಿಸಿದರೆ ಸಮಾಜದ ಮುಂದುವರಿಕೆಗೆ ವಿವಾಹ ಒಂದೇ ದಾರಿ. ಹಾಗೆಯೇ ವಿವಾಹದ ಮೂಲಕ ಸ್ತ್ರೀಪುರುಷರ ಪಾತ್ರ ಜವಾಬ್ದಾರಿಗಳು

ಹಂಚಲ್ಪಡುತ್ತವೆ ಎಂಬುದನ್ನು ಗುರುತಿಸಬಹುದು. ಆದರೆ ಗ್ರಾಮೀಣ ಭಾಗಗಳಲ್ಲಿ ಬಹಳಷ್ಟು ವಿವಾಹಗಳು ಕಾನೂನು ನಿಗಧಿಪಡಿಸಿದ ವಿವಾಹ ವಯಸ್ಸಿಗಿಂತ ಪೂರ್ವದಲ್ಲಿಯೇ ನಡೆಯುತ್ತಿರುವುದು ದುರಂತವೇ ಸರಿ.

ಭಾರತೀಯ ಸಮಾಜದ ಬಹುತೇಕ ಮಹಿಳೆಯರು ಸಮಾಜ ಮತ್ತು ಕುಟುಂಬದ ಚೌಕಟ್ಟಿನಿಂದ ಹೊರ ಬರದೇ ನಾಲ್ಕು ಗೋಡೆಗಳ ಮಧ್ಯೆ ಜೀವಿಸುವ ಅನಿವಾರ್ಯತೆಯನ್ನು ಹೊಂದಿದ್ದಾರೆ. ಇದರ ಆಚೆಗೂ ಆಧುನಿಕತೆಯ ಈ ಸಂದರ್ಭದಲ್ಲಿ ಮಹಿಳೆಯರು ಶಿಕ್ಷಣವನ್ನು ಪಡೆದು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಹೀಗೆ ಎಲ್ಲ ರಂಗಗಳಲ್ಲಿಯೂ ಮುನ್ನುಡಿಯನ್ನಿಟ್ಟಿರುವುದು ವಾಸ್ತವ. ಆದರೆ ಹೀಗೆ ಎಲ್ಲ ರಂಗಗಳಿಗೆ ಪ್ರವೇಶ ಪಡೆದ ಮಹಿಳೆಯರು ತಮ್ಮ ಸ್ವಂತ ನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ ಶಕ್ತರಾಗಿದ್ದಾರೆಯೇ ಎಂಬುದನ್ನು ಗಮನಿಸಿದರೆ, ಅದಕ್ಕೆ ಇಲ್ಲವೆಂಬ ಸಿದ್ಧ ಉತ್ತರ ದೊರೆಯುತ್ತದೆ. ಏಕೆಂದರೆ ಮಹಿಳೆಯರು ಎಷ್ಟೇ ಮುಂದುವರೆದಿದ್ದರೂ, ಅವರು ತಮ್ಮ ಸ್ವಂತ ನಿರ್ಧಾರಗಳಿಗೆ ಬರಲು ಪಿತೃಪ್ರಧಾನ ಮೌಲ್ಯಗಳು ಅವಕಾಶ ಮಾಡಿಕೊಡುತ್ತಿಲ್ಲ. ಹಾಗಾಗಿ ಪುರುಷ ನಿರ್ಮಿತ ವ್ಯವಸ್ಥೆಯಲ್ಲಿ ಮಹಿಳೆಯರ ಆಲೋಚನೆಗಳೂ ಸಹ ಪುರುಷ ವ್ಯವಸ್ಥೆಗೆ ಪೂರಕವಾಗಿರುವಂತೆ ರೂಪಿಸಲ್ಪಟ್ಟಿವೆ. ಸಂವಿಧಾನವು ಸ್ತ್ರೀಪುರುಷರಿಬ್ಬರಿಗೂ ಸಮಾನತೆಯನ್ನು ಕೊಟ್ಟಿದೆ. ಆದರೆ ವಾಸ್ತವದಲ್ಲಿ ಇದು ಜಾರಿಯಲ್ಲಿಲ್ಲ ಎಂಬುದೇ ನಿರಾಶಾದಾಯಕ ಸಂಗತಿ. ಮಹಿಳೆಯರ ಅಭಿವೃದ್ಧಿಗಾಗಿ ಹಲವು ಕಾನೂನುಗಳು ಜಾರಿಯಲ್ಲಿವೆ. ಅವರು ತಮ್ಮ ಹಕ್ಕುಗಳನ್ನು ನಿರಾಯಾಸವಾಗಿ ಚಲಾಯಿಸುವ ಅವಕಾಶವೂ ಕೊಟ್ಟಿದೆ. ಆದರೆ ಇದು ಮಹಿಳೆಯರಿಂದ ಸಾಧ್ಯವಾಗುತ್ತಿದೆಯೇ ಎಂಬುದು ಮುಖ್ಯ ಪ್ರಶ್ನೆ. ಏಕೆಂದರೆ ಮಹಿಳೆಯರ ಪ್ರತೀ ಹೆಜ್ಜೆಯನ್ನೂ ಪುರುಷಪ್ರಧಾನ ವ್ಯವಸ್ಥೆ ಸೂಕ್ಷ್ಮವಾಗಿ ಗಮನಿಸುತ್ತಿರುತ್ತದೆ. ಹಾಗಾಗಿ ಮಹಿಳೆಯರು ಅಭಿವೃದ್ಧಿ ಹೊಂದುತ್ತಿದ್ದಾರೆ ಎಂದು ತಿಳಿದ ಕೂಡಲೇ ಅದಕ್ಕೆ ಅಡ್ಡಿಗಳನ್ನು ಒಡ್ಡುತ್ತದೆ. ಮುಖ್ಯವಾಗಿ ಮಹಿಳೆಯರು ಯಾವುದೇ ಅಧಿಕಾರದ ನೆಲೆಯಲ್ಲಿ ಗುರುತಿಸಿಕೊಳ್ಳಬಾರದು ಎಂಬುದು ಅವರ ಆಲೋಚನಾ ನೆಲೆಯಾಗಿರುತ್ತದೆ. ಹೀಗೆ ಮಹಿಳೆಯರನ್ನು ತನ್ನ ಹಿಡಿತದಲ್ಲಿ ತಂದುಕೊಳ್ಳುವುದಕ್ಕೋಸ್ಕರ ಹಲವು ಅನಿಷ್ಠ ಪದ್ಧತಿಗಳನ್ನು ಜಾರಿಗೆ ತಂದಿತು. ಅವುಗಳಲ್ಲಿ ಬಾಲ್ಯ ವಿವಾಹ ಪದ್ಧತಿಯೂ ಒಂದು. ಆದರೆ ಇದು ಸಮಾಜದ ಅಭಿವೃದ್ಧಿಗೆ ಮಾರಕವಾಗಿದ್ದು, ಮಹಿಳೆಯರನ್ನು ಹಿಂಸಿಸುವ ಪದ್ಧತಿಯಾಗಿದೆ. ಕುಟುಂಬ ಮಹಿಳೆಯರ ಆಶ್ರಯ ತಾಣವಾಗಿರದೇ, ಬಂದೀಖಾನೆಯಾಗಿರುವುದು ವಾಸ್ತವ. ಹಾಗಾಗಿ ಈ ಬಂದೀಖಾನೆಯಿಂದ ಮಹಿಳೆಯರನ್ನು ಹೊರ ತರಲು ಅನೇಕ ಮಹಿಳಾಪರ ಕಾನೂನುಗಳು ಜಾರಿಗೆ ಬಂದಿವೆ. ಅದರಲ್ಲಿ ಬಾಲ್ಯ ವಿವಾಹ ನಿಷೇಧ ಕಾನೂನು ಒಂದು. ಮಹಿಳೆಯರ ಬದುಕಿಗೆ ಸಂಬಂಧಿಸಿದ ಅನೇಕ ಸಂಗತಿಗಳ ಜೊತೆಗೆ ಸಂವಿಧಾನ ಬದ್ಧವಾಗಿ ರೂಪಿಸಲ್ಪಟ್ಟ ಅನೇಕ ಕಾನೂನುಗಳು ಅನುಸಂಧಾನ ನಡೆಸುತ್ತಿರುತ್ತವೆ. ಅಂದರೆ ಮಹಿಳೆಯರ ಮೇಲೆ ನಡೆಯುವ ಹಿಂಸೆಯನ್ನು ತಡೆಗಟ್ಟುವ, ಮಹಿಳೆಯರ ಅಭಿವೃದ್ಧಿಗಾಗಿ ರೂಪಿತವಾದ

ಕಾನೂನುಗಳು ಮಹಿಳೆಯರ ಬದುಕಿಗೆ ಒಂದಲ್ಲಾ ಒಂದು ರೀತಿಯಲ್ಲಿ ಸಹಕಾರಿಯಾಗಿರುತ್ತವೆ. ಈ ಕಾನೂನುಗಳು ಮಹಿಳೆಯರಿಗೆ ರಕ್ಷಣೆಯನ್ನು ನೀಡುವುದರ ಜೊತೆಗೆ ಪುರುಷಶಾಹಿ ವ್ಯವಸ್ಥೆಗೆ ಎಚ್ಚರಿಕೆಯನ್ನೂ ನೀಡುತ್ತಿರುತ್ತವೆ. ಆರ್ಥಿಕವಾಗಿ, ಸಾಮಾಜಿಕವಾಗಿ ಅಭಿವೃದ್ಧಿಯನ್ನು ಹೊಂದಲು ಪೂರಕವಾಗಿ ಕಾರ್ಯನಿರ್ವಹಿಸುತ್ತವೆ. ಮಹಿಳೆಯರು ಅಭಿವೃದ್ಧಿಯನ್ನು ಹೊಂದುವುದು ಮತ್ತು ಸಮಾಜದಲ್ಲಿ ಉನ್ನತ ಸ್ಥಾನವನ್ನು ಪಡೆಯಲು ಬಾಲ್ಯವಿವಾಹ ನಿಷೇಧ ಕಾನೂನು ತುಂಬಾ ಸಹಕಾರಿಯಾಗಿದೆ. ಆದರೆ ವಾಸ್ತವದಲ್ಲಿ ಈ ಕಾನೂನಿನ ಕುರಿತು ಅರಿವು ಹೊಂದಿದವರು ತುಂಬಾನೇ ಕಡಿಮೆ ಎಂದು ಹೇಳಬಹುದು. ಈ ಕಾನೂನು ಜಾರಿಯಾಗಿ ಹಲವಾರು ವರ್ಷಗಳೇ ಕಳೆದರೂ, ಇಂದಿಗೂ ಬಾಲ್ಯ ವಿವಾಹಗಳು ನಡೆಯುತ್ತಿರುವುದು ಇದಕ್ಕೆ ಸಾಕ್ಷಿ. ಹಾಗಾಗಿ ಈ ಕಾಯಿದೆ ಸಮಾಜದಲ್ಲಿ ಸರಿಯಾಗಿ ಅನುಷ್ಠಾನಗೊಂಡಿಲ್ಲದಿರುವುದು ಮತ್ತು ಇದಕ್ಕೆ ಹಲವಾರು ಕಾರಣಗಳಿರುವುದು ಕಂಡುಬರುತ್ತದೆ.

ಭಾರತವು ಹಲವು ಧರ್ಮಗಳ ತವರೂರಾಗಿರುವುದರಿಂದ ಪ್ರತಿಯೊಂದು ಧರ್ಮಕ್ಕೂ ತಮ್ಮದೇ ಆದ ಧರ್ಮಗ್ರಂಥಗಳಿವೆ. ಹಾಗಾಗಿಯೇ ಭಾರತವು ಧರ್ಮನಿರಪೇಕ್ಷ ಪ್ರಜಾಪ್ರಭುತ್ವವಾದಿ ರಾಷ್ಟ್ರವಾಗಿದೆ. ಆದರೆ ಇಲ್ಲಿ ಏಕರೂಪದ ಸಿವಿಲ್ ಸಂಹಿತೆ ಇಲ್ಲ. ಏಕೆಂದರೆ ವಿವಾಹಕ್ಕೆ ಸಂಬಂಧಿಸಿದಂತೆ ಹಿಂದೂ, ಮುಸ್ಲಿಂ, ಕ್ರೈಸ್ತ ಮುಂತಾದ ಧರ್ಮಗಳಲ್ಲಿ ಬೇರೆ ಬೇರೆ ಕಟ್ಟುಪಾಡುಗಳಿವೆ. ಆದರೆ ಸಂವಿಧಾನ ಮಾತ್ರ ಒಂದೇ ಆಗಿದ್ದು, ಅದರ ಅಡಿಯಲ್ಲಿಯೇ ಎಲ್ಲಾ ಧರ್ಮಗಳೂ, ಅವುಗಳ ನಿಯಮಗಳು ಇರಬೇಕಾಗುತ್ತದೆ. ಸಂವಿಧಾನದ ನಿಯಮಗಳಾಚೆ ಯಾವ ಧರ್ಮವೂ ಆಲೋಚಿಸುವ ಹಾಗಿಲ್ಲ. ಆದರೂ ಎಲ್ಲಾ ಧರ್ಮಗಳಲ್ಲಿಯೂ ಸಂವಿಧಾನ ಬದ್ಧವಾದ ಕಾನೂನುಗಳನ್ನು ಮೀರಿ ಬಾಲ್ಯವಿವಾಹಗಳಾಗುತ್ತಿರುವುದು ವಾಸ್ತವ ಸತ್ಯ. ಬಾಲ್ಯ ವಿವಾಹಗಳನ್ನು ನಿಷೇಧ ಮಾಡುವುದರ ಸಲುವಾಗಿ ಸ್ವಾತಂತ್ರ್ಯ ಪೂರ್ವದಲ್ಲಿಯೇ ನಿಷೇಧ ಕಾನೂನನ್ನು ಜಾರಿಗೆ ತರಲಾಗಿತ್ತು. ನಂತರ ಇದು ಹಲವಾರು ತಿದ್ದುಪಡಿಗಳಿಗೆ ಒಳಗಾಗಿ ಇಂದು ಬಾಲ್ಯ ವಿವಾಹ ನಿಷೇಧ ಅಧಿನಿಯಮ ೨೦೦೬ ಎಂಬುದಾಗಿದೆ. ಕಾಯಿದೆ ಕಾನೂನುಗಳು ವ್ಯವಸ್ಥೆಯಲ್ಲಿನ ತೊಡಕುಗಳನ್ನು ನಿಯಂತ್ರಿಸುವ ಬಹುದೊಡ್ಡ ಅಸ್ತ್ರಗಳಾಗಿದ್ದು, ಇವುಗಳೇ ವ್ಯವಸ್ಥೆಯ ನಿರ್ಧಾರಕ ಅಂಶಗಳಾಗಿವೆ. ಹಾಗಾಗಿ ಸ್ತ್ರೀ–ಪುರುಷರ ಅಭಿವೃದ್ಧಿಗೆ ಈ ಕಾಯಿದೆಗಳು ಬಹುದೊಡ್ಡ ಪಾತ್ರವನ್ನು ವಹಿಸುತ್ತವೆ. ಆದರೆ ಸಮಾಜದಲ್ಲಿನ ಲಿಂಗ ಅಸಮಾನತೆಗಳಿಂದಾಗಿ ಕಾನೂನುಗಳು ಸರಿಯಾಗಿ ಅನುಷ್ಠಾನಗೊಳ್ಳುವಲ್ಲಿ ವಿಫಲವಾಗುತ್ತಿವೆ. ಈಗ ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಬಾಲ್ಯ ವಿವಾಹ ನಿಷೇಧ ಕಾನೂನು ೨೦೦೬ ಇದು ನಿಜವಾಗಿಯೂ ಸಮಾಜದ ಜನರನ್ನು ತಲುಪಿದೆಯೇ, ಸ್ತ್ರೀ–ಪುರುಷರು ಈ ಕಾನೂನಿನ ಅರಿವನ್ನು ಪಡೆದಿದ್ದಾರೆಯೇ ಒಂದುವೇಳೆ ಇದರ ಅರಿವು ಇಲ್ಲ ಎಂಬುದಾದರೆ ಅದಕ್ಕೆ ಕಾನೂನಿನ ಅನುಷ್ಠಾನದ ಸಂದರ್ಭದಲ್ಲಿನ ತೊಡಕುಗಳು ಯಾವುವು ಎಂಬಂತಹ ವಿಷಯಗಳನ್ನು ಮುಂದಿನಂತೆ ಚರ್ಚಿಸಲಾಗಿದೆ.

ಬಾಲ್ಯ ವಿವಾಹ ನಿಷೇಧ ಕಾನೂನು ರೂಪುಗೊಂಡು ಜಾರಿಯಾದ ನಂತರ ಅದನ್ನು ಅನುಷ್ಠಾನಕ್ಕೆ ತರುವ ಪ್ರಕ್ರಿಯೆಯಲ್ಲಿ ಹಲವಾರು ತೊಡಕುಗಳು ಎದುರಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಈ ಕಾನೂನಿನ ಸಾಫಲ್ಯತೆ ಅಥವಾ ವಿಫಲತೆಯು ಮಹಿಳೆಯರು ಈ ಕಾನೂನನ್ನು ಎಷ್ಟು ಸಮರ್ಥವಾಗಿ ಬಳಸಿಕೊಂಡಿದ್ದಾರೆ ಎಂಬುದರ ಮೇಲೆ ನಿಂತಿದೆ. ಏಕೆಂದರೆ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಎರಡನೆಯ ದರ್ಜೆಯವಳಾಗಿ ಜೀವಿಸುತ್ತಿರುವುದರಿಂದಾಗಿ ಹಲವಾರು ನಿರ್ಬಂಧಗಳಿಗೆ ಒಳಪಟ್ಟಿದ್ದಾಳೆ ಮತ್ತು ಈ ನಿರ್ಬಂಧಗಳನ್ನು ಮೀರಿ/ಧಿಕ್ಕರಿಸಿ ತಮ್ಮ ಹಕ್ಕುಗಳನ್ನು ಪಡೆಯಲು ಕಾನೂನಾತ್ಮಕವಾಗಿ ಮುನ್ನಡೆದರೆ ವ್ಯವಸ್ಥೆಯಲ್ಲಿ ಹಲವಾರು ಸಾಮಾಜಿಕ ಮತ್ತು ಕಾನೂನಾತ್ಮಕ ತೊಡಕುಗಳನ್ನು ಎದುರಿಸಬೇಕಾದ ಅನಿವಾರ್ಯತೆಗೆ ಒಳಗಾಗಿದ್ದಾರೆ. ಆದರೂ ಈ ಎಲ್ಲ ಬಗೆಯ ತೊಡಕುಗಳನ್ನು ಎದುರಿಸಿಯೂ ಮಹಿಳೆಯರು ಬಾಲ್ಯ ವಿವಾಹ ನಿಷೇಧ ಕಾನೂನಿನ ಅರಿವು ಪಡೆಯುವುದರ ಮೂಲಕ ಅದನ್ನು ನಿರ್ಮೂಲನೆ ಮಾಡುವ ಕಾರ್ಯದಲ್ಲಿ ತೊಡಗಬೇಕಾದ ಅನಿವಾರ್ಯತೆ ಇದೆ. ಆದರೆ ಮಹಿಳೆಯರು ಸಾಮಾಜಿಕ, ಕೌಟುಂಬಿಕ ಒತ್ತಡಗಳಿಗೆ ಮಣಿದು ಸಂವಿಧಾನ ಬದ್ಧವಾದ ಯಾವ ಕಾನೂನುಗಳ ಬಗೆಗೂ ಅರಿವನ್ನು ಹೊಂದುವುದರಿಂದ ದೂರವಿದ್ದಾರೆ. ಹಾಗಾಗಿಯೇ ಬಾಲ್ಯ ವಿವಾಹಗಳಿಗೆ ಹೆಣ್ಣುಮಕ್ಕಳು ಬಹು ಬೇಗನೇ ಒಳಗಾಗುತ್ತಿದ್ದಾರೆ. ಮಹಿಳೆಯರು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯವಾಗಿ ಹೀಗೆ ಎಲ್ಲ ಕ್ಷೇತ್ರಗಳಲ್ಲಿ ಪುರುಷರನ್ನೇ ಅವಲಂಬಿಸಿರುವುದರಿಂದಾಗಿ ಈ ಬಗೆಯ ಸಮಸ್ಯೆಗಳಿಗೆ ಒಳಗಾಗುತ್ತಿದ್ದಾರೆ ಎಂದು ಹೇಳಬಹುದು. ಇವುಗಳ ಜೊತೆಗೆ ಕಾನೂನು ನಿರ್ವಹಿಸುವವರು ಮತ್ತು ಜನರ ನಡುವೆ ಒಂದು ದೊಡ್ಡ ಕಂದಕ ಏರ್ಪಟ್ಟಿದೆ. ಹಾಗಾಗಿ ಸಂವಿಧಾನಬದ್ಧವಾದ ಯಾವುದೇ ಕಾನೂನು ಜನರನ್ನು ತಲುಪಲು ಸಾಧ್ಯವಾಗುತ್ತಿಲ್ಲ. ಮುಖ್ಯವಾಗಿ ಬಾಲ್ಯ ವಿವಾಹ ನಿಷೇಧ ಕಾನೂನು ಸರಿಯಾಗಿ ಅನುಷ್ಠಾನಕ್ಕೆ ತರಲು ಸರ್ಕಾರಿ ಇಲಾಖೆಗಳು ಮತ್ತು ಸರ್ಕಾರೇತರ ಸಂಘಸಂಸ್ಥೆಗಳು ಹಲವಾರು ಪ್ರಯತ್ನಗಳನ್ನು ಮಾಡುತ್ತಲೇ ಇವೆ. ಆದರೆ ಸಂಪೂರ್ಣವಾಗಿ ಸಫಲವಾಗಿಲ್ಲ. ಏಕೆಂದರೆ ಅನುಷ್ಠಾನದ ಸಂದರ್ಭದಲ್ಲಿ ಹಲವು ತೊಡಕುಗಳು ಎದುರಾಗುತ್ತಿವೆ. ಅಧ್ಯಯನ ವಿಷಯದ ಕ್ಷೇತ್ರವ್ಯಾಪ್ತಿಯಾದ ಬಳ್ಳಾರಿ, ಕೊಪ್ಪಳ, ಗದಗ, ಬಾಗಲಕೋಟೆ ಜಿಲ್ಲೆಗಳಲ್ಲಿ ಕಂಡುಬಂದಿರುವ ಬಾಲ್ಯ ವಿವಾಹ ಪ್ರಕರಣಗಳನ್ನು ಕ್ಷೇತ್ರಾಧ್ಯಯನದ ಮೂಲಕ ವಕ್ತೃಗಳನ್ನು ಸಂದರ್ಶಿಸಿ, ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ ಬಾಲ್ಯ ವಿವಾಹ ನಿಷೇಧ ಕಾನೂನಿನ ಅನುಷ್ಠಾನದ ಸಂದರ್ಭದಲ್ಲಿನ ತೊಡಕುಗಳನ್ನು ಏಳು ಮುಖ್ಯ ಭಾಗಗಳನ್ನಾಗಿ ಗುರುತಿಸಿಕೊಂಡು ಮುಂದಿನಂತೆ ಚರ್ಚಿಸಲಾಗಿದೆ. ೧. ಕೌಟುಂಬಿಕ ತೊಡಕುಗಳು ೨. ಸಾಮಾಜಿಕ ತೊಡಕುಗಳು ೩. ಆರ್ಥಿಕ ತೊಡಕುಗಳು ೪. ಸಾಂಪ್ರದಾಯಿಕ ನಂಬಿಕೆಗಳು ೫. ವಲಸೆ ಕಾರಣಗಳು ೬. ಶೈಕ್ಷಣಿಕ ವ್ಯವಸ್ಥೆಯಲ್ಲಿನ ಕೊರತೆಗಳು ೭. ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳ ಅನುಷ್ಠಾನದ ಕ್ರಮಗಳು: ಎದುರಾದ ತೊಡಕುಗಳು ೮. ಇತರೆ ತೊಡಕುಗಳು ಈ ಎಲ್ಲಾ ಅಂಶಗಳನ್ನು ಒಂದೊಂದಾಗಿ ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

## ೯.೧. ಕೌಟುಂಬಿಕ ತೊಡಕುಗಳು

ಸಮಾಜದ ಎಲ್ಲ ಆಗುಹೋಗುಗಳಿಗೆ ಕುಟುಂಬವೇ ಪ್ರಮುಖ ಕಾರಣ. ಕುಟುಂಬವನ್ನು ಹೊರತುಪಡಿಸಿ ಸಮಾಜ ಇಲ್ಲ. ಹಾಗಾಗಿ ಕುಟುಂಬವೇ ಸಮಾಜದ ಎಲ್ಲ ಕಾರ್ಯಗಳಿಗೆ ಮೂಲ ಕೇಂದ್ರವಾಗಿದೆ. ಮುಖ್ಯವಾಗಿ ಲಿಂಗತ್ವದ ಪಾತ್ರಗಳನ್ನು ಹೇಗೆ ನಿರ್ವಹಿಸಬೇಕು ಮತ್ತು ಹೇಗೆ ನಿಭಾಯಿಸಬೇಕು ಎಂಬುದನ್ನು ಕುಂಟುಂಬದಲ್ಲಿ ನಡೆಯುವ ಸಾಮಾಜೀಕರಣದ ಮೂಲಕ ಕಲಿಸಲಾಗುತ್ತದೆ. ಇಲ್ಲಿನ ಪಾತ್ರ ಜವಾಬ್ದಾರಿಗಳನ್ನು ಕುರಿತು ಕಲಿಕೆ ನಡೆಯುತ್ತಿರುತ್ತದೆ. ಈ ಹಿಂದೆ ನಮ್ಮಲ್ಲಿ ಎರಡು ಬಗೆಯ ಕೌಟುಂಬಿಕ ವ್ಯವಸ್ಥೆಗಳು ರೂಢಿಯಲ್ಲಿದ್ದವು. ಒಂದು ಅವಿಭಕ್ತ ಕುಟುಂಬ ವ್ಯವಸ್ಥೆಯಾದರೆ, ಇನ್ನೊಂದು ವಿಭಕ್ತ ಕುಟುಂಬ ವ್ಯವಸ್ಥೆಯಾಗಿದೆ. ಅವಿಭಕ್ತ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದ ಸಂದರ್ಭದಲ್ಲಿ ವಧುದಕ್ಷಿಣೆ ಜಾರಿಯಲ್ಲಿತ್ತು. ಏಕೆಂದರೆ ಕುಟುಂಬದಲ್ಲಿ ಹೆಣ್ಣು ದುಡಿಯುವ ಕೈಯಾಗಿದ್ದಳು. ವಿವಾಹದ ಮೂಲಕ ಹೆಣ್ಣು ಹುಟ್ಟಿದ ಮನೆಯಿಂದ ಗಂಡನ ಮನೆಯನ್ನು ಸೇರುತ್ತಿದ್ದಳು. ಆಗ ತವರು ಮನೆಯಲ್ಲಿ ದುಡಿಯುವ ಕೈ ಇಲ್ಲದಂತಾಗುತ್ತಿತ್ತು. ಈ ಕೊರತೆಯನ್ನು ನೀಗಿಸಲು ವಧುದಕ್ಷಿಣೆಯನ್ನು ಕೊಟ್ಟು ವಿವಾಹ ಮಾಡಿಕೊಳ್ಳುತ್ತಿದ್ದರು. ಆದರೆ ಇಂದಿನ ಸಂದರ್ಭದಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆಯನ್ನಾಗಲೀ ಅಥವಾ ವಧುದಕ್ಷಿಣೆಯನ್ನು ಕೊಟ್ಟು ವಿವಾಹ ಮಾಡಿಕೊಳ್ಳುವ ವ್ಯವಸ್ಥೆಯನ್ನಾಗಲೀ ಕಾಣಲು ಸಾಧ್ಯವಾಗುವುದಿಲ್ಲ. ಏಕೆಂದರೆ ಆಧುನೀಕರಣ, ಜಾಗತೀಕರಣದ ಪ್ರಕ್ರಿಯೆಯಿಂದಾಗಿ ಜನರು ವೈಯಕ್ತಿಕ ಹಿತಾಸಕ್ತಿಗಳಿಗೆ ಹೆಚ್ಚಿನ ಮಹತ್ವವನ್ನು ನೀಡುತ್ತಿದ್ದಾರೆ. ಹಾಗಾಗಿ ಅವಿಭಕ್ತ ಕುಟುಂಬ ವ್ಯವಸ್ಥೆಗಳೆಲ್ಲವೂ ವಿಭಕ್ತ ಕುಟುಂಬಗಳಾಗಿ ಮಾರ್ಪಟ್ಟಿವೆ. ಈ ಕುಟುಂಬ ಪದ್ಧತಿಯಲ್ಲಿ ಹೆಂಡತಿ, ಗಂಡ, ಮಕ್ಕಳು ಮಾತ್ರ ಸೇರಿ ಒಂದು ಕುಟುಂಬವಾಗಿರುತ್ತದೆ. ಇಂದು ಅಸ್ತಿತ್ವದಲ್ಲಿರುವ ಬಹುತೇಕ ಕುಟುಂಬಗಳು ವಿಭಕ್ತ ಕುಟುಂಬಗಳೇ ಆಗಿವೆ. ಗ್ರಾಮೀಣ ಭಾಗದ ಕುಟುಂಬಗಳಲ್ಲಿ ಹೆಣ್ಣುಮಕ್ಕಳಿಗೆ ವಿವಾಹ ಮಾಡುವುದು ತಂದೆ ತಾಯಂದಿರ ಕರ್ತವ್ಯವಾಗಿರುತ್ತದೆಯಾದ್ದರಿಂದ ಆ ಜವಾಬ್ದಾರಿಯನ್ನು ಕಳೆದುಕೊಳ್ಳುವುದಕ್ಕೆ ಮುಂದಾಗುತ್ತಾರೆ. ಹಾಗಾಗಿ ಆ ಹೆಣ್ಣು ಮಗುವಿನ ರಕ್ಷಣೆಯ ಜವಾಬ್ದಾರಿಯನ್ನು ವಿವಾಹದ ಮೂಲಕ ಇನ್ನೊಂದು ಕುಟುಂಬಕ್ಕೆ ವಹಿಸಿಕೊಡುತ್ತಾರೆ. ವಿವಾಹದ ಮೂಲಕ ಗಟ್ಟಿಗೊಳ್ಳುವ ಮತ್ತು ವಿಸ್ತರಿಸಿಕೊಳ್ಳುವ ಈ ಕೌಟುಂಬಿಕ ವ್ಯವಸ್ಥೆಯಲ್ಲಿನ ಹಲವಾರು ಅಂಶಗಳು ಬಾಲ್ಯ ವಿವಾಹಗಳಿಗೆ ಪ್ರೇರಣೆಯನ್ನು ನೀಡುವುದರ ಜೊತೆಗೆ ಕಾಯಿದೆ ಅನುಷ್ಠಾನಕ್ಕೆ ಅಡ್ಡಿಯನ್ನುಂಟುಮಾಡಿವೆ. ಇವುಗಳನ್ನು ಪ್ರತ್ಯೇಕವಾಗಿ ಗುರುತಿಸುವುದರ ಮೂಲಕ ಕೆಳಗಿನಂತೆ ವಿಶ್ಲೇಷಿಸಲಾಗಿದೆ. ಅ) ರಕ್ತ ಸಂಬಂಧಗಳನ್ನು ಉಳಿಸಿಕೊಳ್ಳುವುದು ಆ) ಹೆಣ್ಣು ಕುಟುಂಬದಲ್ಲಿ ಇದ್ದಷ್ಟು ಹೊರೆ ಎಂಬ ಭಾವನೆ ಇ) ಕುಟುಂಬದ ಹಿರಿಯರ ಆಸೆಯನ್ನು ಈಡೇರಿಸುವುದು. ಈ ಎಲ್ಲ ಕಾರಣಗಳು ಕೌಟುಂಬಿಕ ಚೌಕಟ್ಟಿನಲ್ಲಿ ಬರುತ್ತವೆ; ಈ ಕಾರಣಗಳು ಬಾಲ್ಯ ವಿವಾಹಗಳಿಗೆ ಮುನ್ನುಡಿಯನ್ನು ಹಾಕುತ್ತವೆ. ಇವುಗಳನ್ನು ಪ್ರಕರಣಗಳ ಮೂಲಕ ಒಂದೊಂದಾಗಿ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಅ) ರಕ್ತ ಸಂಬಂಧಗಳನ್ನು ಉಳಿಸಿಕೊಳ್ಳುವುದು** : ಪ್ರತಿಯೊಂದು ಜಾತಿ ಸಮುದಾಯಗಳಲ್ಲೂ ರಕ್ತ ಸಂಬಂಧಗಳಿಗೆ ಇನ್ನಿಲ್ಲದ ಬೆಲೆ ಇರುತ್ತದೆ. ಈ ಸಂಬಂಧಗಳನ್ನು ನಿರಂತರವಾಗಿ ಕಾಪಾಡಿಕೊಂಡು ಹೋಗಲು ವಿವಾಹವು ಒಂದು ಚಾಲಕ ಶಕ್ತಿಯಾಗಿದೆ. ಅಂದರೆ ತಮ್ಮ ತಮ್ಮ ಜಾತಿಗಳಲ್ಲಿಯೇ ವಿವಾಹಗಳನ್ನು ಏರ್ಪಡಿಸುವುದರ ಮೂಲಕ ರಕ್ತ ಸಂಬಂಧಗಳನ್ನು ಗಟ್ಟಿಗೊಳಿಸುವ ಮತ್ತು ಮುಂದುವರೆಸುವ ಕಾರ್ಯ ನಡೆಯುತ್ತಿರುತ್ತದೆ. ಮುಖ್ಯವಾಗಿ ಈ ಸಂಬಂಧಗಳು ವಿವಾಹಗಳ ಮೂಲಕವೇ ಗಟ್ಟಿಗೊಳಿಸುವ ಕಾರಣಕ್ಕಾಗಿ ವಿವಾಹಕ್ಕೆ ಸಾಕಷ್ಟು ಪ್ರಾಮುಖ್ಯತೆ ದೊರೆಯುತ್ತದೆ. ಆದರೆ ಈ ವಿವಾಹಗಳು ಕಾನೂನು ನಿಗಧಿಪಡಿಸಿದ ವಯಸ್ಸನ್ನು ಅನುಸರಿಸಿ ನಡೆಯುತ್ತವೆಯೇ ಎಂಬುದು ಇಲ್ಲಿನ ಮುಖ್ಯ ಪ್ರಶ್ನೆ. ಏಕೆಂದರೆ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನ ವಿವಾಹಗಳು ಕಾನೂನು ನಿಗಧಿಪಡಿಸಿದ ವಿವಾಹ ವಯಸ್ಸಿಗಿಂತ ತುಂಬಾ ಕಡಿಮೆ ವಯಸ್ಸಿನಲ್ಲಿ ನೆರವೇರುತ್ತಿರುವುದು ಕಂಡುಬರುತ್ತದೆ. ಮಕ್ಕಳು ಚಿಕ್ಕ ವಯಸ್ಸಿನಲ್ಲಿ ಇರುವಾಗಲೇ ಅವರನ್ನು ವಿವಾಹ ಬಂಧನಕ್ಕೆ ತಳ್ಳುತ್ತಿದ್ದಾರೆ. ರಕ್ತ ಸಂಬಂಧಗಳನ್ನು ಉಳಿಸಿಕೊಳ್ಳುವುದು ಇದಕ್ಕೆ ಒಂದು ಕಾರಣವಾಗಿದೆ. ಈ ಬಗೆಯ ಕಾರಣವನ್ನು ನೀಡಿ ಚಿಕ್ಕ ವಯಸ್ಸಿಗೇ ವಿವಾಹ ಮಾಡಿದಂತಹ ಹಲವು ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಅವುಗಳನ್ನು ಕೆಳಗಿನಂತೆ ವಕ್ತೃಗಳ ಹೇಳಿಕೆಗಳ ಮೂಲಕವೇ ವಿವರಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಗಾಳೆಮ್ಮನಗುಡಿ ಗ್ರಾಮದಲ್ಲಿನ ಹನುಮಂತಪ್ಪ ಮತ್ತು ಹನುಮಂತಮ್ಮ ಎಂಬ ದಂಪತಿಗಳಿಗೆ ನಾಲ್ಕು ಜನ ಮಕ್ಕಳು. ಅವರಲ್ಲಿ ಎರಡು ಹೆಣ್ಣು ಮತ್ತು ಎರಡು ಗಂಡು. ಹಿರಿಯವಳು ಮಧು, ಎರಡನೆಯವಳು ರಾಧ, ಮೂರನೆಯ ಮಗ ನಾಗರಾಜ ಮತ್ತು ಕೊನೆಯ ಮಗ ವೀರೇಶ. ಹನುಮಂತಮ್ಮನವರು ತಮ್ಮ ತವರು ಮನೆಯ ಸಂಬಂಧವನ್ನು ಉಳಿಸಿಕೊಳ್ಳುವ ಸಲುವಾಗಿ ತನ್ನ ಒಡಹುಟ್ಟಿದ ತಮ್ಮನಾದ ದುರುಗಪ್ಪನಿಗೆ ಹಿರಿಯ ಮಗಳಾದ ಮಧುಳನ್ನು ಕೊಟ್ಟು ವಿವಾಹ ಮಾಡಿದ್ದಾರೆ. ಇವರಿಬ್ಬರ ವಿವಾಹದ ಸಂದರ್ಭದಲ್ಲಿ ಮಧು ಎಂಟನೇ ತರಗತಿ ಓದುತ್ತಿದ್ದಳು. ಹಾಗಾಗಿ ಅವರ ವಯಸ್ಸು ೧೪ ವರ್ಷಗಳು. ಆದರೆ ಇದು ತಪ್ಪೆಂದು ಅವರಿಗೆ ಗೊತ್ತಿಲ್ಲ. ಅವರಿಗೆ ಇರುವುದು ಒಂದೇ ತವರು ಮನೆಯ ಸಂಬಂಧವನ್ನು ಕಾಪಾಡಿಕೊಳ್ಳುವುದು ಮತ್ತು ವಿಸ್ತರಿಸುವುದು. ಹನುಮಂತಮ್ಮನವರು ಹೇಳುವಂತೆ "ನನಿಗೆ ಇರೋದು ನಾಕು ಜನ ಮಕ್ಳು. ಅದರಾಗ ಮೊದಲ್ನೇ ಮಗಳ್ನ ಸದ್ಯ ನನ್ನ ತಮ್ಮನಿಗೇ ಕೊಟ್ಟು ಮದುವಿ ಮಾಡೀವಿ. ಮದುವಿ ಆಗ ಟೈಮಿನಾಗ ಮಧು ಎಂಟ್ನೇ ಕ್ಲಾಸು ಓದ್ತಿದ್ಲು. ಎಂಟನೇ ಕ್ಲಾಸು ಅಂದ್ರೆ ಮರಿಯಮ್ಮನಹಳ್ಳಿಗೆ ಹೋಗಿ ಬರಬೇಕಿತ್ತು. ಇದು ಬಾಳ ದೂರದ ಸಾಲಿ. ಹಂಗಾಗಿ ಅವ್ರಪ್ಪ ಸಾಲಿ ಬಿಡ್ಸಿ ಮದುವಿ ಮಾಡಿ ಬಿಡಾನು ಅಂತ ಸಂಬಂಧ ನೋಡ್ತಿದ್ರು. ನಾನು ನನ್ ಮಗಳ್ನ ನಮ್ ತಮ್ಮನಿಗೇ ಕೊಟ್ಟು ಮದುವಿ ಮಾಡ್ಬೇಕು ಅಂತ ಹಠ ಹಿಡ್ಕಂಡು ಕುಂತೆ. ಆದ್ರೆ ನನ ಗಂಡ ಅದನ್ನ ಒಪ್ಪಾಕ ತಯಾರಿರ್ಲಿಲ್ಲ. ತನ್ನ ಸಂಬಂಧಿಕ್ರದಾಗೇ ಕೊಡಬೇಕಂತ ಯೋಚ್ನಿ ಮಾಡ್ತಿದ್ರು. ನನ್ ತಮ್ಮಗ

ಡ್ರೈವರ್ ಕೆಲ್ಸ ಗೊತ್ತಿತ್ತು. ನಮಿಗಿ ಎರಡು ಲಾರಿ ಐದಾವ. ನನ್ ತಮ್ಮಗ ಮದುವಿ ಮಾಡಿದ್ರೆ ನಮ್ ತವ್ರ ಮನಿ ಸಂಬಂಧಾನೂ ಉಳಿತೈತಿ ಮತ್ತೆ ಇಲ್ಲಿಗೇ ಅವ್ರನ್ನ ಕರ್ಕಂಡು ಬರ್ರೋದು. ಸಣ್ಣ ಮಗಳ್ನ ಬೇಕಾದ್ರೆ ನಿಮ್ ಸಂಬಂದಿಕ್ರದಾಗೇ ಕೊಟ್ ಮದುವಿ ಮಾಡಾನು ಅಂತ ತಿಳ್ಸಿ ಹೇಳಿದೆ. ಹಂಗಾಗಿ ಅದನ್ನ ಒಪ್ಕೆಂಡ್ರು. ಹಂಗಾಗಿ ನನ್ ಮಗಳ್ನ ಸ್ವಂತ ತಮ್ಮನಿಗೇ ಕೊಟ್ ಮದುವಿ ಮಾಡಿದ್ವಿ. ಈಗ ಮಗಳು, ತಮ್ಮ ಇಬ್ರು ಇಲ್ಲೇ ಐದಾರ. ಹಿಂಗ ನನ್ ತವ್ರಮನಿ ಸಂಬಂಧಾನ ಉಳ್ಸಿಕೆಂಡೆ" ಎಂದರು.

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ತುಮರಿಗುದ್ದಿ ಗ್ರಾಮದಲ್ಲಿನ ಶಾಂತಪ್ಪ ಮತ್ತು ನಿಂಗಮ್ಮ ದಂಪತಿಗಳು ತಮಗೆ ಇದ್ದ ಒಬ್ಬಳೇ ಮಗಳಿಗೆ ಚಿಕ್ಕ ವಯಸ್ಸಿನಲ್ಲೇ ವಿವಾಹ ಮಾಡಿರುವುದು ತಿಳಿದು ಬಂದಿತು. ಈ ಕುರಿತು ಶಾಂತಪ್ಪ ಹೇಳುವಂತೆ "ನಮಿಗೆ ಇರೋದು ಒಬ್ಳೇ ಮಗಳು. ಅಕಿ ಮದುವಿ ಮಾಡ ಸಲವಂದ ನಾನು ನನ್ ಹೆಂಡ್ತಿ ಇಬ್ಬರೂ ದಿನಾಲೂ ಜಗಳ ಆಡ್ತಿದ್ವಿ. ಯಾಕಂದ್ರ ಇರೋ ಒಬ್ಬ ಮಗಳ್ನ ನನ್ ಕಡೆಗಿನ ಸಂಬಂಧಿಕ್ರಿಗೆ ಕೊಟ್ಟು ಮದುವಿ ಮಾಡಾನು ಅಂತ ನಾನು. ಆದ್ರೆ ನನ ಹೆಂಡ್ತಿ ಅದಕ್ಕ ಒಪ್ಪಂಗಿಲ್ಲ. ನಮ್ ಕಡಿಗಿನ ಸಂಬಂಧ ನೋಡಾನು ಅಂತ ಅಕಿದು. ಆದ್ರೆ ಮದುವಿ ಆದ್ ಮ್ಯಾಲ ಅಳಿಯ ಇಲ್ಲೇ ಬಂದು ಇರ್ಬೇಕು. ಯಾಕಂದ್ರ ಮಗಳು ಮತ್ತೆ ಅಳಿಯ ಇಬ್ರೂ ಇಲ್ಲೇ ನಮ್ ಕಣ್ಣೆದ್ರುಗೇ ಇದ್ರೆ ನಮ್ಮನ್ನ ನೋಡ್ಕೆಂಡಂಗ ಆಗತೈತಿ. ಮತ್ತೆ ರಕ್ತ ಸಂಬಂಧಗೋಳು ಉಳಿತಾವ. ಯಾರ ಕಡೇಲಿಂದಾದ್ರೇನು. ಒಟ್ನಾಗ ಸಂಬಂಧಗೋಳು ಉಳಿಬೇಕು ಅಷ್ಟೆ. ಅದಕ್ಕ ನಿಮ್ ಸಂಬಂಧಿಕ್ರದಾಗ ಯಾರಾದ್ರು ಇದ್ರೆ ಮದುವಿ ಮಾಡಾನು ಅಂತ ಹೇಳಿದೆ. ಅದಕ್ಕ ನನ ಹೆಂಡ್ತಿ ಒಪ್ಪಿದ್ಲು. ಆದ್ರೆ ಮದುವಿ ಆದ್ ಮ್ಯಾಲೆ ನಮ್ ಮನಿಗೇ ಬಂದು ಇರೋರು ಸಿಗ್ಲಿಲ್ಲ. ಹಂಗಾಗಿ ನಮ್ ಮನೆತನದಾಗೇ ಇರೋ ಒಬ್ಬ ಹುಡಗನ್ನ ನೋಡಿ ಮದುವಿ ಮಾಡಿದ್ವಿ. ಅವನು ಸತೆ ಬಾಳ ಹತ್ರದ ಸಂಬಂಧಿ. ಅಂದ್ರ ನಮ್ ತಂಗಿ ಮಗನಿಗೇ ಕೊಟ್ಟು ಮದುವಿ ಮಾಡಿದ್ವಿ. ಈಗ ಅಳಿಯ ಮತ್ತೆ ಮಗಳು ಇಬ್ರೂ ಇಲ್ಲೇ ನಮ್ ಕಣ್ಣೆದ್ರುಗೇ ಐದಾರ ಎಂದರು. ಮುಂದುವರೆಸುತ್ತಾ ಒಬ್ಬ ಮಗಳಿದ್ರೆ ಮದುವಿ ಮಾಡೋದು ದೊಡ್ಡ ಕಷ್ಟ ನೋಡ್ರಿ. ಹಿಂಗಿದ್ದಾಗ ನಮ್ ರಕ್ತ ಸಂಬಂಧದಾಗೇ ಕೊಟ್ ಮದುವಿ ಮಾಡಿದ್ರೆ ನಾಳಿದಿನ ಏನಾದ್ರೂ ಕಷ್ಟ ಆದ್ರ ಅದನ್ನ ಬಗಿ ಹರ್ಸಾಕ ನಾವೇ ಇರ್ತೀವಿ. ಹಂಗಾಗಿ ನಾವು ಸದ್ಯ ನಮ್ ತಂಗಿ ಮಗನಿಗೇ ಕೊಟ್ ಮದುವಿ ಮಾಡಿದ್ವಿ. ನಮ್ ತಂಗಿ ಸತೆ ಇದಕ್ಕ ಒಪ್ಪಿದ್ಲು. ಒಂದು ವಾರ ಇಲ್ಲಿದ್ರೆ ಒಂದೆರಡು ದಿನ ಅಲ್ಲಿ ಇರ್ತಾರ ಏನೂ ತೊಂದ್ರಿ ಇಲ್ಲ" ಎಂದರು.

ಇನ್ನೊಂದು ಪ್ರಕರಣದಲ್ಲಿ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಗೋಜನೂರು ಗ್ರಾಮದ ಪಕ್ಕೀರಪ್ಪ ಮತ್ತು ಲಕ್ಷ್ಮಮ್ಮ ದಂಪತಿಗಳು ತಮ್ಮ ಇಬ್ಬರು ಹೆಣ್ಣು ಮಕ್ಕಳಿಗೆ ಬಾಲ್ಯದಲ್ಲಿಯೇ ವಿವಾಹವನ್ನು ಮಾಡಿದ್ದಾರೆ. ಪಕ್ಕೀರಪ್ಪನವರು ಹೇಳುವಂತೆ "ನಮಿಗೆ ಇರೋದು ಇಬ್ರು ಹೆಣ್ಮಕ್ಳು. ಮೊದಲ್ನೆ ಮಗಳ್ನ ಶೆಟ್ಟಿಕೆರಿಗೆ ಕೊಟ್ಟೇವಿ. ಅದೂ ದೂರದ್ ಸಂಬಂಧ. ನಮ್

ಸಂಬಂಧಿಕ್ರದಾಗ ಕೊಟ್ರ ಚೊಲೋ ಇರಾಂಗಿಲ್ಲ ಅಂತ ಹೊಸ ಸಂಬಂಧ ಬೆಳಸಾನು ಅಂತ ತಿಳ್ದು ಮಾಡಿದ್ವಿ. ಆದ್ರ ಈಗ ನಮಿಗೆ ಅನ್ಸಾಕತ್ತೇತಿ. ಹಂಗ ಕೊಟ್ ಬಾಳ ತಪ್ಪು ಮಾಡಿದ್ವಿ ಅಂತ. ಯಾಕಂದ್ರ ಚಂದ್ರಮ್ಮ ದೊಡ್ ಮಗ್ಳು. ಅಕಿಗೆ ಮದುವಿ ಮಾಡಿ ಕೊಟ್ ಮ್ಯಾಲ ಬರೇ ಕಷ್ಟಗೋಳೇ ಎದುರಿಸ್ಯಾಳ. ಅತ್ತಿ ಮಾವನೋರ ಕಾಟ, ಗಂಡ ಕುಡ್ದ ಬಂದು ಒಡಿಯಾದು ಹಿಂಗ ಬಾಳ ಕಷ್ಟ. ಚಂದ್ರಮ್ಮ ನಮ್ಮಾಗ ಬಂದು ಎಲ್ಲಾ ಹೇಳ್ಕೆಂತಾಳ. ಆದ್ರ ನಾವು ಅದಕ್ಕ ಅಳಿಯ್ಗ ಬಾಳಸಲ ಹೇಳಿದ್ವಿ. ಆದ್ರೆ ಅವ್ನು ಕೇಳಂಗಿಲ್ಲ. ಅವಂದು ಮತ್ತೆ ಅದೇ ಆಟ. ನಾವು ಸತೆ ಗಟ್ಟಿಮಾಡಿ ಹೇಳಾಕಾಗಂಗಿಲ್ಲ. ಅದಕ್ಕ ಸುಮ್ನಾಗಿಬಿಟ್ವಿ. ಆದ್ರೆ ಎರಡ್ನೆ ಮಗ್ಳು ಈರಮ್ಮನ ವಿಚಾರದಾಗ ಅಂತ ತಪ್ಪು ಮಾಡ್ಬಾರ್ದು ಅಂತ ಸದ್ಯ ನಮ್ ತಂಗಿ ಮಗಗೇ ಕೊಟ್ ಮದುವಿ ಮಾಡಿದ್ವಿ. ನಮ್ ತಂಗಿ ನೋಡಿದ್ರೆ ಕಾಡ್ಸಾಕತ್ತಿದ್ಲು. ನಿನ್ ಎರಡ್ನೇ ಮಗಳ್ನ ನನ್ ಮಗ್ನಿಗೇ ಕೊಟ್ ಮದುವಿ ಮಾಡ್ಬೇಕು. ಇಲ್ಲಾಂದ್ರ ನಮ್ ಸಂಬಂಧ ಇಲ್ದಂಗಾಗತೈತಿ ನೋಡು ಅಂತ ಎಚ್ಚರಸ್ತಿದ್ಲು. ನಾನು ಸತೆ ಯೋಚ್ನೆ ಮಾಡಿ ನಮ್ ತಂಗಿ ಮಗನಿಗೇ ಕೊಟ್ರ ಮಗಳು ಚೆನ್ನಾಗೇ ಇರ್ತಾಳ. ಮತ್ತೆ ಏನಾರಾ ತೊಂದ್ರಿ ಆದ್ರ ಜೋರು ಮಾಡಾಕು ಆಗತೈತಿ, ಹಂಗೆ ನಮ್ ಸಂಬಂಧಾನೂ ಗಟ್ಟಿಯಾಗಿರತೈತಿ ಅಂತ ತಿಳ್ಕಂಡು ಸ್ವಂತ ಅಳಿಯ್ಗೆ ಕೊಟ್ ಮದುವಿ ಮಾಡಿದೆ ಎಂದರು.

ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ತೋರಣಗಲ್ಲು ಗ್ರಾಮದಲ್ಲಿನ ಷಣ್ಮುಕಪ್ಪ ಎನ್ನುವವರು ತಮ್ಮ ಮಗಳನ್ನು ಸ್ವಂತ ಅಕ್ಕನ ಮಗನಿಗೆ ವಿವಾಹವನ್ನು ಮಾಡಿಕೊಟ್ಟಿದ್ದಾರೆ. ಆದರೆ ಇವರ ವಿವಾಹ ಮಾತ್ರ ಕಾನೂನು ಬದ್ಧವಾದುದಲ್ಲ. ಏಕೆಂದರೆ ತಮ್ಮ ಮಗಳಿಗೆ ೧೮ ವರ್ಷ ತುಂಬುವ ಮೊದಲೇ ವಿವಾಹ ಮಾಡಿದ್ದಾರೆ. ಇವರು ಹೇಳುವಂತೆ "ನನಿಗೆ ನಾಕು ಜನ ಹೆಣ್ಮಕ್ಳು ಒಂದೇ ಗಂಡು. ಒಟ್ಟು ಐದು ಜನ. ಎಲ್ಲರ್ಗೂ ಮದುವಿ ಮಾಡಿ ಕೊಟ್ಟೀನಿ. ಎಲ್ಲಾ ಹೆಣ್ಮಕ್ಕಳ್ನ ನಮ್ಮ ರಕ್ತ ಸಂಬಂಧಿಕರಿಗೇ ಕೊಟ್ಟೀವಿ. ನನ್ ಹೆಂಡ್ತಿ ಕಡಿಗೆ ಇಬ್ರನ್ನ ಮತ್ತೆ ನನ್ ಸಂಬಂಧದಾಗ ಇಬ್ರನ್ನ ಕೊಟ್ಟೀವಿ. ನನ ಮಗಗ ಹೊಸ ಸಂಬಂಧಾನ ತಗದೀವಿ. ಈಗ ಎಲ್ಲರೂ ಬಾಳ ಆರಾಮಾಗಿ ಐದಾರ. ಯಾಕಂದ್ರ ಏನಾರ ತೊಂದ್ರಿ ಆದ್ರ ಅಲ್ಲೆ ನಮ್ ಅಕ್ಕನೋರು ಮತ್ತೆ ತಂಗೇರು ಐದಾರಲ್ಲಾ ಅವ್ರೇ ಎಲ್ಲಾನೂ ನೋಡಿಕೆಳ್ತಾರ. ಅವ್ರಿಗೆ ಸತೆ ತಮ್ಮನ ಮಕ್ಕಳು, ಅಣ್ಣನ ಮಕ್ಕಳು ಅನ್ನೋ ಕನಿಕರ ಇರ್ತೈತಿ. ಬ್ಯಾರೇರ ಮನಿಗೆ ಕೊಟ್ರೆ ಆಯ್ತು ಸಣ್ಣ ಸಣ್ಣ ಮಾತಿಗೂ ಜಗಳ ಆಡಬೇಕಾಗತೈತಿ. ಮತ್ತೆ ಅವ್ರಿಗೆ ನಾವುಜೋರ್ ಮಾಡಿ ಹೇಳಂಗಿಲ್ಲ. ಮತ್ತೆ ನಮ್ ಹುಡುಗಿ ಅದೇ ಮನಿಗೆ ಹೋಗ್ತಾಳಲ್ಲಾ ಹಂಗಾಗಿ ಸುಮ್ನೆ ಇರ್ಬೇಕಾಗತೈತಿ. ಆದ್ರೆ ಇಲ್ಲಿ ಹಂಗಿಲ್ಲ. ಮದುವಿ ಮಾಡಿ ಕೊಟ್ ಬಿಟ್ರೆ ಮುಗೀತು ನಮ್ ಜವಾಬ್ದಾರಿ ಕಳ್ಕಂಡಂಗ, ಮತ್ತೆ ಅಲ್ಲಿ ನಮ್ ಅಕ್ಕೋರು ಸತೆ ಬಾಳ ಚನ್ನಾಗಿ ನೋಡ್ಕಂತಾರ. ಅವ್ರುಗೂ ಸತೆ ಸಂಬಂಧನಾ ಬೆಳ್ಸಿಕೆಂಡು ಹೋಗೋದು ಬೇಕಾಗಿರ್ತೈತಿ. ಎಲ್ಲಾ ಹೆಣ್ಮಕ್ಕಳ್ನ ರಕ್ತ ಸಂಬಂಧಗಳದಾಗೇ ಮದುವಿ ಮಾಡಿವಿ ಹಂಗಾಗಿ ಮದುವಿ ಖರ್ಚು ಸತೆ ಬಾಳ ಕಡಿಮಿ ಆತು. ನಮ್ ಸಂಬಂಧಿಕರದಾಗೇ ಮದುವಿ

ಮಾಡಿ ಕೊಟ್ಟು ನಾವಂತೂ ಬಾಳ ಆರಾಮಾಗಿ ಐದೀವಿ. ಅಯೋ ನಮ್ ಅಕ್ಕ ನೋಡ್ಬೇಕು ಬಾಳ ಜಬರ್ದಸ್ತ್ ಮಾಡಿ ತನ್ ಮಗ್ನಿಗೆ ನನ್ ಮಗಳ್ನ ಮದುವಿ ಮಾಡಿಕೆಂಡ್ಲು. ನನ್ ಮಕ್ಕಳಿಗಿ ಕೊಡ್ಲಾರ್ದ ಇನ್ಯಾರಿಗೆ ಕೊಡ್ತೀ ನಿನ್ ಮಗಳ್ನ ಅಂತ ಜೋರು ಮಾಡಿದ್ಲು. ನನ್ ಸಂಬಂಧ ಉಳಿಸ್ಕ್ಯಾಬೇಕಂದ್ರ ನನ್ ಮಗಗ ನಿನ್ ಮಗಳ್ನ ಕೊಡು ಇಲ್ಲಾಂದ್ರ ಇದೇ ಲಾಸ್ಟ್ ಅಂತ ಹೆದಿರ್ಸಿದ್ಲು. ಹಂಗಾಗಿ ಲಾಸ್ಟ್ ಮಗಳ್ನ ಮದುವಿ ಮಾಡಿ ಕೊಟ್ವಿ. ಈಗ ಎಲ್ಲರೂ ಆರಾಮಾಗಿ ಐದಾರ ಎಂದರು.

ಮೇಲಿನ ಎಲ್ಲಾ ಪ್ರಕರಣಗಳನ್ನು ಗಮನಿಸಿದರೆ ಹೆಣ್ಣು ಮಕ್ಕಳನ್ನು ತಮ್ಮ ರಕ್ತ ಸಂಬಂಧಗಳಲ್ಲಿಯೇ ಕೊಡುವುದರ ಮೂಲಕ ತಮ್ಮ ನಡುವಿನ ಸಂಬಂಧಗಳನ್ನು ಗಟ್ಟಿಗೊಳಿಸುವ ಮತ್ತು ಮುಂದುವರೆಸುವ ಪ್ರಕ್ರಿಯೆ ನಡೆದಿರುವುದು ತಿಳಿದುಬರುತ್ತದೆ. ರಕ್ತ ಸಂಬಂಧಗಳಲ್ಲಿ ವಿವಾಹ ಮಾಡುವುದರಿಂದ ತಮ್ಮ ಮಕ್ಕಳು ಸುರಕ್ಷಿತವಾಗಿರುತ್ತಾರೆ ಎಂಬುದು ಅವರ ನಂಬಿಕೆ. ಆದರೆ ಮೇಲಿನ ಎಲ್ಲ ಪ್ರಕರಣಗಳು ಬಾಲ್ಯ ವಿವಾಹಗಳಿಗೆ ಒಳಪಟ್ಟವುಗಳಾಗಿವೆ. ಇವರಿಗೆ ಕಾನೂನು ಏನು ಹೇಳುತ್ತದೆ ಎಂಬುದು ಅಗತ್ಯವಿಲ್ಲ. ಇದು ಅವರಿಗೆ ಪ್ರಮುಖ ಪ್ರಶ್ನೆಯೇ ಅಲ್ಲ. ಹಾಗಾಗಿ ತಮ್ಮ ಮಕ್ಕಳು ಚಿಕ್ಕವರಿದ್ದಾರೆ ಎಂಬ ಆಲೋಚನೆಯೂ ಇಲ್ಲದೇ ತಮ್ಮ ಸಂಬಂಧಗಳನ್ನು ಉಳಿಸಿಕೊಳ್ಳಲು ವಿವಾಹಕ್ಕೆ ಒಳಪಡಿಸಿರುವುದು ಕಂಡುಬರುತ್ತದೆ. ವ್ಯವಸ್ಥೆಯಲ್ಲಿ ಜನರು ತಮ್ಮ ರಕ್ತ ಸಂಬಂಧಗಳನ್ನು ಉಳಿಸಿಕೊಳ್ಳುವುದಕ್ಕೆ ಬಹಳ ಪ್ರಾಶಸ್ತ್ಯವನ್ನು ಕೊಡುತ್ತಾರೆ. ಇದಕ್ಕೆ ಹಲವಾರು ಕಾರಣಗಳಿವೆ. ಅಂದರೆ ತಮ್ಮ ಆಸ್ತಿಯನ್ನು ತಮ್ಮಲ್ಲಿಯೇ ಉಳಿಸಿಕೊಳ್ಳುವುದರ ಕಾರಣವಾಗಿ ರಕ್ತ ಸಂಬಂಧಗಳಲ್ಲಿ ವಿವಾಹ ಮಾಡುವುದನ್ನು ಬಯಸುತ್ತಾರೆ. ಇದಕ್ಕೆ ಶಾಂತಪ್ಪ ಮತ್ತು ನಿಂಗಮ್ಮ ದಂಪತಿಗಳ ಪ್ರಕರಣ ಉತ್ತಮ ಉದಾಹರಣೆಯಾಗಿದೆ. ಇವರು ತಮ್ಮ ಮಗಳು ಚಿಕ್ಕವಳಿದ್ದಾಳೆ ಎಂಬ ಅರಿವಿಲ್ಲದೇ ಆಸ್ತಿ ಬೇರೆಯವರ ಪಾಲಾಗಬಾರದು ಎಂಬ ಕಾರಣಕ್ಕೆ ತಮ್ಮ ಸ್ವಂತ ತಂಗಿ ಮಗನಿಗೇ ಕೊಟ್ಟು ವಿವಾಹ ಮಾಡಿದ್ದಾರೆ. ಇದರಿಂದ ಅವರು ಆಸ್ತಿಯನ್ನು ಉಳಿಸಿಕೊಂಡಿದ್ದಾರೆ ಮತ್ತು ತಮ್ಮ ರಕ್ತ ಸಂಬಂಧವನ್ನು ಗಟ್ಟಿಗೊಳಿಸಿಕೊಂಡಿದ್ದಾರೆ ನಿಜ. ಆದರೆ ತಮ್ಮ ಮಗಳ ಹಕ್ಕುಗಳನ್ನು ಕಿತ್ತುಕೊಂಡಿದ್ದಾರೆ ಎಂಬ ಅರಿವು ಅವರಿಗಿಲ್ಲ. ಹಾಗೆಯೇ ದೊಡ್ಡ ಮಗಳನ್ನು ಹೊಸ ಸಂಬಂಧ ನೋಡಿ ಮದುವೆ ಮಾಡಿದ್ದ ಕಾರಣಕ್ಕೆ ಅವಳು ಅನುಭವಿಸಿದ ನೋವನ್ನು ಗಮನದಲ್ಲಿರಿಸಿಕೊಂಡು ಇನ್ನೊಬ್ಬ ಮಗಳಿಗೆ ಈ ಪರಿಸ್ಥಿತಿ ಬರದಂತೆ ನೋಡಿಕೊಂಡು ತಮ್ಮ ರಕ್ತ ಸಂಬಂಧದಲ್ಲಿಯೇ ವಿವಾಹ ಮಾಡಿರುವ ಪ್ರಕರಣ ಪಕ್ಕೀರಪ್ಪ ಮತ್ತು ಲಕ್ಷ್ಮಮ್ಮ ದಂಪತಿಗಳದ್ದು. ಇವರು ಮಾಡಿರುವ ವಿವಾಹ ಮಾತ್ರ ಬಾಲ್ಯ ವಿವಾಹದ ವ್ಯಾಪ್ತಿಗೆ ಒಳಪಡುತ್ತದೆ. ಮುಖ್ಯವಾಗಿ ಅಕ್ಕನ ಮಕ್ಕಳಿಗೋ ತಂಗಿಯ ಮಕ್ಕಳಿಗೋ, ಅಣ್ಣ/ತಮ್ಮನ ಮಕ್ಕಳಿಗೋ ಇವರ ಜೊತೆಯಲ್ಲಿ ವಿವಾಹ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವುದರಿಂದ ತಮ್ಮ ಮಕ್ಕಳಿಗೆ ಯಾವುದೇ ಅಪಾಯ ಇಲ್ಲವೆಂಬ ಭಾವನೆ ಇದೆ. ಮುಖ್ಯವಾಗಿ ಹೆಣ್ಣು ಮಗು ತನ್ನ

ಗಂಡನ ಮನೆಯಲ್ಲಿ ಯಾವುದೇ ತೊಂದರೆಯನ್ನು ಅನುಭವಿಸದಂತೆ ನೋಡಿಕೊಳ್ಳುತ್ತಾರೆ ಎಂಬ ನಂಬಿಕೆ. ಹಾಗಾಗಿ ರಕ್ತ ಸಂಬಂಧಗಳಲ್ಲಿ ಹೆಚ್ಚಿನ ವಿವಾಹಗಳನ್ನು ಮಾಡುತ್ತಾರೆ. ಆದರೆ ವಿವಾಹಕ್ಕೆ ಒಳಗಾಗುವ ಹುಡುಗಿ ಮತ್ತು ಹುಡುಗನ ವಯಸ್ಸು ಮಾತ್ರ ಕಾನೂನು ಬದ್ಧವಾಗಿರುವುದಿಲ್ಲ. ರಕ್ತ ಸಂಬಂಧಗಳನ್ನು ಉಳಿಸಿಕೊಳ್ಳುವ ಭರಾಟೆಯಲ್ಲಿ ತಮ್ಮ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡುತ್ತಿದ್ದಾರೆ. ಕಾನೂನು ರೂಪಿಸಿದ ವಿವಾಹ ವಯಸ್ಸನ್ನು ಪರಿಗಣಿಸದೇ ಇರುವುದು ಬಾಲ್ಯವಿವಾಹಗಳ ಸಂಖ್ಯೆ ಅಧಿಕವಾಗಲು ಕಾರಣವಾಗಿದೆ.

**ಆ) ಹೆಣ್ಣು ಕುಟುಂಬದಲ್ಲಿ ಇದ್ದಷ್ಟು ಹೊರೆ ಎಂಬ ಭಾವನೆ** : ಮನೆಯಲ್ಲಿ ಹುಡುಗಿಯು ಇದ್ದಷ್ಟು ದಿನ ಉಡಿಯಲ್ಲಿ ಬೆಂಕಿ ಉಂಡೆ ಇಟ್ಕಂಡಂಗೆ ಎನ್ನುವ ಮಾತು ಜನಪದರಲ್ಲಿ ಇದೆ. ಪ್ರತಿಯೊಂದು ಕುಟುಂಬದಲ್ಲಿನ ಸದಸ್ಯರು ಈ ಆಲೋಚನೆಯನ್ನು ಹೊಂದಿರುತ್ತಾರೆ. ಹಾಗಾಗಿ ಮಹಿಳೆ ಹುಟ್ಟಿದಾಗಿನಿಂದ ಹಿಡಿದು ಸಾಯುವವರೆಗೆ ತನ್ನವರಿಂದ ಅನ್ಯಳಾಗಿಯೇ ಜೀವಿಸಬೇಕಾದ ಅನಿವಾರ್ಯತೆ ಇದೆ. ಮುಖ್ಯವಾಗಿ ಕುಟುಂಬದಲ್ಲಿ ಹುಡುಗಿ ಋತುಮತಿಯಾಗುವುದನ್ನೇ ಕಾಯುತ್ತಿರುತ್ತಾರೆ. ಋತುಮತಿಯಾದ ಒಂದೆರಡು ತಿಂಗಳಿಗೋ ಅಥವಾ ಮೂರ್‍ನಾಲ್ಕು ತಿಂಗಳಿಗೋ ಆಕೆಗೆ ವಿವಾಹವನ್ನು ನಿಶ್ಚಯ ಮಾಡುತ್ತಾರೆ. ಋತುಮತಿಯಾದಾಗ ಒಂದು ಶಾಸ್ತ್ರವನ್ನು ಮಾಡಲಾಗುತ್ತದೆ. ಇದನ್ನು ಋತುಮತಿಶಾಸ್ತ್ರ ಎನ್ನುತ್ತಾರೆ. ಇದನ್ನು ಎಲ್ಲಾ ಸಮುದಾಯಗಳಲ್ಲಿಯೂ ಆಚರಿಸುತ್ತಾರೆ. ಇದು ಹಿಂದಿನಿಂದಲೂ ಬಂದಿರುವ ಸಂಪ್ರದಾಯವಾಗಿದ್ದು, ಈ ಆಚರಣೆಯ ಸಂದರ್ಭದಲ್ಲಿ ತಮ್ಮ ಎಲ್ಲಾ ಸಂಬಂಧಿಕರನ್ನೆಲ್ಲಾ ಕರೆಸಿ ಒಂದು ಹಬ್ಬದಂತೆ ಆಚರಿಸುತ್ತಾರೆ. ಇದನ್ನು ಮಾಡುವ ಉದ್ದೇಶವೆಂದರೆ ತಮ್ಮ ಮಗಳು ಮದುವೆಯ ವಯಸ್ಸಿಗೆ ಕಾಲಿಟ್ಟಿದ್ದಾಳೆ ಅಥವಾ ಮದುವೆಗೆ ಸಿದ್ಧಳಾಗಿದ್ದಾಳೆ ಎಂಬುದನ್ನು ಸೂಚ್ಯವಾಗಿ ತಿಳಿಸುವುದಾಗಿದೆ. ಈ ಶಾಸ್ತ್ರ ಕಾರ್ಯಕ್ಕೆ ಬಂದ ಎಲ್ಲಾ ಜನರು ಇದನ್ನು ಗ್ರಹಿಸಿ ಆ ಹುಡುಗಿಗೆ ವಿವಾಹ ಮಾಡಲು ಗಂಡು ಹುಡುಗನನ್ನು ನೋಡಲು ಶುರು ಮಾಡುತ್ತಾರೆ. ಇದು ನಿರಂತರವಾಗಿ ನಡೆಯುತ್ತದೆ. ಈ ಪ್ರಕ್ರಿಯೆ ಮುಖ್ಯವಾಗಿ ಹೆಣ್ಣು ತಮಗೆ ಹೊರೆಯಾಗಿದ್ದಾಳೆ ಎಂಬುದನ್ನು ಹಾಗೆಯೇ ಅವಳಿಗೆ ಬೇಗ ಮದುವೆ ಮಾಡುವುದರ ಮೂಲಕ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳುವುದನ್ನು ಸೂಚಿಸುತ್ತದೆ. ಕುಟುಂಬದಲ್ಲಿ ಹೆಣ್ಣು ಯಾವಾಗಲೂ ಹೊರೆಯಾಗಿಯೇ ಗೋಚರಿಸುತ್ತಾಳೆ. ಇದು ಬಾಲ್ಯ ವಿವಾಹಕ್ಕೆ ಕಾರಣವಾಗುತ್ತದೆ. ಅಂದರೆ ಹುಡುಗಿಯು ಮನೆಯಲ್ಲಿದ್ದಷ್ಟು ದಿನ ಹೊರೆಯಾಗುತ್ತಾಳಾದ್ದರಿಂದ ಅವಳಿಗೆ ಬೇಗನೇ ವಿವಾಹ ಮಾಡಲಾಗುತ್ತದೆ. ಅದೂ ಋತುಮತಿಯಾದ ಕೆಲವು ತಿಂಗಳುಗಳಲ್ಲಿಯೇ ಈ ವಿವಾಹಗಳಿಗೆ ಒಳಗು ಮಾಡುತ್ತಾರೆ. ಈ ಬಗೆಯ ಹಲವು ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಾಣಿಸಿಕೊಂಡಿವೆ. ಇಲ್ಲಿ ಕೆಲವು ಪ್ರಕರಣಗಳನ್ನು ಮಾತ್ರ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅವುಗಳು ಈ ಕೆಳಗಿನಂತಿವೆ.

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಗೌರೀಪುರ ಗ್ರಾಮದ ಮಾರುತೆಪ್ಪನವರು ಹೇಳುವಂತೆ "ಮನಿಯಾಗ ಕೈಗೆ ಬಂದ ಹೆಣ್ಮಕ್ಕಳನ್ನ ಬಾಳ ದಿನ ಇಟ್ಕಬಾರ್ದು, ಯಾಕಂದ್ರ ಅವ್ರು ಇರೋವರ್ಗೂ ನಮಿಗೆ ಟೆಕ್ಷನ್ ತಪ್ಪಿದ್ದಲ್ಲ. ಯಾವಾಗ ಕೈಗೆ ಬರ್ತಾರೋ ಅಲ್ಲಿಂದ್ಲೇ ಗಂಡನ್ನ ಹುಡುಕೋದು ಶುರು ಮಾಡ್ಬೇಕು. ಅಲ್ಲಿಂದ ಸುರು ಮಾಡಿದ್ರ ಹುಡುಗ ಸಿಕ್ಕೋದಕ್ಕೆ ಒಂದು ವರ್ಷನಾದ್ರು ಟೈಮ್ ತಗಂತೇತಿ. ಅಷ್ಟೊತ್ತಿಗಾಗ್ಲೇ ಹುಡುಗಿ ಸತೆ ಮದುವಿ ವಯಸ್ಸಿಗಿ ಬಂದಿರ್ತಾಳ. ಹಂಗಾಗಿ ಹೆಣ್ಮಕ್ಳು ಎಷ್ಟೊತ್ತಿದ್ರೂ ಬ್ಯಾರೇರ ಮನಿಗೆ ಸೇರ್ಬೇಕಾದೋರು, ಅವ್ರಿಗೆ ಯಾವಾಗ ಮದುವಿ ಮಾಡಿದ್ರೆ ಏನಂತೆ. ಜಲ್ದಿ ಮದುವಿ ಮಾಡಿದ್ರೆ ನಮ್ ಜವಾಬ್ದಾರಿನ ಜಲ್ದಿ ಕಳ್ಕಂಡಂಗ ಆಗತ್ತೈತಿ. ಅವ್ರು ನಾವು ಹೆತ್ತ ಮಕ್ಕಳು ಆದ್ರೂ ಸತೆ ಬಾಳ ದಿನ ಮನ್ಯಾಗ ಇಟ್ಕಳಂಗಿಲ್ಲ. ಹಂಗೇನಾದ್ರೂ ಇಟ್ಕಂಡೀವಂದ್ರೆ ಊರಾಗಿನ ಮಂದಿ ಸುಮ್ನೆ ಬಿಡಂಗಿಲ್ಲ. ಆಡಿಕೆಳ್ಳಾಕ ಸುರು ಮಾಡ್ತಾರ. ಯಾರಾದ್ರು ಗಂಡು ಬಂದು ನೋಡಿಕೆಂಡು ಹೋಗಿ ಮದುವಿಯಾಗಾಕ ಒಪ್ಲಿಲ್ಲ ಅಂದ್ರೆನೇ ಏನೇನೋ ಆಡಿಕೆಳ್ಳಾ ಮಂದಿ ಇರುವಾಗ, ಮನ್ಯಾಗ ಮದುವಿಯಾಗ್ದಂಗ ಒಂದು ಹೆಣ್ಣು ಐತಿ ಅಂದ್ರೆ ಸುಮ್ನೆ ಬಿಡ್ತಾರೇನು ಹಂಗಾಗಿ ಎಷ್ಟು ಜಲ್ದಿ ಮದುವಿ ಮಾಡ್ತೀವೋ ಅಷ್ಟು ನಮಿಗೇ ಒಳ್ಳೇದು. ಅದಕ್ಕ ನನ್ ಮಕ್ಕಳಿಗಿ ಜಲ್ದಿ ಮದುವಿ ಮಾಡಿಬಿಟ್ಟೆ. ಈಗ ಆರಾಮಾಗಿ ಐದೀನಿ" ಎಂದರು.

ನಲ್ಲಾಪುರ ಗ್ರಾಮದ ಲಕ್ಷ್ಮಣ ಎಂಬುವವರು ಹೀಗೆ ಹೇಳುತ್ತಾರೆ " ನೋಡ್ರಿ ಸಾರ್ ಹೆಣ್ಮಕ್ಕಳು ನಮ್ ಮನೀಗೇನು ದುಡ್ದ ಹಾಕ್ತಾರೇನು. ಇಲ್ಲಲಾ. ಎಷ್ಟೊತ್ತಿದ್ರೂ ಬ್ಯಾರೇರ ಮನಿಗೆ ಸೇರೋರು. ಮತ್ತೆ ಹೆಣ್ಮಕ್ಕಳ್ನ ಎಷ್ಟು ದಿನ ಅಂತ ಮನ್ಯಾಗ ಇಟ್ಕಂಡು ಸಾಕ್ಬೇಕು?, ಮನ್ಯಾಗ ಇಟ್ಕಂಡುಷ್ಟು ದಿನ ನಮಿಗೆ ವಜ್ಜಿ, ಅವ್ರು ಏನಿದ್ರೂ ಗಂಡನ ಮನಿಗೆ ಸೇರ್ಬೇಕಾದೋರು, ಹಂಗಾಗಿ ಹೆಣ್ಮಕ್ಕಳಿಗಿ ಜಲ್ದಿ ಮದುವಿ ಮಾಡಿ ನಮ್ ಮ್ಯಾಗಿನ ಭಾರಾನ ಕಳ್ಕಬೇಕು. ಹಂಗಾಗಿ ನಾನು ನನ್ ಇಬ್ರು ಮಕ್ಕಳ್ನ ನಮ್ ಜನ್ದಾಗೇ ಮದುವಿ ಮಾಡಿ ಕೊಟ್ಟೀನಿ. ಅವ್ರು ತಮ್ಮ ಗಂಡನ ಮನಿಯಾಗ ಚೆನ್ನಾಗೇ ಇರ್ತಾರ. ವರ್ಸದಾಗ ನಾಕ್ಕೈದು ಸಾರಿ ಬಂದು ಹೋಗ್ತಾರ. ಏನಂದ್ರು ಹೆಣ್ಮಕ್ಕಳು ಮನ್ಯಾಗ ಇದ್ರ ಬಾಳ ತ್ರಾಸ ಆಗಿತೈತಿ. ಏನಂದ್ರ ಅವ್ರು ಎಲ್ಲಿಗಾದ್ರೂ ಹೋದ್ರ ಅವ್ರಿಂದೆ ಒಬ್ರನ್ನ ಕಳ್ಸಬೇಕು. ಮತ್ತೆ ಕಣ್ಣಾಗ ಕಣ್ಣಿಟ್ಟು ನೋಡ್ಕಬೇಕು. ಅವ್ರಿಗೆ ಅಂತಾನೇ ಒಬ್ರು ಕೆಲ್ಸ ಬಿಟ್ಟು ಇರ್ಬೇಕು ಅಂತ ಪರಿಸ್ಥಿತಿ ಇರ್ತೈತಿ. ಹಂಗಾಗಿ ಅವ್ರಿಗೆ ಜಲ್ದಿ ಮದುವಿ ಮಾಡಿಬಿಟ್ರೆ ಮುಗೀತಲ್ಲ ಕಾಯೋದು ಗೀಯೋದು ಯಾವ್ದು ಇರಾಂಗಿಲ್ಲ. ಮದುವಿ ಆದ್ ಮ್ಯಾಲೆ ಕಾಯೋದು ಏನಿದ್ರು ಗಂಡಗ ಇರ್ತೇತಿ. ಹಂಗಾಗಿ ನನ್ ಮಕ್ಳಿಗಿ ಜಲ್ದಿ ಮದುವಿ ಮಾಡಿ ಬಿಟ್ವೆ ಎಂದರು. ಈ ಬಗೆಯ ಕಾರಣಗಳನ್ನು ಹಲವಾರು ಜನ ನೀಡಿದ್ದಾರೆ.

ಕುಟುಂಬದಲ್ಲಿ ಹೆಣ್ಣುಮಕ್ಕಳು ಹೊರೆಯಾಗಿಯೇ ಬಾಳುತ್ತಿದ್ದಾರೆ. ಮುಖ್ಯವಾಗಿ ವ್ಯವಸ್ಥೆಯಲ್ಲಿ ಪುರುಷನಿಗೆ ಇದ್ದಷ್ಟು ಮಹತ್ವ ಮಹಿಳೆಯರಿಗಿಲ್ಲ. ಏಕೆಂದರೆ ಕುಟುಂಬದ ಒಡೆಯ ಪುರುಷನೇ ಆಗಿರುತ್ತಾನೆ. ಹಾಗೆಯೇ ಆ ಕುಟುಂಂಬವನ್ನು ಮುಂದುವರೆಸುವ ಸಂಕೇತವಾಗಿ

ಗುರುತಿಸಿಕೊಂಡಿದ್ದಾನೆ. ಮಹಿಳೆ ಮಾತ್ರ ಕುಟುಂಬದ ಎಲ್ಲಾ ಆಗುಹೋಗುಗಳಿಗೂ ಕಾರಣಕರ್ತಳಾಗಿರುತ್ತಾಳೆ. ಆದರೆ ಕುಟುಂಬದಲ್ಲಿ ಹೆಣ್ಣು ಹುಟ್ಟಿತು ಎಂದರೆ ಆ ಕುಟುಂಬಕ್ಕೆ ಅದೊಂದು ಹೊರಲಾರದ ಭಾರವಾಗಿ ಮಾರ್ಪಡುತ್ತದೆ. ಕುಟುಂಬದಲ್ಲಿ ನಡೆಯುವ ಸಾಮಾಜೀಕರಣದ ಪ್ರಕ್ರಿಯೆಯೂ ಕೂಡ ತಾರತಮ್ಯದಿಂದ ಕೂಡಿದ್ದು, ಮುಖ್ಯವಾಗಿ ಹೆಣ್ಣನ್ನು ಪ್ರತ್ಯೇಕವಾಗಿಯೇ ನೋಡಲಾಗುತ್ತದೆ. ಚಿಕ್ಕ ವಯಸ್ಸಿರುವಾಗಲೇ ಹೆಣ್ಣು ಎಂದರೆ ಪರರ ಮನೆಗೆ ಸೇರುವವಳು, ಪರರ ಮನೆಯ ಸ್ವತ್ತು, ಅಂದರೆ ಮದುವೆಯಾದ ನಂತರ ಗಂಡನ ಮನೆಗೆ ಸೇರುವವಳು ಎಂಬ ಭಾವನೆಯನ್ನು ಅವರ ಮನಸ್ಸಿನಲ್ಲಿ ಬೇರೂರುವಂತೆ ಮಾಡಲಾಗಿರುತ್ತದೆ. ಹಾಗಾಗಿ ಕುಟುಂಬದಲ್ಲಿ ಮಹಿಳೆಯರು ಅದೇ ಧೋರಣೆಯನ್ನು ಹೊಂದಿರುತ್ತಾರೆ. ಹಾಗಾಗಿ ಹೆಣ್ಣು ಮಕ್ಕಳನ್ನು ಬಹಳಷ್ಟು ದಿನ ಮನೆಯಲ್ಲಿ ಇಟ್ಟುಕೊಳ್ಳುವುದರಿಂದ ಕುಟುಂಬಕ್ಕೇ ಅಗೌರವದ ವಿಷಯ ಎಂದು ಭಾವಿಸಿ ತಮ್ಮ ಮಕ್ಕಳನ್ನು ಬಹು ಬೇಗನೇ ಮದುವೆ ಎಂಬ ಕೂಪಕ್ಕೆ ತಳ್ಳುತ್ತಿರುವಂತಹ ಹಲವಾರು ಉದಾಹರಣೆಗಳು ಕಂಡುಬರುತ್ತವೆ. ಹೆಣ್ಣನ್ನು ಬಹಳ ದಿನಗಳವರೆಗೆ ಕುಟುಂಬದಲ್ಲಿ ಇಟ್ಟುಕೊಳ್ಳುವುದರಿಂದ ಅವಳ ಕನ್ಯತ್ವವನ್ನು ಕಾಪಾಡುವ ಜವಾಬ್ದಾರಿ ತಂದೆ ತಾಯಂದಿರ ಮೇಲಿರುತ್ತದೆ. ಇದೇ ಅವರನ್ನು ಹೆಚ್ಚು ಚಿಂತೆಗೀಡು ಮಾಡುತ್ತದೆ. ಹೆಣ್ಣುಮಕ್ಕಳ ದೇಹದ ಮೇಲೆ ಗಂಡನಾದವನಿಗೆ ಮಾತ್ರ ಅಧಿಕಾರ ಚಲಾಯಿಸುವ ಹಕ್ಕಿರುತ್ತದೆ ಎಂಬ ಪಿತೃಪ್ರಾಧಾನ ಮೌಲ್ಯಗಳು ಗಾಢವಾಗಿ ರೂಪಿಸಲ್ಪಟ್ಟಿವೆ. ಹಾಗಾಗಿ ಈ ಹಕ್ಕನ್ನು ವಿವಾಹಕ್ಕೂ ಪೂರ್ವದಲ್ಲಿಯೇ ಬೇರೆಯವರ ಪಾಲಾದರೆ ಕುಟುಂಬದ ಮರ್ಯಾದೆ ಹಾಳಾಗುತ್ತದೆ ಎಂಬ ಭಯ ತಂದೆ–ತಾಯಂದಿರಲ್ಲಿರುತ್ತದೆ. ಹಾಗಾಗಿಯೇ ಋತುಮತಿಯಾದ ಹೆಣ್ಣುಮಗುವನ್ನು ಒಂಟಿಯಾಗಿ ಓಡಾಡಲು ಬಿಡುವುದಿಲ್ಲ. ಈ ಎಲ್ಲಾ ಜವಾಬ್ದಾರಿಗಳಿಂದ ಮುಕ್ತಿಯನ್ನು ಪಡೆಯಲು ತಮ್ಮ ಮಕ್ಕಳಿಗೆ ಬಹುಬೇಗನೇ ವಿವಾಹ ಮಾಡುವ ಮಾರ್ಗೋಪಾಯಗಳನ್ನು ಕಂಡುಕೊಂಡಿದ್ದಾರೆ.

**ಇ) ಕುಟುಂಬದ ಹಿರಿಯರ ಆಸೆಯನ್ನು ಈಡೇರಿಸುವುದು :** ಕುಟುಂಬದಲ್ಲಿ ಹಿರಿಯರು ಎನಿಸಿಕೊಳ್ಳುವ ಅಜ್ಜ, ಅಜ್ಜಿಯಂದಿರ ಆಸೆಯ ಕಾರಣವಾಗಿ ಹಲವು ಬಾಲ್ಯ ವಿವಾಹಗಳು ನಡೆಯುತ್ತವೆ. ಮುಖ್ಯವಾಗಿ ಇವರು ಸಾಯುವ ಸ್ಥಿತಿಯಲ್ಲಿರುವ ಸಂದರ್ಭದಲ್ಲಿ ತಮ್ಮ ಮೊಮ್ಮಕ್ಕಳ ಮದುವೆಯನ್ನು ನೋಡಿಕೊಂಡೇ ಸಾಯಬೇಕು ಎಂಬಂತಹ ಆಸೆಯ ಕಾರಣವಾಗಿ ಈ ಬಗೆಯ ವಿವಾಹಗಳು ಸಂಭವಿಸುತ್ತವೆ. ಬಾಲ್ಯ ವಿವಾಹಗಳ ಜೀವಂತಿಕೆಗೆ ಇದೂ ಒಂದು ಕಾರಣವಾಗಿದೆ. ಅಧ್ಯಯನ ಕ್ಷೇತ್ರದ ವ್ಯಾಪ್ತಿಯಲ್ಲಿ ಈ ಬಗೆಯ ಕಾರಣಗಳಿಗಾಗಿ ಚಿಕ್ಕ ವಯಸ್ಸಿನಲ್ಲಿಯೇ ವಿವಾಹಕ್ಕೆ ಒಳಗಾದ ಹಲವು ಪ್ರಕರಣಗಳು ದೊರೆತಿವೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ವ್ಯಾಸನಕೆರೆ ಗ್ರಾಮದ ಅಂಬಮ್ಮ ಎಂಬುವವರು ಚಿಕ್ಕ ವಯಸ್ಸಿನಲ್ಲಿಯೇ ವಿವಾಹವಾಗಿದ್ದಾರೆ. ಇದಕ್ಕೆ ಕಾರಣ ಅವರ ಅಜ್ಜಿ. ಇವರು ಹೇಳುವಂತೆ "ನಮ್ ಅಜ್ಜಿಗೆ ಸಾಯೋ ವಯಸ್ಸಾಗಿತ್ತು. ಅಂತ ಹೊತ್ತಿನ್ಯಾಗ ನನ್ ಮದುವಿ

ನೋಡೇ ಸಾಯ್ಬೇಕು ಅನ್ನೋದು ಅಕಿ ಆಸಿ. ಆದ್ರೆ ನನಿಗೆ ಮದುವಿ ಮಾಡಿಕೆಳ್ಳಾಕ ಇಷ್ಟ ಇರ್ಲಿಲ್ಲ. ಆದ್ರೂ ಸತೆ ಮನ್ಯಾಗ ಅಪ್ಪ ಅಮ್ಮ ಬಾಳ ಒತ್ತಾಯ ಮಾಡಿ ಮದುವಿ ಮಾಡಿಸಿದ್ರು. ನಮ್ ಅಜ್ಜಿದು ಒಂದೇ ಆಸಿ ಅಂದ್ರೆ ಎಲ್ಲಾರ ಮದುವೀನೂ ನೋಡೇನಿ ಆದ್ರೆ ಈಗ ಬಾಕಿ ಒರೋದು ನಿಂದೊಂದೆ. ಅದನ್ನೊಂದು  ನೋಡ್ಬಿಟ್ರೆ ಮುಗೀತು ನಾನು ನೆಮ್ಮದಿಯಿಂದ ಕಣ್ಮುಚ್ಚಿಕೆಂಡು ಬಿಡ್ತೀನಿ ಅಂತ ಹೇಳ್ತಿದ್ಲು. ಅದಕ್ಕ ಅಂಬಮ್ಮಂದು ಮದುವಿ ಮಾಡು ಅಂತ ನಮ್ ಅಪ್ಪಗ ಗಂಟು ಬಿದ್ದಿದ್ಲು. ನಮ್ ಅಪ್ಪಗ ಹೆದ್ರಿಕಿ ಇತ್ತು. ಈಕಿ ಏನಾದ್ರೂ ತನ್ ಮೊಮ್ಮಗಳ್ದು ಮದುವಿ ನೋಡ್ದೇನೇ ಸತ್ಲು ಅಂದ್ರೆ ಮುಗೀತು ಮನ್ಸಿಗೆ ನೆಮ್ಮದೀನೇ ಇರಲ್ಲ. ಏನಾರ ಕಾಡಾಟಗೋಳು ಸುರು ಆಗ್ತಾವೇನೋ ಅಂತ ಹೆದ್ರಿಕಿ ಇತ್ತು. ಹಂಗಾಗಿ ತಮ್ಮ ಅಮ್ಮಂದು ಆಸಿ ತೀರ್ಸಬೇಕು ಅಂತೇಳಿ ನನ್ ಮದುವೀನ ಜಲ್ದಿ ಮಾಡಿಬಿಟ್ಟ. ಈಗ ನೋಡ್ರಿ ನಮ್ ಜೀವ್ನ ಹಿಂಗೈತಿ" ಎಂದರು.

ಇದೇ ವಿಷಯದ ಬಗ್ಗೆ  ಅಂಬಮ್ಮನವರ ತಂದೆ ಅಂಜಿನಪ್ಪ ಅವರನ್ನು ಕೇಳಿದಾಗ ಅವರು ಹೇಳಿದ್ದು ಹೀಗೆ "ನನಿಗೆ ಮೂವರು ಮಕ್ಳು. ಅದ್ರಾಗ ಇಬ್ರು ಹೆಣ್ಮಕ್ಕಳು. ಒಬ್ಬನೇ ಗಂಡು ಮಗ. ಅವನೇ ಹಿರೇನು. ಎಲ್ಲಾರ್ನೂ ಬಾಳ ಚೆನ್ನಾಗಿ ಓದ್ಸೇನಿ. ಆದ್ರೆ ಕೊನಿ ಮಗಳು ಅಂಬಮ್ಮಂದು ಸ್ವಲ್ಪು ಎಡ ಆತು. ಯಾಕಂದ್ರ ಅಕಿ ಇನ್ನ ಓದ್ತಿದ್ಲು. ಆದ್ರೆ ನಮ್ ಅಮ್ಮ ಅಕಿದು ಮದುವಿ ನೋಡೇ ಸಾಯ್ಬೇಕು ಅಂತ ಹಠ ಹಿಡಿದಿದ್ಲು. ಹಂಗಾಗಿ ಅಂಬಮ್ಮಂದು ಓದೋದನ್ನ ನಿಲ್ಸಿ. ಮದುವಿ ಮಾಡಿ ಬಿಟ್ವಿ. ಆದ್ರೆ ಅಂಬಮ್ಮ ಮದುವಿ ಆಗಾಕ ಮೊದ್ಲು ಒಪ್ಪಿರ್ಲಿಲ್ಲ. ಓದ್ತೀನಿ ಅಂತ ಹೇಳ್ತಿದ್ಲು. ಆದ್ರೆ ಮದುವಿ ಆದ್ ಮ್ಯಾಲ ಓದುವಿಯಂತೆ ಅಂತ ಬುದ್ದಿವಾದ ಹೇಳಿ ಮದುವಿಗೆ ಒಪ್ಪಿಸಿದ್ವಿ. ಆದ್ರ ಮದುವಿ ಆದ್ ಮ್ಯಾಲ ಅಕಿ ಗಂಡನ ಮನಿ ಸ್ವತ್ತು.  ಅವ್ರು ಏನ್ ಹೇಳ್ತಾರೋ ಹಂಗೆ ಕೇಳ್ಬೇಕಾಗತೈತಿ. ಹಂಗಾಗಿ ಅವ್ರು ಅಂಬಮ್ಮನ್ನ ಓದ್ಸಾಕ ರೆಡಿ ಇರ್ಲಿಲ್ಲ. ಅಕಿದು ಓದು ಅರ್ದಕ್ಕಾ ನಿಂತುಬಿಡ್ತು. ಅಂಬಮ್ಮಂದು ಮದುವಿ ಮಾಡಿ ಎರಡು ತಿಂಳ್ಗಿಗೆ ನಮ್ ಅಮ್ಮ ತೀರ್ಕೆಂಡ್ಲು. ಆದ್ರೆ ಆಕಿ ಆಸಿ ಪಟ್ಟಂಗ ಎಲ್ಲಾರ ಮದುವೀನೂ ನೋಡಿದ್ಲು" ಎಂದರು.

ಚಿಕ್ಕ ವಯಸ್ಸಿಗೆ ಮದುವೆ ಮಾಡೋದು ಕಾನೂನು ಪ್ರಕಾರ ತಪ್ಪು ಅಲ್ವಾ. ಹಾಗೆ ಮಾಡಿದ್ರೆ ಶಿಕ್ಷೆ ಅನುಭವಿಸಬೇಕಾಗುತ್ತೆ ಇದು ನಿಮಗೆ ಗೊತ್ತಿಲ್ವಾ ಎಂದು ಕೇಳಿದಾಗ.

ನನಿಗೆ ಗೊತ್ತು ಸಾರ್, ೧೮ ವರ್ಷದ್ ಕೆಳಗ ಮಕ್ಕಳ್ದು ಮದುವಿ ಮಾಡ್ಬಾರ್ದು. ಮಾಡಿದ್ರೆ ಶಿಕ್ಷೆ ಅನುಭೋಸ್ಬೇಕಾಗತೈತಿ ಅಂತ. ಆದ್ರ ಏನ್ ಮಾಡೋದು. ಮನ್ಯಾಗಿನ ಪರಿಸ್ಥಿತಿಲಿಂದ ಹಿಂಗ ಮಾಡ್ಬೇಕಾತು. ನಮ್ ಅಮ್ಮಂದು ಅದು ಕೊನಿ ಆಸಿ ಆಗಿತ್ತು. ಹಂಗಾಗಿ ಅದನ್ನೊಂದು ತೀರ್ಸಿಬಿಟ್ರೆ ಮುಗೀತು. ಮುದಿ ಜೀವಕ್ಕ ನೆಮ್ಮದಿ ಸಿಗತೈತಿ ಅಂತ ಹಿಂಗ ಮಾಡಿದ್ವಿ. ಕಾನೂನಿಗೆ ಇದೆಲ್ಲಾ ಗೊತ್ತಾಗಲ್ಲ. ಒಂದುವ್ಯಾಳ ನಮ್ ಅಮ್ಮ ತನ್ ಲಾಸ್ಟ್ ಮೊಮ್ಮಗಳ್ದು ಮದುವಿನ ನೋಡ್ಲಾರ್ದಂಗ ಸತ್ತಿದ್ರೆ, ಆಕಿದು ಕೊನಿ ಆಸೆನ ಈಡೇರ್ಸಿಲಿಲ್ಲ ಅನ್ನೋ ಕೊರ್ಗು ಕಾಡ್ತಿತ್ತು. ಅದೆಲ್ಲಾ ಯಾಕ ಬೇಕು ಅಂತ ತಿಳ್ದು ಮದುವಿ ಮಾಡ್ಬಿಟ್ವಿ. ಈಗ ಎಲ್ಲಾರೂ ಚೆನ್ನಾಗೇ ಐದಾರ" ಎಂದರು.

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಅಂಜನಹಳ್ಳಿ ಗ್ರಾಮದ ಶರಣಪ್ಪ ಎಂಬುವವರು ತಮ್ಮ ಮಗನಾದ ಈಶ್ವರನಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹವನ್ನು ಮಾಡಿದ್ದಾರೆ. ಈ ವಿಷಯ ತಿಳಿದು ಅವರನ್ನು ಭೇಟಿಯಾದಾಗ ಇವರು ಹೇಳಿದ್ದು ಹೀಗೆ "ನಾವು ಮೂವರು ಅಣ್ಣ ತಮ್ಮಂದ್ರು. ನಾನೇ ಕೊನೆಯವನು. ಅಪ್ಪ ಅಮ್ಮ ನಮ್ತೇಲೇ ಐದಾರ. ನನ ಅಣ್ಣನ ಮಕ್ಳಿಗೆಲ್ಲಾ ಮದುವಿ ಆಗ್ಯಾವ. ಆದ್ರ ನನ್ ಕೊನಿ ಮಗ ಈಶ್ವರನ್ದು ಮಾತ್ರ ಆಗಿರ್ಲಿಲ್ಲ. ನನಿಗೆ ಇರೋದು ಇಬ್ರು ಗಂಡು ಮಕ್ಕಳು. ಈಶ್ವರಗ ಸ್ವಲ್ಪ ದಿನದ ಹಿಂದೆ ಮದುವಿ ಮಾಡಿದ್ವಿ. ಆದ್ರ ಮನ್ಯಾಗ ನಮ್ ಅಪ್ಪ ಅಮ್ಮ ಇಬ್ರೂ ಸೇರಿ ಈ ಮದುವೀನ ಮಾಡ್ಲೇಬೇಕು ಅಂತ ಹಠ ಹಿಡ್ದಿದ್ರು. ಯಾಕಂದ್ರೆ ನಮಿಗೆ ಆಗ್ಲೇ ಸಾಯೋ ವಯಸ್ಸಾಗೇತಿ. ಈಗಾಗ್ಲೇ ಎಲ್ಲಾ ಮೊಮ್ಮಕ್ಕಳ್ದು ಮದುವಿ ನೋಡ್ಬಿಟ್ಟೀವಿ. ಆದ್ರೆ ಕೊನಿ ಹೊತ್ತಿನ್ಯಾಗ ಇವ್ನದ್ದು ಒಬ್ಬನ್ದು ಮದುವಿ ನೋಡ್ಬಿಟ್ರೆ ಮುಗೀತು. ಎಲ್ಲಾರ ಮದುವೀನೂ ನೋಡ್ದಂಗ ಆಗತೈತಿ ಮತ್ತೆ ಮನ್ಸಿಗಿ ನೆಮ್ದಿ ಇರ್ತೈತಿ ಅಂತ ಹೇಳ್ತಿದ್ರು. ಆದ್ರ ಈಶ್ವರಗ ಮದುವಿ ಅಂದ್ರೆ ಇಷ್ಟ ಇರ್ಲಿಲ್ಲ. ಹಂಗಾಗಿ ಅವ್ನು ಒಪ್ಲಿಲ್ಲ. ಅದನ್ನ ಇವ್ರಿಗೆ ಹೇಳಿದ್ರೆ ನನಿಗೇ ಗದ್ರಿಸಿದ್ರು. ಅವ್ರು ಮದುವಿ ನೋಡ್ಲೇ ಬೇಕು ಅಂತ ಹಠ ಹಿಡ್ದಿದ್ರು. ಅವ್ನು ಬ್ಯಾಡ ಅಂದ್ರೆ ಅದನ್ನ ಒಪ್ಪಾಕ ಒಟ್ಟಾ ತೈಯಾರಿರ್ಲಿಲ್ಲ. ಹಂಗಾಗಿ ಏನ್ ಮಾಡೋದು ಅಂತೇಳಿ ಈಶ್ವರ್ಗ ಬುದ್ಧಿ ಹೇಳಿದ್ವಿ. ನೀನು ಓದ್ಬೇಕು ಅಂತ ಹೇಳ್ತೀಯಲ್ಲ ಅದನ್ನ ಮದುವಿ ಆದ್ ಮ್ಯಾಲೂ ಮಾಡ್ಬೋದು. ಆದ್ರ ಈಗ ನಿಮ್ ಅಜ್ಜಿ, ಅಜ್ಜಂದು ಕೊನಿ ಆಸೀನ ಈಡೇರ್ಸಿಬಿಡು ಅಂತ ಹೇಳಿದ್ವಿ. ಅದಕ್ಕ ಅವ್ನು ಬಾಳ ಕಷ್ಟದ್‌ಲೇಸಿ ಒಪ್ಕೆಂಡ. ಹಂಗಾಗೇ ನಮ್ ಸಂಬಂದಿಕ್ರದಾಗೇ ಒಂದು ಹುಡಿಗೀನ್ನ ನೋಡಿ ಮದುವಿ ಮಾಡ್ಬಿಟ್ವಿ ಈಗ ಅವ್ನು ಓದಾಕೂ ಹೋಗಾಕತ್ಯಾನ " ಎಂದರು.

ಬಳ್ಳಾರಿ ತಾಲೂಕಿನ ಯರ್ರಗುಡಿ ಗ್ರಾಮದಲ್ಲಿನ ಈರಪ್ಪ ಎಂಬುವವರು ತಮ್ಮ ಮಗಳನ್ನು ಅಕ್ಕನ ಮಗನಿಗೇ ಕೊಟ್ಟು ವಿವಾಹ ಮಾಡಿದ್ದಾರೆ. ವಿವಾಹಿತರಿಬ್ಬರೂ ತುಂಬಾ ಚಿಕ್ಕವರಾಗಿದ್ದಾರೆ. ಈ ವಿಷಯ ತಿಳಿದು ಅವರನ್ನು ಭೇಟಿಯಾದಾಗ ಅವರು ಹೇಳಿದ್ದು ಹೀಗೆ "ನಮ್ ಅಪ್ಪಗ ನಾವು ನಾಕು ಜನ ಮಕ್ಳು. ಅದ್ರಾಗ ಚಂದ್ರಮ್ಮ ಎಲ್ಲಾರ್ಗಿಂತ ದೊಡ್ಡೋಳು. ಅಕಿ ಆದ್ ಮ್ಯಾಲೆ ನಾನು. ಆಮ್ಯಾಲ ಇಬ್ರು ತಮ್ಮನೋರು ಐದಾರ. ಚಂದ್ರಮ್ಮ ತನ್ ಮಗಳ್ನ ನನ್ ಮಗ್ನಿಗೇ ಕೊಟ್ಟು ಮದ್ವಿ ಮಾಡ್ಬೇಕು ಅಂತ ಬಾಳ ಆಸಿ ಇತ್ತು. ಅದಕ್ಕ ಮೊದ್ಲಿಂದ್ಲು ಹೇಳ್ಕೆಂಡೇ ಬರ್ತಿದ್ಲು. ಹಂಗಾಗಿ ನನ್ ಎರಡ್ನೇ ಮಗ ವೆಂಕಟೇಶ್ಗ ಮಾಡಿ ಬಿಡಾನು ಅಂತ ಮಾತಾಡ್ಕೆಂಡಿದ್ವಿ. ಅವ್ರು ಮದುವಿ ವಯಸ್ಸಿಗಿ ಬರ್ಲಿ ಅಂತ ಕಾಯ್ಕೆಂಡಿದ್ವಿ. ಆದ್ರೆ ನಮ್ ಟೈಮೇ ಸರಿಗಿರ್ಲಿಲ್ಲ. ಯಾಕಂದ್ರೆ ನಮ್ ಅಕ್ಕಗ ವಾಂತಿ ಬೇದಿ ಆಗಿ ಬಾಳ ಹುಷಾರಿಲ್ದಂಗಾಗಿ ಆಸ್ಪತ್ರಿನಾಗ ಅಡ್ಮಿಟ್ ಮಾಡಿದ್ವಿ. ವಾಂತಿ ಬೇದಿ ಜೊತಿಗಿ ಜ್ವರಾನೂ ಸೇರ್ಕೆಂಡು ಬಿಡ್ತು. ಹಂಗಾಗಿ ಹದಿನೈದು ದಿನ ಬರೇ ಆಸ್ಪತ್ಯಾಗೇ ಇರ್ಬೇಕಾತು. ಅಲ್ಲೇನೋ ಸರಿ ಹೋದ್ಲು ಅಂತೇಳಿ ಡಿಸ್ಚಾರ್ಜ ಮಾಡ್ಸಿ ಮನಿಗೆ ಕರ್ಕಂಡು ಬಂದ್ವಿ. ಸ್ವಲ್ಪ ದಿನ ಚೆನ್ನಾಗೇ ಇದ್ಲು. ಒಂದಿನ ನನ್ ಕರ್ದು ತನ್ ಮಗಳ್ನ ಮಗನಿಗೇ

ಮಾಡ್ಕಬೇಕು ನಾನು ಸಾಯೋದ್ರಾಗೇ ಈ ಮದುವಿ ಮಾಡ್ಬೇಕು ಅಂತ ಹೇಳಿದ್ಲು. ಅದಕ್ಕ ನಾನು ಸತೆ ಒಪ್ದೆ. ಒಂದೆರ್ಡ್ ದಿನ ಬಿಟ್ಟು ಮತ್ತೆ ಅದೇ ಹೇಳಿದ್ಲು. ಏನ್ ಮಾಡೋದು ಅಂತ ನನ್ ಮಗ್ಗಿಗೆ ಸ್ವಂತ ನಮ್ ಅಕ್ಕನ ಮಗಳ್ನೆ ಮದುವಿ ಮಾಡ್ಕೆಂಡ್ವಿ. ಮಗಳ್ದು ಮದುವಿ ಆಗಿ ಒಂದು ವಾರಕ್ಕೆ ನಮ್ ಅಕ್ಕ ತೀರ್ಕೆಂಡು ಬಿಟ್ಲು. ಅಕಿ ತನ್ ಮಗಳ್ ಮದುವಿ ನೋಡ್ಬೇಕು ಅಂತಾನೇ ಜೀವ ಕೈಯಾಗೇಹಿಡ್ಕಂಡಿದ್ಲು ಅಂತ ಅನ್ಸತೈತಿ. ಮದುವಿ ನೋಡೇ ತಿರ್ಕೆಂಡ್ಲು" ಎಂದರು.

ಹೀಗೆ ಕುಟುಂಬದಲ್ಲಿನ ಹಿರಿಯರ ಆಸೆಯನ್ನು ಈಡೇರಿಸುವ ಕಾರಣವನ್ನಿಟ್ಟುಕೊಂಡು ಹಲವಾರು ಬಾಲ್ಯ ವಿವಾಹಗಳು ನಡೆದಿರುವುದು ಕಂಡುಬರುತ್ತದೆ. ಮುಖ್ಯವಾಗಿ ಕುಟುಂಬದಲ್ಲಿನ ಅಜ್ಜಿ, ತಾತ, ಅನಾರೋಗ್ಯಕ್ಕೆ ತುತ್ತಾದ ಹಿರಿಯರು ಇವರ ಇಚ್ಛೆಯ ಕಾರಣವಾಗಿ ಬಾಲ್ಯ ವಿವಾಹಗಳು ಸಂಭವಿಸುತ್ತಿವೆ. ವಿವಾಹ ಎಂಬುದು ಮಾನವನ ಜೀವನಕ್ಕೆ ಕಡ್ಡಾಯ ಎಂಬ ಧೋರಣೆಯ ಕಾರಣವಾಗಿ ತಮ್ಮ ಮಕ್ಕಳ , ಮೊಮ್ಮಕ್ಕಳ ವಿವಾಹವನ್ನು ನೋಡಲೇ ಬೇಕು ಅಂದಾಗ ಮಾತ್ರ ಮನಸ್ಸಿಗೆ ಶಾಂತಿ ದೊರೆಯುತ್ತದೆ ಎಂಬ ಆಶಾಭಾವನೆಯಿಂದ ವಿವಾಹ ಬಂಧನಕ್ಕೆ ದೂಡುತ್ತಿರುವ ಹಲವು ಪ್ರಕರಣಗಳು ಕಂಡುಬರುತ್ತವೆ. ಇದರಿಂದ ಹಿರಿಯರ ಮನಸ್ಸಿಗೆ ಒಂದು ಬಗೆಯ ಶಾಂತಿ ದೊರೆಯಬಹುದೇ ವಿನಃ ಮದುವೆಯ ನಂತರ ಅವರ ಜೀವನ ಹೇಗಿರುತ್ತದೆ ಎಂಬ ದೃಷ್ಟಿಕೋನವೇ ಅವರಿಗೆ ಇರುವುದಿಲ್ಲ. ಅವರಿಗೆ ಸಾಯುವ ಮುನ್ನ ಕೇವಲ ವಿವಾಹವನ್ನು ನೋಡುವುದಷ್ಟೇ ಮುಖ್ಯವಾಗಿರುತ್ತದೆ. ಕುಟುಂಬದಲ್ಲಿನ ಇತರೆ ಸದಸ್ಯರೂ ಸಹ ಇದಕ್ಕೆ ಒಪ್ಪಿಗೆಯನ್ನು ಸೂಚಿಸುತ್ತಾರೆ ಹಾಗೇಯೇ ತಮ್ಮ ಮಕ್ಕಳ ಭವಿಷ್ಯದ ಬಗೆಗೆ ಯೋಚಿಸದೇ ತಮ್ಮ ಮಕ್ಕಳಿಗೆ ವಿವಾಹ ಮಾಡುವುದರಲ್ಲಿ ನಿರತರಾಗುತ್ತಾರೆ. ಇದು ಒಂದು ರೀತಿಯಲ್ಲಿ ವ್ಯವಸ್ಥೆಯು ನಿರ್ಮಿಸಿರುವ ಸಾಮಾಜಿಕ ಕಟ್ಟುಪಾಡು ಕಾರಣವಾದರೆ, ಇನ್ನೊಂದು ಬಗೆಯಲ್ಲಿ ಈ ಕಾರಣವನ್ನಿಟ್ಟುಕೊಂಡು ತಮ್ಮ ವೈಯಕ್ತಿಕ ಆಸೆ ಆಕಾಂಕ್ಷೆಗಳನ್ನು ಪೂರೈಸಿಕೊಳ್ಳುವ ಮನಃಸ್ಥಿತಿಯನ್ನು ಕುಟುಂಬದ ಹಿರಿಯರು ಹೊಂದಿರುತ್ತಾರೆ. ಮುಖ್ಯವಾಗಿ ಇಲ್ಲಿ ವಿವಾಹವೇ ಅಂತಿಮ. ಮನುಷ್ಯರಾದವರು ವಿವಾಹವಾಗಲೇ ಬೇಕು ಎಂಬ ಧೋರಣೆ ಈ ಬಗೆಯ ಅಸಮ ವಿವಾಹಗಳಿಗೆ ಕಾರಣವಾಗುತ್ತದೆ. ಅಂದರೆ ಈ ಬಗೆಯ ಆಸೆಗಳಿಗೆ ಮತ್ತು ಆ ಆಸೆಯ ಕಾರಣವಾಗಿ ಬಾಲ್ಯ ವಿವಾಹಗಳಿಗೆ ಎಡೆಮಾಡಿಕೊಡುತ್ತವೆ. ಯರ್ರಗುಡಿ ಗ್ರಾಮದ ಚಂದ್ರಮ್ಮನವರಿಗೆ ತಾನು ಇಲ್ಲದಿದ್ದರೆ ತನ್ನ ಮಗಳ ವಿವಾಹ ಆಗುತ್ತದೋ ಅಥವಾ ಇಲ್ಲವೋ ಎಂಬ ಆತಂಕ ಮತ್ತು ತನ್ನ ಸಂಬಂಧವನ್ನು ಉಳಿಸಿಕೊಳ್ಳಬೇಕು ಎಂಬ ಆಸೆ. ಇವುಗಳ ಕಾರಣವಾಗಿ ತಾನು ಸಾಯುವ ಮೊದಲೇ ತನ್ನ ಮಗಳ ಮದುವೆಯನ್ನು ತನ್ನ ತಮ್ಮನ ಮಗನಿಗೇ ಕೊಟ್ಟು ವಿವಾಹ ಮಾಡಬೇಕೆಂದು ನಿರ್ಧರಿಸುತ್ತಾಳೆ. ಹಾಗೆಯೇ ತನ್ನ ತಮ್ಮನ ಮನೆಯಲ್ಲಿ ಇರುವುದರಿಂದ ಮಗಳೂ ಸುರಕ್ಷಿತವಾಗಿರುತ್ತಾಳೆ ಎಂಬ ಮನೋಭಾವನೆಯಿಂದ ತನ್ನ ಮಗಳು ಇನ್ನು ಚಿಕ್ಕವಳಾಗಿದ್ದಾಗ್ಯೂ ಮದುವೆಯನ್ನು ಮಾಡುತ್ತಾರೆ. ಹೀಗೆ ಕೆಲವರಿಗೆ ಈ ಬಗೆಯಲ್ಲಿ ಚಿಕ್ಕ ಮಕ್ಕಳಿಗೆ ವಿವಾಹ ಮಾಡುವುದು ಕಾನೂನು ಬಾಹೀರ ಎಂಬುದು ತಿಳಿದಿದೆ.

ಆದರೆ ಕುಟುಂಬದಲ್ಲಿನ ಪರಿಸ್ಥಿತಿಯ ಕಾರಣವಾಗಿ ತಮ್ಮ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡುವ ಅನಿವಾರ್ಯತೆಗೆ ಒಳಗಾಗುತ್ತಾರೆ. ಒಟ್ಟಾರೆಯಾಗಿ ಕುಟುಂಬದಲ್ಲಿನ ಹಿರಿಯರ ಆಸೆ, ಆಕಾಂಕ್ಷೆಗಳಿಗೆ ಚಿಕ್ಕ ಮಕ್ಕಳು ವಿವಾಹಕ್ಕೆ ಬಲಿಯಾಗುತ್ತಿರುವುದು ವಾಸ್ತವ ಸತ್ಯ. ಹೀಗೆ ಬಾಲ್ಯ ವಿವಾಹಕ್ಕೆ ಕೌಟುಂಬಿಕ ಕಾರಣಗಳಿರುವುದು ಕಂಡುಬರುತ್ತದೆ. ಅಧ್ಯಯನದ ಕ್ಷೇತ್ರವ್ಯಾಪ್ತಿಯಲ್ಲಿ ಬಾಲ್ಯ ವಿವಾಹಕ್ಕೆ ಒಳಗಾದ ಒಟ್ಟು ೩೦೦ ಪ್ರಕರಣಗಳಲ್ಲಿ ಈ ಕೌಟುಂಬಿಕ ಕಾರಣಗಳನ್ನು ನೀಡಿರುವುದನ್ನು ಕೆಳಗಿನ ಕೋಷ್ಟಕದಲ್ಲಿ ತಿಳಿಸಲಾಗಿದೆ.

**ಕೋಷ್ಟಕ ೯.೧**
**ಕೌಟುಂಬಿಕ ತೊಡಕುಗಳು**

| ಕೌಟುಂಬಿಕ ಕಾರಣಗಳು | ಹೌದು | | ಇಲ್ಲ | | ಈ ಪ್ರಶ್ನೆಗೆ ಮೌನ ವಹಿಸಿದವರು | |
|---|---|---|---|---|---|---|
| ರಕ್ತ ಸಂಬಂಧಗಳನ್ನು ಉಳಿಸಿಕೊಳ್ಳುವುದು | ೧೯೦ | ೬೩.೩೩% | ೮೦ | ೨೬.೬೬% | ೩೦ | ೧೦% |
| ಹೆಣ್ಣು ಕುಟುಂಬದಲ್ಲಿ ಇದ್ದಷ್ಟು ಹೊರೆ ಎಂಬ ಭಾವನೆ | ೨೧೮ | ೭೨.೬೬% | ೨೦ | ೬.೬೬% | ೬೨ | ೨೦.೬೬% |
| ಕುಟುಂಬದ ಹಿರಿಯರ ಆಸೆಯನ್ನು ಈಡೇರಿಸುವುದು. | ೧೨೮ | ೪೨.೬೬% | ೪೨ | ೧೪% | ೧೩೦ | ೪೩.೩೩% |




**ರೇಖಾಚಿತ್ರ ೯.೧. ಕೌಟುಂಬಿಕ ತೊಡಕುಗಳು**

ಮೇಲಿನ ಕೋಷ್ಟಕ ಮತ್ತು ರೇಖಾಚಿತ್ರದಲ್ಲಿ ತಿಳಿಸಿರುವಂತೆ ರಕ್ತಸಂಬಂಧಗಳನ್ನು ಉಳಿಸಿ ಕೊಳ್ಳುವುದಕ್ಕಾಗಿ ಚಿಕ್ಕ ವಯಸ್ಸಿನಲ್ಲಿಯೇ ತಮ್ಮ ಮಕ್ಕಳಿಗೆ ವಿವಾಹ ಮಾಡುವುದನ್ನು ಸಮರ್ಥಿಸಿರುವವರ ಪ್ರಮಾಣ ಶೇ.೬೩.೩೩ರಷ್ಟಿದೆ. ಅಂದರೆ ಒಟ್ಟು ಮುನ್ನೂರು ಕುಟುಂಬಗಳಲ್ಲಿ ೧೯೦ ಕುಟುಂಬಗಳ ಸದಸ್ಯರು ಇದನ್ನು ಒಪ್ಪಿಕೊಂಡಿವೆ. ಉಳಿದಂತೆ ಶೇ. ೨೬.೬ರಷ್ಟು ಸದಸ್ಯರು

ಈ ಪ್ರಶ್ನೆಯನ್ನು ಸಮರ್ಥಿಸಿಕೊಂಡಿಲ್ಲ. ಹಾಗೆಯೇ ಶೇ.೧೦ರಷ್ಟು ಸದಸ್ಯರು ಈ ಪ್ರಶ್ನೆಗೆ ಯಾವುದೇ ಉತ್ತರವನ್ನು ನೀಡದೇ ಮೌನವಹಿಸಿದ್ದಾರೆ. ಹಾಗೆಯೇ ಹೆಣ್ಣು ಕುಟುಂಬದಲ್ಲಿ ಇದ್ದಷ್ಟು ಹೊರೆ ಎಂಬ ಮನೋಭಾವನೆಯನ್ನು ತಳೆದವರ ಪ್ರಮಾಣ ಶೇ.೭೨.೬೬ರಷ್ಟಿದೆ. ಇದನ್ನು ಅಲ್ಲಗೆಳೆದವರ ಪ್ರಮಾಣ ಮಾತ್ರ ಶೇ. ೬.೬೬ರಷ್ಟಿದೆ. ಇನ್ನು ಈ ಪ್ರಶ್ನೆಗೆ ಯಾವುದೇ ಉತ್ತರವನ್ನು ನೀಡದಿರುವವರ ಪ್ರಮಾಣ ಶೇ.೨೦.೬೬ರಷ್ಟಿದೆ. ಇನ್ನು ಕುಟುಂಬದ ಹಿರಿಯರ ಆಸೆಗಾಗಿ ತಮ್ಮ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹವಾಗುವುದನ್ನು ಒಪ್ಪಿಕೊಂಡಿರುವವರ ಪ್ರಮಾಣ ಶೇ.೪೨.೬೬ರಷ್ಟಿದೆ. ಇದು ಸರಿಯಲ್ಲೆಂದು ಹೇಳುವವರ ಪ್ರಮಾಣ ಶೇ.೧೩ರಷ್ಟಿದೆ. ಹಾಗೆಯೇ ಈ ಪ್ರಶ್ನೆಗೆ ಮೌನವಹಿಸಿದವರ ಪ್ರಮಾಣ ಶೇ.೪೪.೩೩ರಷ್ಟಿದೆ. ಇಲ್ಲಿ ಮೌನವಹಿಸಿದವರ ಪ್ರಮಾಣವನ್ನು ಗಮನಿಸಿದರೆ, ಇವರು ಸಾಮಾಜಿಕ ಮತ್ತು ಕೌಟುಂಬಿಕ ಒತ್ತಡಗಳ ಕಾರಣವಾಗಿ ಕೆಲವು ಸದಸ್ಯರು ಮೇಲಿನ ಪ್ರಶ್ನೆಗಳಿಗೆ ಮೌನವಹಿಸಿರುವುದು ಕಂಡುಬರುತ್ತದೆ. ಅಂದರೆ ಇದನ್ನು ಸಮರ್ಥಿಸಿಕೊಂಡರೆ ಸಮಾಜದ ದೃಷ್ಟಿಯಿಂದ ಮತ್ತು ಕಾನೂನಿನ ದೃಷ್ಟಿಯಿಂದ ನಿರಾಕರಿಸಲ್ಪಡಬಹುದು ಎಂಬ ಆತಂಕ ಒಂದುಕಡೆಯಾದರೆ, ಇವುಗಳನ್ನು ಸಾರಾಸಗಟಾಗಿ ನಿರಾಕರಿಸಿದ್ದೇ ಆದಲ್ಲಿ ಕುಟುಂಬದಲ್ಲಿ ಅಭದ್ರತೆಯನ್ನು ಅನುಭವಿಸಬೇಕಾಗುತ್ತದೆ ಎಂಬ ಆತಂಕದ ಕಾರಣವಾಗಿ ಮೌನವಹಿಸಿರುವುದು ಕಂಡುಬರುತ್ತದೆ. ಇವುಗಳೆಲ್ಲವುಗಳ ಮಧ್ಯೆ ಮೇಲಿನ ಕೌಟುಂಬಿಕ ಕಾರಣಗಳಿಗಾಗಿ ಬಾಲ್ಯವಿವಾಹಗಳು ನಡೆಯುತ್ತಿರುವುದಂತೂ ಸತ್ಯದ ಸಂಗತಿ.

**೯.೨. ಸಾಮಾಜಿಕ ತೊಡಕುಗಳು**

ಭಾರತೀಯ ಸಮಾಜವು ಹಲವು ಧರ್ಮಗಳಿಂದ ಕೂಡಿದೆ. ಈ ಧರ್ಮಗಳು ಹಲವು ಜಾತಿ ಸಮುದಾಯಗಳನ್ನು ಒಳಗೊಂಡಿವೆ. ಮುಖ್ಯವಾಗಿ ಹಿಂದೂ, ಮುಸ್ಲಿಂ, ಕ್ರೈಸ್ತ ಮುಂತಾದ ಧರ್ಮಗಳು ತಮ್ಮದೇ ಆದಂತಹ ನಿಯಮಗಳನ್ನು ರೂಪಿಸಿಕೊಂಡು ಜನರು ಈ ನಿಯಮಗಳಿಗೆ ಒಳಗೊಳ್ಳುವಂತೆ ಮಾಡಿದೆ. ಮುಖ್ಯವಾಗಿ ಸಮಾಜ ವ್ಯವಸ್ಥೆಯಲ್ಲಿ ವಿವಾಹವೂ ಒಂದು ಸಂಸ್ಥೆಯಾಗಿದ್ದು, ಇದಕ್ಕೆ ಅಪಾರವಾದ ಪ್ರಾಮುಖ್ಯತೆ ಇದೆ. ಹಾಗಾಗಿ ವ್ಯವಸ್ಥೆಯ ಭಾಗವಾಗಿರುವ ಮಾನವರು ಈ ವಿವಾಹ ಎಂಬ ಸಂಸ್ಥೆಗೆ ಒಳಪಡಲೇಬೇಕು. ಅವರು ಯಾವುದೇ ಧರ್ಮದವರಾದರೂ ವಿವಾಹಕ್ಕೆ ಒಳಗಾಗುವುದು ಕಡ್ಡಾಯ. ಆದರೆ ಈ ವಿವಾಹಗಳು ಕಾನೂನು ರೂಪಿಸಿರುವ ನಿಯಮಗಳಿಗೆ ಅನುಗುಣವಾಗಿ ನೆರವೇರಲ್ಪಡುತ್ತವೆಯೇ ಎಂಬುದು ಇಲ್ಲಿನ ಮುಖ್ಯ ಪ್ರಶ್ನೆ. ಏಕೆಂದರೆ ವ್ಯವಸ್ಥೆಯಲ್ಲಿ ಹಿಂದಿನಿಂದಲೂ ಜಾರಿಯಲ್ಲಿರುವ ಬಾಲ್ಯ ವಿವಾಹ ಪದ್ಧತಿಯ ಕಾರಣವಾಗಿ ಕಾನೂನುಬಾಹೀರ ವಿವಾಹಗಳು ನಡೆಯುತ್ತಲೇ ಇವೆ. ಇದು ಚಿಕ್ಕ ಮಕ್ಕಳ ಜೀವನವನ್ನೇ ನಾಶಮಾಡುತ್ತಿದೆ. ಮುಖ್ಯವಾಗಿ ವ್ಯವಸ್ಥೆಯಲ್ಲಿ ಹಲವಾರು ಕಾರಣಗಳಿಗಾಗಿ ಬಾಲ್ಯ ವಿವಾಹಗಳು ಸಂಭವಿಸುತ್ತಲೇ ಇವೆ. ವ್ಯವಸ್ಥೆಯ ಧೋರಣೆಗಳು ಅಥವಾ ರೂಪಿಸಲ್ಪಟ್ಟ ನಿಯಮಗಳು ಜನರನ್ನು ಆಳುತ್ತಲೇ ಇವೆ. ಬಾಲ್ಯ ವಿವಾಹಗಳು

ವ್ಯವಸ್ಥೆಯಲ್ಲಿ ಜೀವಂತವಾಗಿರಲು ಹಲವು ಸಾಮಾಜಿಕ ಕಾರಣಗಳಿರುವುದು ಕಂಡುಬರುತ್ತವೆ. ಅವುಗಳೆಂದರೆ ಅ. ಸಮಾಜದಲ್ಲಿ ಕುಟುಂಬದ ಗೌರವವನ್ನು ಕಾಪಾಡಿಕೊಳ್ಳುವುದು ಆ. ಚಿಕ್ಕ ವಯಸ್ಸಿನಲ್ಲಿ ವಿವಾಹ ಮಾಡುವುದರಿಂದ ವರದಕ್ಷಿಣೆ ಕಡಿಮೆ ಇ. ಮದುವೆ ಮಾಡಿದ ಹೆಣ್ಣು ಮಗುವನ್ನು ಸಾಮಾಜಿಕವಾಗಿ ರಕ್ಷಿಸಬಹುದು. ಈ. ಹಿರಿಯ ಮಕ್ಕಳ ವಿವಾಹದ ಜೊತೆ ಕಿರಿಯ ಮಕ್ಕಳ ವಿವಾಹ ಮಾಡುವುದು. ಈ ಎಲ್ಲಾ ಕಾರಣಗಳೂ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಕ್ತೃಗಳು ನೀಡಿದ ಮಾಹಿತಿಯನ್ನು ಆಧರಿಸಿವೆ. ಇವುಗಳನ್ನು ಒಂದೊಂದಾಗಿ ಈ ಕೆಳಗಿನಂತೆ ವಿವರಿಸಿಕೊಳ್ಳಲಾಗಿದೆ.

**ಅ. ಸಮಾಜದಲ್ಲಿ ಕುಟುಂಬದ ಗೌರವವನ್ನು ಕಾಪಾಡಿಕೊಳ್ಳುವುದು :** ಪ್ರತಿಯೊಂದು ಕುಟುಂಬವೂ ಸಮಾಜದಲ್ಲಿ ಭಿನ್ನ ರೀತಿಯಲ್ಲಿ ಗುರುತಿಸಿಕೊಂಡಿರುತ್ತದೆ. ಮುಖ್ಯವಾಗಿ ಪ್ರತಿಯೊಂದು ಕುಟುಂಬಕ್ಕೂ ತನ್ನದೇ ಆದ ಸಾಮಾಜಿಕ, ಸಾಂಸ್ಕೃತಿಕ ಸ್ಥಾನಮಾನಗಳು ಇರುತ್ತವೆ. ಹಾಗಾಗಿ ಕುಟುಂಬದ ಗೌರವಕ್ಕೆ ಧಕ್ಕೆ ಬರದ ಹಾಗೆ ಅದರ ಸದಸ್ಯರು ಕಾಪಾಡಿಕೊಂಡು ಬರುತ್ತಿರುತ್ತಾರೆ. ಅದು ಸ್ತ್ರೀ-ಪುರುಷರಿಬ್ಬರ ಕರ್ತವ್ಯವಾಗಿರುತ್ತದೆ. ಆದರೆ ಕುಟುಂಬದ ಗೌರವಕ್ಕೆ ಧಕ್ಕೆ ಬರುತ್ತದೆ ಎಂದು ತಿಳಿದರೆ ಅದರಿಂದ ಹೊರಬರಲು ಆ ಕುಟುಂಬದ ಸದಸ್ಯರು ಎಂತಹ ಕಾರ್ಯವನ್ನಾದರೂ ಮಾಡಲು ತಯಾರಿರುತ್ತಾರೆ. ಮುಖ್ಯವಾಗಿ ಸಮಾಜದಲ್ಲಿ ಎರಡು ಬಗೆಯ ಕಾರಣಗಳಿಂದ ಬಾಲ್ಯ ವಿವಾಹಗಳು ನಡೆಯುತ್ತವೆ. ಒಂದು ಕುಟುಂಬದ ಗೌರವ ಹಾಳಾಗಬಾರದೆಂಬುದು, ಎರಡನೆಯದು ಕುಟುಂಬದ ಗೌರವವನ್ನು ಹೆಚ್ಚಿಸುವ ಕಾರಣಕ್ಕಾಗಿ. ಈ ಎರಡೂ ಕಾರಣಗಳಿಗಾಗಿ ಕುಟುಂಬಗಳಲ್ಲಿನ ಚಿಕ್ಕ ಮಕ್ಕಳಿಗೆ ವಿವಾಹ ಮಾಡುವಂತಹ ಸ್ಥಿತಿ ನಿರ್ಮಾಣವಾಗಿರುತ್ತದೆ. ಈ ಕಾರಣಗಳು ಬಾಲ್ಯ ವಿವಾಹಕ್ಕೆ ಹೇಗೆ ಕಾರಣವಾಗಿ ಮಾರ್ಪಡುತ್ತವೆ ಎಂಬುದನ್ನು ವಕ್ತೃಗಳ ಹೇಳಿಕೆಗಳಿಂದಲೇ ವಿವರಿಸಿಕೊಳ್ಳುವ ಅಗತ್ಯತೆ ಇದೆ.

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಸಿಡೇಗಲ್ಲು ಎಂಬ ಗ್ರಾಮದಲ್ಲಿನ ಶೇಕರಪ್ಪ ಎಂಬುವವರು ತಮ್ಮ ಮಗಳು ಚಿಕ್ಕವಳಿದ್ದಾಗಲೇ ವಿವಾಹ ಮಾಡಿ ಗಂಡನ ಮನೆಗೆ ಕಳುಹಿಸಿದ್ದಾರೆ. ಇವರು ಹೇಳುವಂತೆ "ಸಾರ್ ನಮ್ ಊರಾಗ ಗಂಡು ಹುಡುಗ್ರು ಸರಿ ಇಲ್ಲ. ಯಾರಾದ್ರೂ ಹುಡುಗಿ ಕಂಡ್ ಬಿಟ್ರೆ ಸಾಕು ಜೊಲ್ಲು ಸುರಸ್ತಾವ. ಊರಾಗ ಯಾವ ಹುಡ್ಗಿ ಕೈಗೆ ಬಂದೇತಿ ಅನ್ನೋದನ್ನೇ ಕಾಯ್ಕಂಡು ಇರ್ತಾರ. ಕೈಗೆ ಬಂದ್ ಹೆಣ್ಮಕ್ಕಳ್ನ ಒಬ್ರನ್ನೇ ಎಲ್ಲಿಗೂ ಕಳ್ಸಂಗಿಲ್ಲ. ಯಾಕಂದ್ರ ಆ ವಯಸ್ನಾಗ ಯಾರು ಏನು ಮಾಡ್ತಾರೋ ಗೊತ್ತಾಗಂಗಿಲ್ಲ. ಒಂದುವ್ಯಾಳ ಕೈಗೆ ಬಂದ್ ಹುಡುಗೀನ್ನ ಯಾರಾದ್ರೂ ಕೈ ಹಿಡ್ಕಂಡ್ರೆ ಸಾಕು ಅದನ್ನೇ ದೊಡ್ಡದು ಮಾಡಿ ಸುದ್ದಿ ಹಬ್ಬಿಸಿ ಬಿಡ್ತಾರ. ಆವಾಗ ನಮ್ ಮನಿತನ್ದ ಗೌರವ ಏನ್ ಆಗಬೇಕು. ಮತ್ತೆ ಅಕಿನ ಯಾರು ಮದುವಿ ಆಗ್ಬೇಕು. ಹಾಂಗಾಗಿ ಹೆಣ್ಮಕ್ಕಳ್ನ ಬಾಳ ಜೋಪಾನದಿಂದ ಕಾಪಾಡಿಕೆಂಡು ಬರ್ಬೇಕು. ನಮ್ಮನ್ನ ಕೆಡಿಸೋರು ನಮ್ ಜನ್ದಾಗೇ ಇರ್ತಾರ. ಬ್ಯಾರೇರು ಯಾರೂ ಕೆಡ್ಸಂಗಿಲ್ಲ. ಅದಕ್ಕಂತ ನಮ್ ಮನಿ ಮರ್ಯಾದಿನ ಉಳಸ್ಕಾಬೇಕು ಅಂದ್ರೆ ಮದುವಿ ಆಗೋ

ಹೆಣ್ಮಕ್ಳು ಮನ್ಯಾಗ ಬಾಳ ದಿನ ಇರ್ತಾರ್ರು. ಹಂಗಾಗೇ ನನ್ ಮಗ್ಳು ಕೈಗೆ ಬಂದು ಎರಡು ತಿಂಗ್ಳಿಗೆ ಮದುವೆ ಮಾಡಿ ಬಿಟ್ಟೆ. ಈಗ ಅವ್ರು ಬಾಳ ಚನ್ನಾಗಿ ಐದಾರ. ಹಿಂಗ ಮದ್ವಿ ಮಾಡಿದ್ರೆ ನಮ್ ಮನಿ ಮರ್ಯಾದಿನೂ ಉಳಿತೈತಿ ಎಂದರು.

ಕೊಪ್ಪಳ ತಾಲೂಕಿನ ಬೈರಾಪುರ ಗ್ರಾಮದ ಲಕ್ಷ್ಮಣ ಎಂಬುವವರು ತಮ್ಮ ಮಗಳು ಇನ್ನು ೮ನೇ ತರಗತಿ ಓದುತ್ತಿರುವಾಗಲೇ ವಿವಾಹ ಮಾಡಲು ಮುಂದಾಗಿದ್ದಾರೆ. ಆದರೆ ಊರಲ್ಲಿನ ಅಂಗನವಾಡಿ ಕಾರ್ಯಕರ್ತೆಯ ಕಾರಣದಿಂದ ಈ ವಿವಾಹ ನಿಲ್ಲಲ್ಪಟ್ಟಿತು. ಹೀಗೆ ಬಾಲ್ಯ ವಿವಾಹವನ್ನು ಮಾಡಲು ಮುಂದಾದ ಲಕ್ಷ್ಮಣ ಇವರನ್ನು ಭೇಟಿಯಾದಾಗ ಅವರು ಕಾರಣ ಹೇಳಿದ್ದು ಹೀಗೆ "ನಮ್ ಊರಾಗ ನಮ್ ಮನಿತನಕ್ಕ ಬಾಳ ಗೌರವ ಐತಿ. ಇದಕ್ಕ ಯಾವುದ್ರಿಂದ್ಲೂ ತೊಂದ್ರಿ ಆಗ್ಬಾರ್ದು ಹಂಗ ನೋಡ್ಕೆಂಡು ಬಂದೇನಿ. ಆದ್ರ ಊರಾಗ ಹುಡುಗ ಹುಡುಗಿ ಓಡಿ ಹೋಗಿ ಮದುವಿ ಆಗಾದು ಜಾಸ್ತಿ ಆಗೇತಿ. ಹುಡುಗಿದು ಯಾವ ಜಾತಿನೋ ಹುಡುಗುನ್ದು ಯಾವ ಜಾತಿನೋ ಹಿಂಗ ಪ್ರೀತಿ ಗೀತಿ ಅಂತ ಮಾಡ್ಕೆಂಡು ಓಡಿಹೋಗ್ತಾರ. ಹಂಗಾಗಿ ನಮ್ ಮನ್ಯಾಗಿನ ಹೆಣ್ಮಕ್ಳನ್ನ ಹೊರಗ ಕಳ್ಸಾದೇ ಬಾಳ ಕಷ್ಟ ಆಗೇತಿ ನೋಡ್ರಿ. ಊರಾಗಿನ ಹುಡುಗ್ರು ಸರಿಗಿಲ್ಲ. ಹಿಂಗ ಪ್ರೀತಿಗೀತಿ ಅಂತ ಓಡಿ ಹೋಗ್ಬಿಟ್ರೆ ಏನ್ ಮಾಡೋದು. ಇಷ್ಟದಿನ ಕಾಪಾಡಿಕೆಂಡು ಬಂದಿದ್ದ ಮನಿ ಮರ್ಯಾದಿನೆಲ್ಲಾ ಕಳ್ಕಬೇಕಾಗತೈತಿ. ಮತ್ತೆ ಅವ್ರು ತಂದಿ ತಾಯಿ ಮರ್ಯಾದಿನ ತಗ್ದು ಏನ್ ಸಾದ್ಸಿದಂಗ ಆತು. ಅದಕ್ಕಂತ ಇವು ಯಾವೂ ಗಲಾಟಿಗೋಳು ಬ್ಯಾಡ ಅಂತೇಳಿ. ನನ್ ಮಗ್ಳಿಗೆ ಜಲ್ದಿ ಮದುವಿ ಮಾಡಿ ಬಿಡಾನು ಅಂತ ತೀರ್ಮಾನ ಮಾಡಿದ್ದೆ. ಹಂಗೆ ಒಂದು ಗಂಡು ಹುಡುಗುನ್ನೂ ಸತೆ ನೋಡಿದ್ದೆ. ಇನ್ನೇನು ಮದುವಿ ದಿನ ಹತ್ರ ಬಂತು ಅನ್ನೋವಾಗ್ಲೇ ಬಾಲವಾಡಿ ಟೀಚರಮ್ಮ ಕೆಡಿಸಿಬಿಟ್ಲು. ಬಾಳ ಜನ ಸರ್ಕಾರಿ ಅಧಿಕಾರಿಗೋಳು ಬಂದಿದ್ರು. ಅವ್ರಿಗೆ ಊರಾಗ ಹಿಂಗೆಲ್ಲಾ ಆಗಕತ್ಯಾವ. ನಮ್ ಮಗಳ್ದು ನಾಳಿದಿನ ಹಿಂಗ ಆದ್ರ ನಮ್ ಮನಿತನದ ಮರ್ಯಾದಿ ಹಾಳಾಗತೈತಿ. ಒಂದ್ಸಲ ಮನಿ ಮರ್ಯಾದಿ ಹೋಯ್ತಂದ್ರೆ ಏನಂದ್ರುನೂ ಮತ್ತೆ ವಾಪಾಸು ಬರಂಗಿಲ್ಲ. ಇದೇ ಹೆದ್ರಿಕಿಲಿಂದ ಮಗ್ಳಿಗಿ ಜಲ್ದಿ ಮದುವಿ ಮಾಡಿಬಿಡಾನು ಅಂತೇಳಿ ಎಲ್ಲಾನೂ ರೆಡಿ ಮಾಡಿದ್ದೆ ಅಂತ ಹೇಳಿದ್ರೂ ಅವ್ರು ಕೇಳ್ಲಿಲ್ಲ. ಅವ್ರು ನಮ್ ಕಡಿಕಿಂದ ಒಂದು ಪತ್ರ ಬರ್ಸಿಕೆಂಡು ಹೋದ್ರು. ಕೈಗೆ ಬಂದ್ ತುತ್ತು ಬಾಯ್ಗೆ ಬರ್ಲಿಲ್ಲದಂಗಾತು. ಈಗ ಮಗ್ಳಿಗಿ ೧೮ ವರ್ಸ ತುಂಬೋತನ ಮದುವಿ ಮಾಡಾಕ ಬರಂಗಿಲ್ಲ. ಅಲ್ಲಿತನ ಅಕಿನ್ನ ಕಾಯ್ಕಂಡು ಇರ್ಬೇಕಲ್ಲಾ. ಬಾಳ ತ್ರಾಸಾಗತೈತಿ. ಅಕಿಗಿ ಏನೂ ಆಗ್ದಂಗ ನೋಡ್ಕಬೇಕು. ಯಾಕಂದ್ರ ನಮ್ ಮನಿತನ್ದ ಗೌರವ ಅಕಿ ಮ್ಯಾಲೇ ನಿಂತೈತಿ" ಎಂದರು.

ಗದಗ ತಾಲೂಕಿನ ಚಿಂಚಳ್ಳಿ ಗ್ರಾಮದ ಹನುಮಂತಪ್ಪ ಎಂಬುವವರು ತಮ್ಮ ಎರಡನೇ ಮಗಳು ಹತ್ತನೇ ತರಗತಿ ಓದುತ್ತಿರುವಾಗಲೇ ವಿವಾಹವನ್ನು ಮಾಡಿಬಿಟ್ಟಿದ್ದಾರೆ. ಈ ವಿಷಯ ತಿಳಿದು ಇವರನ್ನು ಭೇಟಿಯಾಗಿ ಕಾರಣ ಕೇಳಿದಾಗ ಇವರು ಹೇಳಿದ್ದು ಹೀಗೆ "ನಂಗೆ ಇಬ್ರು ಹೆಣ್ಮಕ್ಳು. ಮೊದಲ್ನೆಲೊ ಮನಿಬಿಟ್ಟು ಓಡಿ ಹೋಗ್ಯಾಳ. ಇನ್ನೊಬ್ಳನ್ನ ಇಲ್ಲೇ ನಮ್

ಗುಂಪಿನ್ಯಾಗ ಮದುವಿ ಮಾಡಿ ಕೊಟ್ಟೇನಿ. ಇರೋದು ಇಬ್ರೆ ಹೆಣ್ಮಕ್ಳು ಇವ್ರನ್ನ ಚೆನ್ನಾಗಿ ಓದ್ಸಾನು ಅಂತೇಳಿ ಅನ್ಕಂಡಿದ್ವೆ. ಆದ್ರ ದೊಡ್ ಮಗ್ಳು ನಮ್ ಮಕಕ್ಕ ಮಸಿ ಬಳಿವಂತ ಕೆಲ್ಸ ಮಾಡಿ ಬಿಟ್ಲು. ಏನ್ ಮಾಡಾದು ಆ ವಯಸ್ಸು ಇರೋದೇ ಹಂಗೆ. ನಾವಾರ ಸ್ವಲ್ಪ ಹುಷಾರಾಗಿರ್ಬೇಕಿತ್ತು. ಕೈಗಿ ಬಂದ್ ಹೆಣ್ಮಗ್ಳು ನಮ್ ಗೆರಿ ದಾಟಂಗಿಲ್ಲ ಅಂತ ತಿಳ್ಕಂಡಿದ್ವಿ. ಆದ್ರ ಅಕಿ ನಮಿಗೆ ಸರೀಗೇ ಮಾಡಿ ಹೋದ್ಲು. ಉರಾಗ ತಲಿ ಎತ್ಲಾರ್ದಂಗ ಮಾಡಿ ಬಿಟ್ಲು. ನಮ್ ಊರಾಗಿನ ಒಬ್ಬ ಹುಡುಗನ್ನ ಪ್ರೀತಿ ಮಾಡಿದ್ಲಂತೆ ಅದು ಯಾರ್ಗೂ ಗೊತ್ತಿಲ್ಲ. ಮನ್ಯಾಗಿನ ತನ್ ತಂಗಿಗೇ ಗೊತ್ತಿಲ್ಲ. ಹಂಗ ರಹಸ್ಯ ಕಾಪಾಡಿಕೆಂಡು ಬಂದು ಒಂದೇ ಸಾರಿ ಊರು ಬಿಟ್ಟೇ ಓಡಿ ಹೋಗ್ಯಾಳ. ಇಲ್ಲಿ ನಮ್ ಮನಿ ಮಾನ ಮರ್ಯಾದಿಯೆಲ್ಲಾ ಹಾಳಾಗಿಹೋಯ್ತು. ಆಕಿ ನಮ್ ಪಾಲಿಗಿ ಸತ್ತು ಹೋದ್ಲು ಅಂತಾನೇ ತಿಳ್ಕಂಡು ಬಿಟ್ವಿ. ಆಕಿ ಹಿಂಗ ಮಾಡಿದ್ದನ್ನ ಸುಧಾರ್ಸಿಕೆಳ್ಳಾಕೇ ಬಾಳ ಟೈಮು ಬೇಕಾತು. ಎರಡ್ನಾಕಿ ಸತೆ ಹಿಂಗೆ ಅವ್ರ ಅಕ್ಕ ಮಾಡಿದಂಗ ಮಾಡಿಬಿಟ್ರೆ ನಮ್ ಗತಿ ಏನು. ಊರಾಗ ತಲಿ ಎತ್ತಿ ತಿರ್ಗ್ಯಾಡಾಕ ಆಕತ್ತೇನು. ಕಾನೂನು ನೋಡಿದ್ರ ೧೮ ವರ್ಸಕ್ಕ ಮದುವಿ ಮಾಡ್ಬೇಕು ಅಂತ ಹೇಳ್ತೈತಿ. ಹಿಂಗಾದ್ರೆ ನಮ್ ಗತಿ ಏನು. ಒಂದ್ಸಾರಿ ಮನಿ ಮರ್ಯಾದಿ ಓತು ಅಂದ್ರೆ ಅದನ್ನ ತಿರ್ಗಿ ತಂದು ಕೊಡಾಕ ಬರ್ತೈತೇನು. ನಮ್ ಕಷ್ಟ ಯಾರ್ಗೆ ಹೇಳ್ಕಳ್ಳಾನು. ಕಾನೂನು ಹೇಳ್ದಂಗ ಕೇಳ್ಕೆಂಡು ಇದ್ರೆ ಮುಗೀತು. ಮನಿ ಮರ್ಯಾದಿನೆಲ್ಲಾ ಬೀದಿ ಪಾಲಾಗಿಬಿಡ್ತೈತಿ. ಜೀವಕ್ಕಿಂತ ಮನಿ ಮರ್ಯಾದೀನೇ ಹೆಚ್ಚು. ಅದಕ್ಕ ಅಂತೇಳಿ. ಸಣ್ಣ ಮಗಳ್ನ ಸಾಲಿ ಬಿಡ್ಸಿ. ಮದುವಿ ಮಾಡಿಬಿಟ್ವಿ" ಎಂದರು.

ಬಾಗಲಕೋಟೆ ತಾಲೂಕಿನ ಕಳಸಕೊಪ್ಪ ಗ್ರಾಮದ ವೆಂಕಟೇಶ ಎಂಬುವವರು ತಮ್ಮ ಮಗನಿಗೆ ೨೧ ವರ್ಷ ತುಂಬುವ ಮೊದಲೇ ವಿವಾಹ ಮಾಡಿದ್ದಾರೆ. ಇದಕ್ಕೆ ಕಾರಣ ಒಳ್ಳೆಯ ಸಂಬಂಧ ಎಂಬುದು. ಈ ವಿಷಯ ತಿಳಿದು ಅವರನ್ನು ಭೇಟಿಯಾದಾಗ ಅವರು ಹೇಳಿದ್ದು ಹೀಗೆ, "ನಮ್ ಮಗ ಓದಿದ್ದು ೧೨ನೇ ಕ್ಲಾಸು. ಆದ್ರೆ ಅವ್ನಿನ್ನ ಓದ್ತೀನಿ ಅಂತ ಹೇಳ್ತಿದ್ದ. ಒಳ್ಳೆ ಕಡಿಗಿ ಸಂಬಂಧ ಬರೋವರ್ಗೂ ಓದ್ಲಿ ಅಂತ ನಾವೇ ಸುಮ್ನಿದ್ವಿ. ಆದ್ರ ಒಳ್ಳೆ ಕಡ್ಗಿ ಸಂಬಂಧ ಸಿಕ್ತು. ಹುಡ್ಗಿ ಬಾಳ ಚಂದ ಐದಾಳ. ಹಂಗಾಗಿ ಒಳ್ಳೆ ಮುಹೂರ್ತ ನೋಡಿ ಮದುವಿ ಮಾಡಿಬಿಟ್ವಿ. ಒಳ್ಳೆ ಕಡಿಗಿ ಸಂಬಂಧ ಸಿಕ್ರೆ ಯಾರು ಬ್ಯಾಡ ಅಂತಾರ ನೀವೇ ಹೇಳ್ರಿ. ಹಂಗಾಗಿ ಅವ್ನು ಓದಾದನ್ನ ಬಿಡ್ಸಿ ಮದುವಿ ಮಾಡಿದ್ವಿ. ಈಗ ನಮ್ ಜಮೀನ್‌ನ್ನ ನೋಡ್ಕೆಂಡು ಐದಾನ. ಅವ್ರ ಮಾವನೋರು ಇನ್ನ ಮುಂದ್ಕ ಓದು ಅನ್ನಾಕತ್ಯಾರ. ಅವ್ನು ೧೨ನೇ ಕ್ಲಾಸು ಪಾಸಾದ್ರೆ ಯಾವ್ದೋ ಒಂದು ಕೆಲ್ಸ ನೋಡ್ತ್ಯಾರಂತೆ. ಹಂಗಾಗಿ ಈಗ ಓದು ಅನ್ನಕತ್ಯಾರ. ಹಿಂಗ ನೋಡ್ಕೆಳ್ಳಾರು ಯಾರು ಸಿಗ್ತಾರ ಹೇಳ್ರಿ. ಹಿಂದ್‌ಮುಂದ್ ಏನೂ ಯೋಚ್ನೆ ಮಾಡ್ದಂಗ ಈ ಮದುವೀನ ಮಾಡಿದೆ. ಬಾಳ ದೊಡ್ಡ ಮನಿ ಸೊಸಿನ ಮಾಡ್ಕೆಂಡು ಬಂದಾರ ಅಂತ ನಮ್ ಊರಾಗ ಬಾಳ ಜನ ಹೇಳ್ಕೆಂತಾರ" ಎಂದರು.

ನಿಮ್ಮ ಮಗನಿಗೆ ಇನ್ನು ೨೧ ವರ್ಷ ತುಂಬಿಲ್ಲ ಆವಾಗ್ಲೇ ಮದುವೆ ಮಾಡಿದ್ದೀರಲ್ಲ. ಕಾನೂನು ಪ್ರಕಾರ ಇದು ತಪ್ಪಲ್ವಾ ಎಂದು ಕೇಳಿದಾಗ, ಹೌದು ಸಾರ್ ಕಾನೂನು ಬಾಳ ಹೇಳ್ತೈತಿ ಆದ್ರ ನಮ್ ಜೀವ್ನ ನಡಿಯೋದು ಹೆಂಗ ಹೇಳ್ರಿ. ಒಳ್ಳೆ ಸಂಬಂಧ ಸಿಗದನ್ನೇ ಕಾಯ್ತಿರ್ತಾರ ಜನ. ಹಂಗ ಸಿಕ್ಕಾಗ ಕಾನೂನು ಗೀನೂನು ಅಂತ ನೋಡ್ಕೆಂಡು ಕುಂತ್ರೆ ಅಷ್ಟೆ. ನಮ್ ಮಕ್ಳು ಜೀವ್ನ ಸುದಾರ್‍ಸಂಗಿಲ್ಲ. ಮದುವಿ ಅಂದ್ರೆ ಏನು? ಗಂಡ ಹೆಂಡ್ತಿ ಇಬ್ರು ಆರಾಮಾಗಿ ಸುಖ್ವಾಗಿ ಇದ್ರೆ ಅಷ್ಟೇ ಸಾಕು. ಕಾನೂನು ಹೇಳಿದ್ ವಯ್ಸಿಗೆ ಮದುವಿ ಆದ್ರ ಮಾತ್ರ ಸುಖ್ವಾಗಿ ಇರ್ತಾರ? ಯಾರ್ ನೋಡ್ಯಾರ ಮುಂದಿಂದು. ನಮ್ ಕರ್ತವ್ಯ ಏನು ಅದನ್ನ ಮಾಡ್ಬೇಕು ಅಷ್ಟೆ. ಅದನ್ನ ನಾನು ಮಾಡೇನಿ ಎಂದರು.

ಸಮಾಜದಲ್ಲಿ ಕುಟುಂಬದ ಗೌರವ ಹೆಚ್ಚಾಗಲು ತಮ್ಮ ಮಕ್ಕಳನ್ನೇ ಸಾಧನವನ್ನಾಗಿ ಬಳಸಿಕೊಳ್ಳುವ ಪರಿಸ್ಥಿತಿ ಇರುವುದು ಕಂಡುಬರುತ್ತದೆ. ಮುಖ್ಯವಾಗಿ ಊರಲ್ಲಿ ತಮ್ಮ ಮನೆತನದ ಗೌರವವನ್ನು ಹಾಳು ಮಾಡಿದರು ಎಂಬ ಕಾರಣಕ್ಕೆ, ಹೆಣ್ಣು ಋತುಮತಿಯಾದ ನಂತರ ಅವಳನ್ನು ನೋಡಿಕೊಳ್ಳುವ ಜವಾಬ್ದಾರಿಯಿಂದ ಹೊರ ಬರುವುದಕ್ಕೆ ಮತ್ತು ಊರುಗಳಲ್ಲಿ ಸಂಭವಿಸುವ ಪ್ರೇಮ ಪ್ರಕರಣಗಳ ಕಾರಣ ಇವುಗಳೆಲ್ಲವೂ ಬಾಲ್ಯ ವಿವಾಹಕ್ಕೆ ಮುನ್ನುಡಿಯನ್ನು ಹಾಕುತ್ತವೆ. ಮುಖ್ಯವಾಗಿ ಕುಟುಂಬದಲ್ಲಿ ಮಹಿಳೆಯನ್ನು ಹೊರೆಯೆಂದೇ ಭಾವಿಸುವ ಸಮಾಜ ಅವಳನ್ನು ಅನ್ಯಳೆಂದೇ ನೋಡುತ್ತದೆ. ಅವಳನ್ನು ರಕ್ಷಿಸುವ ಹೊಣೆಯನ್ನು ಹೊತ್ತ ಕುಟುಂಬದ ಸದಸ್ಯರು ಅದರಿಂದ ಬಹು ಬೇಗನೇ ಹೊರ ಬರಲು ಪ್ರಯತ್ನಿಸುತ್ತಾರೆ. ಹಾಗೆಯೇ ಗ್ರಾಮಗಳಲ್ಲಿ ಯಾವುದಾದರೊಂದು ಪ್ರೇಮ ಪ್ರಕರಣ ಸಂಭವಿಸಿದರೆ ಅಂತಹ ಪರಿಸ್ಥಿತಿ ತಮ್ಮ ಕುಟುಂಬಗಳಲ್ಲಿ ಸಂಭವಿಸಬಾರದು ಎಂಬ ಕಾರಣಕ್ಕೆ ಎಷ್ಟೋ ಜನ ಮಹಿಳೆಯರನ್ನು ಬಹು ಬೇಗನೇ ವಿವಾಹದ ಕೂಪಕ್ಕೆ ತಳ್ಳುವಂತಹ ಸ್ಥಿತಿ ನಿರ್ಮಾಣವಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಜಾತಿ ತಾರತಮ್ಯಗಳು ತುಂಬಾ ಬಲಿಷ್ಠವಾಗಿರುತ್ತವೆ. ಅಂತಹ ಸಂದರ್ಭದಲ್ಲಿ ಈ ಪ್ರೇಮ ಪ್ರಕರಣಗಳು ಅವುಗಳನ್ನು ಅಲ್ಲಾಡಿಸಲು ಪ್ರಯತ್ನಿಸಿದಾಗ ಅಲ್ಲಿ ಕುಟುಂಬದ ಮತ್ತು ಜಾತಿಯ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಅವು ತುಂಬಾ ಗಂಭೀರ ಸ್ವರೂಪವನ್ನು ಪಡೆದುಕೊಳ್ಳುತ್ತವೆ. ಇಂತಹ ಸಂದರ್ಭದಲ್ಲಿ ಒಂದು ಕುಟುಂಬದ ಗೌರವಕ್ಕೆ ಧಕ್ಕೆ ಒದಗಿದರೆ ಇನ್ನೊಂದು ಕುಟುಂಬಕ್ಕೆ ಗೌರವವನ್ನು ಹೆಚ್ಚಿಸುವಂತಿರಬಹುದು. ಹಾಗೆಯೇ ಇಂತಹ ಪ್ರಕರಣಗಳಿಂದ ಎರಡೂ ಕುಟುಂಬಗಳ ಗೌರವಕ್ಕೆ ಹಾನಿಯುಂಟಾಗಬಹುದು. ಇಂತಹ ಪರಿಸ್ಥಿತಿಗಳನ್ನು ನಿಭಾಯಿಸುವುದು ತುಂಬಾ ಕಷ್ಟಕರ ಸಂಗತಿ. ಜೊತೆಗೆ ಒಂದು ಕುಟುಂಬದಲ್ಲಿ ಈ ಬಗೆಯ ಪ್ರೇಮ ಪ್ರಕರಣಗಳು ಸಂಭವಿಸಿದಾಗ ಅಲ್ಲಿ ಸಂಬಂಧಗಳಿಗೆ ಬೆಲೆಯೇ ಇರುವುದಿಲ್ಲ. ತಂದೆ, ತಾಯಿ, ಮಗಳು, ಮಗ ಎಂಬಂತಹ ಸಂಬಂಧಗಳು ತನ್ನಷ್ಟಕ್ಕೆ ತಾನೇ ಕಡಿದುಹೋಗುತ್ತವೆ. ಇಂತಹ ಸಂದರ್ಭದಲ್ಲಿ ಕುಟುಂಬದಲ್ಲಿನ ಇತರೆ ಮಹಿಳೆಯರ ಮೇಲೆ ಇದು ತುಂಬಾ ಪರಿಣಾಮವನ್ನು ಬೀರುತ್ತದೆ. ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಾಗಲೀ

ಅಥವಾ ನಗರ ಪ್ರದೇಶಗಳಲ್ಲಾಗಲೀ ಅಂತರ್ಜಾತೀಯ ವಿವಾಹಗಳಿಗೆ ಮನ್ನಣೆಯೇ ದೊರೆಯುವುದಿಲ್ಲ. ಜಾತಿಯ ಬೇರುಗಳು ತುಂಬಾ ಬಲಿಷ್ಠವಾಗಿರುತ್ತವೆ. ಹಾಗಾಗಿ ಮರ್ಯಾದಾ ಹತ್ಯೆಗಳು ಇಂದಿಗೂ ಸಂಭವಿಸುತ್ತಲೇ ಇವೆ. ಈ ಪ್ರೇಮ ಪ್ರಕರಣಗಳ ಕಾರಣವಾಗಿ ಬಾಲ್ಯ ವಿವಾಹಗಳ ಸಂಖ್ಯೆಯೂ ಅಧಿಕವಾಗುತ್ತಿವೆ. ಊರಲ್ಲಿ ತಮ್ಮ ಕುಟುಂಬದ ಮಹಿಳೆಯರನ್ನು ಬಹುಬೇಗನೇ ಮದುವೆ ಮಾಡುವುದರಿಂದ ತಮ್ಮ ಮನೆತನದ ಗೌರವವು ಉಳಿಯುತ್ತದೆ ಎಂಬ ಆಲೋಚನೆಯ ಕಾರಣವಾಗಿ ಮತ್ತು ಹೆಣ್ಣುಮಗುವಿನ ಲೈಂಗಿಕತೆಯ ಮೇಲೆ ಗಂಡಿನ ಹಿಡಿತ ಸಾಧಿಸಬೇಕು. ಆ ಗಂಡು ತಾಳಿಕಟ್ಟಿದ ಗಂಡೇ ಆಗಿರಬೇಕು ಎಂಬ ಮೌಲ್ಯಗಳ ಕಾರಣವಾಗಿ ಕುಟುಂಬದಲ್ಲಿನ ಚಿಕ್ಕ ಮಕ್ಕಳಿಗೆ ವಿವಾಹ ಮಾಡಲು ಮುಂದಾಗುತ್ತಿದ್ದಾರೆ. ಒಟ್ಟಾರೆಯಾಗಿ ತಮ್ಮ ಕುಟುಂಬದ ಗೌರವವನ್ನು ಕಾಪಾಡಿಕೊಳ್ಳಲು ಚಿಕ್ಕ ಮಕ್ಕಳಿಗೆ ವಿವಾಹ ಮಾಡುವಂತಹ ಸ್ಥಿತಿ ಇರುವುದನ್ನು ಕಾಣಬಹುದಾಗಿದೆ.

**ಆ. ಚಿಕ್ಕ ವಯಸ್ಸಿನಲ್ಲಿ ವಿವಾಹ ಮಾಡುವುದರಿಂದ ವರದಕ್ಷಿಣೆ ಕಡಿಮೆ ಎಂಬ ಬಾವನೆ :** ವರದಕ್ಷಿಣೆಯು ಒಂದು ಸಾಮಾಜಿಕ ಪಿಡುಗಾಗಿದೆ. ವರದಕ್ಷಿಣೆ ಎಂದರೆ ಮದುವೆಯ ಸಂದರ್ಭದಲ್ಲಿ ಹೆಣ್ಣಿನ ತಂದೆ, ತಾಯಿ ಅಥವಾ ಅಣ್ಣ ತಮ್ಮಂದಿರು ವರನಿಗೆ ಹಣದ ರೂಪದಲ್ಲಿ ಅಥವಾ ಚರಾಸ್ತಿ/ಸ್ಥಿರಾಸ್ತಿಯ ರೂಪದಲ್ಲಿ ಕೊಡುವುದನ್ನು ವರದಕ್ಷಿಣೆ ಎನ್ನಬಹುದಾಗಿದೆ. ಸಮಾಜದಲ್ಲಿರುವ ಅನಿಷ್ಠ ಪದ್ಧತಿಗಳಲ್ಲಿ ಇದೂ ಒಂದಾಗಿದೆ. ವರದಕ್ಷಿಣೆಯನ್ನು ಕೊಡುವುದು ಮತ್ತು ತೆಗೆದುಕೊಳ್ಳುವುದು ಕಾನೂನಿನ ಪ್ರಕಾರ ತಪ್ಪು. ಆದರೆ ಈ ಪದ್ಧತಿಯು ಸಮಾಜದಲ್ಲಿ ಎಷ್ಟು ಬಲಿಷ್ಠವಾಗಿ ಬೇರೂರಿದೆ ಎಂದರೆ ವರದಕ್ಷಿಣೆ ಇಲ್ಲದೇ ವಿವಾಹ ಕಾರ್ಯಗಳು ಸಂಭವಿಸುವುದೇ ಇಲ್ಲ. ವರದಕ್ಷಿಣೆಯನ್ನು ಕೊಡುವುದರಲ್ಲಿ ಹೆಣ್ಣಿನ ಕಡೆಯವರೇನಾದರೂ ಎಡವಿದರೆ ಮುಗಿಯಿತು ವಿವಾಹವು ನಿಲ್ಲಲ್ಪಡುತ್ತದೆ. ಹಾಗಾಗಿ ಕುಟುಂಬದಲ್ಲಿ ತಂದೆ, ತಾಯಿ, ಸೋದರರು ತಮ್ಮ ಮನೆಯ ಹೆಣ್ಣುಮಕ್ಕಳ ವಿವಾಹಕ್ಕೆ ಹಣವನ್ನು ಜೋಡಿಸುವುದರಲ್ಲಿಯೇ ಜೀವನವನ್ನು ಕಳೆಯುತ್ತಿರುತ್ತಾರೆ. ವರದಕ್ಷಿಣೆ ಇಲ್ಲದ ವಿವಾಹ ಇಲ್ಲ. ಈ ಒಂದು ಸಾಮಾಜಿಕ ಪಿಡುಗನ್ನು ತೊಡೆದು ಹಾಕಲು ಕಾನೂನು ಜಾರಿಯಾದರೂ ಎಲೆ ಮರೆಯ ಕಾಯಿಯಂತೆ ವರದಕ್ಷಿಣೆ ಕೊಡುವುದು ಮತ್ತು ತೆಗೆದುಕೊಳ್ಳುವುದು ನಡೆದೇ ಇದೆ. ಕೆಲವು ಬಡ ಕುಟುಂಬಗಳಲ್ಲಿ ವರದಕ್ಷಿಣೆಯನ್ನು ಕೊಡುವುದಕ್ಕೆ ಸಾಧ್ಯವಿರದ ಪರಿಸ್ಥಿತಿ ಇರುತ್ತದೆ. ಅಂತಹ ಸಂದರ್ಭದಲ್ಲಿ ತಮ್ಮ ಮಕ್ಕಳನ್ನು ಬೇಗನೇ ವಿವಾಹ ಮಾಡುವ ಒಂದು ಉಪಾಯವನ್ನು ಕಂಡುಕೊಂಡಿದ್ದಾರೆ. ಹಾಗಾಗಿ ವರದಕ್ಷಿಣೆಯ ಕಾರಣವಾಗಿ ಹಲವು ಕುಟುಂಬಗಳು ಬಾಲ್ಯ ವಿವಾಹಗಳನ್ನು ಮಾಡುತ್ತಿದ್ದಾರೆ. ಇದು ಅವರ ಅರಿವಿಗೆ ಇಲ್ಲ. ಬದಲಾಗಿ ವರದಕ್ಷಿಣೆಯಿಂದ ತಪ್ಪಿಸಿಕೊಳ್ಳಲು ಈ ಬಗೆಯಲ್ಲಿ ಮಾಡುತ್ತಿದ್ದಾರೆ. ಹೀಗೆ ತಮ್ಮ ಮಕ್ಕಳನ್ನು ಬಹುಬೇಗನೇ ಮದುವೆ ಮಾಡುವುದರಿಂದ ವರದಕ್ಷಿಣೆ ಕೊಡುವುದು ಸ್ವಲ್ಪ ಕಡಿಮೆಯಾಗುತ್ತದೆ ಎಂಬ ಮನೋಭಾವದಿಂದ ಚಿಕ್ಕ ವಯಸ್ಸಿನಲ್ಲಿಯೇ ವಿವಾಹಗಳನ್ನು ಮಾಡಿರುವ ಪ್ರಕರಣಗಳು

ಕಂಡುಬಂದಿವೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಗಾಳೆಮ್ಮನಗುಡಿ ಗ್ರಾಮದ ಹನುಮಂತಪ್ಪ ಮತ್ತು ನಾಗಮ್ಮ ಎಂಬ ದಂಪತಿಗಳು ಹೇಳುವಂತೆ "ಮಕ್ಕಳ್ನ ಬಾಳ ವರ್ಸ ಮನ್ಯಾಗ ಇಟ್ಕಬಾರ್ದು. ಯಾಕಂದ್ರ ಅವ್ರು ಬೆಳ್ದಂಗೆಲ್ಲಾ ಅವ್ರ ಮದುಪಿನಾಗ ಕೊಡೋ ವರದಕ್ಷಿಣೆ ಸತೆ ಜಾಸ್ತಿ ಆಗ್ತೈತಿ. ಹಂಗಾಗಿ ನಾವು ನಮ್ ಮಗಳಿಗಿ ಜಲ್ದಿನೇ ಮದುಪಿ ಮಾಡಿಬಿಟ್ವಿ. ವರದಕ್ಷಿಣೆ ಕೊಡ್ಲಿಲ್ಲ ಅಂದ್ರೆ ಗಂಡಿನ ಕಡಿಯವ್ರು ಸುಮ್ನೆ ಬಿಡ್ತಾರೇನು. ಮಕ್ಕಳ್ನ ಹುಟ್ಟಿಸಿಕೆಂಡಾನ ವರದಕ್ಷಿಣೆ ಕೊಡಾಕ ಆಗುವಲ್ಲು ಅಂತ ಊರಾಗ ಮರ್ಯಾದಿ ತೆಗಿತಾರ. ಹಂಗಾಗಿ ಯೆಂಗೋ ವರದಕ್ಷಿಣೆ ಅಂತ ಕೊಡ್ಲೇ ಬೇಕು. ಆದ್ರ ಮಗಳಿಗಿ ಜಲ್ದಿ ಮದುವಿ ಮಾಡಿಬಿಟ್ರೆ ಆಗಿಬಿಡ್ತೈತಲ್ಲಾ ಅನ್ಕಂಡು ಮದುವಿ ಮಾಡಿ ಬಿಟ್ವಿ. ಮದುವಿ ಟೈಮ್‌ನಾಗ ಗಂಡಿನ ಕಡಿಯವ್ರು ಬಾಳ ಕೇಳಿದ್ರು. ಆದ್ರ ನಾವು ಅಷ್ಟು ಕೊಡಾಕ ಆಗಲ್ಲ ಅಂತ ಹೇಳಿದ್ವಿ. ಯಾಕಂದ್ರ ನಮ್ ಮಗ್ಳು ಇನ್ನ ಸಣ್ಣ ವಯಸ್ಸಿನವ್ಳು ಐದಾಳ. ಅಕಿ ಮನ್ಯಾಗಿನ ಎಲ್ಲಾ ಕೆಲ್ಸ ಮಾಡ್ತಾಳ. ನೀವು ಹೇಳ್ದಂಗ ಕೇಳ್ತಾಳ. ಆಮೇಲೆ ನಿಮಿಗೆ ಯೆಂಗ್ ಬೇಕೋ ಅಂಗ ಅಕಿತಗ ಕೆಲ್ಸ ಮಾಡ್ಸಿಕೆಳ್ಳಬೋದು, ಮತ್ತೆ ನಾವು ಬಾಳ ಬಡವ್ರು ಐದೀವಿ. ನೀವು ಹೇಳಿದಷ್ಟು ಕೊಡಾಕ ಆಗಲ್ಲ. ನಾವು ಏನ್ ಕೊಡ್ಬೇಕು ಅಂತ ಅನ್ಕಂಡಿವೋ ಅದನ್ನಷ್ಟೇ ಕೊಡ್ತೀವಿ ಅಂತ ಹೇಳಿದ್ವಿ. ಹಿರೇರೆಲ್ಲಾ ಸೇರಿ ಮಾತುಕತಿ ನಡಿಸಿದ್ರು. ಆಮ್ಯಾಲೆ ನಾವು ಹೇಳಿದ್ದಕ್ಕ ಒಪ್ಕೆಂಡು ಹೋದ್ರು. ಅವ್ರು ಸತೆ ಬ್ಯಾರೇರೂ ಅಲ್ಲ ನಮ್ ಸಂಬಂದಿಕ್ರೆ. ಆಮ್ಯಾಲೆ ಮಗಳ್ದು ಮದುವಿ ಮಾಡಿದ್ವಿ" ಎಂದರು. ಕೊಪ್ಪಳ ತಾಲೂಕಿನ ಗುನ್ನಳ್ಳಿ ಗ್ರಾಮದ ರಾಮಣ್ಣ ಎಂಬುವವರು ಹೇಳುವಂತೆ "ನಾವು ಬಾಳ ಬಡವ್ರು ಐದೀವಿ. ನನಿಗೆ ಮೂವರು ಹೆಣ್ಮಕ್ಳು. ಅವ್ರನ್ನ ಖರ್ಚ ಮಾಡ್ಬೇಕಂದ್ರ ಬಾಳ ತ್ರಾಸ ಆಗತೈತಿ. ಯಾಕಂದ್ರ ಮೂವರ್ಗೆ ಮದುವಿ ಅಂತ ಮಾಡ್ಬೇಕಲ್ಲಾ. ಅವ್ರ ಮದುವಿಗೆ ವರದಕ್ಷಿಣೆ ಅಂತ ಕೊಡ್ಬೇಕು. ಹಂಗಾಗಿ ಅದೆಲ್ಲಾ ಖರ್ಚನ್ನ ನೆನಿಸಿಕೆಂಡ್ರೆ ಜೀವ ಝಲ್ ಅಂತೈತಿ. ಹಂಗಾಗಿ ನಾನು ಏನ್ ಮಾಡ್ದೆ ಅಂದ್ರೆ ಮೊದಲ್ನೆ ಮಗಳ್ದು ಮದುವಿ ಆಗಿ ಒಂದು ವರ್ಸಕ್ಕ ಎರಡನೇ ಮಗಳದು ಮದುವಿ ಮಾಡಿದೆ. ಅಷ್ಟೊತ್ತಿಗಾಗ್ಲೇ ಕೈಯಾಗಿರೋ ದುಡ್ಡೆಲ್ಲಾ ಖರ್ಚಾಗಿ ಹೋಗಿತ್ತು. ವರದಕ್ಷಿಣೆ ಅಂತಾನೇ ಬಾಳ ಕೊಟ್ಟಿದ್ವಿ. ಕೊನಿ ಮಗ್ಳಿಗೆ ಸತೆ ಕೊಡ್ಬೇಕು ಇಲ್ಲಾಂದ್ರ ಕೇಳಂಗಿಲ್ಲ. ಹಂಗಾಗಿ ಬಾಳ ಚಿಂತಿ ಆಗಿತ್ತು. ನಮ್ ದೊಡ್ಡಪ್ಪ ನನ್ ಸಣ್ ಮಗ್ಳಿಗೆ ಒಂದು ಗಂಡನ್ನ ನೋಡಾನು ಅಂತ ಹೇಳ್ದ. ಆದ್ರ ನಾನು ಇರೋ ಪರಿಸ್ಥಿತಿನ ಹೇಳಿದೆ. ಅವ್ರಿದ್ದು ನೀನು ತಪ್ಪು ಮಾಡಿದ್ದು ಇಲ್ಲೇ, ಯಾಕಂದ್ರ ನಿನ್ ಇಬ್ರು ಮಕ್ಳಿಗಿ ಮದುವಿ ಮಾಡೀಯಿ, ಅವ್ರ ಮದುವಿನಾಗ ಗಂಡನ್ ಕಡೆಯವ್ರಿಗಿ ವರದಕ್ಷಿಣೆ ಅಂತ ಬಾಳ ಕೊಟ್ಟೀಯಿ. ಆದ್ರ ಅವ್ರಿಗೆ ಜಲ್ದಿ ಮದುವಿ ಮಾಡಿದ್ರೆ ಸ್ವಲ್ಪ ವರದಕ್ಷಿಣೆ ಆದ್ರೂ ಕಡಿಮಿ ಆಗ್ತಿತ್ತು. ಆದ್ರ ನೀನು ಅವ್ರು ಕೈಗೆ ಬಂದು ನಾಕು ಐದು ವರ್ಸಕ್ಕ ಮದುವಿ ಮಾಡಿದಿ. ಹಂಗಾಗಿ ಮದುವಿ ಮಾಡಿಕೆಂಡು ಹೋಗೋರು ಬಾಳ ದುಡ್ಡು ಕೇಳ್ತಾರ. ಈಗ ನೀನು ಹಿಂಗ ಮಾಡು. ನಿನ್ ಸಣ್ಣ ಮಗ್ಳಿಗಿ ಜಲ್ದಿ ಮದುವಿ ಮಾಡಿ ಬಿಡಾನು, ಮದುವಿ ಖರ್ಚು ಸತೆ ಕಡಿಮಿ ಆಗತೈತಿ, ಮತ್ತೆ ವರದಕ್ಷಿಣೆ ಇಚಾರಾನ ನಾವು ಮಾತಾಡಿಕೆಳ್ಳಾನು. ಗಂಡಿನ ಕಡಿಯವ್ರು ಮತ್ತೆ ಹೆಣ್ಣಿನ್ ಕಡಿಯವ್ರು ಎದುರು ಬದುರು ಕುಂತು ಮಾತಾಡಿದ್ರೆ ವರದಕ್ಷಿಣೆ ಇಚಾರ ಎಲ್ಲಾ

ಸರಿ ಹೋಗ್ತೈತಿ. ಮದುವಿ ಆದ್ ಮ್ಯಾಲೆ ನಮ್ ಮಗಳು ಮನ್ಯಾಗಿನ ಕೆಲ್ಸನೆಲ್ಲಾ ಚೆನ್ನಾಗಿ ಮಾಡ್ತಾಳ. ಇದನ್ನೆ ಹೇಳಿ ವರದಕ್ಷಿಣೆ ಆದಷ್ಟು ಕಡಿಮಿ ಮಾಡ್ಸಾನು ಅಂದ್ರು. ಹಂಗಾಗಿ ನಾನು ನನ್ ಸಣ್ಣ ಮಗ್ಳು ಕೈಗೆ ಬಂದು ಆರು ತಿಂಗ್ಳು ಆಗಿಲ್ಲ. ಆವಾಗ್ಲೇ ಮದುವಿ ಮಾಡಿಬಿಟ್ವಿ, ವರದಕ್ಷಿಣಿ ಅಂತ ಕಡಿಮಿ ಕೊಟ್ವಿ. ಮದುವ್ಯಾಗ ಖರ್ಚುಸತೆ ಬಾಳ ಕಡಿಮಿ ಆತು ಎಂದರು.

ವರದಕ್ಷಿಣೆ ಕೊಡೋದು ಮತ್ತು ತಗಳ್ಳೋದು ಕಾನೂನು ಪ್ರಕಾರ ತಪ್ಪಲ್ವಾ? ವರದಕ್ಷಿಣಿ ಕೊಡಬೇಕಾಗತೈತಿ ಅಂತ ಚಿಕ್ಕ ವಯಸ್ಸಿನಲ್ಲೇ ಮದುವೆ ಮಾಡಿದ್ದೀರಲ್ಲಾ ಇದೂ ಕೂಡ ತಪ್ಪಲ್ವಾ ಎಂದು ಕೇಳಿದಾಗ, ವರದಕ್ಷಿಣಿ ಕೊಡಾದು ತಪ್ಪು ಅಂತ ನಮಿಗೆ ಗೊತ್ತೈತಿ. ಆದ್ರ ಇದು ಈವತ್ತಿನ್ದಲ್ಲ. ನಮ್ ತಾತ ಮುತ್ತಾತನ ಕಾಲದಿಂದ್ಲೂ ನಡ್ದಕೊಂಡೇ ಬಂದೈತಿ. ಈಗ ನಾವು ಕೊಡಾಂಗಿಲ್ಲ, ತಗಳಾಂಗಿಲ್ಲ ಅಂದ್ರೆ ಕೇಳೋರು ಯಾರು. ನಮ್ ಪರಿಸ್ಥಿತಿ ಹಂಗಿತ್ತು. ಕಡಿಮಿ ಖರ್ಚನ್ಯಾಗ ಮಗಳ್ದು ಮದುವಿ ಮಾಡಿಬಿಡಾನು ಅಂತ ಅನ್ನಂಡು ಜಲ್ದಿ ಮದುವಿ ಮಾಡಿದ್ವಿ, ಆದ್ರ ಸಣ್ಣ ವಯಸ್ಸಿಗಿ ಮದುವಿ ಮಾಡ್ಬಾರ್ದು ಅಂತ ಗೊತ್ತು. ಆದ್ರ ಏನ್ ಮಾಡೋದು ಹೆಣ್ಮಕ್ಕಳು ವಯಸ್ಸಿಗಿ ಬಂದಂಗೆಲ್ಲಾ ಅವ್ರಿಗಿ ಗಂಡನ್ನ ಹುಡುಕೋದು ಬಾಳ ಕಷ್ಟ. ಹುಡುಗನ್ನ ಹುಡುಕೋಕೇ ಬಾಳ ಟೈಮು ಬೇಕಾಗತೈತಿ. ಅಷ್ಟೊತ್ತಿಗಾಗ್ಲೇ ಮದುವಿ ವಯಸ್ಸು ಸತೆ ಮೀರಿ ಹೋಗಿರತೈತಿ. ವಯಸ್ ಮೀರಿದ್ ಮ್ಯಾಲೆ ಮದುವಿ ಮಾಡಾನು ಅಂದ್ರೆ ವರದಕ್ಷಿಣಿ ಬಾಳ ಕೇಳ್ತಾರ. ಮತ್ತೆ ಮದುವಿ ಖರ್ಚು ಬ್ಯಾರೆ ಇರ್ತೈತಿ. ನಾವು ಅದನ್ನೆಲ್ಲಾ ಮಾಡಾಕ ಆಗಲ್ಲ. ಹಂಗಾಗಿ ಸಣ್ ವಯಸ್ಸಿಗೆ ಮದುವಿ ಮಾಡಿಬಿಟ್ರೆ ಮುಗೀತಲ್ಲ. ವರದಕ್ಷಿಣಿ ತೊಂದ್ರೀನೇ ಬರಾಂಗಿಲ್ಲ. ಹಂಗಾಗಿ ನಾವು ನಮ್ ಸಣ್ ಮಗ್ಳಿಗೆ ಜಲ್ದಿ ಮದುವಿ ಮಾಡಿದ್ವಿ. ಆದ್ರ ಇದೆಲ್ಲಾ ಕಾನೂನಿಗೆ ಗೊತ್ತಾಗಲ್ಲ. ನಮ್ ಕಷ್ಟ ನಮಿಗೆ ಬಾಳ ಇರ್ತೈತಿ. ಎಂದರು.

ವರದಕ್ಷಿಣೆಯ ಕಾರಣವಾಗಿ ತಂದೆ ತಾಯಂದಿರು ತಮ್ಮ ಮಕ್ಕಳು ಇನ್ನು ಚಿಕ್ಕ ವಯಸ್ಸಿನವರಿದ್ದಾರೆ ಎಂಬುದನ್ನು ಮರೆತು ವಿವಾಹ ಬಂಧನಕ್ಕೆ ತಳ್ಳುತ್ತಿದ್ದಾರೆ. ಮೇಲಿನ ಎರಡೂ ಪ್ರಕರಣಗಳಂತೆ ಹಲವು ಪ್ರಕರಣಗಳು ಇದೇ ಅಭಿಪ್ರಾಯವನ್ನು ಹೊಂದಿವೆ. ಮುಖ್ಯವಾಗಿ ಹೆಣ್ಣು ಮಕ್ಕಳು ಚಿಕ್ಕ ವಯಸ್ಸಿನವರಿದ್ದಾಗಲೇ ಅವರಿಗೆ ವಿವಾಹ ಮಾಡುವುದರಿಂದ ಅವರನ್ನು ಹೇಗೆ ಬೇಕೋ ಹಾಗೆ ನಡೆಸಿಕೊಳ್ಳಬಹುದು, ಮತ್ತು ತಮ್ಮ ಕುಟುಂಬಕ್ಕೆ ತಕ್ಕಂತೆ ಅವಳನ್ನು ಬದಲಾಯಿಸಿಕೊಳ್ಳಬಹುದು ಮತ್ತು ರೂಪಿಸಿಕೊಳ್ಳಬಹುದು ಎಂಬ ಆಲೋಚನೆ ಹಲವು ಜನರಲ್ಲಿರುವುದು ಕಂಡುಬರುತ್ತದೆ. ಅಂದರೆ ಮಹಿಳೆ ಕೇವಲ ಕುಟುಂಬದ ಕೆಲಸಗಳಿಗಷ್ಟೇ ಸೀಮಿತಳನ್ನಾಗಿಸುವುದು ಮತ್ತು ಕುಟುಂಬದ ಹಿರಿಯರಿಗೆ ವಿಧೇಯರಾಗಿ ಅವರ ದಾಸ್ಯದಲ್ಲಿಯೇ ಬದುಕುವಂತೆ ಮಾಡವ ಹುನ್ನಾರ ಇದರ ಹಿಂದೆ ಅಡಗಿದೆ. ಚಿಕ್ಕ ಮಕ್ಕಳಿಗೆ ಮದುವೆ ಮಾಡುವುದರಿಂದ ಈ ಬಗೆಯ ಪ್ರಯೋಜನಗಳು ಲಭಿಸುತ್ತವೆ ಎಂಬ ಆಲೋಚನೆಯೇ ಇದಕ್ಕೆ ಮುನ್ನುಡಿಯನ್ನು ಹಾಕುತ್ತವೆ. ಹಾಗಾಗಿ ಹೆಣ್ಣು ಮಗುವಿನ ತಂದೆ ತಾಯಿಗಳು ಈ ಬಗೆಯ ಆಲೋಚನಾ ಮನೋಭಾವದಿಂದ ಮತ್ತು ವರದಕ್ಷಿಣೆಯನ್ನು ಆದಷ್ಟು ಕಡಿಮೆ ಕೊಡುವುದಕ್ಕೆ

ಏನು ಮಾಡಬೇಕೋ ಅದನ್ನು ಮಾಡಲು ಸಿದ್ಧರಿರುತ್ತಾರೆ. ಕೌಟುಂಬಿಕ ರಚನೆಯಲ್ಲಿ ಅತ್ತೆ ಸೊಸೆಯರ ಜಗಳಗಳ ಬಗೆಗೆ ಹಲವು ಉದಾಹರಣೆಗಳು ದೊರೆಯುತ್ತವೆ. ಇವುಗಳು ಏಕೆ ಸಂಭವಿಸುತ್ತವೆ ಎಂದು ಯೋಚಿಸಿದಾಗ ಅಧಿಕಾರದ ರಾಜಕಾರಣ ಇಲ್ಲಿ ನಡೆಯುತ್ತಿರುತ್ತದೆ. ಅಂದರೆ ಅತ್ತೆಯಾದವಳು ಸೊಸೆಯನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು ಎಂಬುದು ಸಾಮಾಜಿಕವಾಗಿ ರೂಪಿಸಲ್ಪಟ್ಟಿರುವಂತಹದ್ದಾಗಿದೆ. ಇದನ್ನು ಪರಿಪಾಲಿಸಲು ಅತ್ತೆ ಸೊಸೆಯನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳಲು ಯಾವಾಗಲೂ ಹವಣಿಸುತ್ತಿರುತ್ತಾಳೆ. ಈ ಹವಣಿಕೆಗೆ ವಿರುದ್ಧವಾದ ನಡೆಗಳೇನಾದರೂ ಸೊಸೆಯಲ್ಲಿ ಕಂಡುಬಂದರೆ ಆಗ ಕಲಹಗಳು ಆರಂಭವಾಗುತ್ತವೆ. ಹಾಗೆಯೇ ವಿವಾಹವಾಗಿ ಗಂಡನ ಮನೆಗೆ ಹೋಗುವ ಮಹಿಳೆಗೆ ತಂದೆ ತಾಯಂದಿರು ಸಹ ಅದನ್ನೇ ಹೇಳಿ ಕಳುಹಿಸುತ್ತಾರೆ. ಅಂದರೆ ಅತ್ತೆ ಮಾವಂದಿರಿಗೆ ಎದುರು ಮಾತನಾಡದೇ ತಗ್ಗಿ ಬಗ್ಗಿ ನಡೆಯಬೇಕು, ತವರು ಮನೆಯ ಗೌರವವನ್ನು ಉಳಿಸಬೇಕು ಎಂದು ಹೇಳಿ ಕಳುಹಿಸುತ್ತಾರೆ. ಹೀಗೆ ಮಾಡುವುದರಿಂದ ವಿವಾಹವಾದ ಮಹಿಳೆಯರು ತಮ್ಮ ಎಲ್ಲಾ ಹಕ್ಕುಗಳನ್ನು ಕಳೆದುಕೊಳ್ಳುತ್ತಾರೆ. ಕೆಲವು ಸಂದರ್ಭಗಳಲ್ಲಿ ವಿವಾಹವಾದ ಮಹಿಳೆಯರು ಕೌಟುಂಬಿಕ ವ್ಯವಸ್ಥೆಯನ್ನು ಮತ್ತು ಸಾಮಾಜಿಕ ಸಂರಚನೆಯನ್ನು ಗ್ರಹಿಸುವವರಾದರೆ ಅಂತಹ ಸಂದರ್ಭದಲ್ಲಿ ಕುಟುಂಬದಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಡುತ್ತಿರುತ್ತಾರೆ. ಇದು ಅತ್ತೆ ಮಾವಂದಿರಿಗೆ ವಿರೋಧದ ನೆಲೆಯಲ್ಲಿಯೇ ಗುರುತಿಸಲ್ಪಡುತ್ತದೆ. ಆಗ ಕೌಟುಂಬಿಕ ಕಲಹಗಳು ಸಂಭವಿಸುತ್ತವೆ. ಇವುಗಳೆಲ್ಲವನ್ನೂ ಅತ್ತೆ ಮಾವಂದಿರು ಅನುಭವಿಸಬಾರದು ಎಂದರೆ ತಮ್ಮ ಮಕ್ಕಳಿಗೆ ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳನ್ನು ತಂದು ವಿವಾಹ ಮಾಡಿದರೆ ಇಂತಹ ಸಮಸ್ಯೆಗಳು ಉದ್ಭವಿಸುವುದಿಲ್ಲ. ಅಂದರೆ ಸೊಸೆಯಾದವಳನ್ನು ತಮಗೆ ಹೇಗೆ ಬೇಕೋ ಹಾಗೆ ತಯಾರು ಮಾಡಬಹುದು ಎಂಬ ಆಲೋಚನೆಯ ಕಾರಣವಾಗಿ ಚಿಕ್ಕ ಮಕ್ಕಳನ್ನು ವಿವಾಹ ಬಂಧನಕ್ಕೆ ಒಳಗುಮಾಡಲಾಗುತ್ತಿದೆ. ಇಲ್ಲಿ ಕೌಟುಂಬಿಕ ಕಲಹಗಳೇ ಮುಖ್ಯ ಭೂಮಿಕೆಯಲ್ಲಿ ಕಂಡುಬರುವುದರಿಂದ ವರದಕ್ಷಿಣೆಯನ್ನು ಅಷ್ಟೊಂದು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಇಲ್ಲಿ ಅತ್ತೆ ಮತ್ತು ಸೊಸೆ ಇಬ್ಬರೂ ಆರೋಪಿತರಾಗಿ ಕಂಡುಬರುತ್ತಾರೆ. ಆದರೆ ಇದು ಅವರು ಸ್ವತಃ ಮಾಡಿಕೊಂಡಂತಹದ್ದಲ್ಲ. ಬದಲಾಗಿ ವ್ಯವಸ್ಥೆಯು ರೂಪಿಸಿರುವ ಮೌಲ್ಯಗಳು ಅವರು ಹೀಗೆ ಇರುವಂತೆ ಮಾಡಿವೆ. "ಕೌಟುಂಬಿಕ ರಚನೆಯಾಗಿರಬಹುದು, ಸಾಮಾಜಿಕ ರಚನೆಯಾಗಿರಬಹುದು – ಇವುಗಳು ಹೆಣ್ಣುಮಕ್ಕಳ ಸಂಬಂಧಗಳನ್ನು ಒಬ್ಬರ ವಿರುದ್ಧ ಮತ್ತೊಬ್ಬರು ಎನ್ನುವಂತೆ ಹೆಣಿಗೆ ಮಾಡಿದೆ. ಅತ್ತೆಯ ವಿರುದ್ಧ ಸೊಸೆ, ಸೊಸೆಯ ವಿರುದ್ಧ ಅತ್ತೆ, ಅತ್ತಿಗೆಯ ವಿರುದ್ಧ ನಾದುನಿ, ನಾದುನಿಯ ವಿರುದ್ಧ ಅತ್ತಿಗೆ, ಬಂಜೆಯ ವಿರುದ್ಧ ತಾಯಿಯನ್ನು, ಮದುವೆಯಾಗದವಳ ವಿರುದ್ಧ ಮದುವೆಯಾದವಳನ್ನು, ಕಲಿಯದವಳ ವಿರುದ್ಧ ಕಲಿತವಳನ್ನು, ಕಲಿತವಳ ವಿರುದ್ಧ ಕಲಿಯದವಳನ್ನು– ಹೀಗೆ ಅನೇಕ ನೆಲೆಗಳಲ್ಲಿ ಮಹಿಳೆಯರನ್ನು ವಿಘಟನೆಗೆ ಒಳಪಡಿಸಲಾಗಿದೆ. ಸಮಾಜವು ಪರಿಭಾವಿಸಿದಂತೆ ಅವುಗಳು ಮಹಿಳೆಯರೊಳಗಿನ ಕಲಹಗಳಾಗಿರುವುದಿಲ್ಲ; ಕೌಟುಂಬಿಕ ಹಾಗೂ ಸಾಮಾಜಿಕ ವ್ಯವಸ್ಥೆಯೊಳಗಿನ ವ್ಯವಸ್ಥಿತ

ಸಂಚುಗಳೇ ಕಲಹಗಳನ್ನು ಸೃಷ್ಟಿಸುತ್ತವೆ. ಹೀಗಾಗಿ ಅಂಥವುಗಳನ್ನು 'ಮಹಿಳಾ ವಿಘಟನೆಗಳು' ಎಂದು ನೋಡುವುದರ ಬದಲು; ವ್ಯವಸ್ಥೆ ಸೃಷ್ಟಿಸಿದ ಕಲಹಗಳಾಗಿ, ವಿಘಟನೆಗಳಾಗಿ ನೋಡಬೇಕಾಗಿದೆ. ಆದರೆ ಹಾಗೆ ನೋಡದಂತೆ ವ್ಯವಸ್ಥೆಯು ಸಾಮಾಜಿಕ ದೃಷ್ಟಿಕೋನವನ್ನು ಸಿದ್ಧಪಡಿಸಿದೆ; ಈ ಹಿನ್ನೆಲೆಯೇ ಮಹಿಳಾ ವಿಘಟನೆಗಳನ್ನು ಅರ್ಥೈಸಲಾಗುತ್ತಿದೆ. ಹೀಗಾಗಿ 'ಕುಟುಂಬ', 'ಹೆಣ್ಣುಮಕ್ಕಳ ಕಲಹ'ಗಳು–ಇವುಗಳ ಕುರಿತಂತೆ ಇರುವ ಸಾಮಾಜಿಕ ದೃಷ್ಟಿಕೋನ ಹಾಗೂ ಧೋರಣೆಗಳನ್ನು ಯಥಾವತ್ತಾಗಿ ಸ್ವೀಕರಿಸುವಂತಿಲ್ಲ" (ಶೈಲಜ ಹಿರೇಮಠ, ೨೦೧೬, ಪು–೪೨) ಇದಕ್ಕೆ ಪೂರಕವೆಂಬಂತೆ ಮೇಲಿನ ಪ್ರಕರಣ ಕಂಡುಬರುತ್ತದೆ. ಅಂದರೆ ಮೇಲಿನ ಮೊದಲನೇ ಪ್ರಕರಣದಲ್ಲಿ ಹೇಳುವಂತೆ ಮಕ್ಕಳು ಚಿಕ್ಕವರಿದ್ದಾಗಲೇ ವಿವಾಹ ಮಾಡುವುದರಿಂದ ಈ ಬಗೆಯ ತೊಡಕುಗಳಿಂದ ಮುಕ್ತವಾಗಬಹುದು ಎಂಬ ಕಾರಣ ದೊರೆಯುತ್ತದೆ. ಒಟ್ಟಾರೆಯಾಗಿ ಕಡಿಮೆ ವರದಕ್ಷಿಣೆ ಕೊಡಬೇಕೆಂಬ ಕಾರಣವನ್ನು ಮುಂದಿಟ್ಟುಕೊಂಡು ಚಿಕ್ಕ ಮಕ್ಕಳಿಗೆ ವಿವಾಹ ಮಾಡುತ್ತಿರುವುದು ಕಂಡುಬರುತ್ತದೆ. ಇದು ತುಂಬಾ ಅಪಾಯಕಾರಿ ಅಂಶವಾಗಿದೆ. ಮುಖ್ಯವಾಗಿ ಹೇಳುವುದಾದರೆ ವರದಕ್ಷಿಣೆ ಎಂಬುದು ಸಮಸ್ಯೆಯಾಗಿ ಕಾಡಿರುವುದು ಮೇಲ್ವರ್ಗದ ಮತ್ತು ಮೇಲ್ಜಾತಿಯ ಕುಟುಂಬಗಳಲ್ಲಿ. ನಂತರ ಇದು ಎಲ್ಲಾ ಜಾತಿ ಸಮುದಾಯಗಳಿಗೂ ವಿಸ್ತರಿಸಿಕೊಂಡಿತು. ಕೆಲವು ಅಲೆಮಾರಿ ಸಮುದಾಯಗಳಲ್ಲಿ ಈ ವರದಕ್ಷಿಣೆ ಎಂಬ ಪರಿಕಲ್ಪನೆಯೇ ಇಲ್ಲ. ಅಲ್ಲಿ ವಧುದಕ್ಷಿಣೆಗೆ ಮಾನ್ಯತೆ ಇದೆ. ಮುಖ್ಯವಾಗಿ ಬೈಲಪತ್ತಾರ, ಬುಡ್ಗಜಂಗಮ, ಬೇಡಜಂಗಮ ಮುಂತಾದ ಅಲೆಮಾರಿ ಸಮುದಾಯಗಳಲ್ಲಿ ತೆರ ಕೊಡುವ ಪದ್ಧತಿ ಜಾರಿಯಲ್ಲಿದೆ. ಅಂದರೆ ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ತೆರವು ಕೊಟ್ಟು ಕನ್ಯೆಯನ್ನು ತರುವ ಪದ್ಧತಿ ರೂಢಿಯಲ್ಲಿದೆ. "ಭಾರತದ ಎಷ್ಟೋ ಸಮುದಾಯಗಳಲ್ಲಿ ವರದಕ್ಷಿಣೆ ಪದ್ಧತಿ ಇಲ್ಲ. ಅಲ್ಲಿ ವಧುದಕ್ಷಿಣೆ, ತೆರ ಇತ್ಯಾದಿ ಪದ್ಧತಿಗಳಿವೆ. ಬ್ರಿಟಿಷರು ಭಾರತದ ಮೇಲ್ ಜಾತಿ ಮತ್ತು ಮೇಲ್ ವರ್ಗದ ಸಮುದಾಯಗಳನ್ನು ಕೇಂದ್ರೀಕರಿಸಿದ ಸಮಸ್ಯೆ ಇಂದಿಗೂ ಮುಂದುವರಿದಿದೆ. ಅಂದರೆ ಇದು ಭಾರತದ ಇಡೀ ಮಹಿಳಾ ಸಮೂಹದ ಸಮಸ್ಯೆ ಅಲ್ಲ. ವಸಾಹತು ಆಡಳಿತ ಸಂದರ್ಭದಲ್ಲಿ ಮೇಲ್ಜಾತಿ, ಮೇಲ್ವರ್ಗ ಹಾಗೂ ಮಧ್ಯಮಜಾತಿ, ಮಧ್ಯಮ ವರ್ಗದ ಮಹಿಳೆಯರನ್ನು ಪರಿಗಣಿಸಿ ರೂಪುಗೊಂಡ ವರದಕ್ಷಿಣೆ ನಿಷೇಧ ಕಾನೂನು ಬಾಯಿ ಮಾತಿನ ಆದರ್ಶದ ನೆಲೆಗೆ ಮಾತ್ರ ಸೀಮಿತವಾಗಿದೆ. ೧೯೭೯ರಲ್ಲಿನ ತರವೀಂದರ್ ಕೌರ್ ಸಾವು ವರದಕ್ಷಿಣೆ ವಿರೋಧಿ ಆಂದೋಲನಕ್ಕೆ ಬಹುದೊಡ್ಡ ಚಾಲನೆ ನೀಡಿತು. ವರದಕ್ಷಿಣೆ ಸಮಸ್ಯೆಯನ್ನು ಒಳಗೊಂಡಂತೆ ಮಹಿಳೆಯರ ಹಾಗೂ ಹೆಣ್ಣು ಮಕ್ಕಳ ಮೇಲಿನ ಹಿಂಸೆಯನ್ನು ಕೌಟುಂಬಿಕ ಹಿಂಸೆಯಾಗಿ ಗುರುತಿಸಲು 'ಕೌಟುಂಬಿಕ ದೌರ್ಜನ್ಯ ತಡೆಕಾಯ್ದೆ ೨೦೦೫', ನಿಯಮ ೨೦೦೬ರಲ್ಲಿ ಅನುಷ್ಠಾನಗೊಳ್ಳುವವರೆಗೆ ಕಾಯಬೇಕಾಯಿತು"(ಶೈಲಜ ಹಿರೇಮಠ, ೨೦೧೬, ಪು–೪೧). ಹೀಗೆ ಭಾರತದ ಎಲ್ಲಾ ಸಮುದಾಯಗಳನ್ನು ಅಥವಾ ಎಲ್ಲಾ ಸಮುದಾಯದ ಮಹಿಳೆಯರನ್ನು ಕೇಂದ್ರೀಕರಿಸಿ ವರದಕ್ಷಿಣೆ ಸಮಸ್ಯೆಯನ್ನು ಮುಖ್ಯ ಚರ್ಚೆಯ ವಿಷಯವಾಗಿ ನೋಡಲಿಲ್ಲ. ಆದರೂ ಈ ಪದ್ದತಿ ಎಲ್ಲಾ ಜಾತಿ ಸಮುದಾಯಗಳಿಗೆ

ಹರಡಿಕೊಂಡು ಮಹಿಳೆಯರ ಜೀವನವನ್ನೇ ಹಿಂಸಾಮಯವಾಗಿಸಿತು. ಮದುವೆಯ ಸಂದರ್ಭದಲ್ಲಿ ವರನಿಗೆ ವಧುವಿನ ಕಡೆಯವರು ವರದಕ್ಷಿಣೆಯನ್ನು ಕೊಡಲೇಬೇಕು ಎಂಬುದು ವ್ಯವಸ್ಥೆಯ ಅಘೋಷಿತ ನಿಯಮ. ಅದೂ ವರನು ಎಷ್ಟು ಬಯಸುತ್ತಾನೋ ಅಷ್ಟನ್ನು ಕೊಡಲೇ ಬೇಕು. ಇಲ್ಲವಾದರೆ ಮದುವೆಯನ್ನು ರದ್ದು ಮಾಡುವಂತಹ ಪರಿಸ್ಥಿತಿಗಳು ಎದುರಾಗುತ್ತವೆ. ಹಾಗೆಯೇ ವರದಕ್ಷಿಣೆಯಿಂದ ತಪ್ಪಿಸಿಕೊಳ್ಳಲು ತಮ್ಮ ಸಂಬಂಧಿಕರಲ್ಲಿಯೇ ವಿವಾಹ ಮಾಡುವಂತಹದ್ದು ಮತ್ತು ಬೇಗನೇ ವಿವಾಹ ಮಾಡುವುದರಿಂದ ವರದಕ್ಷಿಣೆ ಕಡಿಮೆಯಾಗುತ್ತದೆ ಎಂಬ ಮನೋಭಾವದಿಂದಾಗಿ ಹೆಣ್ಣುಮಕ್ಕಳನ್ನು ಬಾಲ್ಯವಿವಾಹಗಳಿಗೆ ಒಳಪಡಿಸುತ್ತಿದ್ದಾರೆ. ಈ ರೀತಿಯ ಭಯ ಹೆಣ್ಣು ಮಕ್ಕಳ ತಂದೆತಾಯಂದಿರಿಗೆ ಇದ್ದೇ ಇರುತ್ತದೆ.

**ಇ. ಮದುವೆ ಮಾಡಿದ ಹೆಣ್ಣು ಮಗುವನ್ನು ಸಾಮಾಜಿಕವಾಗಿ ರಕ್ಷಣೆಯಲ್ಲಿಡಬಹುದು :** ಹೆಣ್ಣು ಮಕ್ಕಳನ್ನು ಸಾಮಾಜಿಕವಾಗಿ ರಕ್ಷಿಸಬೇಕೆಂಬುದು ವ್ಯವಸ್ಥೆಯ ಮನೋಭಾವ. ಮುಖ್ಯವಾಗಿ ಈ ಹಿಂದೆ ಮನುವು ಹೇಳಿದಂತೆ

"ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।

ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ.

ಬಾಲ್ಯದಲ್ಲಿ ಸ್ತ್ರೀಯನ್ನು ತಂದೆಯು ರಕ್ಷಿಸುತ್ತಾನೆ. ಯೌವನದಲ್ಲಿ ಗಂಡನು ರಕ್ಷಿಸುತ್ತಾನೆ. ಮುಪ್ಪಿನಲ್ಲಿ ಮಕ್ಕಳು ರಕ್ಷಿಸುತ್ತಾರೆ. ಆದುದರಿಂದ ಸ್ತ್ರೀಯು ಸ್ವತಂತ್ರವಾಗಿ ಇರಲು ಅರ್ಹಳಲ್ಲ" ( ಮನು; ಶೇಷ ನವರತ್ನ(ಅನು), ೨೦೦೯, ಪು–೩೮೧). ಮನುವು ಹೇಳಿದಂತೆಯೇ ವ್ಯವಸ್ಥೆಯಲ್ಲಿನ ಜನರು ತಮ್ಮ ಹೆಣ್ಣು ಮಕ್ಕಳನ್ನು ಪರಿಪಾಲಿಸುತ್ತಿದ್ದಾರೆ. ಮುಖ್ಯವಾಗಿ ಮನುವು ಹೇಳಿದಂತೆ ಯೌವನದಲ್ಲಿ ಗಂಡನು ರಕ್ಷಿಸುತ್ತಾನೆ ಎಂದಾಗ ವಿವಾಹದ ವಯಸ್ಸನ್ನು ಇಲ್ಲಿಯೇ ಗುರುತಿಸಬಹುದು. ಏಕೆಂದರೆ ಹೆಣ್ಣು ಮಕ್ಕಳು ಋತುಮತಿಯರಾದರೆಂದರೆ ಅವರು ಯೌವನಕ್ಕೆ ಕಾಲಿಟ್ಟಂತೆಯೇ ಎಂಬುದು ಸಮಾಜದಲ್ಲಿನ ನಂಬಿಕೆ. ಇದು ಬಾಲ್ಯ ವಿವಾಹಕ್ಕೆ ಎಡೆ ಮಾಡಿಕೊಡುತ್ತದೆ. ಮುಖ್ಯವಾಗಿ ಹೆಣ್ಣನ್ನು ಸಾಮಾಜಿಕವಾಗಿ ಈ ಮೂರೂ ಹಂತಗಳಲ್ಲಿ ರಕ್ಷಿಸಬೇಕು ಎಂಬುದು ಮನುವಾದಿಗಳ ಅಭಿಪ್ರಾಯ. ಇದರಂತೆಯೇ ವ್ಯವಸ್ಥೆಯೂ ರೂಢಿಯಲ್ಲಿದೆ. ತಂದೆ ಅಥವಾ ತಾಯಿ ತಮಗೆ ಹೆಣ್ಣುಮಗು ಹುಟ್ಟಿದೆ ಎಂದರೆ ಚಿಂತಾಕ್ರಾಂತರಾಗುತ್ತಾರೆ. ಏಕೆಂದರೆ ಅವರನ್ನು ಸಾಕುವುದು, ಬೆಳೆಸುವುದು ಮತ್ತು ರಕ್ಷಣೆಯಲ್ಲಿಡುವುದು ತುಂಬಾ ಕಷ್ಟದ ಕೆಲಸ ಹಾಗಾಗಿ ಚಿಂತೆಗೆ ಒಳಗಾಗುತ್ತಾರೆ. ಇದು ಅವರೇ ರೂಪಿಸಿಕೊಂಡಿದುದಲ್ಲ ಬದಲಾಗಿ ವ್ಯವಸ್ಥೆಯು ರೂಪಿಸಿರುವಂತಹ ಮೌಲ್ಯಗಳು ಅವರನ್ನು ಆಳುತ್ತಿವೆ. ಎಷ್ಟು ಬೇಗ ಮಗಳಿಗೆ ಮನೆಯಿಂದ ಹೊರದಬ್ಬುತ್ತೇವೋ ಅಷ್ಟು ಒಳ್ಳೆಯದು ಎಂದು ಭಾವಿಸುವವರು ಹಲವರಿದ್ದಾರೆ. ಅಂದರೆ ಆದಷ್ಟು ಬೇಗನೇ ಅವರನ್ನು ಕಾಪಾಡುವ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಬೇಕು ಎಂಬುದು ಅವರ ಆಲೋಚನೆಯಾಗಿರುತ್ತದೆ. ಹಾಗಾಗಿ

ತಮ್ಮ ಮಕ್ಕಳಿಗೆ ಬೇಗನೇ ವಿವಾಹ ಮಾಡಿ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳುತ್ತಾರೆ. ಮದುವೆಯಾದ ನಂತರ ಅವಳನ್ನು ರಕ್ಷಿಸುವ ಜವಾಬ್ದಾರಿ ಗಂಡನದ್ದಾಗಿರುತ್ತದೆ. ಮುಖ್ಯವಾಗಿ ಈ ಬಗೆಯ ಆಲೋಚನೆ ಬಾಲ್ಯವಿವಾಹಗಳಿಗೆ ಎಡೆಮಾಡಿಕೊಡುತ್ತದೆ. ಈ ಬಗೆಯ ಆಲೋಚನಾ ಕ್ರಮದಿಂದಾಗಿ ಬಾಲ್ಯವಿವಾಹಗಳು ನಡೆದಂತಹ ಹಲವಾರು ಉದಾಹರಣೆಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿವೆ. ಸಮಾಜವೇ ನಿರ್ಮಿಸಿದಂತಹ ಮೌಲ್ಯಗಳು ಜನರನ್ನು ಭಯಭೀತರನ್ನಾಗಿ ಮಾಡುತ್ತಿವೆ. ಸಮಾಜದಲ್ಲಿ ಮಹಿಳೆಯರ ಮೇಲೆ ನಡೆಯುವಂತಹ ಅತ್ಯಾಚಾರ, ಲೈಂಗಿಕ ಕಿರುಕುಳಗಳು ಮುಂತಾದವು ಕುಟುಂಬದ ಮೇಲೆ ಪರಿಣಾಮವನ್ನು ಬೀರುವುದರ ಜೊತೆಗೆ ಹೆಣ್ಣು ಮಕ್ಕಳ ಸಂರಕ್ಷಣೆಯ ಜವಾಬ್ದಾರಿಯನ್ನು ಎಚ್ಚರಿಸುತ್ತಿರುತ್ತವೆ. ಆ ಕಾರಣಕ್ಕಾಗಿಯೇ ಬಾಲ್ಯವಿವಾಹಗಳು ಸಂಭವಿಸುತ್ತಿವೆ.

ಬಳ್ಳಾರಿ ತಾಲೂಕಿನ ವೇಣಿವೀರಾಪುರ ಗ್ರಾಮದ ನಿಂಗಮ್ಮ ಎಂಬುವವರು ತಮ್ಮ ಮಗಳಾದ ಹುಲಿಗೆಮ್ಮ ಎಂಬುವವರನ್ನು ಸ್ವಂತ ತಮ್ಮನಿಗೇ ಕೊಟ್ಟು ವಿವಾಹ ಮಾಡಿದ್ದಾರೆ. ಹುಲಿಗೆಮ್ಮ ಇನ್ನು ಏಳನೆಯ ತರಗತಿಯಲ್ಲಿ ಓದುತ್ತಿದ್ದಳು. ಆದರೆ ವಿವಾಹವಾದ ಕಾರಣದಿಂದ ವಿದ್ಯಾಭ್ಯಾಸವನ್ನು ಅರ್ಧಕ್ಕೆ ನಿಲ್ಲಿಸಬೇಕಾಯಿತು. ನಿಂಗಮ್ಮ ಹೇಳುವಂತೆ "ನನಿಗೆ ಇರೋದು ಮೂರು ಜನ ಮಕ್ಳು. ಎರಡು ಗಂಡು, ಒಂದು ಹೆಣ್ಣು. ಮೊದಲ್ನೇ ಮಗಳೇ ಹುಲಿಗೆಮ್ಮ. ಆಕಿ ಆದ ಮ್ಯಾಲೆ ಇಬ್ರು ಗಂಡು ಹುಡುಗ್ರು ಆದ್ವು. ನನ ಗಂಡ ಇರೋವಾಗ್ಲೇ ಮಗಳ್ದು ಮದುವಿ ಮಾಡಿದ್ವಿ. ಯಾಕಂದ್ರ ಹೆಣ್ಮಕ್ಳನ್ನ ಮನ್ಯಾಗ ಬಾಳ ದಿನ ಇಟ್ಕಬಾರ್ದು, ಜಲ್ದಿ ಜಲ್ದಿ ಮದುವಿ ಮಾಡಿ ಕೊಟ್ ಬಿಡ್ಬೇಕು. ಇಲ್ಲಾಂದ್ರ ಮುಂದೆ ಏನ್ ಆಗತೈತೋ ಗೊತ್ತಿರಲ್ಲ. ಒಂದ್ಸಾರಿ ಹೆಣ್ಮಕ್ಕಳು ಅಡ್ಡದಾರಿ ಹಿಡಿದ್ರು, ಇಲ್ಲಾಂದ್ರೆ ಗಂಡ್ಮಕ್ಳು ಯಾರಾದ್ರು ಏನಾದ್ರು ಮಾಡಿದ್ರು ಅಂದ್ರೆ ಮುಗೀತು. ಮನಿ ಮರ್‍ಯಾದಿಯೆಲ್ಲಾ ಹಾಳಾದಂಗೆ. ಅವ್ರಿಗೆ ಗಂಡು ಹುಡುಕೋದು ಬಾಳ ಕಷ್ಟದ್ ಕೆಲ್ಸ. ಅಂದ್ರ ಹೆಣ್ಮಕ್ಳು ದೊಡ್ಡೋರಾದ್ ಮ್ಯಾಲಿಂದ ಅವ್ರನ್ನ ಸಾಕಾದು ಅಂದ್ರೆ ಬಾಳ ಕಷ್ಟ. ಯಾಕಂದ್ರ ಊರಾಗ ಮಂದಿ ಸರಿಗಿರಲ್ಲ. ಮಗಳು ದೊಡ್ಡೋಳು ಆದ್ಲು ಅಂದ್ರೆ ಯಾರ್ದಾದ್ರೂ ಒಬ್ರುದು ಕಣ್ ಇದ್ದೇ ಇರ್ತೈತಿ. ಹಂಗಾಗಿ ಅವ್ರನ್ನ ಸಾಕಾದು ಬಾಳ ಕಷ್ಟ. ಎಲ್ಲಿಗಾದ್ರೂ ಅಂಗಡಿಗಿ ಹೋದ್ರೂ, ಚೊಂಬುತಗಂಡು ಹೋದ್ರೂ ಜೊತಿಗಿ ಒಬ್ರನ್ನ ಕಳಿಸ್ಬೇಕು. ಇಲ್ಲಾಂದ್ರೆ ಯಾರು ಏನ್ ಮಾಡ್ತಾರೋ ಅಂತ ಭಯ. ಮದುವಿ ಆಗೋ ವರ್‍ಗೂ ಕಾದ್ರೆ ಸಾಕು. ಮದುವಿ ಆದ್ ಮ್ಯಾಲ ಹೆಂಗೋ ಗಂಡ ಇರ್ತಾನಲ್ಲಾ ಅವ್ನೆ ಎಲ್ಲಾನೂ ನೋಡ್ಕೆಂಡು ಹೋಗ್ತಾನ. ಮದುವಿಗಿ ಮುಂದೆ ಏನಾದ್ರು ಆದ್ರೆ ಅವ್ರನ್ನ ಮದುವಿ ಮಾಡಿಕೆಂಡು ಹೋಗಾಕ ಯಾರೂ ಬರಂಗಿಲ್ಲ. ಮುಂದೆ ಅದೆಲ್ಲಾ ಕಷ್ಟಗೋಳ್ನ ಅನುಭೋಸದ್ಕಿಂತ ಈವಾಗ್ಲೇ ಎಚ್ರ ಇದ್ದು ಬಿಟ್ರೆ ಮುಗೀತಲ್ಲ. ಹಂಗಾಗೇ ನನ್ ಮಗ್ಳಿಗೆ ಸ್ವಂತ ತಮ್ಮಿಗೇ ಕೊಟ್ಟು ಮದುವಿ ಮಾಡಿದ್ವಿ. ಈಗ ಮಗಳು ಗಂಡನ ಜವಾಬ್ದಾರ್‍ಯಾಗ ಇರ್ತಾಳ, ನಮ್ ಕಡಿಗಿಂದ ಏನ್ ಮಾಡ್ಬೇಕೋ ಅದನ್ನ ಮಾಡಿದ್ವಿ" ಎಂದರು.

ನಿಂಗಮ್ಮನವರ ಆತಂಕ ಸಮಾಜದೊಂದಿಗಿದೆ. ಅಂದರೆ ವ್ಯವಸ್ಥೆಯಲ್ಲಿ ಹೆಣ್ಣುಮಕ್ಕಳನ್ನು ನೋಡುವಂತಹ ರೀತಿಯೇ ಬೇರೆ. ಅವರನ್ನು ಭೋಗಿಸುವ ವಸ್ತುವಿನಂತೆ ಕಾಣಲಾಗುತ್ತದೆ. ಮುಖ್ಯವಾಗಿ ಹೆಣ್ಣುಮಕ್ಕಳನ್ನು ಜತನದಿಂದ ಕಾಪಾಡುತ್ತಿರುವುದಕ್ಕೆ ಕಾರಣ ಅವರ ಶೀಲದ ಪ್ರಶ್ನೆ. ಪುರುಷ ಪ್ರಧಾನ ವ್ಯವಸ್ಥೆಗೆ ಮಹಿಳೆಯರ ಶೀಲ, ಪಾತಿವ್ರತ್ಯದ ಬಗೆಗೆ ಇನ್ನಿಲ್ಲದ ಕುತೂಹಲ. ಮದುವೆಯಾಗುವ ಹುಡುಗಿ ಶೀಲವಂತಳಾಗಿರಬೇಕು ಎಂದು ಬಯಸುವ ಪುರುಷ ವ್ಯವಸ್ಥೆ, ಹೆಣ್ಣುಮಕ್ಕಳು ಅದನ್ನು ಕಾಪಾಡಿಕೊಳ್ಳುವುದಕ್ಕೆ ಹಲವಾರು ನಿರ್ಬಂಧಗಳಿಗೆ ಒಳಗಾಗಬೇಕಾಗುತ್ತದೆ. ಅಂದರೆ ಇಲ್ಲಿ ಮುಖ್ಯವಾಗಿ ಹೆಣ್ಣಿನ ಲೈಂಗಿಕತೆಯ ಪ್ರಶ್ನೆ ಎದುರಾಗುತ್ತದೆ. ತಂದೆ ತಾಯಿಗಳು ತಮ್ಮ ಹೆಣ್ಣು ಮಕ್ಕಳನ್ನು ಯಾಕೆ ಜವಾಬ್ದಾರಿಯಿಂದ ನೋಡಿಕೊಳ್ಳುತ್ತಾರೆ ಮತ್ತು ಅದನ್ನು ಒಂದು ಬಗೆಯ ಹೊರೆಯೆಂದು ಭಾವಿಸುತ್ತಾರೆಂದರೆ, ಪುರುಷ ವ್ಯವಸ್ಥೆಯು ವಿವಾಹವಾಗುವ ಹುಡುಗಿಯು ಕನ್ಯೆಯಾಗಿರಬೇಕು ಎಂಬುದನ್ನು ಬಯಸುತ್ತದೆ. ಹಾಗಾಗಿ ಈ ಕನ್ಯತ್ವವನ್ನು ಕಾಪಾಡಿಕೊಂಡು ಬಂದರೆ ಮಹಿಳೆಗೆ ಯಾವುದೇ ಅಡ್ಡಿ ಆತಂಕಗಳಿಲ್ಲದೇ ವಿವಾಹವಾಗುತ್ತದೆ. ಇಲ್ಲದಿದ್ದರೆ ಮುಂದೆ ಹಲವು ಸಮಸ್ಯೆಗಳಿಗೆ ಒಳಗಾಗಬೇಕಾಗುತ್ತದೆ. ಈ ಬಗೆಯ ಆತಂಕಗಳು ತಂದೆ ತಾಯಂದಿರಲ್ಲಿ ತುಂಬಾ ಇರುತ್ತದೆ. ನಿಂಗಮ್ಮ ಹೇಳುವಂತೆ "ಒಂದ್ಸಾರಿ ಹೆಣ್ಮಕ್ಕಳು ಅಡ್ಡದಾರಿ ಹಿಡಿದ್ರು, ಇಲ್ಲಾಂದ್ರೆ ಗಂಡ್ಮಕ್ಳು ಯಾರಾದ್ರು ಏನಾದ್ರು ಮಾಡಿದ್ರ ಅಂದ್ರೆ ಮುಗೀತು. ಮನಿ ಮರ್ಯಾದಿಯೆಲ್ಲಾ ಹಾಳಾದಂಗೆ" ಎಂಬ ಮಾತು ಇದನ್ನೇ ಧ್ವನಿಸುತ್ತದೆ. ಅಂದರೆ ಅಡ್ಡದಾರಿ ಹಿಡಿಯುವುದು ಎಂದರೆ ವಿವಾಹಕ್ಕೆ ಮುಂಚೆ ಪುರುಷನೊಂದಿಗೆ ಲೈಂಗಿಕ ಸಂಪರ್ಕಕ್ಕೆ ಒಳಗಾಗುವುದು; ವಿವಾಹಕ್ಕೂ ಮುಂಚೆ ಪ್ರೀತಿಯಲ್ಲಿ ಬೀಳುವುದು; ವಿವಾಹಕ್ಕೂ ಮುಂಚೆ ಪುರುಷರಿಂದ ಲೈಂಗಿಕ ದೌರ್ಜನ್ಯಗಳಿಗೆ ಬಲಿಯಾಗುವುದು. ಹೀಗೆ ಹಲವು ಕಾರಣಗಳಿಗಾಗಿ ಆತಂಕ ಹೊಂದುತ್ತಾರೆ. ಹೀಗೆ ವಿವಾಹಕ್ಕೂ ಮುಂಚೆ ಮಹಿಳೆಯರನ್ನು ಕನ್ಯೆಯರಾಗಿಯೇ ಉಳಿಸುವ ಕಾರ್ಯದಲ್ಲಿ ಈ ಎಲ್ಲಾ ಆತಂಕಗಳು ಎದುರಾಗುತ್ತವೆ. ಹಾಗೆಯೇ ಇದೊಂದು ಬಹುದೊಡ್ಡ ಜವಾಬ್ದಾರಿಯಾಗಿರುತ್ತದೆ. ಇದು ಕೇವಲ ಒಂದು ಕುಟುಂಬದ ಆತಂಕವಲ್ಲ. ಬದಲಾಗಿ ವ್ಯವಸ್ಥೆಯಲ್ಲಿನ ಎಲ್ಲಾ ಕುಟುಂಬಗಳಲ್ಲಿನ ತಂದೆ ತಾಯಂದಿರ ಆತಂಕವೂ ಆಗಿರುತ್ತದೆ. ಜೊತೆಗೆ ಅವರು ನಿರಾಳತೆಯನ್ನು ಅಥವಾ ನಿಟ್ಟುಸಿರನ್ನು ಬಿಡುವುದು ಹೆಣ್ಣು ಮಕ್ಕಳ ಮದುವೆಯ ನಂತರವೇ. ಅಂದರೆ ಮದುವೆಯ ನಂತರ ತಮ್ಮ ಹೆಣ್ಣು ಮಕ್ಕಳ ಮೇಲಿನ ಜವಾಬ್ದಾರಿ ಗಂಡನಿಗೆ ವರ್ಗಾಯಿಸಲ್ಪಡುತ್ತದೆ. "ಮದುವಿ ಆಗೋ ವರ್ಗ್ಗೂ ಕಾದ್ರೆ ಸಾಕು. ಮದುವಿ ಆದ್ ಮ್ಯಾಲ ಹೆಂಗೋ ಗಂಡ ಇರ್ತಾನಲ್ಲಾ ಅವ್ನೆ ಎಲ್ಲಾನೂ ನೋಡ್ಕೆಂಡು ಹೋಗ್ತಾನ". ಎಂದು ಹೇಳುವ ನಿಂಗಮ್ಮನ ಮಾತಿನಲ್ಲಿ ಇದು ವ್ಯಕ್ತವಾಗುತ್ತದೆ. ಆಗ ಗಂಡನೇ ಆಕೆಯ ಮೇಲೆ ಎಲ್ಲಾ ಅಧಿಕಾರಗಳನ್ನು ಚಲಾಯಿಸುವಂತಹ ಹಕ್ಕನ್ನು ಸಾಮಾಜಿಕವಾಗಿಯೇ ಪಡೆದುಕೊಳ್ಳುತ್ತಾನೆ. ಇದು ಸಾಮಾಜಿಕವಾಗಿ ಜನರಲ್ಲಿ ಬಿತ್ತಿರುವ ಮೌಲ್ಯವಾಗಿದೆ. ಹಾಗಾಗಿಯೇ ಮಹಿಳೆಯರನ್ನು ಸಮಾಜದಲ್ಲಿ ಜತನದಿಂದ ಕಾಪಾಡುವುದು ತಂದೆ ತಾಯಿಯರ ಆದ್ಯ

ಕರ್ತವ್ಯವಾಗಿರುತ್ತದೆ. ಹಾಗಾಗಿಯೇ ಅವರು ಈ ಜವಾಬ್ದಾರಿಯಿಂದ ಮುಕ್ತಿಯನ್ನು ಪಡೆಯಲು ಬಹು ಬೇಗನೇ ಮದುವೆ ಮಾಡುವ ಕಾರ್ಯಕ್ಕೆ ಮುಂದಾಗುತ್ತಾರೆ.

**ಈ. ಹಿರಿಯ ಮಕ್ಕಳ ವಿವಾಹದ ಜೊತೆ ಕಿರಿಯ ಮಕ್ಕಳ ವಿವಾಹ ಮಾಡುವುದು :** ವ್ಯವಸ್ಥೆಯಲ್ಲಿನ ಕೆಲವು ಕುಟುಂಬಗಳಲ್ಲಿ ಈ ಬಗೆಯ ಅಂದರೆ ಹಿರಿ ಮಗಳ ಅಥವಾ ಮಗನ ಮದುವೆಗಳಲ್ಲಿ ಕಿರಿ ಮಕ್ಕಳ ವಿವಾಹಗಳನ್ನೂ ಮಾಡುವಂತಹದ್ದು ನಡೆಯುತ್ತವೆ. ಆದರೆ ಇಲ್ಲಿ ಕಿರಿಯ ಮಕ್ಕಳು ಇನ್ನು ವಿವಾಹ ವಯಸ್ಸಿಗೆ ಬಂದಿರುವುದಿಲ್ಲ ಎಂಬುದನ್ನೂ ತಿಳಿದುಕೊಳ್ಳದೇ, ಅವರ ವಿವಾಹವನ್ನು ಮಾಡುವ ಉದಾಹರಣೆಗಳು ಕಂಡುಬರುತ್ತವೆ. ಇಂತಹವುಗಳು ಬಾಲ್ಯ ವಿವಾಹಕ್ಕೆ ಎಡೆಮಾಡಿಕೊಡುತ್ತವೆ. ಮುಖ್ಯವಾಗಿ ಖರ್ಚು ಕಡಿಮೆಯಾಗುತ್ತದೆ ಮತ್ತು ಅದರ ಜೊತೆಗೆ ಸಂಬಂಧಗಳನ್ನು ಬಹು ಬೇಗನೇ ಹೆಚ್ಚಿಸಿಕೊಳ್ಳುವ ಕೆಲಸಗಳೂ ನಡೆಯುತ್ತವೆ. ಈ ತರಹದ ವಿವಾಹಗಳು ಎಲ್ಲ ಬಗೆಯ ಜಾತಿ ಸಮುದಾಯಗಳು, ವರ್ಗಗಳಲ್ಲೂ ನಡೆಯುತ್ತಿರುತ್ತವೆ. ಆದರೆ ಬಡ ಕುಟುಂಬಗಳಲ್ಲಿ ಖರ್ಚನ್ನು ಕಡಿಮೆ ಮಾಡಿಕೊಳ್ಳಲು ಈ ತರಹದ ವಿವಾಹಗಳಿಗೆ ಒಳಗಾದರೆ, ಶ್ರೀಮಂತ ಅಥವಾ ಉನ್ನತ ವರ್ಗದ ಕುಟುಂಬಗಳಲ್ಲಿ ಉತ್ತಮ ಸಂಬಂಧಗಳ ಹೆಸರಿನಲ್ಲಿ ನಡೆಯುತ್ತಿರುತ್ತವೆ. ಮುಖ್ಯವಾಗಿ ಈ ಎರಡೂ ಕಾರಣಗಳಿಗಾಗಿ ಹಿರಿಯ ಮಕ್ಕಳ ಜೊತೆ ಚಿಕ್ಕ ಮಕ್ಕಳ ವಿವಾಹವನ್ನೂ ಮಾಡುತ್ತಿರುವ ಉದಾಹರಣೆಗಳು ಸಾಕಷ್ಟು ದೊರೆಯುತ್ತವೆ. ಕೊಪ್ಪಳ ತಾಲೂಕಿನ ಚಿಕ್ಕೋಬನಾಳ ಗ್ರಾಮದ ಸುರೇಶ ಎಂಬುವವರು ತಮ್ಮ ಮಗನಿಗೆ ಇನ್ನು ಇಪ್ಪತ್ತೊಂದು ವರ್ಷ ವಯಸ್ಸು ಪೂರೈಸುವ ಮೊದಲೇ ವಿವಾಹ ಮಾಡಿದ್ದಾರೆ. ಇದಕ್ಕೆ ಅವರು ನೀಡುವ ಕಾರಣ "ನನಿಗೆ ಇಬ್ಬರು ಮಕ್ಳು, ಎರಡೂ ಗಂಡೇ. ಮೊದಲ್ನೇವ್ನು ಪ್ರಕಾಶ, ಎರಡ್ನೇವ್ನು ನಾಗರಾಜ. ಇಬ್ರಿಗೂ ಸತೆ ಒಂದೇ ದಿನ ಮದುವಿ ಮಾಡಿದ್ವಿ. ಒಬ್ಬೊಬ್ರುದು ಒಂದೊಂದ್ಸಾರಿ ಮದುವಿ ಮಾಡಾದು ನಮ್ ಕೈಲಿ ಆಗಂಗಿಲ್ಲ ಅಂತ ತಿಳ್ಕಂಡು ಇಬ್ರುಗೂ ಒಂದೇ ಸಾರಿ ಮದುವಿ ಮಾಡಿದ್ವಿ. ಏನ್ ಮಾಡೋದು ಕಾಲ ಕೂಡಿ ಬಂದ್ವು. ಕಂಕಣಭಾಗ್ಯ ಎಲ್ಲಿ ಯಾವಾಗ ಕೂಡಿ ಬರ್‍ತೈತೋ ಗೊತ್ತಿಲ್ಲ. ಅದು ಕೂಡಿ ಬಂದಾಗ ಯಾರು ಏನ್ ಮಾಡಾಕ ಆಗತೈತಿ. ಪ್ರಕಾಸನ್ ಮದುವಿ ಜೊತಿಗಿ ನಾಗಂದು ಆಗ್ಬೇಕು ಅಂತ ಬರ್ದಿತ್ತು ಹಂಗಾಗಿ ಅದು ಆತು. ನಾವೇನೂ ಮಾಡಾಕ ಬರಂಗಿಲ್ಲ. ಎಲ್ಲಾ ದೇವ್ರಾಟ. ರೊಕ್ಕ ಉಳ್ಸಾಕ ಹಿಂಗ ಮಾಡ್ಯಾನ ಅಂತ ನಮ್ ಜನ್ದಾಗ ಬಾಳ ಆಡಿಕೆಂಡ್ರು. ಆದ್ರ ಏನ್ ಮಾಡೋದು ಜನ ಆಡಿಕೆಂತಾರ ಕೇಳ್ಸಿಕೆಂಡು ಸುಮ್ನೆ ಇರ್‍ಬೇಕಾಗತೈತಿ ಅವ್ರ ಮಾತ್ಗೆಲ್ಲಾ ಕಿವಿ ಕೊಟ್ರ ಮುಗೀತು ನಾವು ಹಾಳಾಗಿ ಹೋಗ್ತೀವಿ. ಇಬ್ರುದು ಒಂದೇ ಸತೆ ಮದುವಿ ಮಾಡಿ ಈಗ ಆರಾಮಾಗಿ ಐದೀವಿ" ಎಂದರು.

ಗದಗ ತಾಲೂಕಿನ ಬೆಂಟೂರು ಗ್ರಾಮದ ಈಶಪ್ಪ ಎಂಬುವವರು ಇನ್ನೇನು ಸಾಯುವ ಕಾಲದಲ್ಲಿ ತನ್ನ ಇಬ್ಬರು ಮಕ್ಕಳ ಮದುವೆಯನ್ನು ಮಾಡಿದ್ದಾರೆ. ಅದರಲ್ಲಿ ಒಂದು ಕಾನೂನು ಬಾಹೀರವಾದರೆ ಇನ್ನೊಂದು ಕಾನೂನು ಪ್ರಕಾರವಾದ ಮದುವೆ. ತನ್ನ ಇಬ್ಬರೂ ಮಕ್ಕಳ ಮದುವೆಯನ್ನು ಮಾಡಿದ ನಂತರ ಎರಡು ತಿಂಗಳಲ್ಲೇ ಸಾವನ್ನಪ್ಪಿದ್ದಾರೆ. ಇವರ

ಹೆಂಡತಿಯಾದ ಕಾಶವ್ವ ಎಂಬುವವರು ಹೇಳುವಂತೆ, "ನಮಿಗೆ ಮೂವರು ಮಕ್ಕಳು. ಮೊದಲ್ನೇ ಮಗ್ಗ ಮದುವಿ ಮಾಡಿದ್ವಿ. ಉಳ್ಬಂಗ ಒಬ್ಬೋನು ಗಂಡ್ಮಗ ಇನ್ನೊಂದು ಹೆಣ್ಮಗ್ಳು. ಇವ್ರಿಬ್ರದಾ ಬಾಕಿ ಉಳದಿತ್ತು. ಆದ್ರ ನಮ್ ಮನೇವ್ರು ಕಾಯಿಲಿ ಬಂದು ಹಾಸಿಗಿ ಹಿಡ್ದಿದ್ರು. ಅವ್ರು ಇನ್ನ ಇಬ್ರ ಮದುವಿ ಮಾಡ್ಬೇಕಲ್ಲಾ ಏನ್ ಮಾಡೋದು, ಇಬ್ರ ಮದುವಿ ಮಾಡೋವರ್ಗ್ಗೂ ಇರ್ತೀನೋ ಇಲ್ವೋ ಗೊತ್ತಿಲ್ಲ, ಅಂತ ಯೋಚ್ನಿ ಮಾಡ್ತಿದ್ರು. ಅದಕ್ಕ ಒಂದಿನ ನನಿಗೇ ಹೇಳಿದ್ರು, ಇಬ್ರುದೂ ಒಂದೇ ಸಾರಿ ಮದುವಿ ಮಾಡಾನು ಅಂತ. ಅದಕ್ಕ ನಾನೂ ಸತೆ ಒಪ್ಪಿದ್ದೆ. ಆದ್ರೆ ಮಗಳು ಇನ್ನ ಸಣ್ಣೋಳು ಐದಾಳ ಅಕಿದು ಎಂಗ್ ಮದುವಿ ಮಾಡೋದು ಅಂತ ಯೋಚ್ನಿ ಮಾಡ್ತಿದ್ವಿ. ಅದೇ ಟೈಮಿನಾಗ ನಮ್ ಸಣ್ಣ ಮಾವ ಬಂದು ಮಾತಾಡಿಸಿದ್ರು. ಅವ್ರ ಮುಂದ ಎಲ್ಲಾ ವಿಚಾರಾನ ಹೇಳಿದ್ವಿ. ಅವ್ರು ಸತೆ ಒಪ್ಕೆಂಡ್ರು. ಹಂಗಾಗಿ ಇಬ್ರುಗೂ ಮದುವಿ ಮಾಡಾಕ ಹುಡುಗ, ಹುಡುಗೀನ್ನ ನೋಡಾಕ್ಹತ್ತಿದ್ವಿ. ಆದ್ರ ಮಗ್ಳು ಮದುವಿ ಬ್ಯಾಡ ಅಂತ ಕ್ಯಾತಿ ತಗದ್ಲು. ನನಿಗೆ ಸತೆ ಅಕಿಗೆ ಹೇಳಿ ಹೇಳಿ ಸಾಕಾಗಿತ್ತು. ಅದಕ್ಕ ಅವ್ರ ತಾತಂತೇಲಿ ಹೇಳಿಸಿದ್ವಿ. ಆಗ ಸುಮ್ನೆ ಒಪ್ಕೆಂಡ್ಲು. ನಮ್ ಮನೇವ್ರದಂತೂ ಒಂದೇ ಹಠ, ಇಬ್ರ ಮದುವೀನ್ನ ಒಂದೇ ಹಂದರದಾಗ ನೋಡ್ಬೇಕಂತ. ಹಂಗಾಗಿ ಇಬ್ರಿಗೂ ಸತೆ ಒಂದೇ ಹಂದ್ರದಾಗ ಮದುವಿ ಮಾಡಿ ಮುಗಿಸಿದ್ವಿ. ಮಕ್ಳ ಮದುವಿ ಆಗಿ ಎರಡು ತಿಂಗ್ಳಿಗೆ ನಮ್ ಯಜಮಾನ್ರು ತೀರ್ಕೆಂಡ್ರು. ಆದ್ರ ಅವ್ರ ಆಸಿಯಂಗ ಇಬ್ರುದೂ ಮದುವಿ ನೋಡಿದ್ರು" ಎಂದರು.

ಗದಗ್ ತಾಲೂಕಿನ ಹೊಸೂರು ಗ್ರಾಮದ ಮಹಂತೇಶ ಎಂಬುವವರು ತಮ್ಮ ಇಬ್ಬರು ಮಕ್ಕಳ ಮದುವೆಯ ಜೊತೆಗೆ ಅವರು ಸಾಕಿದಂತಹ ಇನ್ನೊಬ್ಬ ಅಳಿಯನ ಮದುವೆಯೂ ಸಹ ಮಾಡಿದ್ದು ಒಟ್ಟು ಮೂರು ಮದುವೆಗಳನ್ನು ಒಂದೇ ಸಾರಿ ಮಾಡಿದ್ದಾರೆ. ಇದರಲ್ಲಿ ಒಂದು ಬಾಲ್ಯ ವಿವಾಹವಾಗಿದೆ. ಅದು ಅವರು ಸಾಕಿದಂತಹ ಅಳಿಯನದ್ದು. ಆತನ ಹೆಸರು ಶರಣಪ್ಪ. ಈತನಿಗೆ ಇನ್ನು ಇಪ್ಪತ್ತೊಂದು ವರ್ಷ ವಯಸ್ಸು ಪೂರ್ಣಗೊಳ್ಳುವ ಮೊದಲೇ ವಿವಾಹ ಮಾಡಿದ್ದಾರೆ. ಮಹಂತೇಶ ಅವರು ಹೇಳುವಂತೆ "ನನಿಗೆ ಇಬ್ರು ಗಂಡ್ಮಕ್ಕಳು. ಇನ್ನ ನನ ಅಕ್ಕನ ಮಗ ಒಬ್ನು ಇಲ್ಲೇ ನಮ್ ಮಕ್ಳ ಜೊತಿಗೆ ಬೆಳ್ದು ದೊಡ್ಡೋನಾಗ್ಯಾನ, ನನ ಅಕ್ಕ ಇವ್ನ ಮದುವಿ ಜವಾಬ್ದಾರೀನೆಲ್ಲಾ ನನ್ ಮೇಲೆ ಹಾಕಿದ್ಲು. ಹಂಗಾಗೇ ಅವ್ನು ನಮ್ ಜೊತಿಗೇ ಮನ್ಯಾಗಿನ ಮತ್ತೆ ಹೊಲ್ದಾಗಿನ ಕೆಲ್ಸಗಳ್ನ ಮಾಡಿಕೆಂಡು ಇರ್ತಿದ್ದ. ಅವ್ನ ಮದುವಿನ ನಾನೇ ಮಾಡ್ತೀನಿ ಅಂತ ಅಕ್ಕಗ ಮಾತು ಕೊಟ್ಟಿದ್ದೆ ಹಂಗಾಗಿ ನನ್ ಮಕ್ಳ ಮದುವಿ ಜೊತಿ ಅವ್ನ ಮದುವೀನೂ ಮಾಡಿದ್ರೆ ಅಕ್ಕ ಖುಷಿಯಾಗ್ತಾಳ ಅಂತ ಅನ್ಕಂಡು ಮೂರೂ ಮದುವೀನ್ನ ಒಂದೇ ಸಾರಿ ಮಾಡಿದೆ" ಎಂದರು.

ಮೇಲಿನ ಮೂರೂ ಪ್ರಕರಣಗಳು ಒಂದೊಂದು ಕಾರಣಗಳಿಗಾಗಿ ಬಾಲ್ಯವಿವಾಹಗಳನ್ನು ಮಾಡಿದ್ದಾರೆ. ಮುಖ್ಯವಾಗಿ ಬಾಲ್ಯ ವಿವಾಹಗಳನ್ನೂ ಸಹ ಮಾಡಿದ್ದಾರೆ. ಆದರೆ ಇವರಿಗೆ ಇದು ಬಾಲ್ಯ ವಿವಾಹ ಎಂದು ತಿಳಿದಿಲ್ಲ. ಅವರು ಪರಿಸ್ಥಿತಿಗೆ ಅನುಗುಣವಾಗಿ ತಮ್ಮ ಮಕ್ಕಳನ್ನು ವಿವಾಹ ಬಂಧನಕ್ಕೆ ಸಿಲುಕಿಸಿದ್ದಾರೆ. ಆದರೆ ಬಾಲ್ಯ ವಿವಾಹಗಳು ನಡೆದಿರುವುದಂತೂ ಸತ್ಯ. ಕುಟುಂಬದಲ್ಲಿ ಹಲವು ಕಾರಣಗಳಿಗಾಗಿ ಈ ಬಗೆಯ ಜೋಡಿ ವಿವಾಹಗಳು ನಡೆಯುತ್ತವೆ. ಇವುಗಳಲ್ಲಿ ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡುವಂತಹದ್ದು ಸಾಮಾನ್ಯವಾಗಿರುತ್ತದೆ. ಆದರೆ ಇದು ಯಾರ ಗಮನಕ್ಕೂ ಬರುವುದಿಲ್ಲ. ಮುಖ್ಯವಾಗಿ ಸಂಬಂಧಗಳನ್ನು ತ್ವರಿತಗತಿಯಲ್ಲಿ ಬೆಳೆಸಲು ಈ ಬಗೆಯ ವಿವಾಹಗಳು ನಡೆಯುತ್ತವೆ. ಈ ಹಿಂದೆಯೇ ಹೇಳಿದಂತೆ ಬಡ ಕುಟುಂಬಗಳಲ್ಲಿ ಖರ್ಚಿನ ಸಂಗತಿ (ಹಣದ ಸಂಗತಿ) ಮುಖ್ಯವಾದರೆ, ಇನ್ನು ಉನ್ನತ ವರ್ಗದ ಕುಟುಂಬಗಳಲ್ಲಿ ಸಂಬಂಧಗಳನ್ನು ಹೆಚ್ಚು ಹೆಚ್ಚು ಬೆಳೆಸುವುದಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಮಕ್ಕಳ ವಿವಾಹದ ವಯಸ್ಸಿನ ಬಗೆಗೆ ಯಾವುದೇ ಯೋಚನೆ ಇರುವುದಿಲ್ಲ. ಇಂತಹ ವಿವಾಹಗಳಿಗೆ ಸಾಮಾಜಿಕವಾಗಿಯೂ ಒಪ್ಪಿಗೆ ಇರುತ್ತದೆ. ತುಂಬಾ ಸಡಗರದಿಂದಲೇ ಮಾಡಲಾಗುತ್ತದೆ. ಈ ಬಗೆಯ ಸಡಗರದಲ್ಲಿಯೇ ಬಾಲ್ಯ ವಿವಾಹಕ್ಕೆ ಒಳಗಾದ ಮಕ್ಕಳ ಹಕ್ಕುಗಳೂ ಸಹ ಮುಚ್ಚಲ್ಪಡುತ್ತವೆ. ಮುಖ್ಯವಾಗಿ ಹೆಣ್ಣುಮಕ್ಕಳ ಸ್ವಾತಂತ್ರ್ಯವಂತೂ ಇಲ್ಲವಾಗುತ್ತದೆ. ಒಟ್ಟಾರೆಯಾಗಿ ವಿವಾಹಕ್ಕಿಂತ ಪೂರ್ವದಲ್ಲಿ ಸಾಮಾಜಿಕವಾಗಿ ಮಹಿಳೆಯರನ್ನು ರಕ್ಷಿಸುವ ಕಾರ್ಯ ಕುಟುಂಬದ ಹಿರಿಯ ಸದಸ್ಯರ ಕೆಲಸ ಎಂಬ ಕಟ್ಟುನಿಟ್ಟಿನ ನಿಯಮಗಳಿಂದಾಗಿ ಬಾಲ್ಯವಿವಾಹಗಳ ಸಂಖ್ಯೆ ಇನ್ನೂ ಜೀವಂತವಾಗಿರಲು ಕಾರಣವಾಗಿದೆ. ಗಂಡು ಮಗುವಿನ ವಯಸ್ಸು ೨೧ ವರ್ಷ ಆಗಿರದಿದ್ದರೆ, ಅವರಿಗೆ ಜೋಡಿಯಾಗಿ ಬರುವ ಹೆಣ್ಣುಮಗುವಿನ ವಯಸ್ಸು ೧೮ ವರ್ಷ ವಯಸ್ಸನ್ನೂ ದಾಟಿರುವುದಿಲ್ಲ. ಏಕೆಂದರೆ ವಿವಾಹಕ್ಕೆ ಗಂಡಿನ ವಯಸ್ಸಿಗಿಂತ ಹೆಣ್ಣಿನ ವಯಸ್ಸು ಕಡಿಮೆ ಇರಬೇಕು ಎಂಬುದು ಸಾಮಾಜಿಕವಾಗಿ ರೂಪಿಸಲ್ಪಟ್ಟ ಮೌಲ್ಯವಾಗಿದೆ. ಹಾಗೆಯೇ ಇದೊಂದು ನಂಬಿಕೆಯೂ ಕೂಡ. ಮುಖ್ಯವಾಗಿ ಬಾಲ್ಯ ವಿವಾಹ ನಿಷೇಧ ಕಾಯಿದೆಯಲ್ಲಿ ರೂಪಿಸಿರುವ ವಿವಾಹ ವಯಸ್ಸೂ ಸಹ ಇದನ್ನೇ ಪುಷ್ಟೀಕರಿಸುತ್ತದೆ. ಈ ಬಗೆಯ ಸಾಮಾಜಿಕ ಕಾರಣಗಳನ್ನು ನೀಡಿದಂತಹ ಒಟ್ಟು ಮುನ್ನೂರು ಪ್ರಕರಣಗಳಲ್ಲಿ ಎಷ್ಟು ಜನ ವಕ್ತೃಗಳು ಸಾಮಾಜಿಕ ಕಾರಣಗಳನ್ನು ಒಪ್ಪಿಕೊಂಡಿದ್ದಾರೆ ಮತ್ತು ಆ ಮೂಲಕ ಅವುಗಳನು ಸಮರ್ಥಿಸಿಕೊಳ್ಳುತ್ತಿದ್ದಾರೆ ಎಂಬುದನ್ನು ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

ಕೋಷ್ಟಕ ೯.೨

ಸಾಮಾಜಿಕ ತೊಡಕುಗಳು

| ಸಾಮಾಜಿಕ ಕಾರಣಗಳು | ಹೌದು | | ಇಲ್ಲ | | ಈ ಪ್ರಶ್ನೆಗೆ ಮೌನ ವಹಿಸಿದವರು | |
|---|---|---|---|---|---|---|
| ಸಮಾಜದಲ್ಲಿ ಕುಟುಂಬದ ಗೌರವವನ್ನು ಕಾಪಾಡಿಕೊಳ್ಳುವುದು | ೧೭೦ | ೫೬.೬೬% | ೨೦ | ೬.೬೬% | ೧೧೦ | ೩೬.೬೬% |
| ಚಿಕ್ಕ ವಯಸ್ಸಿನಲ್ಲಿ ವಿವಾಹ ಮಾಡುವುದರಿಂದ ವರದಕ್ಷಿಣೆ ಕಡಿಮೆ | ೧೬೮ | ೫೬% | ೧೨೦ | ೪೦% | ೧೨ | ೪% |
| ಮದುವೆ ಮಾಡಿದ ಹೆಣ್ಣು ಮಗುವನ್ನು ಸಾಮಾಜಿಕವಾಗಿ ರಕ್ಷಿಸಬಹುದು. | ೨೪೪ | ೮೧.೩೩% | ೪ | ೧.೩೩% | ೫೨ | ೧೭.೩೩% |
| ಹಿರಿಯ ಮಕ್ಕಳ ವಿವಾಹದ ಜೊತೆ ಕಿರಿಯ ಮಕ್ಕಳ ವಿವಾಹ ಮಾಡುವುದು | ೧೫೨ | ೫೦.೬೬% | ೧೩೪ | ೪೪.೬೬% | ೧೪ | ೪.೬೬% |




ರೇಖಾಚಿತ್ರ ೯.೨ ಸಾಮಾಜಿಕ ತೊಡಕುಗಳು

ಮೇಲಿನ ಕೋಷ್ಟಕ ಮತ್ತು ರೇಖಾಚಿತ್ರದಲ್ಲಿ ತಿಳಿಸಿರುವಂತೆ ಕುಟುಂಬದ ಗೌರವದ ಕಾರಣಕ್ಕಾಗಿ ಮಕ್ಕಳ ಬಾಲ್ಯಾವಸ್ಥೆಯಲ್ಲಿಯೇ ವಿವಾಹ ಮಾಡುವುದನ್ನು ಸಮರ್ಥಿಸಿಕೊಂಡವರ ಪ್ರಮಾಣ ಶೇ.೫೬.೬೬ರಷ್ಟಿದೆ. ಈ ಪ್ರಶ್ನೆಗೆ ಇಲ್ಲವೆಂದು ಉತ್ತರಿಸಿದವರ ಪ್ರಮಾಣ ಶೇ.೬.೬೬ರಷ್ಟಿದೆ. ಹಾಗೆಯೇ ಮೌನವಹಿಸಿದವರ ಪ್ರಮಾಣ ಶೇ.೩೬.೬೬ರಷ್ಟಿದೆ. ಇನ್ನು ಚಿಕ್ಕ ವಯಸ್ಸಿನಲ್ಲಿಯೇ ಮಕ್ಕಳ ವಿವಾಹವಾಗುವುದರಿಂದ ವರದಕ್ಷಿಣೆ ಕಡಿಮೆಯಾಗುತ್ತದೆ ಎಂಬುದನ್ನು ಸಮರ್ಥಿಸಿಕೊಂಡವರ ಪ್ರಮಾಣ ಶೇ.೫೬ರಷ್ಟಿದೆ. ಇದನ್ನು ಅಲ್ಲಗೆಳೆದವರ ಪ್ರಮಾಣ ಶೇ.೪೦ರಷ್ಟಿದೆ. ಹಾಗೆಯೇ ವಿವಾಹ ಮಾಡುವುದರ ಮೂಲಕ ಹೆಣ್ಣುಮಗುವನ್ನು ಸಾಮಾಜಿಕವಾಗಿ ರಕ್ಷಿಸಬಹುದು ಎಂಬುದನ್ನು ಸಮರ್ಥಿಸಿಕೊಂಡವರ ಪ್ರಮಾಣ ಶೇ.೮೧ರಷ್ಟಿದೆ.

ಈ ಪ್ರಶ್ನೆಗೆ ಮೌನವಹಿಸಿದವರ ಪ್ರಮಾಣ ಶೇ.೧೭.೩೩ರಷ್ಟಿದೆ. ಕುಟುಂಬದಲ್ಲಿನ ಹಿರಿಯ ಮಕ್ಕಳ ಜೊತೆ ಕಿರಿಯ ಮಕ್ಕಳ ವಿವಾಹ ಮಾಡುವುದನ್ನು ಒಪ್ಪುವವರ ಪ್ರಮಾಣ ಶೇ.೫೦.೬೬ರಷ್ಟಿದೆ. ಮೇಲಿನ ಎಲ್ಲಾ ಕಾರಣಗಳಲ್ಲಿ ಹೆಣ್ಣುಮಕ್ಕಳನ್ನು ಸಾಮಾಜಿಕವಾಗಿ ರಕ್ಷಿಸಬೇಕೆಂಬ ಆತಂಕ ಕುಟುಂಬದ ಸದಸ್ಯರ ಮೇಲಿರುತ್ತದೆ. ಹಾಗಾಗಿ ಈ ಜವಾಬ್ದಾರಿಯಿಂದ ಬಹುಬೇಗನೇ ಹೊರಬರಬೇಕಾದರೆ ಚಿಕ್ಕ ವಯಸ್ಸಿನಲ್ಲಿ ಮಕ್ಕಳ ವಿವಾಹವನ್ನು ಮಾಡುತ್ತಿರುವುದು ಕಂಡುಬರುತ್ತಿದೆ.

ಸಾಮಾಜಿಕವಾಗಿ ಮಹಿಳೆಯರನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಮೊದಲು ಕುಟುಂಬವೇ. ಕುಟುಂಬದ ಗೌರವ ಹೆಣ್ಣುಮಕ್ಕಳ ಕೈಯಲ್ಲಿರುತ್ತದೆ. ಅವರು ಯಾವುದೇ ಕಾರಣಕ್ಕೂ ಆ ಗೌರವಕ್ಕೆ ಮಸಿ ಬಳಿಯುವ ಕೆಲಸ ಮಾಡಬಾರದು ಎಂಬುದು ಸಮಾಜದ ಆಶಯ. ಆ ಕಾರಣಕ್ಕಾಗಿಯೇ ಕುಟುಂಬದ ಗೌರವವನ್ನು ಕಾಪಾಡುವುದಕ್ಕೋಸ್ಕರ ಹೆಣ್ಣುಮಕ್ಕಳು ತಮ್ಮ ಎಲ್ಲ ಬಗೆಯ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಾರೆ. ಆದರೆ ಹುಡುಗರ ವಿಷಯದಲ್ಲಿ ಹಾಗಾಗುವುದಿಲ್ಲ, ಅವನು ನಿರ್ದೇಶಕ ಸ್ಥಾನದಲ್ಲಿರುತ್ತಾನಾದ್ದರಿಂದ ಅವನಿಗೆ ಕುಟುಂಬ ಗೌರವವನ್ನು ಕಾಪಾಡುವಂತಹ ಯಾವುದೇ ಒತ್ತಡಗಳು ಕಡಿಮೆ ಪ್ರಮಾಣದಲ್ಲಿರುತ್ತವೆ. ಹೆಣ್ಣು ಮಕ್ಕಳನ್ನು ಎಷ್ಟು ಚೆನ್ನಾಗಿ ರಕ್ಷಿಸುತ್ತಾರೆಂದರೆ ಮನೆಯಿಂದ ಆಚೆ ಹೋಗಲೂ ಬಿಡುವುದಿಲ್ಲ. "ನಮ್ಮ ಹೆಣ್ಣುಮಕ್ಕಳು ಮನೆಯಿಂದ ಒಬ್ಬರೇ ಹೊರಗೆ ಹೋಗಿದ್ದೇ ಇಲ್ಲ. ನಗರದ ಮಾರುಕಟ್ಟೆಗೂ ಅವರಿಗೆ ದಾರಿ ಗೊತ್ತಿಲ್ಲ. ಇದನ್ನು ಕೆಲವು ತಂದೆತಾಯಿಗಳು ಬಹಳ ಹೆಮ್ಮೆಯಿಂದ ಮಾಡುವಂತಹ ಘೋಷಣೆ. ಹೀಗೆ ಮಾಡುವುದರ ಮೂಲಕ ಅವರು ತಮ್ಮ ಹೆಣ್ಣುಮಕ್ಕಳ ಸದ್ಗೃಹಿಣಿ ಗುಣಗಳಿಗೆ ಸಾರ್ವಜನಿಕವಾಗಿ ಪ್ರಶಸ್ತಿಪತ್ರ ಕೊಡುತ್ತಾರೆ. ತಮ್ಮ ಹೆಣ್ಣುಮಕ್ಕಳು ಮನೆಯಿಂದ ಹೊರಗೆ ಹೋಗುವುದು ಎಷ್ಟು ಕಡಿಮೆ ಎಂದರೆ ನೆರೆಹೊರೆಯವರೂ ಕೂಡ ಅವರನ್ನು ಗುರುತಿಸಲಾರರು ಎಂದು ಕೊಚ್ಚಿಕೊಳ್ಳುತ್ತಾರೆ" (ಮೀರಾ ಎಲ್.ಜಿ, (ಅನು), ೧೯೯೭, ಪು–೧೬). ಹೀಗೆ ಹೆಣ್ಣುಮಗುವು ಕುಟುಂಬದ ಆಚೆಗಿನ ಪ್ರಪಂಚವನ್ನು ನೋಡಿಲ್ಲವೆಂದರೆ ಅದು ಅವರ ತಪ್ಪಲ್ಲ. ಬದಲಾಗಿ ಹಾಗೆ ಅವರನ್ನು ಕುಟುಂಬದಲ್ಲಿ ಬಂಧಿಸಿಡಲಾಗಿದೆ ಎಂದರ್ಥ. ಈ ಬಂಧನ ತಂದೆ ತಾಯಂದಿರಿಗೆ ಹೆಮ್ಮೆಯ ವಿಷಯ. ಏಕೆಂದರೆ ಕುಟುಂಬದಲ್ಲಿ ಬಂಧನದಲ್ಲಿದ್ದಷ್ಟು ದಿನ ಅವಳು ಸುರಕ್ಷಿತಳು ಎಂಬ ಭಾವನೆ ಅವರದ್ದಾಗಿರುತ್ತದೆ. ಹಾಗಾಗಿಯೇ ತಮ್ಮ ಮಗಳು ಸುರಕ್ಷಿತಳು ಎಂಬುದನ್ನು ತೋರಿಸುವುದಕ್ಕಾಗಿಯೇ ಈ ಬಗೆಯಲ್ಲಿ ಹೇಳಿಕೊಳ್ಳುತ್ತಿರುತ್ತಾರೆ. ಆದರೆ ಈ ಕುಟುಂಬದ ನಾಲ್ಕು ಗೋಡೆಗಳ ಮಧ್ಯದಲ್ಲಿಯೇ ಉಳಿಯಬೇಕೆಂದರೆ ಅದು ಹೆಣ್ಣುಮಗುವಿಗೆ ಹಿಂಸೆಯೇ ಸರಿ.

### ೯.೩. ಆರ್ಥಿಕ ತೊಡಕುಗಳು

ಭಾರತವು ಹಳ್ಳಿಗಳ ದೇಶ. ಜನರು ಗ್ರಾಮೀಣ ಪ್ರದೇಶಗಳಲ್ಲಿಯೇ ಅಧಿಕವಾಗಿ ವಾಸವಿದ್ದಾರೆ. ಇಲ್ಲಿನ ಜನರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಿತಿಗತಿಗಳು ತುಂಬಾ

ಹದಗೆಟ್ಟಿವೆ. ಮುಖ್ಯವಾಗಿ ಜನರ ಆರ್ಥಿಕ ಸ್ಥಿತಿ ತುಂಬಾ ಚಿಂತಾಜನಕವಾಗಿದೆ. ಹಾಗಾಗಿ ಹಲವು ಸಮಸ್ಯೆಗಳು ಇಲ್ಲಿನ ಜನರನ್ನು ಕಾಡುತ್ತಲೇ ಇವೆ. ಈ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಹಲವು ಮಾರ್ಗೋಪಾಯಗಳನ್ನು ಕಂಡುಕೊಳ್ಳುತ್ತಿದ್ದಾರೆ. ಭಾರತದ ಶ್ರೇಣೀಕೃತ ವ್ಯವಸ್ಥೆಯಲ್ಲಿ ಹಲವು ಜಾತಿ ಸಮುದಾಯಗಳು ಇವೆ. ಈ ಎಲ್ಲಾ ಜಾತಿ ಸಮುದಾಯಗಳಲ್ಲಿಯ ಜನರ ಆರ್ಥಿಕ ಸ್ಥಿತಿಗತಿ ಒಂದೇ ಸಮನಾಗಿಲ್ಲ. ಕೆಲವರು ಆರ್ಥಿಕವಾಗಿ ಬಲಿಷ್ಠರಾಗಿದ್ದರೆ, ಹಲವರು ತುಂಬಾ ಹಿಂದುಳಿದಿದ್ದಾರೆ. ಹಾಗಾಗಿ ಹಲವು ಜನರು ಇಂದಿಗೂ ನಿರುದ್ಯೋಗ, ಬಡತನದಂತಹ ಸ್ಥಿತಿಗಳನ್ನು ಎದುರಿಸುತ್ತಿದ್ದಾರೆ. ಮುಖ್ಯವಾಗಿ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಈ ಆರ್ಥಿಕ ಹಿಂದುಳಿದಿರುವಿಕೆಯ ಕಾರಣವಾಗಿ ಹಲವು ಕುಟುಂಬಗಳಲ್ಲಿ ಬಾಲ್ಯ ವಿವಾಹಗಳು ನಡೆಯುತ್ತಿವೆ. ಇದಕ್ಕೆ ಹಲವು ಕಾರಣಗಳಿವೆ. ಬಾಲ್ಯ ವಿವಾಹ ಪದ್ಧತಿಗೆ ಮುನ್ನುಡಿ ಹಾಕುವ ಆರ್ಥಿಕ ಕಾರಣಗಳನ್ನು ಗುರುತಿಸುವುದಾದರೆ ಅ. ಬಡತನ ಆ. ಕುಟುಂಬದ ಆಸ್ತಿಯನ್ನು ತಮ್ಮಲ್ಲಿಯೇ ಉಳಿಸಿಕೊಳ್ಳುವುದು ಇ. ಸಾಮೂಹಿಕ ವಿವಾಹದಲ್ಲಿ ಮದುವೆ ಮಾಡುವುದರಿಂದ ಖರ್ಚು ಕಡಿಮೆ ಈ ಕಾರಣಗಳು ವ್ಯವಸ್ಥೆಯಲ್ಲಿ ಬಾಲ್ಯ ವಿವಾಹಗಳು ಹೆಚ್ಚಾಗುವುದಕ್ಕೆ ಕಾರಣಗಳಾಗಿವೆ. ಅಧ್ಯಯನ ಕ್ಷೇತ್ರ ವ್ಯಾಪ್ತಿಯಲ್ಲಿ ಈ ಮೇಲಿನ ಕಾರಣಗಳಿಗಾಗಿ ಬಾಲ್ಯ ವಿವಾಹಗಳನ್ನು ಮಾಡಿರುವ ಪ್ರಕರಣಗಳಿರುವುದು ಕಂಡುಬಂದಿವೆ. ಅವುಗಳನ್ನು ಕೆಳಗಿನಂತೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅ. ಬಡತನ** : ಇದೊಂದು ದೇಶದ ಬಹು ದೊಡ್ಡ ಸಮಸ್ಯೆಯಾಗಿದೆ. ಬಡತನದ ಕಾರಣದಿಂದ ಹಲವು ಸಮಸ್ಯೆಗಳು ಮಾನವರನ್ನು ಕಾಡುತ್ತಲೇ ಇವೆ. ಸಮಾಜದ ಯಾವುದೇ ಜನವರ್ಗವು ಜೀವನದ ಕನಿಷ್ಠ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಸ್ಥಿತಿಯಲ್ಲಿ ಇಲ್ಲದಿದ್ದರೆ ಅಂತಹವರನ್ನು ಬಡವರು ಎಂದು ಕರೆಯಲಾಗುತ್ತದೆ. ಅಂದರೆ ಕನಿಷ್ಠ ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲಾರದವರು ಬಡವರು ಎಂದು ಹೇಳಬಹುದು. ಆದರೆ ಇದನ್ನು ನಿರ್ಧಿಷ್ಟವಾಗಿ ವ್ಯಾಖ್ಯಾನಿಸುವುದು ತುಂಬಾ ಕಷ್ಟ. ಮನುಷ್ಯರು ತಾವು ಬದುಕಲು ಬೇಕಾದ ಕನಿಷ್ಟ ಪೌಷ್ಟಿಕಾಂಶಗಳನ್ನು ಪಡೆಯಲು ಬೇಕಾದ ಆಹಾರವನ್ನು ಸೇವಿಸಲು ಸಾಧ್ಯವಾಗದ ಜನರು ಬಡತನದ ರೇಖೆಗಿಂತ ಕೆಳಗಿನವರು ಎಂದು ಕರೆಯಲ್ಪಡುತ್ತಾರೆ. ಈ ಬಡತನವು ವ್ಯವಸ್ಥೆಯಲ್ಲಿ ಹಲವಾರು ಅನಿಷ್ಠ ಪದ್ಧತಿಗಳು ಬೇರೂರುವಂತೆ ಮಾಡಿದೆ. ಮುಖ್ಯವಾಗಿ ಬಾಲ್ಯ ವಿವಾಹದ ವಿಷಯಕ್ಕೆ ಬಂದಾಗ ಬಡತನವು ಈ ವಿವಾಹ ಪದ್ಧತಿಯನ್ನು ಜೀವಂತವಾಗಿರಿಸಿದೆ. ಬಡತನದಿಂದ ತೊಳಲಾಡುತ್ತಿರುವ ಎಷ್ಟೋ ಕುಟುಂಬಗಳಲ್ಲಿ ಬಾಲ್ಯ ವಿವಾಹಗಳು ಸಾಮಾನ್ಯವಾಗಿ ರೂಢಿಯಲ್ಲಿರುವುದು ಕಂಡುಬರುತ್ತದೆ. ಜನರು ತಮ್ಮ ಜೀವನವನ್ನೇ ಸಾಗಿಸಲು ಕಷ್ಟ ಪಡುತ್ತಿರುವ ಸಂದರ್ಭದಲ್ಲಿ ತಮ್ಮ ಮಕ್ಕಳ ವಿವಾಹ ಮಾಡುವುದು ಅವರಿಗೊಂದು ಬಹುದೊಡ್ಡ ಸಮಸ್ಯೆಯಾಗಿ ಪರಿಣಮಿಸುತ್ತದೆ. ಮುಖ್ಯವಾಗಿ ಬಡತನದ ಬಹಳಷ್ಟು ಕುಟುಂಬಗಳಲ್ಲಿನ ಮಕ್ಕಳು ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಬಂಧನಕ್ಕೆ ಒಳಗಾಗಿ ಇನ್ನಿತರೆ

ಸಮಸ್ಯೆಗಳನ್ನು ಎದುರಿಸುತ್ತಿರುತ್ತಾರೆ. ಈ ಬಡತನದ ಕಾರಣವನ್ನಿಟ್ಟುಕೊಂಡು ತಮ್ಮ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡಿರುವಂತಹ ಹಲವು ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿದ್ದು, ಅವುಗಳನ್ನು ವಕ್ತೃಗಳ ಹೇಳಿಕೆಗಳ ಮೂಲಕ ವಿವರಿಸಿಕೊಳ್ಳಲಾಗಿದೆ.

ಕೊಪ್ಪಳ ತಾಲೂಕಿನ ನಾಗೇಶನಹಳ್ಳಿ ಗ್ರಾಮದ ಮಲ್ಲೇಶಪ್ಪ ಎಂಬುವವರು ತಮಗೆ ಇರುವ ಬಡತನದ ಕಾರಣವಾಗಿ ತಮ್ಮ ಇಬ್ಬರು ಹೆಣ್ಣು ಮಕ್ಕಳ ವಿವಾಹವನ್ನು ಬಹು ಬೇಗನೇ ಮಾಡಿದ್ದಾರೆ. ಇದು ಬಾಲ್ಯ ವಿವಾಹ, ಹಾಗೆ ಮಾಡಿದರೆ ಕಾನೂನು ಪ್ರಕಾರ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ ಎಂಬಂತಹದ್ದು ಅವರಿಗೆ ತಿಳಿದಿಲ್ಲ. ಹಾಗಾಗಿ ಅವರು ಬೇಗ ಮಕ್ಕಳ ಮದುವೆಯನ್ನು ಮಾಡಿದ್ದಾರೆ. ಇವರನ್ನು ಭೇಟಿಯಾದಾಗ ಇವರು ಹೇಳಿದ್ದು ಹೀಗೆ, " ನಮ್ದು ಸಣ್ಣ ಮನಿ ಐತಿ, ನಾನೇ ದುಡ್ದು ಹಾಕ್ಬೇಕು. ನನಿಗೆ ಇಬ್ರು ಹೆಣ್ಮಕ್ಳು ಐದಾರ. ದಿನಾಲೂ ದುಡಿಬೇಕು ತಿನ್ನಬೇಕು. ಆದ್ರ ಏನಾರಾ ಉಳ್ಸಬೇಕು ಅಂದ್ರೆ ಆಗಂಗಿಲ್ಲ. ಯಾಕಂದ್ರ ದುಡಿಯೋನು ಒಬ್ನೆ, ಮನ್ಯಾಗ ಕುಂತು ತಿನ್ನೋರು ಮೂರು ಜನ. ಹಿಂಗಾದ್ರೆ ಎಲ್ಲಿಂದ ಉಳ್ಸಬೇಕು? ಮತ್ತೆ ಮಕ್ಳ ಮದುವಿ ಬ್ಯಾರೇ ಮಾಡ್ಬೇಕು, ಅವ್ರಿಗೆ ವರದಕ್ಷಿಣಿ ಅಂತ ಕೊಡ್ಬೇಕು. ಅದಕ್ಕೆಲ್ಲಾ ದುಡ್ಡು ಜೋಡ್ಸಬೇಕಾದ್ರೆ ನಾನು ಬಾಳ ಕಷ್ಟ ಪಟ್ವೆ. ನಮ್ ಸಂಬಂದಿಕ್ರದಾಗೇ ಮದುವಿ ಮಾಡಿದ್ರು ಸತೆ ಬಾಳ ಖರ್ಚು ಬಂತು. ಏನ್ ಮಾಡೋದು. ಬಡವ್ರಾಗಿ ಹುಟ್ಟಾರ್ದು ಈ ಭೂಮಿ ಮ್ಯಾಗ. ಯಾಕಂದ್ರೆ ಒಂದೊಂದ್ಸಲ ಹೊಟ್ಟಿಗೆ ಬರೇ ನೀರ್ ಕುಡ್ಕಂಡು ಜೀವ್ನ ಮಾಡೀವಿ. ಇಷ್ಟೊಂದು ಬಡತನ್ದಾಗ ಜೀವ್ನ ಮಾಡಾಕ್ಹತ್ತೀವಿ. ಅಂತಾದ್ರಾಗ ಇಬ್ರು ಹೆಣ್ಮಕ್ಕಳದು ಜಲ್ದಿ ಮದುವಿ ಮಾಡಿಬಿಟ್ರೆ ಮುಗೀತು ಅವ್ರು ಗಂಡನ ಮನಿಗೆ ಹೋಗ್ತಾರ. ಮನ್ಯಾಗ ನಾವು ಇಬ್ರೆ ಇರ್ತಿವಿ. ಆವಾಗ ಇದ್ದದ್ದನ್ನ ತಿಂದುಕೊಂಡು ಜೀವ್ನ ಮಾಡಬೋದು ಅಂತ ಅನ್ಕಂಡು ಮಕ್ಳ ಮದುವಿನ ಜಲ್ದಿ ಮಾಡಿದ್ವಿ" ಎಂದರು.

ನಿಮ್ಮ ಮಕ್ಕಳನ್ನ ಶಾಲೆಗೆ ಕಳುಹಿಸಿ ಓದಿಸಬಹುದಿತ್ತಲ್ಲ. ಇನ್ನು ಚಿಕ್ಕ ವಯಸ್ಸಿನವರಿದ್ದಾಗ್ಲೇ ಮದುವಿ ಮಾಡೀರಿ, ಇದು ಕಾನೂನು ಪ್ರಕಾರ ತಪ್ಪು ಅಂತ ನಿಮಗೆ ಗೊತ್ತಿಲ್ವಾ ಎಂದು ಕೇಳಿದಾಗ, ಅಯ್ಯೋ ನಮಿಗೆ ಜೀವ್ನ ನಡಿಸೋದೇ ಬಾಳ ಕಷ್ಟ ಆಗಿರ್ಬೇಕಾದ್ರೆ ಅವ್ರನ್ನ ಎಲ್ಲಿ ಸಾಲಿಗಿ ಕಳ್ಸಾನು. ಅವ್ರು ಓದಿ ಉದ್ದಾರಾಗಾದು ಅಷ್ಟರಾಗ ಐತಿ. ಅವ್ರನ್ನ ಓದ್ಸಿದ್ರೆ ಮದುವಿ ಟೈಮಿನಾಗ ಓದಿರೋ ಗಂಡನ್ನೇ ಕೇಳಿದ್ರೆ ಏನ್ ಮಾಡಾದು. ಎಲ್ಲಿಂದ ತರಾದು. ಅದೆಲ್ಲಾ ಕಷ್ಟಗೋಳು ಯಾಕಂತ ಓದ್ಸಿಲಿಲ್ಲ. ಮತ್ತೆ ಸಣ್ಣ ವಯಸ್ಸಿಗಿ ಮದುವಿ ಮಾಡಬ್ಯಾಡ್ರಿ ಅಂತ ಕಾನೂನು ಹೇಳ್ತೈತಿ ಆದ್ರ ನಮ್ ಪರಿಸ್ಥಿತಿ ಯಂಗ ಐತಿ ಅಂತ ಅದಕ್ಕೇನಾದ್ರು ಗೊತ್ತಿರತೈತೇನು? ಇಲ್ಲಲಾ; ಕಾನೂನು ಹೇಳ್ದಂಗ ಏನಾರ ಮಾಡಿದ್ರ ಮುಗೀತು ನಮ್ ಜೀವ್ನಂದಾಗೇ ಮಕ್ಳ ಮದುವೀನ ಮಾಡಾಕ ಆಗಲ್ಲ. ಯಾಕಂದ್ರ ಹೆಣ್ಮಕ್ಳು ಕೈಗೆ ಬಂದು ಮೂರು ನಾಕು ತಿಂಗ್ಳಿಗೇನೇ ಮದುವಿ ಮಾಡಿ ಬಿಡಬೇಕು. ಇಲ್ಲಾಂದ್ರ ನಮ್ ಜನ್ದಾಗ ಆಡಿಕೆಳ್ಳಾಕ ಸುರು ಮಾಡ್ತಾರ. ಮತ್ತೆ ನಮಿಗಿರೋ ಬಡ್ತನಕ್ಕ ಜಲ್ದಿನೇ ಮದುವಿ ಮಾಡಿ ಕಳ್ಸಿಬಿಡಬೇಕು. ಇಲ್ಲಾಂದ್ರ

ಮನ್ಯಾಗೇ ಇಟ್ಗಂಡ್ರೆ ನಮೀಗೇ ವಜ್ಜಿ. ಹಂಗಾಗಿ ಅದು ಏನೇ ಸಾಲಗೀಲ ಅಂತ ಮಾಡ್ಯಾದ್ರೂ ಮಕ್ಕ ಮದುವೀನ ಜಲ್ದಿ ಮಾಡಿ ಬಿಡ್ಬೇಕು. ಕಾನೂನು ಹೇಳ್ತೈತಿ ಅಂತ ಕುಂತ್ರೆ ಮಕ್ಕ ವಯಸ್ಸ ಸತೆ ಮದುವಿಗಿ ಮೀರಿ ಹೋಗಿರತೈತಿ, ಆವಾಗ ಮದುವಿಗಿ ಹುಡುಗ್ರು ಸಿಗಾದು ಬಾಳ ಕಷ್ಟ" ಎಂದರು.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಗಾಳೆಮ್ಮನಗುಡಿ ಗ್ರಾಮದ ಮೇರಮ್ಮ ಎಂಬುವವರು ತಮ್ಮ ಮಗಳಾದ ರಿಬ್ಬಕ್ಕ ಎಂಬುವವರನ್ನು ತಮ್ಮ ಸಂಬಂಧಿಕರಲ್ಲಿಯೇ ಒಬ್ಬ ಗಂಡನ್ನು ನೋಡಿ ವಿವಾಹ ಮಾಡಿದ್ದಾರೆ. ಮುಖ್ಯವಾಗಿ ರಿಬ್ಬಕ್ಕಳಿಗೆ ಮದುವೆ ಮಾಡುವ ಸಂದರ್ಭದಲ್ಲಿ ಆಕೆಯ ವಯಸ್ಸು ಕೇವಲ ೧೩ ವರ್ಷಗಳು ಮಾತ್ರ. ಅಂದರೆ ರಿಬ್ಬಕ್ಕ ಇನ್ನು ೭ನೇ ತರಗತಿ ಓದುತ್ತಿದ್ದಳು. ಆದರೆ ಇವರಿಗಿದ್ದ ಬಡತನದ ಕಾರಣವಾಗಿ ಬೇಗನೇ ಮದುವೆ ಮಾಡಿದ್ದಾರೆ. ಇವರನ್ನು ಬೇಟಿಯಾದಾಗ ಅವರು ಹೇಳಿದ್ದು ಹೀಗೆ "ನನ ಗಂಡ ಇದ್ದಾಗ ಬಾಳ ಚೆನ್ನಾಗೇ ಇದ್ವಿ. ಅವ್ರು ಬೇಲ್ದಾರ್ ಕೆಲ್ಸಕ್ಕ ಹೋಗ್ತಿದ್ರು, ಹಂಗಾಗಿ ನಾವ್ಯಾರೂ ಕೆಲ್ಸಕ್ಕ ಹೋಗ್ತಿದ್ದಿಲ್ಲ. ಯಾರ್ಹ್ಗೂ ಒಂದ್ರೂಪಾಯಿ ಕೇಳ್ತಿದ್ದಿಲ್ಲ. ಆದ್ರ ಈವಾಗ ನಮ್ ಪರಿಸ್ಥಿತಿ ಬಾಳ ಕೆಟ್ಹೋಗೇತಿ. ನಾನು ದುಡದ್ರೆ ಮಾತ್ರ ಆವತ್ತಿನ್ದು ಊಟ ಇಲ್ಲಂದ್ರೆ ಬ್ಯಾರೇರ ಮನಿಗೆ ಊಟ ಕೇಳಾಕ ಹೋಗ್ಬೇಕು. ಹಂಗಾಗೇತಿ. ಯಾಕಂದ್ರ ನನ ಗಂಡ ತಿರ್ಕೆಂಡ್ ಮ್ಯಾಲೆ ನಮಿಗೆ ಬಾಳ ಕಷ್ಟ ಆಗಿಬಿಡ್ತು. ನಮಿಗೆ ಇರೋದು ಇಬ್ರು ಮಕ್ಳು. ಎರಡೂ ಹೆಣ್ಮಕ್ಳೇ. ಮೊದಲ್ನೇ ಮಗಳ್ದು ಮದುವಿ ಮಾಡಿ ಮುಗಿಸಿದ್ವಿ. ಆವಾಗ ಮದುವಿ ಮಾಡಾದು ಸ್ವಲ್ಪ ಕಷ್ಟ ಆತು. ಆದ್ರ ಎರಡ್ನೇ ಮಗಳ್ದು ಮದುವಿ ಟೈಮಿನಾಗಂತೂ ಬಾಳ ಕಷ್ಟ ಆಗಿಬಿಡ್ತು. ಯಾಕಂದ್ರ ಅಷ್ಟೊತ್ತಿಗಾಗ್ಲೇ ನನ ಗಂಡ ತೀರ್ಕೆಂಡಿದ್ದ. ನಾನು ಇಲ್ಲೇ ನಮ್ಮೂರಾಗಿನ ಶಟ್ರ ಅಂಗ್ಡಿನಾಗ ಕೆಲ್ಸ ಮಾಡ್ತಿದ್ದೆ. ಮಗ್ಳು ನೋಡಿದ್ರ ಸಾಲಿಗಿ ಹೋಗ್ಲಿಲ್ಲ. ಸಾಲಿ ಬಿಟ್ಟು ಮನ್ಯಾಗೇ ಇರಾಕತ್ತಿದ್ಲು. ಹಂಗಾಗಿ ಜಲ್ದಿ ಮದುವಿ ಮಾಡಿ ಬಿಡಾನು ಅಂತೇಳಿ ಅನ್ಕಂಡೆ. ಆದ್ರೆ ದುಡ್ಡು ಬೇಕಲ್ಲ. ಏನ್ ಮಾಡಾದು ಅಂತೇಳಿ ನಮ್ ಸಂಬಂದಿಕ್ರಿಗೆ ಹೇಳಿದೆ. ಮೊದ್ಲು ಹುಡುಗನ್ನ ನೋಡಾನು ಆಮ್ಯಾಲೆ ಮದುವಿ ವಿಚಾರ ಅಂತೇಳಿ ಅಂದ್ರು. ಮದುವಿಯಾಗಾಕ ಹುಡುಗ ಸಿಕ್ಕ. ಆದ್ರ ಅವ್ರು ಕೇಳ್ದಷ್ಟು ದುಡ್ಡು ಕೊಡ್ಬೇಕಲ್ಲಾ. ಹಂಗಾಗಿ ಏನ್ ಮಾಡಿದೆ ಅಂದ್ರ ನನ್ ಕಿವಿಯಾಗ, ಮೂಗಿನಾಗ ಇರೋ ಬಂಗಾರನೆಲ್ಲಾ ಒತ್ತಿಟ್ಟೆ. ಆದ್ರೆ ಅಷ್ಟು ರೊಕ್ಕ ಸಾಕಾಗ್ಲಿಲ್ಲ. ನಮ್ ತಮ್ಮನೋರು ಮತ್ತೆ ಊರಾಗಿನ ಯಜಮಾನ್ರು, ನಾನು ಕೆಲ್ಸ ಮಾಡೋ ಶೆಟ್ರು ಎಲ್ಲಾರೂ ಸ್ವಲ್ಪ ಸ್ವಲ್ಪ ದುಡ್ಡು ಹಾಕಿ ಮದುವಿ ಮಾಡಿದ್ರು.. ಇಷ್ಟೊಂದು ಕಷ್ಟ ಯಾರ್ಹ್ಗೂ ಬರ್ಬಾರ್ದು. ಬಡವ್ರಾಗಿ ಹುಟ್ಬಾರ್ದು" ಎಂದರು.

ಡಣಾಪುರ ಗ್ರಾಮದ ಸುರೇಶ ಮತ್ತು ಸುಶೀಲಮ್ಮ ದಂಪತಿಗಳು ತಮ್ಮ ಮಗಳ ವಿವಾಹವನ್ನು ಚಿಕ್ಕ ವಯಸ್ಸಿನಲ್ಲಿಯೇ ಮಾಡಿದ್ದಾರೆ. ಇವರು ತುಂಬಾ ಬಡವರಾಗಿದ್ದು, ಇವರನ್ನು ಭೇಟಿಯಾದಾಗ ಇವರು ಹೇಳಿದ್ದು ಹೀಗೆ "ನಮ್ದು ಸಣ್ಣ ಕುಟುಂಬ, ನನಿಗೆ ಇರೋದು ಒಬ್ಳೇ ಮಗ್ಳು, ಅಕಿದು ಜೋರಾಗಿ ಮದುವಿ ಮಾಡ್ಬೇಕು ಅಂತ ನಮ್

ಮಂದಿಯೆಲ್ಲಾ ಹೇಳ್ತಿದ್ರು. ಆದ್ರೆ ನಮಿಗೆ ಇರೋ ಬಡ್ತನದಾಗ, ಅಕಿ ಮದುವೀನ ಎಂಗ ಮಾಡೋದು ಅಂತ ಚಿಂತಿ ಬಿದ್ದಿತ್ತು. ಆದ್ರ ನನ್ ಮಗ್ಳು ಮನ್ಯಾಗಿನ ಎಲ್ಲಾ ಕೆಲ್ಸಾನೂ ಚೆನ್ನಾಗಿ ಮಾಡ್ಕೆಂಡು ಹೋಗ್ತಿದ್ಲು. ಮಖ ಸತೆ ಬಾಳ ಖಳೆ ಐತಿ. ನಮ್ ಅಣ್ಣಿನ ಮಗಳ್ದು ಮದುವಿ ಟೈಮಿನಾಗ ನನ್ ಮಗ್ಳು ಮದುವ್ಯಾಗೆಲ್ಲಾ ಓಡಾಡ್ಕೆಂಡು ಕೆಲ್ಸ ಮಾಡೋದನ್ನ ನಮ್ ಸಂಬಂಧಿಕ್ರು ನೋಡಿದ್ರಂತೆ ಹಂಗಾಗಿ ಅವ್ಳನ್ನ ಮದುವಿ ಮಾಡ್ಕಬೇಕು ಅಂತೇಳಿ ತೀರ್ಮಾನ ಮಾಡಿದ್ರಂತೆ ಇದು ನನಿಗೆ ಗೊತ್ತಾತು. ಆದ್ರ ಮದುವಿ ಮಾಡಾದಕ್ಕ ಬೇಕಾದಷ್ಟು ದುಡ್ಡು ನಮ್ತೇಲಿ ಇಲ್ಲ. ಎಂಗ್ ಮಾಡೋದು ಅಂತೇಳಿ ಮದುವಿ ವಿಚಾರಾನ ಮುಂದೂಡ್ಕೆಂಡು ಹೋಗ್ತಿದ್ವೆ. ಆದ್ರ ಕಂಕಣಭಾಗ್ಯ ಕೂಡಿ ಬಂದ್ರೆ ಯಾರೂ ಏನು ಮಾಡಾಕ ಆಗಲ್ಲ. ಯಾಕಂದ್ರ ನಮಿಗಿರೋ ಬಡತನದಾಗ ಮಗಳ್ದು ಮದುವಿ ಮಾಡ್ಬೇಕಂದ್ರ ಬಾಳ ಕಷ್ಟ ಆಗ್ತಿತ್ತು. ಆದ್ರೂ ಸತೆ ನಮ್ ಅಣ್ಣೋರು ಬ್ಯಾರೇರ ಕಡಿಗಿ ಸಾಲ ಕೊಡಿಸಿದ್ರು. ಹಂಗು ಇಂಗು ಮಾಡಿ ಮದುವಿ ಮಾಡಿದ್ವಿ. ಆದ್ರ ಮದುವ್ಯಾಗ ಮಾಡಿದ ಸಾಲ ಇನ್ನೂ ವರ್ಗ್ಗೂ ತೀರಿಲ್ಲ. ಈಗ್ಗೆ ಎರಡು ವರ್ಸ ಆತು. ಇನ್ನೊಂದಿಬ್ರು ಮಕ್ಳು ಇದ್ದು ಬಿಟ್ಟದ್ರೆ ಮುಗೀತು. ನಮ್ ಪರಿಸ್ಥಿತಿ ದೇವ್ರೇ ಬಲ್ಲ. ಗಂಡಿನ ಕಡೇವ್ರು ಸತೆ ನಮ್ ಬಡ್ತನ ನೋಡಿದ್ರು ಹಂಗಾಗಿ ಬಾಳ ಕಿರಿಕಿರಿ ಮಾಡ್ಲಿಲ್ಲ. ಮದುವಿದು ಕಾಲ ಕೂಡಿ ಬಂದಾಗ್ಲೇ ಮದುವಿ ಮಾಡಿ ಬಿಡ್ಬೇಕು. ಇಲ್ಲಾಂದ್ರ ನಮಿಗೇ ತೊಂದ್ರಿ ಆಗತೈತಿ ಎಂದರು.

ನಿಮ್ಮ ಮಗಳಿಗೆ ಮದುವೆ ವಯಸ್ಸು ಆಗಿತ್ತೆ ಎಂದು ಕೇಳಿದಾಗ, ನಮ್ ಮಗ್ಳು ಕೈಗೆ ಬಂದು ಒಂದು ವರ್ಸ ಆಗಾಕ ಬಂದಿತ್ತು. ಆಮ್ಯಾಲೆ ಒಳ್ಳೆ ಸಂಬಂಧ, ನಮ್ ಪರಿಸ್ಥಿತಿನಾ ಅರ್ಥ ಮಾಡ್ಕೆಂಡಿರೋರು ಮಗ್ಳನ್ನ ಮದುವಿ ಮಾಡ್ಕೆಂತೀವಿ ಅಂತ ಉಡ್ಕೆಂಡು ಬಂದ್ ಮ್ಯಾಲೆ ಯಾಕ ಕೈಬಿಡ್ಬೇಕು. ಹೆಣ್ಮಕ್ಳು ಕೈಗೆ ಬಂದ್ ಮ್ಯಾಲ ಮುಗೀತು. ಅವ್ರು ಮದುವಿ ವಯಸ್ಸಿಗಿ ಬಂದ್ರು ಅಂತಾನೇ ಲೆಕ್ಕ. ಆದ್ರಗೂ ನಾವು ಬಾಳ ಬಡವ್ರು ಐದೀವಿ. ನಾನು ಒಂದ್ ಮದುವೀನೂ ಮಾಡ್ತೀನೋ ಇಲ್ಲೋ ಅಂತ ಅನ್ಕಂಡಿದ್ದೆ. ಮತ್ತೆ ಬಾಳ ದಿನ ಹೆಣ್ಮಕ್ಳನ್ನ ಮನ್ಯಾಗ ಇಟ್ಗಬಾರ್ದು. ಅದಕ್ಕಂತಾನಾ ಮನಿ ಒತ್ತಿ ಇಟ್ಟು ಸಾಲ ಮಾಡಿ ಮಗಳ್ದು ಮದುವಿ ಮಾಡಿದೆ ಎಂದರು.

ಹೀಗೆ ಕುಟುಂಬದಲ್ಲಿನ ಬಡತನದ ಕಾರಣವಾಗಿ ತಮ್ಮ ಮಕ್ಕಳು ಇನ್ನು ಚಿಕ್ಕ ವಯಸ್ಸಿನವರು ಎಂಬುದನ್ನೂ ಸಹ ಯೋಚಿಸದೇ ಮದುವೆ ಎಂಬ ಬಂಧನಕ್ಕೆ ಒಳಪಡಿಸುತ್ತಿದ್ದಾರೆ. ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಜನರಿಗೆ ಉದ್ಯೋಗದ ತೊಂದರೆ ಸಾಕಷ್ಟಿದೆ. ಅವರ ಕುಟುಂಬದ ಆರ್ಥಿಕ ಸ್ಥಿತಿ ತುಂಬಾ ಹದಗೆಟ್ಟಿರುತ್ತದೆ. ಹಾಗಾಗಿ ಅವರು ಸರಿಯಾದ ಸಮಯಕ್ಕೆ ಆಹಾರವನ್ನೂ ಸೇವಿಸಲು ಕಷ್ಟ ಪಡುತ್ತಿರುವಂತಹ ಹಲವಾರು ಕುಟುಂಬಗಳು ಕಂಡುಬರುತ್ತವೆ. ಬಡತನಕ್ಕೆ ಹಲವಾರು ಕಾರಣಗಳಿವೆ. ಬಡತನವನ್ನು

ನಿವಾರಿಸಲು ಸರಕಾರಗಳು ಹಲವಾರು ಕಾರ್ಯ ಯೋಜನೆಗಳನ್ನು ರೂಪಿಸಿವೆ. ಆದರೂ ಬಡತನದ ಪ್ರಮಾಣದಲ್ಲೇನೂ ಮಹತ್ತರವಾದ ಬದಲಾವಣೆ ಸಂಭವಿಸಿಲ್ಲ. ಹಾಗಾಗಿ ಬಡನತದ ಪ್ರಮಾಣ ಇಂದಿಗೂ ಹಾಗೆಯೇ ಮುಂದುವರೆಯುತ್ತಿದೆ. ಆದರೆ ಈ ಬಡತನವೇ ಬಾಲ್ಯ ವಿವಾಹವನ್ನು ಜೀವಂತವಿರಿಸಿರುವುದು ಮೇಲಿನ ಪ್ರಕರಣಗಳಿಂದ ಕಂಡುಬರುತ್ತದೆ. ಬಡತನವನ್ನು ಕಾರಣವಾಗಿಸಿಕೊಂಡು ಕುಟುಂಬದಲ್ಲಿನ ಹಿರಿಯರು ನಿಸ್ಸಾಹಯಕರಾಗಿದ್ದಾರೆ. ಮತ್ತು ಮಕ್ಕಳ ಮದುವೆಯ ವಿಚಾರವಾಗಿ ಜರ್ಜರಿತರಾಗಿದ್ದಾರೆ. ವಿವಾಹ ಎಂಬುದು ಮಾನವನಿಗೆ ಕಡ್ಡಾಯವೆಂದು ಮಾಡಿದ್ದರಿಂದಲೇ ಈ ಬಗೆಯ ಬಾಲ್ಯ ವಿವಾಹಗಳಿಗೆ ಕಾರಣವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿನ ಕುಟುಂಬಗಳ ಆರ್ಥಿಕ ಪರಿಸ್ಥಿತಿ ಸುಧಾರಿಸಿದರೆ ಬಾಲ್ಯ ವಿವಾಹಗಳ ಸಂಖ್ಯೆ ಕಡಿಮೆಯಾಗಬಹುದು.

**ಆ. ಕುಟುಂಬದ ಆಸ್ತಿಯನ್ನು ತಮ್ಮಲ್ಲಿಯೇ ಉಳಿಸಿಕೊಳ್ಳುವುದು** : ಕೆಲವು ಕುಟುಂಬಗಳಲ್ಲಿ ತಮ್ಮ ಮನೆತನದ ಆಸ್ತಿಯನ್ನು ತಮ್ಮಲ್ಲಿಯೇ ಉಳಿಸಿಕೊಳ್ಳುವ ಸಲುವಾಗಿ ಮನೆಯಲ್ಲಿನ ಹೆಣ್ಣುಮಕ್ಕಳ ವಿವಾಹವನ್ನು ಬೇಗನೇ ಮಾಡಿ ಮುಗಿಸುತ್ತಾರೆ. ಅಂದರೆ ಹೆಣ್ಣು ಮಕ್ಕಳಿಗೆ ಬೇಗನೇ ವಿವಾಹ ಮಾಡುವುದರಿಂದ ಅವರು ಗಂಡನ ಮನೆಯ ಸ್ವತ್ತಾಗುತ್ತಾರೆ. ಆಗ ಕುಟುಂಬದ ಆಸ್ತಿಯನ್ನು ತಾವೇ ಅನುಭವಿಸಬಹುದು ಎಂಬ ಆಲೋಚನೆ ಕೆಲವು ಪುರುಷರಲ್ಲಿದೆ. ಹಾಗೆಯೇ ಅಣ್ಣ ತಮ್ಮಂದಿರ ಅಥವಾ ಅಕ್ಕ ತಂಗಿಯರ ಆಸ್ತಿಯನ್ನು ಕಬಳಿಸಲು ಬಾಲ್ಯ ವಿವಾಹಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ. ಅಂದರೆ ಆಸ್ತಿಯನ್ನು ತಮ್ಮದಾಗಿಸಿಕೊಳ್ಳುವ ಸಲುವಾಗಿ ಚಿಕ್ಕ ಮಕ್ಕಳ ಮದುವೆಯನ್ನು ಮಾಡುತ್ತಿರುವ ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಇಲ್ಲಿ ಒಂದು ಪ್ರಕರಣವನ್ನು ಉದಾಹರಿಸುವುದಾದರೆ, ಹೊಸಪೇಟೆ ತಾಲೂಕಿನ ಗಾಳೆಮ್ಮನಗುಡಿ ಗ್ರಾಮದಲ್ಲಿನ ನಿಂಗಪ್ಪ ಮತ್ತು ಗಾಳೆಪ್ಪ ಇವರು ಅಣ್ಣ ತಮ್ಮಂದಿರು. ಇವರಿಗೆ ಪಿತ್ರಾರ್ಜಿತ ಆಸ್ತಿಯ ರೂಪದಲ್ಲಿ ೮ ಎಕರೆ ಭೂಮಿ ದೊರೆತಿದೆ. ನಿಂಗಪ್ಪನಿಗೆ ಶಕುಂತಲಾ ಒಬ್ಬಳೇ ಮಗಳು. ಗಾಳೆಪ್ಪನಿಗೆ ಇಬ್ಬರು ಮಕ್ಕಳು. ಒಂದು ಆಕ್ಸಿಡೆಂಟ್‌ನಲ್ಲಿ ನಿಂಗಪ್ಪ ಮತ್ತು ಆತನ ಹೆಂಡತಿ ಮರಣಿಸಿದ್ದಾರೆ. ಆವಾಗಿನಿಂದ ಶಕುಂತಲಾ ಚಿಕ್ಕಪ್ಪನಾದ ಗಾಳೆಪ್ಪನಲ್ಲಿಯೇ ಬೆಳೆದಿದ್ದಾಳೆ. ತಂದೆಯ ಆಸ್ತಿ ಶಕುಂತಲಾಳಿಗೆ ಹೋಗುತ್ತದೆ ಎಂಬ ಕಾರಣದಿಂದ ಆಕೆಗೆ ಬೇಗ ಮದುವೆಯನ್ನು ಮಾಡಿ ಗಂಡನ ಮನೆಗೆ ಕಳುಹಿಸಿದರೆ ಆಸ್ತಿಯನ್ನೆಲ್ಲಾ ತಾನೇ ಅನುಭವಿಸಬಹುದು ಎಂದು ತಿಳಿದು ಆಕೆಯನ್ನು ಬೇಗನೇ ವಿವಾಹ ಕೂಪಕ್ಕೆ ತಳ್ಳಿದ್ದಾನೆ. ಈ ವಿಷಯ ಶಕುಂತಲಾಳಿಗೆ ತಡವಾಗಿ ತಿಳಿದಿದೆ. ಶಕುಂತಲಾ ಹೇಳುವಂತೆ "ನನಿಗೆ ಇನ್ನು ಒಂಬತ್ತು ವರ್ಷ ವಯಸ್ಸು, ಆವಾಗ್ಲೇ ನನಿಗೆ ರಾಜು ಅನ್ನೋರ ಜೊತಿ ಮದುವಿ ಮಾಡಿಬಿಟ್ರು, ಆಗ ಯಾಕ ಅಂತ ಗೊತ್ತಾಗ್ಲಿಲ್ಲ. ಮದುವಿ ಆದ ಮ್ಯಾಲೆ ಗಂಡನ ಮನಿಗೆ ಸತೆ ಕಳಿಸ್ಲಿಲ್ಲ. ಯಾಕಂದ್ರೆ ನಾನಿನ್ನು ಕೈಗೆ ಬಂದಿದ್ದಿಲ್ಲ. ಅದಕ್ಕ ಕೈಗೆ ಬರೋವರ್ಗೂ ಇಲ್ಲೆ ಇರ್ಲಿ ಆಮೇಲೆ ಕರ್ಕಂಡು ಹೋಗ್ತೀವಿ ಅಂತ ನಮ್ ಮಾವ, ಅತ್ತಿ ಎಲ್ಲರೂ ಹೇಳಿ ಹೋಗಿದ್ರಂತೆ. ಆಮ್ಯಾಲೆ ನಾನು

ಎಂಟನೇ ಕ್ಲಾಸು ಇದ್ದಾಗ ಕೈಗೆ ಬಂದೆ. ಕೈಗೆ ಬಂದು ಒಂದು ವರ್ಷ ಆದ್ರೂ ನನ್ನ ಕರ್ಕಂಡು ಹೋಗಾಕ ಬರ್ಲಿಲ್ಲ. ಯಾಕ ಅಂತ ಕೇಳಿದ್ರೆ ನನ್ ಹೆಸ್ರಿಗೆ ಇರೋ ಆಸ್ತಿನ ಗಂಡನ ಹೆಸ್ರಿಗೆ ಬರ್ದು ಕೊಡ್ಬೇಕು ಅಂತ ಕೇಳಿದ್ರಂತೆ. ಆದ್ರೆ ನಮ್ ಚಿಕ್ಕಪ್ಪ ಒಪ್ಪಿಲ್ಲ. ಅದಕ್ಕ ಅವ್ರು ನಿಮ್ ಮಗಳ್ನ ಎಷ್ಟು ದಿನ ಅಂತ ಮನ್ಯಾಗ ಇಟ್ಗಂತೀರಿ ಇಟ್ಗಳ್ರಿ. ನಾವಂತೂ ಕರ್ಕಂಡು ಹೋಗಲ್ಲ. ನೀವೇನಾದ್ರೂ ಕರ್ಕಂಡು ಬರೋದಾದ್ರೆ ಆಸ್ತಿ ನನ ಮಗನ ಹೆಸ್ರಿಗೆ ಮಾಡಿಸೇ ಕರ್ಕಂಡು ಬರ್ರಿ ಅಂತ ಹೇಳ್ಯಾರ. ಅದಕ್ಕ ನಮ್ ಚಿಕ್ಕಪ್ಪ ಸ್ವಲ್ಪನೂ ಒಪ್ಪಿಲ್ಲ. ನಾನು ಸತೆ ಹೋಗಿ ಕೇಳಿದೆ. ಆದ್ರೆ ನನ್ನೇ ಗದರಿಸಿ ಬಿಟ್ಟ. ಕೊನಿಗೆ ನನ್ ಮದುವಿ ಆಗಿರೋರು ಕರ್ಕಂಡು ಹೋಗ್ಲೇ ಇಲ್ಲ. ರಾಜುಗೆ ಬ್ಯಾರೆ ಮದುವಿ ಮಾಡಿಬಿಟ್ರು ಅನ್ನೋ ಸುದ್ದಿ ಕೇಳಿ ಬಂತು. ನನ್ ಬಾಳು ಹಿಂಗಾತಲ್ಲ ಅಂತ ನಮ್ ಚಿಕ್ಕಪ್ಪ ಸ್ವಲ್ಪನೂ ಚಿಂತಿ ಮಾಡ್ಲಿಲ್ಲ. ನಾನೇ ಬಾಳ ಅತ್ತು ಬಿಟ್ಟೇನಿ. ಒಂದಿನ ಗೊತ್ತಾತು ನಮ್ ಚಿಕ್ಕಪ್ಪ ಹಿಂಗ ಯಾಕ ಮಾಡಿದ ಅಂತ. ನನಿಗೆ ಇನ್ನೊಂದು ಮದುವಿ ಮಾಡ್ಸಿದ್ರು, ನಾನು ಗಂಡನ ಮನಿಗೆ ಹೋಗಿ ಐದಾರು ತಿಂಗ್ಳು ಆದ ಮ್ಯಾಲೆ ಆಸ್ತಿನ ತನ್ನ ಹೆಸ್ರಿಗೆ ಮಾಡ್ಸಿಕೆಳ್ಳಾಕ ಹಿಂಗ ಮಾಡ್ಯಾನ ಅಂತ ಗೊತ್ತಾತು. ನನ್ ಮದುವಿ ಆಗಿ ಒಂತಿಗ್ಗಿಗೆ ಆಸ್ತಿನ ತನ್ನ ಹೆಸ್ರಿಗೆ ಮಾಡಿಸಿಕೆಂಡಿದ್ದ. ಆಸ್ತಿ ಬೇಕಂತೇಳಿ ಸ್ವಂತ ಅಣ್ಣನ ಮಗಳೂ ಅನ್ನೋದನ್ನ ಮರ್ತು ಹಿಂಗ ಮಾಡಿದ್ದ ನಮ್ ಚಿಕ್ಕಪ್ಪ" ಎಂದರು.

ನೀವು ಕಂಪ್ಲೇಂಟ್ ಕೊಡಬಹುದಿತ್ತಲ್ಲಾ ಎಂದು ಕೇಳಿದಾಗ, ಕಂಪ್ಲೇಂಟ್ ಏನಂತ ಕೊಡೋದು ನೀವೇ ಹೇಳ್ರಿ, ನನಿಗೆ ಸಣ್ಣ ವಯಸ್ಸಿಗೆ ಮದುವಿ ಮಾಡ್ಯಾರ. ಅದು ಗೊತ್ತಾದ್ರ ನಮ್ ಚಿಕ್ಕಪ್ಪ ಜೈಲಿಗೆ ಹೋಗ್ತಿದ್ದ. ಅದೂ ಸತೆ ಅವ್ರು ಆಸ್ತಿ ಕಾಲಾಗ ಹಿಂಗ ಮಾಡ್ಯಾರ ಅಂತ ಊರಿನ ಜನಕ್ಕ ಗೊತ್ತಾದ್ರ ಮುಗೀತು. ಊರಾಗ ಮರ್ಯಾದಿನೇ ಇಲ್ದಂಗ ಆಗ್ತಿತ್ತು. ಅದಕ್ಕಂತ ಯಾರ್ಗೂ ಗೊತ್ತಾಗದಂಗ ಬಾಳ ಜೋಪಾನವಾಗಿ ಕಾಪಾಡಿಕೆಂಡು ಬಂದಿದ್ರು. ನಾನು ಸತೆ ಸಣ್ಣೋಳು ಇದ್ದೆ ನನಿಗೆ ಅಷ್ಟೊಂದು ಗೊತ್ತಾಗ್ತಿದ್ದಿಲ್ಲ. ಅದಕ್ಕ ಅವ್ರು ಏನ್ ಹೇಳ್ತಾರೋ ಅದನ್ನ ಕೇಳ್ಕಂಡು ಸುಮ್ನೆ ಇರ್ತಿದ್ದೆ. ಆದ್ರೆ ಈಗೀಗ ಗೊತ್ತಾಗೇತಿ. ನನ್ ಆಸ್ತಿ ಕಾಲಾಗ ಇಷ್ಟೆಲ್ಲಾ ರಾದ್ದಾಂತ ಮಾಡ್ಯಾರ. ನಾನೊಬ್ಬೆ ಏನ್ ಮಾಡೋದು. ಅದ್ರಾ ಬ್ಯಾರೆ ನಮ್ ಚಿಕ್ಕಪ್ಪಗ ಮೂರು ಜನ ಹೆಣ್ಮಕ್ಕಳು ಅವ್ರನ್ನ ಖರ್ಚ ಮಾಡಬೇಕಂದ್ರ ಬಾಳ ದುಡ್ಡು ಬೇಕಾಗತೈತಿ. ಅದಕ್ಕಂತ ನಾನು ಸುಮ್ಮಾಗಿ ಬಿಟ್ಟೇನಿ" ಎಂದರು.

ಗದಗ ತಾಲೂಕಿನ ಹೊಂಬಾಳ ಗ್ರಾಮದ ಬಸವಣ್ಣೆಪ್ಪ ಎಂಬುವವರು ತಮ್ಮ ಸ್ವಂತ ತಂಗಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡುವುದರ ಮೂಲಕ ಪಿತ್ರಾರ್ಜಿತ ಆಸ್ತಿಯೆಲ್ಲವನ್ನೂ ತನ್ನ ಹೆಸರಿಗೇ ಮಾಡಿಸಿಕೊಂಡಿದ್ದಾರೆ. ಮುಖ್ಯವಾಗಿ ಈ ವಿಷಯವನ್ನು ತಿಳಿದ ಕೂಡಲೇ ಬಸವಣ್ಣೆಪ್ಪನವರ ತಂಗಿಯಾದ ನಾಗಮ್ಮ ಎಂಬುವವರನ್ನು ಭೇಟಿಯಾದಾಗ ಅವರು ಹೇಳಿದ್ದು ಹೀಗೆ "ನಾನು ಇನ್ನ ಒಂಬತ್ನೇ ಕ್ಲಾಸು ಓದ್ತಿದ್ದೆ. ನನಿಗೆ ಇರೋದು ಒಬ್ನೇ ಅಣ್ಣ, ಅವ್ನಿಗೆ ಮದುವಿ ಆಗೇತಿ. ನಾನು ಅಣ್ಣ ಏನ್ ಹೇಳ್ತಾನೋ ಹಂಗ ಕೇಳ್ಕೆಂಡು ಇರ್ತಿದ್ದೆ. ಅವ್ನ ಮದುವಿ

ಮಾಡ್ಕೆಂಡು ಒಂದ್ ವರ್ಸಕ್ಕ ನಮ್ ಅಪ್ಪ ಅಮ್ಮ ತೀರ್ಕೆಂಡಿದ್ರು. ಹಂಗಾಗಿ ನಾನ್ ಮದುವೀನ ಅಣ್ಣನೇ ಮಾಡ್ದ. ಆದ್ರ ನನಿಗೆ ಮದುಪಿ ಆಗಾಕ ಇಷ್ಟಾನೇ ಇರ್ಲಿಲ್ಲ. ನಾನು ಇನ್ನ ಓದ್ತೀನಿ ಅಂತ ಹೇಳಿದ್ದೆ. ಆದ್ರೂ ಸತೆ ಅಣ್ಣನ ಒತ್ತಾಯಕ್ಕ ಮದುಪಿ ಮಾಡ್ಕೆಂಡೆ. ಆಮ್ಯಾಲೆ ತಿಳೀತು. ಯಾಕ ಅಷ್ಟು ಅವಸರ್ದಾಗ ನನ್ ಮದುವಿ ಮಾಡ್ದ ಅಂತ. ನಮ್ ಅಪ್ಪಂದು ನಾಕು ಎಕ್ರೆ ಜಮೀನು ಐತಿ. ನಾನು ಚೆನ್ನಾಗಿ ಓದಿ ಅಪ್ಪನ ಆಸ್ತಿನಾಗ ಎಲ್ಲಿ ಭಾಗ ಕೇಳ್ತೀನೋ ಅಂತ ಭಯದಾಗ ಮದುವಿ ಮಾಡ್ಯಾನ. ಆದ್ರ ನನಿಗೆ ಮದುವ್ಯಾಗಿ ಈವತ್ತಿಗೆ ಮೂರು ವರ್ಸ ಆತು. ಇಲ್ಲಿತನ ಆಸ್ತಿ ವಿಚಾರಾನ ಮಾತಾಡಿಲ್ಲ. ಆಸ್ತಿನೆಲ್ಲಾ ತನ್ ಹೆಸ್ರಿಗೆ ಮಾಡ್ಸಿಕೆಂಡಾನ ಅಂತ ಬ್ಯಾರೇರ ಕಡಿಲಿಂದ ತಿಳೀತು. ಅದನ್ನ ಕೇಳಾಕಾ ಹೋಗಿಲ್ಲ. ಯಾಕಂದ್ರ ಆಸ್ತಿಕಾಲಾಗ ನಾನು ಓದೋದ್ನ ಬಿಡ್ಸಿ ಮದುವಿ ಮಾಡ್ಸಿ ಗಂಡನ್ ಮನಿಗೆ ಕಳಿಸ್ಯಾನ. ಆವಾಗ್ಲೇ ನನ್ನ ದೂರ ಮಾಡ್ಕೆಂಡಾನ. ಹಂಗಾಗಿ ನಾನು ಬ್ಯಾಡ ಅಂತೇಳಿ ಸುಮ್ನೇಗೇನಿ. ಈಗ ಅವ್ನು ನನ್ ಎದ್ರಿಗಿ ನಿಂತು ಮಖ ತೋರ್ಸಿ ಮಾತಾಡ್ಲಾರ್ದಂಗ ಆಗೇತಿ. ಯಾಕಂದ್ರ ಅವ್ನು ಮಾಡಿದ್ ಮೋಸ ಏನು ಅಂತ ನನಿಗೆ ಗೊತ್ತಾಗೇತಿ ಅಂತ ಅವ್ನಿಗೆ ಗೊತ್ತು. ಹಂಗಾಗಿ ಅವ್ನು ಎದ್ರುಗಿ ಕಂಡ್ರ ಮಾತ್ರ ಮಾತಾಡಿಸ್ತೀನಿ ಅದು ಎರಡೇ ಮಾತು. ಇಲ್ಲಿ ನನ್ ಗಂಡನ ಮನ್ಯಾಗ ಚೆನ್ನಾಗೇ ನೋಡ್ಕಂತಾರ. ಇಲ್ಲಿ ಯಾವ್ದಕ್ಕೂ ಕೊರ್ತಿ ಇಲ್ಲ. ಹಿಂಗೆ ಆಸ್ತಿ ಕಾಲಾಗ ಸ್ವಂತ ತಂಗಿ ಅನ್ನೋದನ್ನ ಮರ್ತು ಮೋಸ ಮಾಡೋರು ಬಾಳ ಜನ ಐದಾರ" ಎಂದು ಹೇಳಿದರು.

ಹೀಗೆ ಕುಟುಂಬದ ಆಸ್ತಿಯನ್ನು ಪಡೆಯುವುದಕ್ಕೋಸ್ಕರ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡುವ ಉದಾಹರಣೆಗಳು ಕಂಡುಬರುತ್ತವೆ. ವ್ಯವಸ್ಥೆಯಲ್ಲಿನ ಪುರುಷರು ತಮ್ಮ ತಂದೆಯ ಆಸ್ತಿಗೆ ವಾರಸುದಾರರಾಗಲು ಇರುವ ಅಡ್ಡಿ ಆತಂಕಗಳನ್ನು ಬಗೆಹರಿಸಿಕೊಳ್ಳಲು ಯಾವುದೇ ಕಾರ್ಯವನ್ನು ಮಾಡಲು ಹಿಂಜರಿಯುವುದಿಲ್ಲ. ಮುಖ್ಯವಾಗಿ ಮೊದಲನೇ ಪ್ರಕರಣದಲ್ಲಿ ಸೂಚಿಸಿರುವಂತೆ ಗಾಳೆಪ್ಪ ತನ್ನ ಸ್ವಂತ ಅಣ್ಣನ ಮಗಳು ಎಂಬುದನ್ನೂ ಲೆಕ್ಕಿಸದೇ ಅವಳಿಗೆ ಬಾಲ್ಯ ವಿವಾಹವನ್ನು ಮಾಡಿದ್ದಾನೆ. ಹಾಗೆಯೇ ಇನ್ನೊಂದು ಪ್ರಕರಣದಲ್ಲಿ ಬಸವಣ್ಣೆಪ್ಪ ತನ್ನ ಸ್ವಂತ ತಂಗಿಯನ್ನೇ ವಿವಾಹದ ಕೂಪಕ್ಕೆ ಬಹು ಬೇಗನೇ ದೂಡಿದ್ದಾನೆ. ಇವೆರಡೂ ಬಾಲ್ಯ ವಿವಾಹಗಳಾಗಿದ್ದು, ಇದು ಕಾನೂನು ಪ್ರಕಾರ ತಪ್ಪು ಎಂಬುದು ಅವರಿಗೆ ತಿಳಿದಿಲ್ಲ. ಬದಲಾಗಿ ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ಹೇಗೆ ತಮ್ಮ ಸ್ವಂತದ್ದಾಗಿಸಿಕೊಳ್ಳಬೇಕು ಎಂಬುದಷ್ಟೇ ಅವರ ಆಲೋಚನೆಯಲ್ಲಿರುವುದು. ಮುಖ್ಯವಾಗಿ ಹೇಳಬೇಕೆಂದರೆ ವಿವಾಹ ಎಂಬುದು ಹೆಣ್ಣುಮಕ್ಕಳಿಗೆ ಒಂದು ಬಗೆಯ ಸಂಕೋಲೆಯೇ ಆಗಿರುತ್ತದೆ. ಅಂತಹ ಸಂದರ್ಭದಲ್ಲಿ ಪುರುಷ ವ್ಯವಸ್ಥೆ ಹೆಣ್ಣುಮಕ್ಕಳನ್ನು ಈ ಸಂಕೋಲೆಗೆ ದೂಡಲು ಯಾವಾಗಲೂ ಕಾಯುತ್ತಿರುತ್ತದೆ. ಅವಕಾಶ ಸಿಕ್ಕ ಕೂಡಲೇ ಮಹಿಳೆಯರನ್ನು ಬಳಸಿಕೊಳ್ಳುತ್ತಿರುತ್ತದೆ. ಆದರೆ ಇಲ್ಲಿ ಉದ್ದೇಶ ಪೂರ್ವಕವಾಗಿ ಹೆಣ್ಣುಮಕ್ಕಳನ್ನು ವಿವಾಹ ಬಂಧನಕ್ಕೆ ದೂಡಿರುವುದು ಕಂಡುಬರುತ್ತದೆ. ಮೊದಲನೇ ಪ್ರಕರಣದಲ್ಲಿ ಶಕುಂತಲಾಳನ್ನು ಬಾಲ್ಯ ವಿವಾಹಕ್ಕೆ ಒಳಪಡಿಸಿದ್ದಾನೆ ಅವರ ಚಿಕ್ಕಪ್ಪ. ಗಂಡಿನ ಕಡೆಯವರಿಗೆ

ಈಕೆಯ ಹೆಸರಿನಲ್ಲಿ ಆಸ್ತಿ ಇದೆ ಎಂಬುದು ತಿಳಿದು ಅದನ್ನು ಪಡೆಯಲು ಮುಂದಾಗಿದ್ದಾರೆ. ಈ ಕಾರ್ಯ ಅವರಿಂದ ಆಗುವುದಿಲ್ಲ ಎಂಬುದು ತಿಳಿದ ನಂತರ ಹೆಣ್ಣಿನ ಕಡೆಯವರಿಗೆ ತಿಳಿಯದಂತೆ ಇನ್ನೊಂದು ವಿವಾಹ ಮಾಡಿದ್ದಾರೆ. ಇದು ಶಕುಂತಲಾಳ ಚಿಕ್ಕಪ್ಪನಿಗೆ ತಿಳಿದರೂ ಅವರು ಯಾವುದೇ ವ್ಯಥೆ ಪಟ್ಟಿಲ್ಲ. ಬದಲಾಗಿ ಆತಂಕ ವ್ಯಕ್ತಪಡಿಸಿದ್ದಾರೆ. ಕಾರಣ ಶಕುಂತಲಾಳನ್ನು ಗಂಡಿನ ಕಡೆಯವರು ಕರೆದುಕೊಂಡು ಹೋಗಿದ್ದರೆ ತನ್ನ ಅಣ್ಣನ ಆಸ್ತಿಯನ್ನೆಲ್ಲಾ ಪಡೆಯಬಹುದಿತ್ತು. ಆದರೆ ಈಗ ಅದು ಆಗಲಿಲ್ಲ ಎಂಬ ಭಯ ಅವರನ್ನು ಕಾಡಿದೆ. ಮುಂದೆ ಏನು ಮಾಡಬೇಕೆಂದು ತಿಳಿಯದೇ ಅವರ ಸಂಬಂಧಿಕರಲ್ಲಿಯೇ ವಿವಾಹವನ್ನು ಮಾಡಿದ್ದಾರೆ. ಆದರೂ ತಮ್ಮ ಅಣ್ಣನ ಆಸ್ತಿಯನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಈ ಹಿಂದೆ ಕೌಟುಂಬಿಕ ಕಾರಣಗಳಿಗೆ ಸಂಬಂಧಿಸಿದಂತೆ ವಿವರಿಸುವ ಸಂದರ್ಭದಲ್ಲಿ ರಕ್ತ ಸಂಬಂಧಗಳನ್ನು ಉಳಿಸಿಕೊಳ್ಳುವುದರ ನೆಪದಿಂದ ತಮ್ಮ ಆಸ್ತಿಯನ್ನು ತಮ್ಮಲ್ಲಿಯೇ ಇರುವಂತೆ ಮಾಡಿಕೊಂಡಿರುವ ಪ್ರಕರಣವನ್ನು ನೋಡಲಾಗಿದೆ. ಅಂದರೆ ತಾವು ಮಾಡಿದ ಆಸ್ತಿ ತಮ್ಮಲ್ಲಿಯೇ ಉಳಿಯಬೇಕೆಂಬ ಬಯಕೆಯಿಂದ ತಮ್ಮ ಮಕ್ಕಳಿಗೆ ಚಿಕ್ಕವಯಸ್ಸಿನಲ್ಲಿಯೇ ವಿವಾಹ ಮಾಡಲಾಗುತ್ತಿದೆ. ಹೀಗೆ ಆಸ್ತಿ ಎಂಬುದು ಮನುಷ್ಯ ಸಂಬಂಧಗಳನ್ನು ಕಿತ್ತುಕೊಳ್ಳುತ್ತವೆ ಎಂಬುದಕ್ಕೆ ಮೇಲಿನ ಎರಡೂ ಪ್ರಕರಣಗಳು ಉದಾಹರಣೆಯಾಗಿವೆ. ಆಸ್ತಿಯನ್ನು ಪಡೆಯುವುದಕ್ಕೋಸ್ಕರ ತಮ್ಮ ಕುಟುಂಬದ ಹೆಣ್ಣು ಮಕ್ಕಳನ್ನು ಬಹು ಬೇಗನೇ ವಿವಾಹ ಬಂಧನಕ್ಕೆ ದೂಡುತ್ತಿರುವುದಂತೂ ಸತ್ಯ ಮತ್ತು ಇದೊಂದು ಆರೋಗ್ಯಕರ ಸಮಾಜಕ್ಕೆ ಅಹಿತಕರವಾದುದು.

ಇ. **ಸಾಮೂಹಿಕ ವಿವಾಹದಲ್ಲಿ ಮದುವೆ ಮಾಡುವುದರಿಂದ ಖರ್ಚು ಕಡಿಮೆ :** ಇಂದು ಪ್ರತಿಯೊಂದು ಗ್ರಾಮಗಳಲ್ಲಿ, ನಗರಗಳಲ್ಲಿ ಸಾಮೂಹಿಕ ವಿವಾಹಗಳು ನಡೆಯುತ್ತಿವೆ. ಈ ವಿವಾಹಗಳಲ್ಲಿ ಬಾಲ್ಯ ವಿವಾಹಗಳೂ ನಡೆಯುತ್ತಿರುವುದು ವಿಪರ್ಯಾಸದ ಸಂಗತಿ. ಮುಖ್ಯವಾಗಿ ಪ್ರತಿಯೊಂದು ಗ್ರಾಮಗಳಲ್ಲಿಯೂ ಜಾತಿಗೊಂದರಂತೆ ಸಂಘಟನೆಗಳು ತಲೆಯೆತ್ತಿವೆ. ಇವುಗಳು ಕೇವಲ ಗ್ರಾಮೀಣ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿಲ್ಲ. ಮೊದಲು ನಗರ ಪ್ರದೇಶಗಳಿಂದ ಆರಂಭವಾಗಿರುತ್ತವೆ. ಮುಖ್ಯವಾಗಿ ನಗರಗಳಿಂದ ಆರಂಭಗೊಂಡ ಜಾತಿ ಸಂಘಟನೆಗಳು ಗ್ರಾಮೀಣ ಪ್ರದೇಶಗಳಿಗೆ ವಿಸ್ತರಿಸಿಕೊಳ್ಳುತ್ತವೆ. ಹಾಗಾಗಿ ಸಂಘಟನೆಗಳ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತವೆ. ಪ್ರತೀ ವರ್ಷವೂ ಏನಾದರೊಂದು ಸಾಮಾಜಿಕ ಕಾರ್ಯಗಳನ್ನು ಮಾಡಬೇಕೆನ್ನುವ ಉದ್ದೇಶದಿಂದ ಸಾಮೂಹಿಕ ವಿವಾಹಗಳನ್ನು ಮಾಡುತ್ತಿರುತ್ತವೆ. ಹಾಗೆಯೇ ಕೆಲವು ಸಾಮಾಜಿಕ ಆಚರಣೆಗಳ ಸಂದರ್ಭಗಳಲ್ಲಿ ಅಂದರೆ ವಿಶೇಷವಾಗಿ ಬಸವ ಜಯಂತಿಯ ದಿನ ಮತ್ತು ವರಮಹಾಲಕ್ಷ್ಮಿ ಪೂಜೆಯ ದಿನದಂದು ವಿವಾಹಗಳನ್ನು ಏರ್ಪಡಿಸುವುದು ಕಂಡುಬರುತ್ತದೆ. ಅದರಂತೆಯೇ ಕೆಲವು ಮಠಗಳಲ್ಲಿ ತಿಂಗಳಿಗೆ/ವರ್ಷಕ್ಕೆ ಒಂದು ಬಾರಿ ಸಾಮೂಹಿಕ ವಿವಾಹಗಳನ್ನು ಏರ್ಪಡಿಸುತ್ತಿರುತ್ತವೆ. ಈ

ವಿವಾಹಗಳಿಗೆ ಒಳಗಾಗುವವರು ಸಾಮಾನ್ಯವಾಗಿ ಬಡವರಾಗಿರುತ್ತಾರೆ. ಆರ್ಥಿಕವಾಗಿ ಸಬಲರಲ್ಲದ ಕುಟುಂಬಗಳು ಸಾಮೂಹಿಕ ವಿವಾಹಗಳಲ್ಲಿ ಪಾಲ್ಗೊಳ್ಳುತ್ತಾರೆ. ಅಂದರೆ ಈ ವಿವಾಹಗಳಲ್ಲಿ ವಧು ವರರ ಕುಟುಂಬಗಳಿಗೆ ಖರ್ಚಾಗುವುದು ತುಂಬಾನೇ ಕಡಿಮೆ. ಏಕೆಂದರೆ ಮದುವೆಗೆ ಸಂಬಂಧಿಸಿದ ಎಲ್ಲಾ ಕಾರ್ಯಗಳನ್ನು ಮತ್ತು ಖರ್ಚನ್ನು ಸಾಮೂಹಿಕ ವಿವಾಹಗಳನ್ನು ಮಾಡುವಂತಹ ಕಮಿಟಿಯೇ ವಹಿಸಿಕೊಂಡಿರುತ್ತದೆ. ಹಾಗಾಗಿ ಬಡವರು ಈ ವಿವಾಹಗಳಲ್ಲಿ ತಮ್ಮ ಮಕ್ಕಳ ವಿವಾಹ ಮಾಡಲು ಮುಂದಾಗುತ್ತಾರೆ. ಹಾಗೆಯೇ ಅವರ ಲೆಕ್ಕಾಚಾರವೂ ಅದೇ ಆಗಿರುತ್ತದೆ. ಸಾಮೂಹಿಕ ವಿವಾಹಗಳಲ್ಲಿ ತಮ್ಮ ಮಕ್ಕಳ ವಿವಾಹ ಮಾಡುವುದರಿಂದ ತಮಗೆ ಒದಗುವ ಖರ್ಚು ತುಂಬಾನೇ ಕಡಿಮೆಯಾಗುತ್ತದೆ ಎಂಬುದು. ಆದರೆ ಸಾಮೂಹಿಕ ವಿವಾಹಗಳಲ್ಲಿ ಎಲ್ಲವೂ ಕಾನೂನು ಪ್ರಕಾರವಾಗಿಯೇ ಅಂದರೆ ವಿವಾಹಕ್ಕೆ ಒಳಗಾಗುವ ಗಂಡು ಮತ್ತು ಹೆಣ್ಣು ಇಬ್ಬರ ವಯಸ್ಸು ಕಾನೂನು ನಿರ್ಧರಿಸಿದ ವಯಸ್ಸನ್ನು ಹೊಂದಿದವರಾಗಿರುತ್ತಾರೆಯೇ ಎಂಬುದನ್ನು ನೋಡಿದಾಗ, ವಾಸ್ತವದಲ್ಲಿ ಹಾಗಿರುವುದಿಲ್ಲ. ಏಕೆಂದರೆ ಎಷ್ಟು ಜೋಡಿಗಳ ವಿವಾಹಗಳನ್ನು ಮಾಡಲು ನಿರ್ಧರಿಸಲಾಗಿರುತ್ತದೆಯೋ ಅವುಗಳಲ್ಲಿ ಕೆಲವು ಜೋಡಿಗಳಾದರೂ ಬಾಲ್ಯ ವಿವಾಹಕ್ಕೆ ಒಳಗಾಗಿರುತ್ತವೆ. ಅಂದರೆ ಕಾನೂನು ರೂಪಿಸಿದಂತಹ ವಯಸ್ಸನ್ನು ಹೊಂದಿರದೇ ಇರುವಂತಹದ್ದು ಕಂಡುಬರುತ್ತದೆ. ಇತ್ತೀಚೆಗೆ ಕಾನೂನುಗಳು ತುಂಬಾ ಕಠಿಣವಾಗಿರುವುದರಿಂದ ಸಾಮೂಹಿಕ ವಿವಾಹಗಳಲ್ಲಿ ಬಾಲ್ಯ ವಿವಾಹಗಳಾಗುವುದು ಕಡಿಮೆಯಾಗಿದೆ. ಮುಖ್ಯವಾಗಿ ಬಡ ಕುಟುಂಬಗಳಲ್ಲಿ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಸಾಮೂಹಿಕ ವಿವಾಹಗಳಲ್ಲಿ ವಿವಾಹ ಮಾಡುವುದನ್ನು ಇಷ್ಟಪಡುತ್ತಾರೆ. ಏಕೆಂದರೆ ಅವರು ಮೊದಲೇ ಬಡತನದಿಂದ ನರಳುತ್ತಿರುತ್ತಾರೆ. ಜೊತೆಗೆ ಮಕ್ಕಳ ಮದುವೆ ಮಾಡುವುದೆಂದರೆ ಇನ್ನೂ ಸಂಕಷ್ಟಕ್ಕೆ ಈಡಾಗುತ್ತಾರೆ. ಹಾಗಾಗಿ ಅವರುಗಳು ವಿವಾಹದ ಸಂದರ್ಭದಲ್ಲಿ ಆಗುವಂತಹ ಖರ್ಚಿನಿಂದ ತಪ್ಪಿಸಿಕೊಳ್ಳಲು ಸಾಮೂಹಿಕ ವಿವಾಹಗಳಿಗೆ ಮೊರೆಹೋಗುತ್ತಾರೆ. ಆದರೆ ಈ ಸಾಮೂಹಿಕ ವಿವಾಹಗಳಿಗೆ ಮೊರೆ ಹೋಗುವಂತಹ ಎಷ್ಟೋ ವಿವಾಹಗಳು ಬಾಲ್ಯ ವಿವಾಹಗಳಾಗಿರುತ್ತವೆ. ಈ ಬಗೆಯ ವಿವಾಹಗಳಾಗಿರುವಂತಹ ಬಹಳಷ್ಟು ಪ್ರಕರಣಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಮುಖ್ಯವಾಗಿ ಅವುಗಳನ್ನು ಈ ಕೆಳಗಿನಂತೆ ವಕ್ತೃಗಳ ಹೇಳಿಕೆಗಳಿಂದಲೇ ವಿವರಿಸಿಕೊಳ್ಳಲಾಗಿದೆ.

ಬಳ್ಳಾರಿ ತಾಲೂಕಿನ ವಣೇನೂರು ಗ್ರಾಮದ ಗೋವಿಂದಪ್ಪ ಮತ್ತು ಪಾಪಮ್ಮ ಇವರಿಗೆ ರಾಮಕೃಷ್ಣ ಎನ್ನುವ ಒಬ್ಬನೇ ಮಗ. ರಾಮಕೃಷ್ಣನಿಗೆ ಇನ್ನು ೧೪ ವರ್ಷಗಳು. ಅದಾಗಲೇ ಮದುವೆಯನ್ನು ಮಾಡಿದ್ದಾರೆ. ವಣೇನೂರು ಗ್ರಾಮಕ್ಕೆ ಹೊಂದಿಕೊಂಡಂತೆ ಇರುವ ಬೆಣೆಕಲ್ ಗ್ರಾಮದಲ್ಲಿನ ಗಂಗಾಧರ ತಾತನವರ ಮಠದಲ್ಲಿ ಪ್ರತೀ ವರ್ಷ ಸಾಮೂಹಿಕ ವಿವಾಹಗಳು ನಡೆಯುತ್ತವೆ. ಈ ವಿವಾಹಗಳಲ್ಲಿ ರಾಮಕೃಷ್ಣನ ಮದುವೆಯನ್ನು ಮಾಡಿದ್ದಾರೆ. ಈ ವಿಷಯ ತಿಳಿದು ಇವರನ್ನು ಭೇಟಿಯಾದಾಗ ಪಾಪಮ್ಮ ಎಂಬುವವರು ಹೀಗೆ ಹೇಳಿದರು "ನಮ್

ಮನಿಯಾಗ ಬಾಳ ಕಷ್ಟ ಐತಿ. ಕೆಲ್ಸ ಮಾಡೋರು ಯಾರೂ ಇಲ್ಲ. ಇರೋದು ಇವ್ನೊಬ್ನೆ ಮಗ. ಇರೋದು ಎರಡೆಕ್ರೆ ಹೊಲ. ಹೊಲದ್ ಕೆಲ್ಸ ಮಾಡಾಕ ಅವ್ರ ಅಪ್ಪ ಒಬ್ನೇ ಹೋಗ್ಬೇಕು. ಅದ್ರಾಗ ಅತಗೂ ಸತೆ ಕೆಲ್ಸ ಮಾಡ್ಲಾರ್ದಂಗ ಆಗೇತಿ. ಇನ್ನ ಮನ್ಯಾಗಿನ ಕೆಲ್ಸ, ಹೊಲ್ದಾಗಿನ ಕೆಲ್ಸ ಎಲ್ಲಾನೂ ನಾನೊಬ್ಬೆ ಎಲ್ಲಿವರ್ಗೂ ಅಂತ ಮಾಡೋದು. ಅದಕ್ಕ ಇರೋನು ಒಬ್ನೆ ಮಗ ಅವ್ನಿಗೆ ಮದುವಿ ಮಾಡಿದ್ರೆ ಮನ್ಯಾಗಿನ ಕೆಲ್ಸಕ್ಕ ಆಸರ ಆಗತೈತಿ ಅಂತ ತಿಳ್ದು, ಅವ್ನಿಗೆ ಇದೇ ಊರಾಗ ಹೆಣ್ ತಗ್ದು ಮದುವಿ ಮಾಡಿದ್ವಿ. ಮತ್ತೆ ಅವ್ನು ಸಾಲಿಗೆ ಹೋಗ್ಲಾರ್ದಂಗ ಬರೀ ತಿರ್ಗ್ಯಾಡೋದೆ ಮಾಡ್ತಿದ್ದ. ಅವ್ನಿಗೆ ಸಾಲಿಗನ್ನಾ ಹೋಗು ಇಲ್ಲಾಂದ್ರೆ ನಿಮ್ ಅಪ್ಪನ ಜೊತಿಗೆ ಹೊಲಕ್ಕ ಕೆಲ್ಸಕ್ಕನ್ನಾ ಹೋಗು ಅಂತ ಬಾಳ ಸಲ ಹೇಳಿದ್ವಿ. ಎಷ್ಟು ಹೇಳಿದ್ರು ಕೇಳ್ತಿದ್ದಿಲ್ಲ. ಅವ್ನಿಗೆ ಮದುವಿ ಮಾಡಿ ಒಂದು ಮೂಗ್ದಾರ ಹಾಕಿದ್ರೆ ಹೇಳ್ದಂಗ ಕೇಳ್ಕಂಡು ಇರ್ತಾನ ಅಂತ ತಿಳ್ದು ಮದುವಿ ಮಾಡಿದ್ವಿ. ಈಗ ಮನ್ಯಾಗಿನ ಕೆಲ್ಸಾನೆಲ್ಲಾ ಸೊಸಿನೇ ನೋಡ್ಕೆಳ್ತಾಳ, ನಾವು ಹೊಲದ್ ಕೆಲ್ಸ ಮಾಡ್ತೇವಿ" ಎಂದರು.

ಸಣ್ಣ ವಯಸ್ಸಿಗೆ ಮದುವಿ ಮಾಡಿದ್ದೀರಲ್ಲಾ ಇದು ತಪ್ಪಲ್ಲವಾ? ಮಗನಿಗೆ ಬುದ್ದಿವಾದ ಹೇಳಿ ಶಾಲೆಗೆ ಕಳುಹಿಸಬಹುದಿತ್ತು. ಇಲ್ಲಾಂದ್ರೆ ಮದುವಿ ವಯಸ್ಸಿಗೆ ಬಂದ್ ಮೇಲಾದ್ರೂ ಮದುವಿ ಮಾಡಬಹುದಿತ್ತಲ್ಲಾ ಎಂದು ಕೇಳಿದಾಗ, ಇಲ್ಲಿ ಮನ್ಯಾಗಿನ ನಮ್ ಕಷ್ಟ ಯಾರಿಗೆ ಹೇಳಾದು. ನಮಿಗೆ ಇವಾಗಾಗ್ಲೇ ವಯಸ್ಸಾಗೇತಿ. ಊರಾಗಿನ ಇವ್ನ ವಯಸ್ಸಿನ ಹುಡುಗ್ರಿಗೆ ಮದುವಿಯಾಗಿ ಮಕ್ಕಳಾಗ್ಯಾವ. ಅಂತಾದ್ರಾಗ ನಮ್ ಮಗನ ಮದುವಿ ಮಾಡಿದ್ದು ಏನ್ ತಪ್ಪು. ಅದ್ರಾಗೂ ಇನ್ನೊಬ್ಳು ಮಗಳು ಐದಾಳ ಅಕಿ ಇನ್ನ ಸಣ್ಣೋಳು ಐದಾಳ. ಆಕಿನ ನೋಡ್ಕಬೇಕು, ಮನ್ಯಾಗಿನ ಕೆಲ್ಸ ಮಾಡ್ಬೇಕು, ಹೊಲದ ಕೆಲ್ಸ ಮಾಡ್ಬೇಕು ಇಷ್ಟೆಲ್ಲಾ ನಾನೊಬ್ಬೆ ಮಾಡ್ಬೇಕಂದ್ರೆ ಆಗಂಗಿಲ್ಲ. ಇಷ್ಟು ದಿನ ಮಾಡಿದ್ದಾತು. ಇನ್ ಮ್ಯಾಲಾದ್ರು ಸ್ವಲ್ಪ ಆರಾಮಾಗಿ ಇರಾನು ಅಂತ. ಅವ್ನಿಗೆ ನಾವು ಕರೆಟ್ಟ ಟೈಮಿಗೆ ಮದುವಿ ಮಾಡೇವಿ. ನಮ್ ಅಣ್ಣನ ಮಕ್ಳು ಇವ್ನ ವಾರಿಗೇರು. ಅವ್ರಿಗೆಲ್ಲಾ ಎರೆಡೆರ್ಡು ಮಕ್ಕಳಾಗ್ಯಾವ. ನಾವೇ ಮದುವಿನಾ ಲೇಟ್ ಮಾಡೀವಿ. ಇಲ್ಲಿ ಊರಾಗ ೭ನೇ ಕ್ಲಾಸು ಮಾತ್ರ ಇರೋದು. ಮತ್ತೆ ಸಾಲಿ ಹೋಗ್ಬೇಕಂದ್ರೆ ಬ್ಯಾರೆ ಊರಿಗೆ ಹೋಗ್ಬೇಕು. ಮತ್ತೆ ಅದಕ್ಕೆಲ್ಲಾ ಬಾಳ ಕರ್ಚು ಆಗತೈತಿ. ಅದೆಲ್ಲಾ ಯಾಕ ಬೇಕು. ಮದುವಿ ಮಾಡಿಬಿಟ್ರೆ ಮುಗೀತಲ್ಲಾ. ಅವ್ನು ಎಲ್ಲಿಗೂ ಹೋಗ್ಲಾರ್ದಂಗ ಸುಮ್ನೆ ಮನ್ಯಾಗ ಹೇಳಿದ್ ಕೆಲ್ಸ ಮಾಡ್ಕೆಂಡು ಇರ್ತಾನ. ಅಂತ ತಿಳ್ದು, ನಮ್ ಊರಿನ ಪಕ್ದಾಗೇ ಇರೋ ಗಂಗಾಧರ ತಾತನವರ ಮಠದಾಗ ವರ್ಸಾ ವರ್ಸಾ ಮದುವಿಗೋಳು ಆಗ್ತಾವ. ಅದ್ರಾಗೇ ಮದುವಿ ಮಾಡಿಬಿಡಾನು ಅಂತೇಳಿ ಅನ್ಕಂಡು. ಅಲ್ಲೇ ಮದುವಿ ಮಾಡಿದ್ವಿ, ನಮಿಗೆ ಖರ್ಚು ಸತೆ ಕಡಿಮಿ ಆತು. ಮದುವಿಯಾಗಿ ಮನಿಗೆ ಕರ್ಕಂಡು ಬಂದ್ ಮ್ಯಾಲೆ ಇಲ್ಲೆ ಮದುಮಕ್ಕಳ್ನ ಗುಡಿಗಿ ಕರ್ಕಂಡು ಹೋಗಿ ಪೂಜೆ ಮಾಡ್ಸಿಕೆಂಡು ಮನಿ ಒಳಾಗ ಕರ್ಕಂಡ್ವಿ ಅಷ್ಟೆ. ಮನಿ ಮುಂದೆ ಮದುವಿ ಮಾಡಿದ್ರೆ ಎಷ್ಟು ಖರ್ಚಾಗತ್ತಿತ್ತೋ ಅದಕ್ಕಿಂತ ಬಾಳ ಕಡಿಮಿ ಖರ್ಚಿನಾಗ ಮಗನ್ನು ಮದುವಿ ಮಾಡಿದ್ವಿ. ಮತ್ತೆ ಗಂಗಾಧರ ತಾತನ ಮಠದಾಗ

ಮದುವ್ಯಾದ್ರ ಒಳ್ಳೇದು ಅಂತ ಹೇಳ್ತಾರ. ಹಂಗಾಗಿ ಎಲ್ಲಿಂದೆಲ್ಲಿಂದ್ಲೋ ಬಂದು ಮಠದಾಗ ಮದುವಿ ಮಾಡ್ಕಂತಾರ" ಎಂದರು.

ಮಠದಲ್ಲಿ ಮದುವೆಯನ್ನ ಮಾಡಿದ್ದಕ್ಕೆ ಖರ್ಚು ಬಹಳ ಕಡಿಮೆ ಆಯ್ತು ಎಂದು ಹೇಳ್ತೀರಲ್ಲ ಹೇಗೆ ಎಂದು ಕೇಳಿದಾಗ, "ಹೌದು, ಮಠದೋರು ವರ್ಸಾ ವರ್ಸಾ ಮಾಡೋ ಮದುವ್ಯಾಗ ಮಧುಮಕ್ಕಿಗೆ ಬಟ್ಟಿ ಕೊಡ್ತಾರ, ತಾಳಿ ಸಾಮಾನು ಕೊಡ್ತಾರ, ಮತ್ತೆ ಬಂದಿರೋ ಅಷ್ಟೂ ಜನ ಸಂಬಂಧಿಕ್ರಿಗೆ ಊಟ ಹಾಕಸ್ತಾರ. ನಮ್ದೇನಿದ್ರೂ ಮಧು ಮಕ್ಕನ ಕರ್ಕಂಡು ಹೋಗೋದು ಅಷ್ಟೇ. ಇಲ್ಲಿಗಿ ಬಂದ್ ಮ್ಯಾಲೆ ಮದುವಿಗಿ ಬೇಕಾದ ಎಲ್ಲಾ ಸಾಮಾನುಗಳ್ನೂ ಅವ್ರೆ ನೋಡ್ಕಂತಾರ. ಅದೇ ಮನಿ ಮುಂದೆ ಮಾಡಿದ್ರೆ ಬಾಳ ಖರ್ಚು ಆಗ್ತೈತಿ" ಎಂದರು.

ಗದಗ ತಾಲೂಕಿನಲ್ಲಿ ಪ್ರತೀ ವರ್ಷ ವರಮಹಾಲಕ್ಷ್ಮಿ ಪೂಜೆಯ ದಿನದಂದು ನಡೆಯುವ ಸಾಮೂಹಿಕ ವಿವಾಹಗಳಲ್ಲಿ ಕೆಲವಾದರೂ ಬಾಲ್ಯ ವಿವಾಹಗಳಾಗುತ್ತಿರುತ್ತವೆ. ಇತ್ತೀಚೆಗೆ ಇವುಗಳ ಪ್ರಮಾಣ ಕಡಿಮೆಯಾಗಿವೆ. ಸಾಮೂಹಿಕ ವಿವಾಹದಲ್ಲಿ ಬಾಲ್ಯ ವಿವಾಹವನ್ನು ಮಾಡಿದಂತಹ ಹಲವು ಪ್ರಕರಣಗಳಲ್ಲೊಂದನ್ನು ಇಲ್ಲಿ ವಿವರಿಸಲಾಗಿದೆ. ಗದಗ ತಾಲೂಕಿನ ನರಸಾಪುರ ಗ್ರಾಮದ ಮಲಿಯಪ್ಪ ಮತ್ತು ಶಿವಪುತ್ರಮ್ಮ ದಂಪತಿಗಳು ತಮ್ಮ ಮಗಳ ವಿವಾಹವನ್ನು ಗದಗನಲ್ಲಿ ಪ್ರತೀವರ್ಷ ವರಮಹಾಲಕ್ಷ್ಮಿ ಪೂಜೆಯ ದಿನದಂದು ನಡೆಯುವ ಸಾಮೂಹಿಕ ವಿವಾಹದಲ್ಲಿ ಮಾಡಿದ್ದಾರೆ. ಆದರೆ ಮಗಳು ಇನ್ನು ಅಪ್ರಾಪ್ತೆ. ಅಂದರೆ ಇನ್ನು ಹತ್ತನೇ ತರಗತಿ ಓದುತ್ತಿರುವಾಗಲೇ ಅವಳ ವಿವಾಹವನ್ನು ಮಾಡಿದ್ದಾರೆ. ಮಲಿಯಪ್ಪ ಹೇಳುವಂತೆ "ನಾನು ಡ್ರೈವರ್ ಕೆಲ್ಸಕ್ಕ ಹೋಕ್ಕೀನಿ, ನಾನ್ ದುಡಿಮಿಯಿಂದ್ಲೇ ಮನಿ ನಡೀಬೇಕು. ನನಿಗೆ ಇರೋದು ಮೂರು ಜನ ಮಕ್ಳು. ಅದ್ರಾಗ ಜ್ಯೋತಿ ಮೊದಲ್ನೇವ್ಳು. ಅಕಿಹಿಂದ ಇಬ್ರು ಗಂಡು ಹುಡುಗ್ರು ಹುಟ್ಯಾವ. ನಮಿಗಿ ಇರೋ ಕಷ್ಟದಾಗೇ ಎಲ್ಲಾರ್ರೂ ಚೆನ್ನಾಗೇ ಓದ್ಲಬೇಕು ಅಂತ ಸಾಲಿಗಿ ಹಚ್ಚಿದ್ವಿ. ಆದ್ರ ಜ್ಯೋತೀನ ಹತ್ನೆ ಕ್ಲಾಸಿಗೇ ನಿಲ್ಸಿ ಮದುವಿ ಮಾಡಿದ್ವಿ. ಯಾಕಂದ್ರ ಅಕಿ ಜಾಸ್ತಿ ಓದಿದಂಗೆಲ್ಲಾ ನಮಿಗೇ ಕಷ್ಟ. ಅಕಿ ಓದಿಗಿ ತಕ್ಕಂಗ ಹುಡುಗನ್ನ ನೋಡಿ ಮದುವಿ ಮಾಡ್ಬೇಕಂದ್ರ ಆಗಂಗಿಲ್ಲ. ಮತ್ತೆ ನಮಿಗಿ ಇರೋ ಕಷ್ಟದಾಗ ಮುಂದೆ ಓದ್ಸಾಕೂ ಆಗಂಗಿಲ್ಲ ಅಂತ ತಿಳ್ಕಂಡಿದ್ವಿ. ಅಕಿ ಇನ್ನ ಹತ್ನೇ ಕ್ಲಾಸು ಓದ್ತಿರ್ಬೇಕಾದ್ರೆ ಒಂದು ಒಳ್ಳೆ ಸಂಬಂಧ ಬಂತು ನಾವು ಸತೆ ಒಪ್ಕೆಂಡ್ವಿ. ಜ್ಯೋತಿ ಸತೆ ಒಪ್ಕೆಂಡ್ಲು. ಯಾಕಂದ್ರ ನಮ್ ಪರಿಸ್ಥಿತಿ ಅಕಿಗಿ ಬಾಳ ಚನ್ನಾಗಿ ಗೊತ್ತಾಗಿತ್ತು. ಆದ್ರ ಮದುವೀನ್ನ ಎಲ್ಲಿ ಮಾಡಾದು ಅಂತ ತಿಳಿಲಿಲ್ಲ. ಯಾಕಂದ್ರ ಮನಿಮುಂದ ಮದುವಿ ಮಾಡುವಷ್ಟು ಇದ್ದಂತೋರು ನಾವಲ್ಲ. ಹಂಗಾಗಿ ಯಾವದಾದ್ರೂ ಗುಡ್ಯಾಗ ಮಾಡಾನು ಅಂತ ಅನ್ಕಂಡಿದ್ವಿ ಆದ್ರ ಗಂಡಿನ್ ಕಡೇವ್ರು ಇಲ್ಲ ಗದಗ್ದಾಗ ನಡಿಯೋ ಸಾಮೂಹಿಕ ಮದುವ್ಯಾಗ ಮಾಡಾನು ಅಂದ್ರು, ಸಾಮೂಹಿಕ ಮದುವ್ಯಾಗ ಮಾಡಿದ್ರೆ ನಮ್ದೇನೂ ಖರ್ಚು ಇರಂಗಿಲ್ಲ. ತಾಳಿ ಸಾಮಾನು, ಮದುವಿ ಬಟ್ಟಿಗೋಳು ಎಲ್ಲಾನೂ ಅವ್ರೇ ಕೊಡ್ತಾರೆ. ಹಂಗಾಗಿ ನಮ್ ಮಗಳ್ದು ಅಲ್ಲೇ ಮಾಡಿಬಿಟ್ವಿ" ಎಂದರು.

ಹೀಗೆ ಸಾಮೂಹಿಕ ವಿವಾಹಗಳು ಬಡವರ ಪಾಲಿಗೆ ಸಂಜೀವಿನಿಗಳಾಗಿವೆ. ಆದರೆ ತಮ್ಮ ಮಕ್ಕಳು ಇನ್ನು ಮದುವೆ ವಯಸ್ಸಿಗೆ ಬಂದಿಲ್ಲ ಎಂಬುದನ್ನೂ ಮರೆತು ತಮಗಾಗುವ ಖರ್ಚಿನಿಂದ ತಪ್ಪಿಸಿಕೊಳ್ಳಲು ವಿವಾಹ ಮಾಡುತ್ತಿರುವುದು ವಿಷಾಧನೀಯ ಸಂಗತಿ. ಸಾಮೂಹಿಕ ವಿವಾಹಗಳನ್ನು ಏರ್ಪಡಿಸುವವರು ಕೆಲವು ನಿಬಂಧನೆಗಳನ್ನು ಹಾಕಿರುತ್ತಾರೆ. ಆದರೆ ಆ ನಿಬಂಧನೆಗಳನ್ನು ಮೀರಿ ಈ ಬಗೆಯ ವಿವಾಹಗಳು ನಡೆಯುತ್ತಿರುತ್ತವೆ. ಹಾಗೆಯೇ ಬಡತನ, ಸಾಮೂಹಿಕ ವಿವಾಹಗಳು ಇವೆರಡಕ್ಕೂ ಒಂದಕ್ಕೊಂದು ಸಂಬಂಧವಿದೆ. ಈ ಹಿಂದೆಯೇ ಹೇಳಿದಂತೆ ಸಾಮೂಹಿಕ ವಿವಾಹಗಳಿಗೆ ಒಳಗಾಗುವವರು ಸಾಮಾನ್ಯವಾಗಿ ಬಡವರೇ ಹೆಚ್ಚು. ಆರ್ಥಿಕವಾಗಿ ಸ್ಥಿತಿವಂತರಲ್ಲದಿದ್ದವರು, ಮಧ್ಯಮ ವರ್ಗದ ಕುಟುಂಬಗಳು ಈ ವಿವಾಹಗಳಮೊರೆ ಹೋಗುತ್ತಾರೆ. ಇಂತಹ ಕುಟುಂಬಗಳು ತಮ್ಮ ಮಕ್ಕಳಿಗೆ ಕಾನೂನು ನಿಗಧಿಪಡಿಸಿದಂತಹ ವಿವಾಹದ ವಯಸ್ಸು ಆಗಿದೆಯೇ ಇಲ್ಲವೇ ಎಂಬುದನ್ನು ಯೋಚಿಸುವುದಿಲ್ಲ. ಅವರಿಗೆ ಯಾವುದೇ ಖರ್ಚಾಗದಂತೆ ತಮ್ಮ ಮಕ್ಕಳ ವಿವಾಹವಾದರೆ ಅಷ್ಟೇ ಸಾಕು ಅಂಬಷ್ಟರ ಮಟ್ಟಿಗೆ ಯೋಚಿಸಿರುತ್ತಾರೆ. ಹಾಗಾಗಿ ಕೆಲವು ಸುಳ್ಳು ದಾಖಲೆಗಳನ್ನು ತೋರಿಸಿ ಸಾಮೂಹಿಕ ವಿವಾಹಗಳಲ್ಲಿ ಅಪ್ರಾಪ್ತ ವಯಸ್ಸಿನ ತಮ್ಮ ಮಕ್ಕಳ ವಿವಾಹಗಳನ್ನು ಮಾಡಲು ಮುಂದಾಗುತ್ತಿರುವ ಉದಾಹರಣೆಗಳೂ ಇವೆ. ಮೇಲಿನ ಎರಡೂ ಪ್ರಕರಣಗಳಲ್ಲಿ ವಣೇನೂರು ಗ್ರಾಮದ ಪಾಪಮ್ಮ ಹೇಳುವ ಮಾತುಗಳು ಮತ್ತು ನರಸಾಪುರ ಗ್ರಾಮದ ಮಲಿಯಪ್ಪ ಹೇಳುವ ಮಾತುಗಳು ಒಂದಕ್ಕೊಂದು ಭಿನ್ನವಾಗಿದ್ದರೂ ಸಹ ಅವುಗಳ ಅಂತಿಮ ಗುರಿ ಖರ್ಚನ್ನು ಕಡಿಮೆ ಮಾಡಿಕೊಳ್ಳುವುದು. ಪಾಪಮ್ಮ ಹೇಳುವಂತೆ ತಮ್ಮ ಮನೆಗೆ ಒಬ್ಬ ಕೆಲಸಗಾರರು ಬೇಕು, ಅದು ವೇತನ ಪಡೆಯದ ಕೆಲಸಗಾರರು ಅಂದರೆ ಮಗನಿಗೆ ಮದುವೆ ಮಾಡಿದರೆ ಒಬ್ಬ ಕೆಲಸದವಳು ಸಿಕ್ಕುತ್ತಾಳಲ್ಲಾ ಎಂಬ ಆಸೆ ಮತ್ತು ಆಕೆಯ ಮಕ್ಕಳ ವಯಸ್ಸಿನವರು ಈಗಾಗಲೇ ಮದುವೆಯಾಗಿ ಅವರು ತಂದೆ ತಾಯಂದಿರಾಗಿದ್ದಾರೆ, ನನ ಮಗನೂ ಸಹ ಅದೇ ರೀತಿಯಲ್ಲಿ ಮಕ್ಕಳನ್ನು ಬೇಗ ಪಡೆಯಲಿ ಎಂಬುದು ಅವರ ಆಸೆ. ಹಾಗಾಗಿ ತಮ್ಮ ಮಗನಿಗೆ ಬಹಳ ಜಲ್ದಿನೇ ಸಾಮೂಹಿಕ ವಿವಾಹದಲ್ಲಿ ವಿವಾಹ ಮಾಡಿದ್ದಾರೆ. ಒಟ್ಟಾರೆಯಾಗಿ ಸಾಮೂಹಿಕ ವಿವಾಹಗಳಲ್ಲಿ ಮಕ್ಕಳ ಮದುವೆ ಮಾಡುವುದರಿಂದ ಖರ್ಚು ತುಂಬಾನೇ ಕಡಿಮೆಯಾಗುತ್ತದೆ ಎಂಬ ಮನೋಭಾವದಿಂದ ತಮ್ಮ ಮಕ್ಕಳಿಗೆ ವಿವಾಹದ ವಯಸ್ಸಾಗದಿದ್ದರೂ, ವಿವಾಹ ಬಂಧನಕ್ಕೆ ಒಳಪಡಿಸುತ್ತಿದ್ದಾರೆ. ಸಾಮೂಹಿಕ ವಿವಾಹಗಳನ್ನು ಆಯೋಜಿಸುವವರು ಸಾಮಾಜಿಕವಾಗಿ, ರಾಜಕೀಯವಾಗ ಮತ್ತು ಆರ್ಥಿಕವಾಗಿ ತುಂಬಾ ಬಲಿಷ್ಟರಾಗಿರುತ್ತಾರೆ. ಮುಖ್ಯವಾಗಿ ಮಠಗಳಲ್ಲಿ ನಡೆಯುವ ಸಾಮೂಹಿಕ ವಿವಾಹಗಳು ಪ್ರಶ್ನಾತೀತವಾಗಿರುತ್ತವೆ. ಮಠ ಯಾವ ನಿಯಮಗಳನ್ನು ಪಾಲಿಸಬೇಕು ಎಂದು ನಿರ್ದೇಶಿಸುತ್ತದೆಯೋ ಅವುಗಳನ್ನು ಜನರು ಶಿರಸಾವಹಿಸಿ ಒಪ್ಪಿಕೊಳ್ಳಬೇಕು ಮತ್ತು ಪಾಲಿಸಬೇಕು. ಯಾರೂ ಪ್ರಶ್ನಿಸುವಂತಿಲ್ಲ. ಒಂದುವೇಳೆ ಪ್ರಶ್ನಿಸಿದರೆ ಅವರನ್ನು ಧರ್ಮ ವಿರೋಧಿ ಎಂದು ಬಿಂಬಿಸಿ ಸಮಾಜದಿಂದ ಬಹಿಷ್ಕರಿಸಲಾಗುತ್ತದೆ. ಅಂದರೆ ಸ್ಥಳೀಯ ಪಿತೃಪ್ರಧಾನ ವ್ಯವಸ್ಥೆ ತುಂಬಾ ಬಲಿಷ್ಟವಾಗಿರುತ್ತದೆ. ಹಾಗಾಗಿ ಕಾನೂನು

ಪಾಲಿಸುವಂತಹ ಸರಕಾರಿ ಅಧಿಕಾರಿಗಳೂ ಮಠಗಳ ವಿರೋಧವನ್ನು ಕಟ್ಟಿಕೊಳ್ಳುವುದಿಲ್ಲ. ಸ್ಥಳೀಯ ಪಿತೃಪ್ರಧಾನತೆ ಎಂಬುದು ಜನರ ಆಲೋಚನೆಗಳ ಮೇಲೆ ನಿರಂತರವಾಗಿ ಸವಾರಿ ಮಾಡುತ್ತಲೇ ಇರುತ್ತದೆ. ಸಾಮೂಹಿಕ ವಿವಾಹಗಳನ್ನು ಏರ್ಪಡಿಸುವ ಪ್ರತಿಯೊಂದು ಸಂಘಟನೆಯೂ ಸ್ಥಳೀಯ ಮಟ್ಟದಲ್ಲಿ ಬಲಿಷ್ಠವಾಗಿಯೇ ಇರುತ್ತದೆ. ಹಾಗಾಗಿ ಸಾಮೂಹಿಕ ವಿವಾಹಗಳಲ್ಲಿ ಬಾಲ್ಯ ವಿವಾಹಗಳೇನಾದರೂ ನಡೆಯುತ್ತಿದ್ದರೆ ಅದನ್ನು ವಿರೋಧಿಸುವುದು ಅಥವಾ ಪ್ರಶ್ನಿಸುವುದು ಸುಲಭದ ಮಾತಲ್ಲ. ಹಾಗಾಗಿಯೇ ಬಾಲ್ಯ ವಿವಾಹಗಳು ಸಾಮೂಹಿಕ ವಿವಾಹಗಳಲ್ಲಿ ನಡೆಯುತ್ತಲೇ ಇರುತ್ತವೆ. ಇದಕ್ಕೆ ಮುಖ್ಯ ಕಾರಣ ಬಡತನವೇ ಹೊರತು ಬೇರೇನೂ ಅಲ್ಲ.

**ಕೋಷ್ಟಕ ೯.೩**

**ಆರ್ಥಿಕ ತೊಡಕುಗಳು**

| ಆರ್ಥಿಕ ಕಾರಣಗಳು | ಹೌದು | | ಇಲ್ಲ | | ಈ ಪ್ರಶ್ನೆಗೆ ಮೌನ ವಹಿಸಿದವರು | |
|---|---|---|---|---|---|---|
| ಬಡತನ | ೨೭೨ | ೯೦.೬೬% | ೧೬ | ೫.೩೩% | ೧೨ | ೪% |
| ಕುಟುಂಬದ ಆಸ್ತಿಯನ್ನು ತಮ್ಮಲ್ಲಿಯೇ ಉಳಿಸಿಕೊಳ್ಳುವುದು | ೧೧೦ | ೩೬.೬೬% | ೧೬೦ | ೫೩.೩೩% | ೩೦ | ೧೦% |
| ಸಾಮೂಹಿಕ ವಿವಾಹದಲ್ಲಿ ಮದುವೆ ಮಾಡುವುದರಿಂದ ಖರ್ಚು ಕಡಿಮೆ | ೨೪೨ | ೮೦.೬೬% | ೧೮ | ೬% | ೪೦ | ೧೩.೩೩% |




**ರೇಖಾಚಿತ್ರ ೯.೩ ಆರ್ಥಿಕ ತೊಡಕುಗಳು**

ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಬಡತನದ ಕಾರಣಕ್ಕಾಗಿ ಮಕ್ಕಳನ್ನು ಬಾಲ್ಯ ವಿವಾಹಗಳಿಗೆ ಒಳಪಡಿಸಲಾಗುತ್ತಿದೆ ಎಂಬುದನ್ನು ಒಪ್ಪಿಕೊಂಡವರ ಪ್ರಮಾಣ ಶೇ. ೯೦.೬೬ರಷ್ಟಿದೆ. ಈ ಪ್ರಶ್ನೆಗೆ ಇಲ್ಲವೆಂದು ಉತ್ತರಿಸಿದವರು ಕೇವಲ ಶೇ.೫.೩೩ರಷ್ಟಿದೆ. ಕುಟುಂಬದ ಆಸ್ತಿಯನ್ನು ತಮ್ಮಲ್ಲಿಯೇ ಉಳಿಸಿಕೊಳ್ಳುವ ಕಾರಣವನ್ನು ಸಮರ್ಥಿಸುವವರ ಪ್ರಮಾಣ ಶೇ.೩೬.೬೬ರಷ್ಟಿದ್ದು, ಇದಕ್ಕೆ ವ್ಯತಿರಿಕ್ತ ಉತ್ತರವನ್ನು ನೀಡಿದವರ ಪ್ರಮಾಣ ಶೇ.೫೩.೩೩ರಷ್ಟಿದೆ. ಸಾಮೂಹಿಕ ವಿವಾಹಗಳಲ್ಲಿ ಮದುವೆ ಮಾಡುವುದರಿಂದ ಖರ್ಚು ಕಡಿಮೆಯಾಗುತ್ತದೆ. ಹಾಗಾಗಿಯೇ ಈ ವಿವಾಹಗಳಲ್ಲಿ ತಮ್ಮ ಮಕ್ಕಳ ಮದುವೆಯನ್ನು ಬಹುಬೇಗನೇ ಮಾಡಲಾಗುತ್ತದೆ ಎಂಬ ಪ್ರಶ್ನೆಯನ್ನು ಸಮರ್ಥಿಸಿಕೊಂಡವರ ಪ್ರಮಾಣ ಶೇ.೮೦.೬೬ರಷ್ಟಿದೆ. ಇಲ್ಲ ಎನ್ನುವವರ ಪ್ರಮಾಣ ಶೇ.೬ಷ್ಟಿದೆ. ಹೀಗೆ ಕುಟುಂಬದಲ್ಲಿನ ಆರ್ಥಿಕ ಅಂಶಗಳನ್ನು ಕಾರಣಗಳನ್ನಾಗಿಸಿಕೊಂಡು ತಮ್ಮ ಮಕ್ಕಳಿಗೆ ಬಾಲ್ಯದಲ್ಲಿಯೇ ವಿವಾಹ ಮಾಡುತ್ತಿರುವುದನ್ನು ನೋಡಬಹುದಾಗಿದೆ. ಬಡತನ ಮತ್ತು ಸಾಮೂಹಿಕ ವಿವಾಹಗಳಿಗೂ ನೇರವಾದ ಸಂಬಂಧವಿದ್ದು, ಈ ವಿವಾಹಗಳಲ್ಲಿ ಪಾಲ್ಗೊಳ್ಳುವವರು ಹೆಚ್ಚಿನ ಜನರು ಬಡವರಾಗಿಯೇ ಇರುತ್ತಾರೆ. ಇವರು ಆರ್ಥಿಕವಾಗಿ ಸ್ಥಿತಿವಂತರಾಗಿರದಿದ್ದ ಕಾರಣ ಸಾಮೂಹಿಕ ವಿವಾಹಗಳ ಮೊರೆ ಹೋಗುತ್ತಿದ್ದಾರೆ. ಅಧ್ಯಯನ ಕ್ಷೇತ್ರದ ನಾಲ್ಕು ಜಿಲ್ಲೆಗಳಲ್ಲಿ ಬಡತನ ರೇಖೆಗಿಂತ ಕಡಿಮೆ ಇರುವ ಕುಟುಂಬಗಳ ಸಂಖ್ಯೆಯೇ ಅಧಿಕವಾಗಿರುವುದು ಕಂಡುಬರುತ್ತದೆ. ಇದನ್ನು ಕೆಳಗಿನ ಕೋಷ್ಟಕಗಳಿಂದ ತಿಳಿಯಬಹುದಾಗಿದೆ.

**ಕೋಷ್ಟಕ ೯.೩.೧.**

**ನಾಲ್ಕು ಜಿಲ್ಲೆಗಳಲ್ಲಿನ ಬಿಪಿಲ್ ಪಡಿತರ ಚೀಟಿದಾರರ ಸಂಖ್ಯೆ (೩೧.೦೩.೨೦೧೫ರಲ್ಲಿನ ಸಮೀಕ್ಷೆಯಂತೆ)**

| ಜಿಲ್ಲೆ | ಬಿಪಿಎಲ್ ಪಡಿತರ ಚೀಟಿದಾರರು | | | | | | | | |
|---|---|---|---|---|---|---|---|---|---|
| | ಅಂತ್ಯೋದಯ | | | ಅಕ್ಷಯ(ಸಿಲಿಂಡರ್ ಸಹಿತ) | | | ಅಕ್ಷಯ(ಸಿಲಿಂಡರ್ ರಹಿತ) | | |
| | ನಗರ | ಗ್ರಾಮೀಣ | ಒಟ್ಟು | ನಗರ | ಗ್ರಾಮೀಣ | ಒಟ್ಟು | ನಗರ | ಗ್ರಾಮೀಣ | ಒಟ್ಟು |
| ಬಳ್ಳಾರಿ | ೧೧೬೯೮ | ೫೨೨೬೫ | ೬೩೯೬೩ | ೨೨೭೬೪ | ೧೨೨೨೯ | ೩೪೯೯೩ | ೮೦೦೧೬ | ೧೯೫೦೭೮ | ೨೭೫೦೯೪ |
| ಕೊಪ್ಪಳ | ೩೩೬೧ | ೩೮೬೭೨ | ೪೨೦೩೩ | ೩೯೦೧ | ೪೬೩೦ | ೮೫೩೧ | ೩೩೫೮೦ | ೧೮೭೯೩೨ | ೨೨೧೫೧೨ |
| ಗದಗ | ೩೩೪೮ | ೨೪೬೬೮ | ೨೮೦೧೬ | ೮೪೫೭ | ೩೩೧೦ | ೧೧೭೬೭ | ೫೩೫೦೯ | ೧೨೦೫೪೪ | ೧೭೪೦೫೩ |
| ಬಾಗಲಕೋಟೆ | ೯೬೭೨ | ೩೫೨೩೯ | ೪೪೯೧೧ | ೧೨೯೬೨ | ೬೬೨೪ | ೧೯೫೮೬ | ೮೧೧೦೨ | ೧೯೯೬೦೭ | ೨೮೦೭೦೯ |

Source : Director of Food and Civil Supplies
BPL :- Below Poverty Line

ಅಧ್ಯಯನ ಕ್ಷೇತ್ರ ವ್ಯಾಪ್ತಿಯಲ್ಲಿ ಬಡತನ ರೇಖೆಗಿಂತ ಕಡಿಮೆ ಸ್ಥಿತಿಯಲ್ಲಿ ಇರುವವರ ಸಂಖ್ಯೆ ನಗರ ಪ್ರದೇಶಗಳಿಗಿಂತ ಗ್ರಾಮೀಣ ಪ್ರದೇಶಗಳಲ್ಲಿಯೇ ಅಧಿಕವಾಗಿದೆ. ಮುಖ್ಯವಾಗಿ ಅಂತ್ಯೋದಯ ಮತ್ತು ಅಕ್ಷಯ ಎಂಬ ಎರಡು ಬಗೆಯ ಪಡಿತರ ಚೀಟಿಗಳನ್ನು ಸರ್ಕಾರ ನೀಡುತ್ತಿದೆ. ಇದರಲ್ಲಿ ಅಂತ್ಯೋದಯ ಪಡಿತರ ಚೀಟಿಯನ್ನು ಹೊಂದಿರುವ ಜನರು ಬಡತನ

ರೇಖೆಗಿಂತ ಕಡಿಮೆ ಇರುವವರಾಗಿದ್ದಾರೆ. ಅಕ್ಷಯ ಪಡಿತರ ಚೀಟಿಗಳನ್ನು ಬಡತನದಲ್ಲಿರುವ ಜನರಿಗೆ ಕೊಡಲಾಗುತ್ತಿದೆ. ಮುಖ್ಯವಾಗಿ ಇದರಲ್ಲಿ ಸಿಲಿಂಡರನ್ನು ಹೊಂದಿದರವರ ಸಂಖ್ಯೆಗಿಂತ ಸಿಲಿಂಡರನ್ನು ಹೊಂದದೇ ಇರುವವರ ಸಂಖ್ಯೆಯೇ ಅಧಿಕವಾಗಿದೆ. ನಾಲ್ಕು ಜಿಲ್ಲೆಗಳಲ್ಲಿಯೂ ಇದೇ ಸ್ಥಿತಿ ಇರುವುದು ಕಂಡುಬರುತ್ತದೆ. ಹಾಗೆಯೇ ಈ ಜಿಲ್ಲೆಗಳಲ್ಲಿ ಎಪಿಎಲ್ ಪಡಿತರ ಚೀಟಿಯನ್ನು ಹೊಂದಿದವರ ಸಂಖ್ಯೆಯನ್ನು ಕೆಳಗಿನಂತೆ ಕೋಷ್ಟಕದಲ್ಲಿ ತಿಳಿಸಲ

**ಕೋಷ್ಟಕ ೯.೩.೨.**

ನಾಲ್ಕು ಜಿಲ್ಲೆಗಳಲ್ಲಿನ ಎಪಿಲ್ ಪಡಿತರ ಚೀಟಿದಾರರ ಸಂಖ್ಯೆ (೩೧.೦೩.೨೦೧೫ರಲ್ಲಿನ ಸಮೀಕ್ಷೆಯಂತೆ)

| ಜಿಲ್ಲೆ | ಎಪಿಎಲ್ ಪಡಿತರ ಚೀಟಿದಾರರು | | | | | |
|---|---|---|---|---|---|---|
| | ಸಿಲಿಂಡರ್ ಸಹಿತ | | | ಸಿಲಿಂಡರ್ ರಹಿತ | | |
| | ನಗರ | ಗ್ರಾಮೀಣ | ಒಟ್ಟು | ನಗರ | ಗ್ರಾಮೀಣ | ಒಟ್ಟು |
| ಬಳ್ಳಾರಿ | ೧೨೨೫೧ | ೪೦೭೯ | ೧೬೩೩೦ | ೨೪೨೧ | ೩೮೮೪೦ | ೪೧೨೬೧ |
| ಕೊಪ್ಪಳ | ೬೩೧ | ೪೩೬೩ | ೪೯೯೪ | ೫೫೯ | ೨೫೩೩೦ | ೨೫೮೮೯ |
| ಗದಗ | ೨೧೭೮ | ೫೧೮೯ | ೭೩೬೭ | ೧೧೬೪ | ೨೪೬೭೪ | ೨೫೮೩೮ |
| ಬಾಗಲಕೋಟೆ | ೨೫೭೧ | ೧೦೨೨೬ | ೧೨೭೯೭ | ೧೯೫೯ | ೫೪೪೪೨ | ೫೬೪೦೧ |

Source : Director of Food and Civil Supplies
APL :- Above Poverty Line

ಅಧ್ಯಯನ ಕ್ಷೇತ್ರದ ನಾಲ್ಕು ಜಿಲ್ಲೆಗಳಲ್ಲಿ ಎಪಿಲ್ ಪಡಿತರ ಚೀಟಿದಾರರಲ್ಲಿ ಸಿಲಿಂಡರ್ ಸಹಿತ ಮತ್ತು ಸಿಲಿಂಡರ್ ರಹಿತ ಚೀಟಿದಾರರನ್ನು ವಿಂಗಡಿಸಲಾಗಿದೆ. ಇದರಲ್ಲಿ ನಗರ ಪ್ರದೇಶಗಳಿಗಿಂತ ಗ್ರಾಮೀಣ ಪ್ರದೇಶದಲ್ಲಿಯೇ ಸಿಲಿಂಡರನ್ನು ಹೊಂದದೇ ಇರುವವರ ಸಂಖ್ಯೆ ಅಧಿಕವಾಗಿದೆ. ಒಟ್ಟಾರೆಯಾಗಿ ನಾಲ್ಕು ಜಿಲ್ಲೆಗಳಲ್ಲಿ ಬಡತನ ರೇಖೆಗಿಂತ ಕೆಳಗಿನ ಜೀವನಮಟ್ಟವನ್ನು ಹೊಂದಿರುವವರ ಸಂಖ್ಯೆಯೇ ಅಧಿಕವಾಗಿರುವುದು ಕಂಡುಬರುತ್ತದೆ. ಈ ಕಾರಣವಾಗಿ ಇಲ್ಲಿನ ಜನರು ತಮ್ಮ ಮಕ್ಕಳಿಗೆ ಬಾಲ್ಯದಲ್ಲಿಯೇ ವಿವಾಹ ಮಾಡುತ್ತಿರುವುದು ಕಂಡುಬರುತ್ತದೆ. ಇದು ಬಾಲ್ಯ ವಿವಾಹ ನಿಷೇಧ ಕಾನೂನಿನ ನಿಷೇಧಕ್ಕೆ ಬಹುದೊಡ್ಡ ತೊಡಕಾಗಿದೆ.

### ೯.೪. ಸಾಂಪ್ರದಾಯಿಕ ನಂಬಿಕೆಗಳು

ಜನರನ್ನು ಮೂಢನಂಬಿಕೆಗಳು ತುಂಬಾನೇ ಆಳುತ್ತಿವೆ. ಇವುಗಳು ಬಗೆ ಬಗೆಯ ಸ್ವರೂಪದಲ್ಲಿ ಜನರ ಜೀವನದ ಭಾಗವಾಗಿ ಮಾರ್ಪಟ್ಟಿವೆ. ಜನರು ಇವುಗಳಿಗೆ ಬಲಿಯಾಗುವುದರ ಮೂಲಕ ತಮ್ಮ ಅಭಿವೃದ್ಧಿಗೆ ತಾವೇ ತಡೆಯೊಡ್ಡಿಕೊಳ್ಳುತ್ತಿದ್ದಾರೆ. ಇವುಗಳು ಎಲ್ಲಾ ವಲಯಗಳಿಗೂ ವಿಸ್ತರಿಸಿಕೊಂಡಿದ್ದು, ಬಾಲ್ಯ ವಿವಾಹಗಳು ನಡೆಯುವುದಕ್ಕೂ ಕಾರಣವಾಗಿರುವುದು ಕಂಡುಬರುತ್ತಿದೆ. ಅಧ್ಯಯನ ಕ್ಷೇತ್ರವ್ಯಾಪ್ತಿಯಲ್ಲಿ ಮೂಢನಂಬಿಕೆಗಳ ಕಾರಣವಾಗಿ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡಿರುವ ಘಟನೆಗಳು ಸಂಭವಿಸಿವೆ.

ಇವುಗಳನ್ನು ಪ್ರಕರಣಗಳ ಆಧಾರದಲ್ಲಿ ಮೂರು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಅ. ಜಾತಕದ ಕಾರಣಗಳು ಆ. ಕಡೇಹುಟ್ಟಿನ ಮಗನ ಮದುವೆ ಕಡೆಯದಾಗಿ ಮಾಡುವಂತಿಲ್ಲ ಇ. ಕುಟುಂಬದ ಹಿರಿಯರು ಮರಣಿಸಿದ ಒಂದು ವರ್ಷದಲ್ಲಿಯೇ ವಿವಾಹ ಮಾಡಬೇಕು ಈ. ನಿರ್ದಿಷ್ಟ ವಯಸ್ಸಿನ ಮೊದಲೇ ಹೆಣ್ಣುಮಕ್ಕಳಿಗೆ ಮದುವೆ ಮಾಡಲೇಬೇಕು. ಈ ಬಗೆಯ ನಂಬಿಕೆಗಳನ್ನು ಮುಂದಿನಂತೆ ವಿಶ್ಲೇಷಿಸಲಾಗಿದೆ.

**ಅ. ಜಾತಕದ ಕಾರಣಗಳು** : ರೋಣ ತಾಲೂಕಿನ ಜೀಗೇರಿ ಗ್ರಾಮದ ಫಕೀರವ್ವ ಹಾಗೂ ಮುದುಕಪ್ಪ ಪಾಟೀಲ ದಂಪತಿಗಳು ತಮ್ಮ ಮಗಳಾದ ಪಾರ್ವತವ್ವಳನ್ನು ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಕುಂಬಳಾವತಿ ಗ್ರಾಮದ ಚಂದ್ರಪ್ಪ ಎಂಬ ೧೫ ವರ್ಷ ವಯಸ್ಸಿನ ಬಾಲಕನಿಗೆ ಕೊಟ್ಟು ವಿವಾಹ ಮಾಡಲು ಮುಂದಾಗಿದ್ದಾರೆ. ಆದರೆ ಅನಾಮಧೇಯ ಕರೆಯ ಕಾರಣದಿಂದ ತಾಲೂಕಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿಯಾದ ಕೆಂಪಹನುಮಯ್ಯ ಅವರ ಸಕಾಲಿಕ ಕ್ರಮದಿಂದಾಗಿ ಈ ವಿವಾಹ ನಿಂತುಹೋಗಿದೆ. ಈ ವಿಷಯ ತಿಳಿದು ಜೀಗೇರಿ ಗ್ರಾಮದ ಫಕೀರವ್ವ ಅವರನ್ನು ಭೇಟಿಯಾದಾಗ ಅವರು ಹೇಳಿದ್ದು ಹೀಗೆ, “ನಮಿಗೆ ಇರೋದು ಒಬ್ಬಳೇ ಮಗ್ಳು, ಅಕಿ ಇನ್ನ ಸಣ್ಣಾಕಿ ಐದಾಳ, ಈಗ್ಲೇ ಮದುವಿ ಮಾಡಾದು ಬ್ಯಾಡ ಅಂತ ಹೇಳಿದ್ರೂ ಸತೆ ನಮ್ ಅಣ್ಣ ಕೇಳ್ಲಿಲ್ಲ. ಯಾಕಂದ್ರ ನಮ್ ಅಣ್ಣಗ ಇರೋದು ಒಬ್ನೇ ಮಗ, ಅವ್ನಿಗಿ ಇನ್ನ ೧೫ ವರ್ಸ ವಯಸ್ಸು, ಅವ್ನು ಬಾಳ ಉಡಾಳ ಇದ್ದ. ಅದಕ್ಕ ಅವ್ನಿಗೆ ಒಂದು ಮೂಗದಾರ ಹಾಕಿದ್ರೆ ಎಲ್ಲಾನೂ ಸರಿ ಹೋಗ್ತೈತಿ ಅಂತ ತಿಳ್ದು ಸ್ವಾಮಿತಾಗ ಅವ್ನ ಜಾತ್ಕ ತೋರ್ಸ್ಯಾರ. ಆ ಸ್ವಾಮಿ ಇದ್ದು, ನಿಮ್ ಮಗ್ನಿಗಿ ನಿಮ್ ತಂಗಿ ಮಕ್ಳು ಇದ್ರೆ ನೋಡಿ ಮದುವಿ ಮಾಡ್ರಿ, ಬ್ಯಾರೇರ ಮನ್ಯಾಗ ಹೆಣ್ ತಗ್ದ್ರೆ ಇವ್ನು ಅವ್ರ ಮನಿತನಕ್ಕಾ ಸೇರಿ ಬಿಡ್ತಾನ. ನಿಮ್ ತಂಗಿ ಮಕ್ಳು ಇದ್ರೆ ನೋಡಿ ಮಾಡ್ರಿ ಆಗ ಲಕ್ಷ್ಮೀನೇ ನಿಮ್ ಮನ್ಯಾಗ ಕಾಲ್ಮುರ್ಕೊಂಡು ಬಿದ್ದಿರ್ತಾಳ. ಮನಿ ಬಾಳ ಚನ್ನಾಗಿ ಏಳ್ಗಿ ಆಗತೈತಿ ಅಂತ ಹೇಳಿದ್ರಂತೆ. ಅದ್ರಂಗ ನಮ್ ಅಣ್ಣ ನನ್ ಮಗ್ಳದು ಜಾತಕ ತಗಂಡು ಹೋಗಿ ತೋರಿಸ್ದಾಗ, ಜಾತ್ಕ ಬಾಳ ಚನ್ನಾಗಿ ಕೂಡಿ ಬರ್ತೈತಿ. ಈಗ್ಲೇ ಮದುವಿ ಮಾಡಿ ಬಿಡ್ರಿ. ಈಕಿ ಏನಾರಾ ನಿಮ್ ಮನಿ ಸೊಸಿ ಆದ್ರೆ ನಿಮ್ ಮನಿ ಏರ್ಕೆಂಡು ಬರ್ತೈತಿ. ನಿಮ್ ಮಗಾನೂ ಬಾಳ ಚೆನ್ನಾಗಿ ಇರ್ತಾನ ಅಂತ ಹೇಳಿದ್ರು. ಅದಕ್ಕ ಈಕಿ ಇನ್ನ ಬಾಳ ಸಣ್ಣೋಳು ಐದಾಳ ಅಂತ ಹೇಳಿದಾಗ, ಈಗ ಮದುವಿ ಮಾಡಿ ಬಿಟ್ ಬಿಡ್ರಿ ಮುಂದೆ ಅಕಿ ಕೈಗೆ ಬಂದಾಗ ಮನಿ ತುಂಬ್ಸಿಕೆಳ್ರಿ ಅಂತ ಸ್ವಾಮೀಜಿ ಹೇಳಿದ್ರು. ಅದಕ್ಕ ನಮ್ ಅಣ್ಣ ಅವಸ್ರ ಅವಸ್ರದಾಗ ಮದುವಿ ಮಾಡಾಕ ಮುಂದಾದ. ಆದ್ರ ಈ ವಿಚಾರಾನ ಯಾರೋ ಅಧಿಕಾರಿಗಳ್ಗೆ ತಿಳಿಸ್ಯಾರ ಹಂಗಾಗಿ ಮದುವಿ ನಿಂತೋತು. ಈಗ ಎಲ್ರೂ ಜೈಲಿಗಿ ಹೋಗೋ ಪರಿಸ್ಥಿತಿ ಬಂದೈತಿ. ನನ ಗಂಡಗ ಸತೆ ಹೇಳಿದೆ ಈಗ್ಲೆ ಮದುವಿ ಮಾಡಾದು ಬ್ಯಾಡ ಅಂತ. ಆದ್ರೆ ಅತ್ಗ ಜಲ್ದಿ ಹೆಣ್ಮಕ್ಳ ಭಾರಾನ ಇಳಿಸಿಕ್ಯಾಬೇಕಂತೇಳಿ ಹಿಂಗ ಮಾಡ್ದ. ಏನ್ ಮಾಡಾದು ನನ ಗಂಡ ಮತ್ತೆ ನಮ್ ಅಣ್ಣ ದುಡ್ಕಿಲೇ ಮಾಡಿದ್ನ ಈಗ ಎಲ್ಲಾರೂ ಅನಬೋಸಬೇಕಾಗೇತಿ” ಎಂದರು.

ವ್ಯವಸ್ಥೆಯಲ್ಲಿ ಈ ಬಗೆಯ ವಿಚಾರಗಳು ತುಂಬಾನೇ ಹರಿದಾಡುತ್ತಿರುತ್ತವೆ. ಮುಖ್ಯವಾಗಿ ಕುಟುಂಬದಲ್ಲಿ ಮಗ ಏನಾದರೂ ಮನೆಯ ಹಿರಿಯರ ಮಾತುಗಳನ್ನು ಕೇಳದೇ ಬೇಜವಾಬ್ದಾರಿಯಿಂದ ವರ್ತಿಸುತ್ತಿದ್ದರೆ ಒಂದು ಮೂಗದಾರ ಹಾಕಿದ್ರೆ ಎಲ್ಲಾನೂ ಸರಿ ಹೋಗ್ತೈತಿ ಎಂಬ ಮಾತನ್ನು ಬಳಸುತ್ತಾರೆ. ಅಂದರೆ ಇದರ ಅರ್ಥ ಅವನಿಗೆ ಒಂದು ಮದುವೆಯನ್ನು ಮಾಡಿದರೆ ಜವಾಬ್ದಾರಿ ಬರುತ್ತದೆ ಮತ್ತು ಮನೆಯಲ್ಲಿಯ ಕೆಲಸಗಳನ್ನು ನೋಡಿಕೊಂಡು ಹೋಗುತ್ತಾನೆ ಎಂಬ ನೆಲೆಯಲ್ಲಿ ಬಳಸುತ್ತಾರೆ. ಈ ಕಾರಣದಿಂದಲೇ ಚಂದ್ರಪ್ಪನಿಗೆ ವಿವಾಹ ಮಾಡಲು ಮುಂದಾಗಿದ್ದಾರೆ. ಗ್ರಾಮೀಣ ಭಾಗಗಳಲ್ಲಾಗಲೀ, ನಗರ ಪ್ರದೇಶಗಳಲ್ಲಾಗಲೀ ವಿವಾಹ ವಿಚಾರ ಬಂದಾಗ ಗಂಡು ಹೆಣ್ಣಿನ ಜಾತಕವನ್ನು ಹಿಡಿದು ಜ್ಯೋತಿಷಿಗಳ ಹತ್ತಿರ ಮೊದಲು ತೆಗೆದುಕೊಂಡು ಹೋಗುತ್ತಾರೆ. ಗ್ರಾಮೀಣ ಭಾಗಗಳಲ್ಲಿ ಸ್ವಾಮೀಜಿಗಳು ಮತ್ತು ನಗರ ಪ್ರದೇಶಗಳಲ್ಲಿ ಜ್ಯೋತಿಷಿಗಳು ಹೇಳಿದ ಮಾತೇ ಅಂತಿಮವಾಗಿರುತ್ತದೆ. ಅವರು ಹೇಳಿದಂತೆ ನಡೆಯುವುದಷ್ಟೇ ಜನರ ಕೆಲಸವಾಗಿರುತ್ತದೆ. ಏಕೆಂದರೆ ಅವರ ಮೇಲೆ ಅಷ್ಟೊಂದು ನಂಬಿಕೆ ಇರುತ್ತದೆ. ಮುಖ್ಯವಾಗಿ ಮೇಲಿನ ಪ್ರಕರಣದಲ್ಲಿ ಈ ಜಾತಕವೇ ಅಥವಾ ಸ್ವಾಮೀಜಿ ಹೇಳಿದ ಮಾತೇ ಬಾಲ್ಯ ವಿವಾಹಕ್ಕೆ ಕಾರಣವಾಗಿರುವುದನ್ನು ಕಾಣಬಹುದು. ಚಂದ್ರಪ್ಪನಿಗೆ ಇನ್ನು ೨೧ ವರ್ಷ ವಯಸ್ಸಾಗದಿದ್ದರೂ, ಅವನಿಗೆ ಮದುವೆ ಮಾಡಲು ನಿಶ್ಚಯಿಸಿದ್ದಾರೆ. ಮುಖ್ಯವಾಗಿ ತಂಗಿಯ ಮಗಳನ್ನೇ ಮನೆಗೆ ಸೊಸೆಯಾಗಿ ತಂದುಕೊಂಡರೆ ಮನೆಯ ಏಳಿಗೆಯಾಗುತ್ತದೆ ಎಂಬ ನಂಬಿಕೆಯಿಂದ ತಂಗಿಯ ಮಗಳನ್ನೇ ನೋಡಿ ಮದುವೆ ಮಾಡಲು ನಿಶ್ಚಯಿಸಿದ್ದರು. ಆದರೆ ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳಿಗೆ ಈ ವಿಷಯ ತಿಳಿದು ಈ ವಿವಾಹವನ್ನು ತಡೆದಿದ್ದಾರೆ. ಹೀಗೆ ಗ್ರಾಮೀಣ ಭಾಗಗಳಲ್ಲಿ ಇಂದಿಗೂ ಈ ಬಗೆಯ ಮೂಢ ನಂಬಿಕೆಗಳಿಗೆ ಮಕ್ಕಳನ್ನು ಬಲಿಪಶು ಮಾಡುತ್ತಿದ್ದಾರೆ. ಮುಖ್ಯವಾಗಿ ಈ ಬಗೆಯ ನಂಬಿಕೆಗಳು ಬಲಿಷ್ಠವಾಗಿರುವ ಕಾರಣದಿಂದಲೇ ಬಾಲ್ಯ ವಿವಾಹ ನಿಷೇಧ ಕಾನೂನು ಅನುಷ್ಠಾನಕ್ಕೆ ಬಹು ದೊಡ್ಡ ತೊಡಕಾಗಿರುವುದನ್ನು ಗುರುತಿಸಬಹುದು.

**ಆ. ಕಡೇ ಹುಟ್ಟಿನ ಮಗನ ಮದುವೆ ಕಡೆಯದಾಗಿ ಮಾಡುವಂತಿಲ್ಲ :** ಈ ನಂಬಿಕೆ ಗ್ರಾಮೀಣ ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇದರ ಮುಖ್ಯ ಉದ್ದೇಶ ಕಡೆಯದಾಗಿ ಜನಿಸಿದ ಮಗನ ಮದುವೆಯನ್ನು ಕಡೆಯದಾಗಿ ಮಾಡಿದರೆ ಕುಟುಂಬಕ್ಕೆ ಕೇಡಾಗುತ್ತದೆ ಮತ್ತು ಕಡೆಯವನು ಕಡೆಗೆ ಹೋಗುತ್ತಾನೆ ಕುಟುಂಬವನ್ನು ಭಾಗ ಮಾಡುತ್ತಾನೆ ಎಂಬ ನಂಬಿಕೆ ಜನರಲ್ಲಿದೆ. ಇದು ಮೂಢನಂಬಿಕೆಯಾಗಿದ್ದು, ಇದರ ಆಚರಣೆ ಗ್ರಾಮೀಣ ಭಾಗಗಳಲ್ಲಿ ಇಂದಿಗೂ ಚಾಲ್ತಿಯಲ್ಲಿದೆ. ಕೊಪ್ಪಳದ ಪರಸಪ್ಪ ಎಂಬುವವರು ಹೇಳುವಂತೆ "ನನಿಗೆ ಮೂವರು ಮಕ್ಳು. ಅದ್ರಾಗ ಒಂದು ಹೆಣ್ಣು. ಇನ್ನಿಬ್ರು ಗಣಮಕ್ಳು. ಹೆಣ್ಮಗ್ಳೇ ದೊಡ್ಡಾಕಿ. ಅಕಿಗಿ ಮದುವಿ ಮಾಡಿ ಕೊಟ್ಟೇತಿ. ಇನ್ನ ರಮೇಶ ಅಕಿ ಹಿಂದ್ಲೋನು. ಚನ್ನಪ್ಪ ಎಲ್ಲಾರ್ಗಿಂತ ಸಣ್ಣೋನು. ಇಬ್ರ ಮದುವೀನೂ ಒಂದೇ ಸಲ ಮಾಡಿಬಿಟ್ವಿ. ಯಾಕಂದ್ರ ಚನ್ನಪ್ಪ ಕಡೀ ಮಗ. ಅತನ್ದೊಂದೇ ಮದುವೀನ ಸಪರೇಟು

ಮಾಡಾಕಾಗಲ್ಲ. ಒಂದುವ್ಯಾಳ ಮಾಡಿದ್ರೆ ಮನಿಗಿ ಒಳ್ಳೇದಾಗಲ್ಲ. ಅವ್ನು ಯಾರ್ರೂ ಹಚ್ಕೆಳ್ಲಾರ್ದಂಗ ಮನಿಲೇಸಿ ಹೊರ್ಗ ಆಗ್ತಾನ. ಮನಿ ಒಡ್ದು ಹೋಗ್ತೈತಿ. ಹಿಂಗ ಆಗ್ಬಾರ್ದು ಅಂತೇಳಿ. ಅಣ್ಣ ತಮ್ಮಂದು ಇಬ್ರುದೂ ಒಂದೇ ಸಾರಿ ಮದುವಿ ಮಾಡಿಬಿಟ್ವಿ" ಎಂದರು.

ನಿಮ್ಮ ಮಕ್ಕಳು ಶಾಲೆಗೆ ಹೋಗುತ್ತಿರಲಿಲ್ಲವೇ ಎಂದು ಕೇಳಿದಾಗ, ಹೋಗ್ತಿದ್ರು, ಆದ್ರೆ ದೊಡ್ಡ ಮಗನ್ದು ಮದುವಿ ಫಿಕ್ಸ್ ಆದ್ ಮ್ಯಾಲೆ, ಇನ್ನ ಇವ್ನು ಸತೆ ಇದ್ರಾಗೇ ಮದುವಿ ಮಾಡಾನು ಅಂತ ನಿರ್ಧಾರ ಮಾಡಿದ್ವಿ. ಚನ್ನಪ್ಪ ಬಿ.ಎ. ಫಸ್ಟ್ ಓದಾಕತ್ಯಾನ. ಆದ್ರ ಮದುವೀನ ಯಾವಾಗ್ಲಾದ್ರು ಮಾಡ್ಲೇ ಬೇಕಲ್ಲ. ಹಂಗಾಗಿ ಇಬ್ರುದೂ ಒಂದೇ ಬಾರಿ ಮದುವಿ ಮಾಡಿದ್ವಿ ಎಂದರು. ಇದೊಂದು ನಂಬಿಕೆ ಗ್ರಾಮೀಣ ಭಾಗಗಳಲ್ಲಿ ಇಂದಿಗೂ ಜಾರಿಯಲ್ಲಿರುವುದರ ಮೂಲಕ ಬಾಲ್ಯ ವಿವಾಹಗಳನ್ನು ಪ್ರೋತ್ಸಾಹಿಸುತ್ತಿದೆ. ಮುಖ್ಯವಾಗಿ ಕುಟುಂಬದಲ್ಲಿ ಕೊನೆಗೆ ಜನಿಸಿದ ಮಗನಿಗೆ ತುಂಬಾನೇ ಪ್ರಾಮುಖ್ಯತೆಯನ್ನು ಕೊಡಲಾಗಿರುತ್ತದೆ. ಅಂದರೆ ಆತನು ಎಲ್ಲರಿಗಿಂತಲೂ ಕಿರಿಯವನಾಗಿದ್ದರೂ ಆತನ ಮಾತನ್ನು ಯಾರೂ ಕೂಡ ನಿರಾಕರಿಸುವುದಿಲ್ಲ. ಹಾಗೆ ಕೊನೆಯ ಮಗನನ್ನು ಬೆಳೆಸಲಾಗುತ್ತಿರುತ್ತದೆ. ಹಾಗಾಗಿ ಕುಟುಂಬದಲ್ಲಿನ ಕೊನೆಯ ಮಗನ ವಿವಾಹವನ್ನು ಎಲ್ಲರಿಗಿಂತಲೂ ಕೊನೆಯಲ್ಲಿ ಮಾಡಿದರೆ ಆತನ ಜೀವನ ಸುಖಕರವಾಗಿರುವುದಿಲ್ಲ ಮತ್ತು ಕುಟುಂಬ ಒಡೆದು ಚೂರಾಗುತ್ತದೆ ಎಂಬ ನಂಬಿಕೆಯ ಕಾರಣವಾಗಿ ಆತನ ಸಹೋದರರ ಜೊತೆ ವಿವಾಹವನ್ನು ಮಾಡಲಾಗುತ್ತದೆ. ಮೇಲಿನ ಪ್ರಕರಣದಲ್ಲಿ ಚನ್ನಪ್ಪ ಇನ್ನು ಬಿ.ಎ. ಓದುತ್ತಿದ್ದಾನೆ. ಅಂದರೆ ಆತನಿಗೆ ಸುಮಾರು ೧೯ರಿಂದ ೨೦ ವರ್ಷ ವಯಸ್ಸು ಮಾತ್ರ. ಈತನ ವಯಸ್ಸು ಕೂಡ ವಿವಾಹಕ್ಕೆ ಪೂರಕವಾದುದಲ್ಲ. ಈ ವಯಸ್ಸಿನಲ್ಲಿ ವಿವಾಹ ಮಾಡುವುದು ಕಾನೂನಿಗೆ ವಿರುದ್ಧವಾದ ಸಂಗತಿಯಾಗಿದೆ. ಭಾರತೀಯ ಸಮಾಜದಲ್ಲಿ ವಿವಾಹವಾಗುವ ಗಂಡಿನ ವಯಸ್ಸಿಗಿಂತ ವಿವಾಹವಾಗುವ ಹೆಣ್ಣಿನ ವಯಸ್ಸು ತುಂಬಾ ಕಡಿಮೆ ಇರಬೇಕು ಎಂಬುದೊಂದು ನಿಯಮ ಜಾರಿಯಲ್ಲಿದೆ. ಹಾಗಾಗಿ ಚನ್ನಪ್ಪನಿಗೆ ೧೯ ವರ್ಷ ವಯಸ್ಸಾಗಿದ್ದರೆ ಆತನ ಹೆಂಡತಿಯಾಗಿ ಬರುವ ಹೆಣ್ಣಿನ ವಯಸ್ಸು ೧೮ ವರ್ಷಕ್ಕಿಂತಲೂ ಕಡಿಮೆ ಇರುತ್ತದೆ. ಹಾಗಾಗಿ ಈ ಬಗೆಯ ನಂಬಿಕೆಗಳು ಬಾಲ್ಯ ವಿವಾಹಕ್ಕೆ ಎಡೆ ಮಾಡಿಕೊಡುವುದರ ಜೊತೆಗೆ ಬಾಲ್ಯವಿವಾಹ ನಿಷೇಧ ಕಾನೂನಿನ ಅನುಷ್ಠಾನಕ್ಕೆ ಬಹು ದೊಡ್ಡ ಪೆಟ್ಟನ್ನು ನೀಡುತ್ತದೆ. ಹೀಗೆ ಸಮಾಜದಲ್ಲಿ ಹಿರಿಯರು ರೂಢಿಸಿಕೊಂಡು ಬಂದ ನಿಯಮಗಳನ್ನು ಚಾಚೂ ತಪ್ಪದೇ ಪಾಲಿಸುತ್ತಿದ್ದಾರದ್ದರಿಂದ ಸಾಂಪ್ರದಾಯಿಕ ನಂಬಿಕೆಗಳು ಬಾಲ್ಯ ವಿವಾಹಕ್ಕೆ ಪ್ರೇರಣೆಯನ್ನು ನೀಡುತ್ತಿರುವುದು ಕಂಡುಬರುತ್ತದೆ.

**ಇ. ಕುಟುಂಬದ ಹಿರಿಯರು ಮರಣಿಸಿದ ಒಂದು ವರ್ಷದಲ್ಲಿಯೇ ವಿವಾಹ ಮಾಡಬೇಕು:** ಇದು ನೇರವಾಗಿ ವಿವಾಹಕ್ಕೆ ಸಂಬಂಧಿಸಿದ್ದಾಗಿದೆ. ಕುಟುಂಬದಲ್ಲಿ ಹಿರಿಯರು ಯಾರಾದರೂ ಮರಣಿಸಿದರೆ, ಮರಣಿಸಿದ ಒಂದು ವರ್ಷದಲ್ಲಿ ಆ ಕುಟುಂಬದಲ್ಲಿ ವಿವಾಹ ಕಾರ್ಯ ನಡೆಯಲೇಬೇಕು ಇಲ್ಲವಾದರೆ ಆ ಕುಟುಂಬಕ್ಕೆ ಕೇಡಾಗುತ್ತದೆ ಎಂಬ ನಂಬಿಕೆ ಬಲವಾಗಿದೆ.

ವ್ಯವಸ್ಥೆಯಲ್ಲಿ ಈ ನಂಬಿಕೆಯ ಕಾರಣದಿಂದ ಬಾಲ್ಯ ವಿವಾಹಗಳು ಇಂದಿಗೂ ನಡೆಯುತ್ತಿವೆ. ಇಂತಹ ನಂಬಿಕೆಗಳಿಂದ ಬಾಲ್ಯ ವಿವಾಹಗಳಿಗೆ ಒಳಗಾದ ಹಲವು ಪ್ರಕರಣಗಳು ಸಂಶೋಧನಾ ವ್ಯಾಪ್ತಿ ಪ್ರದೇಶದಲ್ಲಿ ಕಂಡುಬರುತ್ತವೆ. ವಣೇನೂರು ಗ್ರಾಮದಲ್ಲಿನ ಪೋತಪ್ಪ ಗಾದಿಲಿಂಗಮ್ಮ ಎಂಬ ದಂಪತಿಗಳಿಗೆ ವೆಂಕಟೇಶ ಮತ್ತು ಮರಿಸ್ವಾಮಿ ಎಂಬ ಇಬ್ಬರು ಗಂಡು ಮಕ್ಕಳು ಮತ್ತು ಸಾವಿತ್ರಿ ಮತ್ತು ಗುರುದೇವಿ ಎಂಬ ಇಬ್ಬರು ಹೆಣ್ಣು ಮಕ್ಕಳು. ಇದರಲ್ಲಿ ಇಬ್ಬರು ಹೆಣ್ಣು ಮಕ್ಕಳಿಗೆ ಈಗಾಗಲೇ ವಿವಾಹ ಮಾಡಿದ್ದಾರೆ. ಇನ್ನಿಬ್ಬರು ಗಂಡು ಮಕ್ಕಳು ಶಾಲೆಯನ್ನು ಅರ್ಧಕ್ಕೆ ಬಿಟ್ಟು ಕೂಲಿ ಕೆಲಸಕ್ಕೆ ಹೋಗುತ್ತಿದ್ದಾರೆ. ಇವರ ತಂದೆ ಆಕಸ್ಮಿಕವಾಗಿ ಮರಣಿಸಿದ್ದಾರೆ. ಮರಣಿಸಿದ ಒಂದು ವರ್ಷದೊಳಗೆ ಆ ಕುಟುಂಬದಲ್ಲಿ ಒಂದು ಶುಭಕಾರ್ಯ ನಡೆಯಬೇಕು ಎಂಬುದು ಜನರಲ್ಲಿನ ನಂಬಿಕೆ. ಇದರ ಕಾರಣವಾಗಿ ವೆಂಕಟೇಶ ಮತ್ತು ಮರಿಸ್ವಾಮಿ ಇಬ್ಬರಿಗೂ ಒಂದೇ ಸಾರಿ ಮದುವೆ ಮಾಡಿದ್ದಾರೆ. ಈ ವಿಷಯ ತಿಳಿದು ಆ ಕುಟುಂಬಕ್ಕೆ ಬೇಟಿ ಕೊಟ್ಟಾಗ ಗಾದಿಲಿಂಗಮ್ಮನವರು ಹೇಳಿದ್ದು ಹೀಗೆ "ನಮ್ ಮನ್ಯಾಗ ದುಡಿಯೋರು ಯಾರೂ ಇಲ್ಲ. ನಮ್ ಯಜಮಾನ ಇದ್ದಿದ್ರೆ ಏನೂ ತೊಂದ್ರಿ ಇರ್ತಿರ್ಲಿಲ್ಲ. ಆದ್ರೆ ಆತ ನಮ್ಮನ್ನೆಲ್ಲಾ ಬಿಟ್ಟು ಹೋಗಿಬಿಟ್ಟ. ಏನ್ ಮಾಡಾದು ಮನ್ಯಾಗಿನ ಕೆಲ್ಸಗಳ್ನ ನಾನೊಬ್ಬೆ ನೋಡ್ಕೆಂಡು ಹೋಗ್ಬೇಕಂದ್ರೆ ನನ್ ಕೈಲಿ ಆಗ್ತಿದ್ದಿಲ್ಲ. ಮತ್ತೆ ಮನ್ಯಾಗ ಯಜಮಾನ ತೀರ್ಕೆಂಡು ಒಂದು ವರ್ಸ ತುಂಬೋದ್ರಾಗೇ ಇಬ್ರು ಮಕ್ಳಿಗಿ ಮದುವಿ ಮಾಡಿ ಬಿಡಾನು ಅಂತ ನಮ್ ಅಣ್ಣಂದ್ರು ಹೇಳಿದ್ರು. ನಾನು ಸತೆ ಅದಕ್ಕ ಒಪ್ಪಿದೆ. ಯಾಕಂದ್ರ ಯಜಮಾನ ತೀರ್ಕೆಂಡು ಒಂದು ವರ್ಸದಾಗ ಮದುವಿ ಮಾಡಬೇಕು ಇಲ್ಲಾಂದ್ರೆ ಇನ್ನ ಮೂರು ವರ್ಸ ತನ ಮದುವಿ ಮಾಡಂಗಿಲ್ಲ. ಅಲ್ಲಿತನ ನಾನೊಬ್ಬೇ ಮನ್ಯಾಗಿನ ಕೆಲ್ಸಾನೆಲ್ಲಾ ಮಾಡಾದು ಆಗ್ಲಾರ್ದ ಕೆಲ್ಸ ಅಂತೇಳಿ ಮದುವಿ ಮಾಡಿದ್ವಿ" ಎಂದರು.

ವ್ಯವಸ್ಥೆಯಲ್ಲಿನ ಎಲ್ಲ ಸಮುದಾಯಗಳಲ್ಲಿಯೂ ಈ ಬಗೆಯ ನಂಬಿಕೆ ಕಂಡುಬರುತ್ತದೆ. ಆದರೆ ಈ ನಂಬಿಕೆಯ ಕಾರಣದಿಂದ ಬಾಲ್ಯವಿವಾಹಗಳು ಇನ್ನೂ ಜೀವಂತವಾಗಿವೆ. ಮುಖ್ಯವಾಗಿ ಮೇಲಿನ ಪ್ರಕರಣದಲ್ಲಿ ಹೇಳುವಂತೆ ಕುಟುಂಬದ ಹಿರಿಯರು ಮರಣಿಸಿದ ಒಂದು ವರ್ಷದೊಳಗೆ ಆ ಕುಟುಂಬದಲ್ಲಿ ವಿವಾಹ ಎಂಬ ಶುಭಕಾರ್ಯ ನಡೆಯಲೇ ಬೇಕು. ಇಲ್ಲದಿದ್ದರೆ ಮುಂದಿನ ಮೂರು ವರ್ಷದವರೆಗೆ ವಿವಾಹ ಎಂಬ ಕಾರ್ಯ ಮಾಡುವಂತಿಲ್ಲ ಎಂಬ ನಂಬಿಕೆ ಇಂದಿಗೂ ಜೀವಂತವಾಗಿದೆ. ಈ ನಂಬಿಕೆಯ ಜೀವಂತಿಕೆಯೇ ಚಿಕ್ಕ ಮಕ್ಕಳ ಭವಿಷ್ಯವನ್ನು ಹಾಳು ಮಾಡುತ್ತಿದೆ. ಅಂದರೆ ಮಕ್ಕಳು ವಿವಾಹಕ್ಕೆ ಯೋಗ್ಯವಾಗಿದ್ದಾರೋ ಇಲ್ಲವೋ ಎಂಬುದನ್ನು ಗಮನಿಸದೇ ಚಿಕ್ಕ ವಯಸ್ಸಿನವರಾಗಿದ್ದರೂ ಅವರಿಗೆ ವಿವಾಹ ಮಾಡಲು ಮುಂದಾಗುತ್ತಾರೆ. ಮುಖ್ಯವಾಗಿ ಮೇಲಿನ ಪ್ರಕರಣದಲ್ಲಿ ನಡೆದದ್ದೂ ಸಹ ಹಾಗೆಯೇ. ಗಾದಿಲಿಂಗಮ್ಮನವರ ಇಬ್ಬರೂ ಗಂಡು ಮಕ್ಕಳು ಇನ್ನು ವಿವಾಹ ಯೋಗ್ಯ ವಯಸ್ಸನ್ನು ಹೊಂದಿರದಿದ್ದರೂ ಅವರಿಗೆ ವಿವಾಹ ಮಾಡಲಾಗಿದೆ. ಕಾರಣ ಮೇಲಿನ ನಂಬಿಕೆಯೇ. ಮುಖ್ಯವಾಗಿ ವಿವಾಹದ ಸಂದರ್ಭದಲ್ಲಿ ಗಂಡಿನ ವಯಸ್ಸಿಗಿಂತ ಹೆಣ್ಣಿನ ವಯಸ್ಸು

ತುಂಬಾನೇ ಕಡಿಮೆ ಇರುತ್ತದೆ. ಹಾಗಾಗಿ ಮೇಲಿನ ಪ್ರಕರಣದಲ್ಲಿ ಗಂಡು ಮತ್ತು ಹೆಣ್ಣು ಇಬ್ಬರಿಗೂ ಕಾನೂನುಬದ್ಧವಾಗಿ ವಿವಾಹ ವಯಸ್ಸಾಗದಿದ್ದರೂ ವಿವಾಹವನ್ನು ಮಾಡಲಾಗಿದೆ. ಇದು ಬಾಲ್ಯ ವಿವಾಹವಾಗಿದ್ದು, ಈ ಬಗೆಯ ನಂಬಿಕೆಯ ಕಾರಣದಿಂದ ಬಾಲ್ಯ ವಿವಾಹಗಳು ಇಂದಿಗೂ ನಡೆಯುತ್ತಲೇ ಇವೆ. ಇದು ಬಾಲ್ಯ ವಿವಾಹ ನಿಷೇಧ ಕಾನೂನಿನ ಅನುಷ್ಠಾನಕ್ಕೆ ಬಹುದೊಡ್ಡ ತೊಡಕಾಗಿ ಮಾರ್ಪಟ್ಟಿದೆ.

ಮೇಲಿನ ಪ್ರಕರಣಗಳಲ್ಲಿ ಎಲ್ಲವೂ ಮೂಢನಂಬಿಕೆಗಳಾಗಿದ್ದು, ಇವುಗಳೇ ಬಾಲ್ಯ ವಿವಾಹಗಳಿಗೆ ಪ್ರೇರಣೆಯಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ತನ್ನ ತವರು ಮನೆಯಿಂದ ಹೆಣ್ಣನ್ನು ಮದುವೆ ಮಾಡಿಕೊಂಡು ಬಂದರೆ ಮನೆ ಬೆಳಗುತ್ತದೆ/ಅಭಿವೃದ್ಧಿ ಹೊಂದುತ್ತದೆ ಎಂಬ ಕಾರಣಕ್ಕಾಗಿ ಮತ್ತು ಕಡೆಯಲ್ಲಿ ಹುಟ್ಟಿದವನ ಮದುವೆಯನ್ನು ಕಡೆಯಲ್ಲಿ ಮಾಡಬಾರದು ಎಂಬ ನಂಬಿಕೆಯ ಕಾರಣಕ್ಕಾಗಿಯೋ ಹಾಗೆಯೇ ಕುಟುಂಬದ ಹಿರಿಯರು ಮರಣಿಸಿದ ಒಂದು ವರ್ಷದಲ್ಲಿಯೇ ವಿವಾಹ ಮಾಡಬೇಕು ಎಂಬ ನಂಬಿಕೆಯ ಕಾರಣಕ್ಕಾಗಿಯೋ ಮಾಡಿರುವಂತಹ ಮದುವೆಗಳು ಬಾಲ್ಯ ವಿವಾಹಗಳಾಗಿದ್ದು ಮೂಢನಂಬಿಕೆಯ ಫಲಶ್ರುತಿಗಳಾಗಿವೆ. ಮುಖ್ಯವಾಗಿ ಈ ನಂಬಿಕೆಗಳು ಗ್ರಾಮೀಣ ಭಾಗಗಳಲ್ಲಿ ಜನರ ಜೀವನದ ಭಾಗವಾಗಿ ಹೊರಹೊಮ್ಮಿರುವುದು ಕಂಡುಬರುತ್ತದೆ. ಇದು ಬಾಲ್ಯ ವಿವಾಹಕ್ಕೆ ಪ್ರೇರಣೆ ನೀಡಿರುವುದಂತೂ ಸತ್ಯದ ಸಂಗತಿ. ಇದರಿಂದ ಹೆಣ್ಣುಮಕ್ಕಳ ಜೀವನ ವಿಧಾನವೇ ಬದಲಾಗಿ ಬಿಡುತ್ತದೆ. ಅಂದರೆ ಕುಟುಂಬದಲ್ಲಿ ಬಹು ಬೇಗನೇ ಹಿಂಸೆಗೆ ಒಳಗಾಗುವವಳು ಮಹಿಳೆಯೇ ಆಗಿರುತ್ತಾಳೆ. ವಿವಾಹಕ್ಕೆ ಪುರುಷನಿಗಿಂತ ಹೆಣ್ಣಿನ ವಯಸ್ಸು ಕಡಿಮೆ ಇರಬೇಕು ಎಂಬುದು ವಾಸ್ತವ ಸತ್ಯ. ವ್ಯವಸ್ಥೆಯಲ್ಲಿ ರೂಢಿಯಲ್ಲಿರುವ ಧಾರ್ಮಿಕ ಅಂಶಗಳೂ ಈ ಮೂಢನಂಬಿಕೆಗಳನ್ನು ಗಟ್ಟಿಗೊಳಿಸುವ ಕಾರ್ಯವನ್ನು ಮಾಡುತ್ತಿರುತ್ತವೆ. ಹಾಗಾಗಿಯೇ ಧರ್ಮ, ನಂಬಿಕೆ, ಮೂಢನಂಬಿಕೆ ಮತ್ತು ವಿವಾಹ ಇವುಗಳು ಒಂದಕ್ಕೊಂದು ಮೇಳೈಸಿಕೊಂಡಿರುತ್ತವೆ. ಧರ್ಮ ಮೂಢನಂಬಿಕೆಗಳನ್ನು ಪೋಷಿಸುತ್ತಿರುತ್ತದೆ. ಈ ಮೂಢನಂಬಿಕೆಗಳು ವಿವಾಹ ಸಂಸ್ಥೆಯ ಮೂಲಕ ತನ್ನ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳುತ್ತಿರುತ್ತದೆ. ಇದಕ್ಕೆ ಮೇಲಿನ ಪ್ರಕರಣಗಳೇ ಉತ್ತಮ ಉದಾಹರಣೆಗಳಾಗಿವೆ. ಆದರೆ ಈ ನಂಬಿಕೆಗಳು ಹೆಣ್ಣುಮಕ್ಕಳನ್ನೇ ಕೇಂದ್ರೀಕರಿಸಿರುತ್ತವೆ. ಹಾಗಾಗಿಯೇ ಹೆಣ್ಣುಮಕ್ಕಳು ಇವುಗಳಿಗೆ ಬಹು ಬೇಗನೇ ಬಲಿಯಾಗುತ್ತಾರೆ.

**ಈ. ನಿರ್ಧಿಷ್ಟ ವಯಸ್ಸಿನ ಮೊದಲೇ ಹೆಣ್ಣುಮಕ್ಕಳಿಗೆ ಮದುವೆ ಮಾಡಲೇ ಬೇಕು** : ಕೆಲವು ಜಾತಿ ಸಮುದಾಯಗಳಲ್ಲಿ ೧೮ ವರ್ಷಕ್ಕೂ ಮುನ್ನವೇ ವಿವಾಹವಾಗಬೇಕು. ಇಲ್ಲದಿದ್ದರೆ ಅವರು ಸಮುದಾಯದಿಂದ ಹೊರಗುಳಿಯಬೇಕಾಗುತ್ತದೆ ಎಂಬ ಕಟ್ಟುಪಾಡುಗಳಿರುವುದು ಕಂಡುಬರುತ್ತದೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಚಾಮರಾಜನಗರ ಜಿಲ್ಲೆಯಲ್ಲಿನ ಉಪ್ಪಾರ ಜನಾಂಗದಲ್ಲಿನ ಸಂಪ್ರದಾಯಗಳು. "ಚಾಮರಾಜನಗರ ಜಿಲ್ಲೆಯ ಉಪ್ಪಾರ ಸಮುದಾಯದಲ್ಲಿ ೧೮ ವರ್ಷ ವಯಸ್ಸು ಮೀರಿದ ಹೆಣ್ಣುಮಕ್ಕಳು ವಿವಾಹಕ್ಕೆ ಯೋಗ್ಯರಲ್ಲ

ಎಂಬ ನಂಬಿಕೆಯಿದೆ. ಹೆಣ್ಣುಮಕ್ಕಳು ೧೮ ವರ್ಷ ತುಂಬುವುದಕ್ಕೆ ಮುಂಚಿತವಾಗಿಯೇ ವಿವಾಹ ಮಾಡಿಕೊಳ್ಳಬೇಕು. ಇದು ಅವರ ಸಂಸ್ಕೃತಿಯ ಒಂದು ಭಾಗವಾಗಿದೆ. ಅಂದರೆ ಈ ಸಮುದಾಯದಲ್ಲಿ ೧೮ ವರ್ಷ ಮೀರಿದ ಹುಡುಗಿಯರನ್ನು ವಧುವಾಗಲು ತಿರಸ್ಕರಿಸುತ್ತಾರೆ. ಹಾಗಾಗಿಯೇ ಹೆಣ್ಣುಮಕ್ಕಳು ಇನ್ನು ಚಿಕ್ಕವರಿದ್ದಾಗಲೇ ವಿವಾಹ ಮಾಡುತ್ತಿರುವುದು ಕಂಡುಬರುತ್ತದೆ. ಮುಖ್ಯವಾಗಿ ಭಾರತ ಜ್ಞಾನ ವಿಜ್ಞಾನ ಸಮಿತಿಯು ಜಿಲ್ಲಾಧಿಕಾರಿಯವರ ಬೆಂಬಲದೊಂದಿಗೆ ಸಂಗ್ರಹಿಸಿದ ಮಾಹಿತಿಯ ಪ್ರಕಾರ ೨೦೦೫ರಲ್ಲಿ ಉಪ್ಪಾರ ಕುಟುಂಬಗಳಲ್ಲಿ ೧೦೩ ಬಾಲ್ಯ ವಿವಾಹಗಳು ವರದಿಯಾಗಿದ್ದವು. ಅನಂತರ ೨೦೦೬ರಲ್ಲಿ ೫೮, ೨೦೦೭ರಲ್ಲಿ ೭೭, ೨೦೦೮ ಮತ್ತು ೨೦೦೯ರಲ್ಲಿ ೬೧ ಬಾಲ್ಯ ವಿವಾಹಗಳು ವರದಿಯಾಗಿದ್ದವು"(ಶಿವರಾಜ್ ವಿ ಪಾಟೀಲ್, ೨೦೧೧, ಪು-೨೯). ಇನ್ನು ಚಾಮರಾಜನಗರ ಜಿಲ್ಲೆಯ ಮಕ್ಕಳ ಸಹಾಯವಾಣಿ ಅಧಿಕಾರಿಗಳು ಹೇಳುವಂತೆ "ನಂಜುಂಡಪ್ಪ ವರದಿಯ ಪ್ರಕಾರ ಈ ಜಿಲ್ಲೆ ಹಿಂದುಳಿದಿರುವ ಜಿಲ್ಲೆಯಾಗಿದೆ. ಈ ಪ್ರದೇಶದಲ್ಲಿ ಉಪ್ಪಾರ ಸಮುದಾಯದವರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಈ ಸಮುದಾಯದವರು ವಾಸಿಸುವ ಪ್ರದೇಶಗಳಿಗೆ "ಮೋಳೆ" ಎಂದು ಕರೆಯುತ್ತಾರೆ. ಈ ಜನಾಂಗವು ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯವಾಗಿ ತೀರಾ ಹಿಂದುಳಿದಿದೆ. ಜಿಲ್ಲೆಯಲ್ಲಿ ಉನ್ನತ ಶಿಕ್ಷಣ ಪಡೆದ ಈ ಸಮುದಾಯದ ಸಂಖ್ಯೆ ಶೇ.೧ರಷ್ಟು ದಾಟುವುದಿಲ್ಲ. ಪ್ರಾಥಮಿಕ ಶಿಕ್ಷಣದ ಹಂತದಿಂದಲೇ ಮಕ್ಕಳು ಶಾಲೆಯಿಂದ ಹೊರಗುಳಿಯುವುದು ಕಂಡುಬರುತ್ತದೆ. ಹೆಣ್ಣುಮಕ್ಕಳು ಪ್ರೌಢಶಾಲಾ ಹಂತವನ್ನು ತಲುಪುವುದು ತೀರಾ ವಿರಳ. ಜನಾಂಗದಲ್ಲಿಜಾಳವಾಗಿ ಬೇರೂರಿರುವ ಸಾಂಪ್ರದಾಯಿಕ ಕಟ್ಟಳೆಗಳಿಂದಾಗಿ ಈ ಸಮುದಾಯದವರಲ್ಲಿ ಬಾಲ್ಯ ವಿವಾಹ ಪದ್ಧತಿ ಇನ್ನೂ ಜೀವಂತವಾಗಿದೆ. ಹೆಣ್ಣು ಮಕ್ಕಳು ಕುಟುಂಬದ ಹೊರೆ ಎಂಬ ಮನಸ್ಥಿತಿ ಈ ಸಮುದಾಯದವರ ಪೋಷಕರದ್ದು, ೧೮ ವರ್ಷ ತುಂಬಿದ ಹೆಣ್ಣು ಮಗಳನ್ನು ಯಾರೂ ಮದುವೆಯಾಗುವುದಿಲ್ಲ ಎಂಬ ಅಲಿಖಿತ ಧೋರಣೆ ಬೆಳೆದು ಬಂದಿದೆ. ಜಿಲ್ಲೆಯಲ್ಲಿ ಉಪ್ಪಾರ ಸಮುದಾಯದವರನ್ನು ಹೊರತುಪಡಿಸಿದರೆ, ಹೆಚ್ಚಾಗಿ ಬಾಲ್ಯ ವಿವಾಹ ನಡೆಯುವುದು ಕುರುಬ ಸಮುದಾಯದವರಲ್ಲಿ. ಉಳಿದಂತೆ ಛಲವಾದಿ, ನಾಯಕ, ಸೋಲಿಗರಲ್ಲೂ ಬಾಲ್ಯ ವಿವಾಹಗಳು ನಡೆಯುತ್ತವೆ. ಪ್ರತೀ ಗ್ರಾಮ ಪಂಚಾಯತಿ ಮಟ್ಟದಲ್ಲೂ ಬಾಲ್ಯ ವಿವಾಹ ನಿಷೇಧ ಸಮಿತಿಗಳಿವೆ. ಪಂಚಾಯತಿ ಅಭಿವೃದ್ಧಿ ಅಧಿಕಾರಿ, ಗ್ರಾಮ ಲೆಕ್ಕಿಗ, ಶಾಲಾ ಮುಖ್ಯ ಶಿಕ್ಷಕರು, ಎಸ್.ಡಿ.ಎಮ್.ಸಿ. ಸದಸ್ಯರು, ಸ್ಥಳೀಯ ಸ್ವಯಂಸೇವಾ ಸಂಸ್ಥೆಯ ಪ್ರತಿನಿಧಿಯೊಬ್ಬರು ನಿಷೇಧ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಾರೆ. ಗ್ರಾಮದಲ್ಲಿ ನಡೆಯುವ ಬಾಲ್ಯ ವಿವಾಹದ ಬಗ್ಗೆ ಸಮಿತಿಯ ಎಲ್ಲ ಸದಸ್ಯರಿಗೂ ಮಾಹಿತಿ ಇರುತ್ತದೆ. ಜತೆಗೆ ಅಂಗನವಾಡಿ ಕಾರ್ಯಕರ್ತೆಯರ ಬಳಿ ವಧುವಿನ ವಯಸ್ಸಿನ ಕುರಿತ ನಿಖರ ಮಾಹಿತಿ ಇರುತ್ತದೆ. ಆದರೆ ಗ್ರಾಮ ಮಟ್ಟದ ರಾಜಕೀಯ ಒತ್ತಡದ ಕಾರಣದಿಂದ ಬಹಳಷ್ಟು ಬಾಲ್ಯವಿವಾಹ ಪ್ರಕರಣಗಳು ಬೆಳಕಿಗೆ ಬರುವುದಿಲ್ಲ. ಸತ್ಯ ಬಯಲಾದರೆ ಸ್ಥಳಿಯವಾಗಿ ಸಂಕಷ್ಟಗಳನ್ನು ಎದುರಿಸಬೇಕಾಗುತ್ತದೆ ಎಂಬ ಆತಂಕದಿಂದ ಬಾಲ್ಯ ವಿವಾಹ ನಿಷೇಧ

ಅಧಿಕಾರಿಗಳು ಉನ್ನತಾಧಿಕಾರಿಗಳಿಗೆ ಮಾಹಿತಿ ನೀಡಲು ಹಿಂಜರಿಯುತ್ತಾರೆ. ಹಾಗಾಗಿ ಗ್ರಾಮದಲ್ಲಿ ಬಾಲ್ಯ ವಿವಾಹ ನಡೆಯುತ್ತಿದ್ದರೂ ಮಕ್ಕಳ ಸಹಾಯವಾಣಿ, ಮಕ್ಕಳ ರಕ್ಷಣಾ ಘಟಕ, ಮಕ್ಕಳ ಕಲ್ಯಾಣ ಸಮಿತಿ, ಪೊಲೀಸರಿಗೆ ಮಾಹಿತಿ ನೀಡುವುದಿಲ್ಲ. ಗರ್ಭಿಣಿಯರು ಸರ್ಕಾರದ ಆರೋಗ್ಯ ಸೇವೆ ಪಡೆಯಲು ತಾಯಿಕಾರ್ಡ್ ಅಗತ್ಯ. ಈ ಕಾರ್ಡ್‌ನಲ್ಲಿ ವಯಸ್ಸು ದೃಢೀಕರಿಸುವುದು ಕಡ್ಡಾಯ. ಬಾಲ್ಯ ವಿವಾಹ ಮಾಡಿದ ಪೋಷಕರು ಇಂಥ ಹೆಣ್ಣುಮಕ್ಕಳ ವಯಸ್ಸು ಮರೆಮಾಚುವುದೂ ಉಂಟು. ಹಾಗೆಯೇ ಸ್ಥಳೀಯ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿ ಮತ್ತು ಸಿಬ್ಬಂದಿಗೆ ಗರ್ಭಿಣಿಯರ ವಯಸ್ಸಿನ ಬಗ್ಗೆ ಮಾಹಿತಿ ಇರುವುದಿಲ್ಲ. ಆದರೆ ಅಂಗನವಾಡಿ ಶಾಲೆಯಲ್ಲಿ ಮಾಹಿತಿ ಇರುತ್ತದೆ. ಜನ್ಮ ದಿನಾಂಕನ ಮೂದಿಸುವ ವೇಳೆ ಸಂಬಂಧಪಟ್ಟ ಶಾಲಾ ವರ್ಗಾವಣೆ ಪತ್ರದ ಪರಿಶೀಲನೆ ನಡೆಸುವುದಿಲ್ಲ. ಬಾಲ್ಯ ವಿವಾಹ ತಡೆಗಟ್ಟುವಲ್ಲಿ ಆರೋಗ್ಯ ಇಲಾಖೆಯ ಪಾತ್ರವೂ ಹೆಚ್ಚಿದೆ"(ಪ್ರಜಾವಾಣಿ, ಕರ್ನಾಟಕ ದರ್ಶನ, ಡಿಸೆಂಬರ್ ೨೭, ಪು–೧,೨) ಎಂದು ಹೇಳುತ್ತಾರೆ. ಮೇಲಿನ ಅಂಶಗಳು ಮುಖ್ಯವಾಗಿ ಜಾತಿ ಸಮುದಾಯದಲ್ಲಿನ ಮೂಢನಂಬಿಕೆಗಳನ್ನು ಮತ್ತು ಇವುಗಳು ಸಾಮಾಜಿಕ ಆಚರಣೆಗಳಾಗಿ ಹೇಗೆ ರೂಢಿಗತಗೊಳ್ಳುತ್ತಾ, ಆ ಮೂಲಕ ಗಟ್ಟಿಗೊಳ್ಳುತ್ತಾ ಸಾಗುತ್ತಿವೆ ಎಂಬುದನ್ನು ತಿಳಿಸುತ್ತವೆ. ಮುಖ್ಯವಾಗಿ ಪ್ರತಿಯೊಂದು ಜಾತಿ ಸಮುದಾಯಗಳಲ್ಲೂ ವಿವಾಹಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾದ ಸಂಪ್ರದಾಯಗಳಿರುತ್ತವೆ. ಈ ಸಂಪ್ರದಾಯಗಳನ್ನು ಪ್ರತಿಯೊಬ್ಬರೂ ಪಾಲಿಸಲೇಬೇಕು. ಇವುಗಳನ್ನು ವಿರೋಧಿಸಿದಲ್ಲಿ ಅಥವಾ ತದ್ವಿರುದ್ಧವಾಗಿ ನಡೆದದ್ದೇ ಆದಲ್ಲಿ ಸಮುದಾಯದಿಂದ ಹೊರಗುಳಿಯಬೇಕಾಗುತ್ತದೆ. ಅಂದರೆ ಜಾತಿ ಸಮುದಾಯಗಳ ಪಿತೃಪ್ರಧಾನತೆ ತುಂಬಾ ಬಲಿಷ್ಠವಾಗಿರುತ್ತದೆ. "ಗ್ರಾಮದಲ್ಲಿ ಅತ್ಯಂತ ಢಾಳಾಗಿರುವ ಜಾತಿ ಶ್ರೇಣೀಕೃತ, ವರ್ಗಶ್ರೇಣೀಕೃತ ವ್ಯವಸ್ಥೆಗಳೇ ಒಟ್ಟು ಗ್ರಾಮದ ಪುರುಷಪ್ರಾಧಾನ್ಯತೆಯನ್ನು ರೂಪಿಸುತ್ತವೆ. ಜಾತಿಗಳು ಪುರುಷ ಕೇಂದ್ರಿತವಾಗಿರುವುದರಿಂದ, ಪ್ರತಿಯೊಂದು ಜಾತಿಯು ತನ್ನದೇ ಆದ ಪುರುಷಪ್ರಾಧಾನ್ಯತೆಯನ್ನು ಹೊಂದಿರುತ್ತದೆ; ಹಾಗೆಯೇ ಆಯಾ ಜಾತಿಗನುಗುಣವಾಗಿ ರೂಪುಗೊಂಡ ವರ್ಗಶ್ರೇಣೀಕರಣಗಳು ಕೂಡ ತಮ್ಮದೇ ಆದ ಪುರುಷ ಪ್ರಾಧಾನ್ಯತೆಯನ್ನು ಹೊಂದಿರುತ್ತವೆ. ಒಂದೇ ಜಾತಿಗೆ ಸೇರಿದ ಜನರು ಕೂಡ ಒಂದೇ ಬಗೆಯ ಆರ್ಥಿಕ ಸ್ಥಾನಮಾನಗಳನ್ನು ಹೊಂದಿರುವುದಿಲ್ಲ. ಒಂದೇ ಜಾತಿಯಾಗಿದ್ದರೂ, ಅವರವರ ಆರ್ಥಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಪುರುಷ ಪ್ರಾಧಾನ್ಯತೆಯು ಭಿನ್ನವಾಗಿರುತ್ತದೆ. ಹೀಗೆ ಒಂದು ಗ್ರಾಮದಲ್ಲಿನ ಜಾತಿಗನುಗನುಣವಾದ ಪುರುಷ ಪ್ರಾಧಾನ್ಯತೆಗಳು, ಆಯಾ ಜಾತಿಯೊಳಗಿನ ವರ್ಗಶ್ರೇಣೀಕರಣಕ್ಕೆ ಅನುಗುಣವಾಗಿರುವ ಪುರುಷ ಪ್ರಧಾನ್ಯತೆಗಳು, ಜಾತಿಗನುಗುಣವಾಗಿ ರೂಪುಗೊಂಡ ವರ್ಗಶ್ರೇಣೀಕೃತ ಪುರುಷ ಪ್ರಾಧಾನ್ಯತೆಗಳು – ಈ ತ್ರಿವೇಣಿ ಸಂಗಮದಿಂದ ಏರ್ಪಡುವ ಗ್ರಾಮದ ಪುರುಷ ಪ್ರಧಾನತೆಯು ತುಂಬ ಬಲಾಢ್ಯವಾಗಿರುತ್ತದೆ. ಆಯಾ ಪ್ರಾದೇಶಿಕತೆಗೆ ಅನುಗುಣವಾಗಿ, ಆಯಾ ಪ್ರದೇಶದೊಳಗಿರುವ ಗ್ರಾಮದ ಪುರುಷ ಪ್ರಧಾನತೆಯು ಭಿನ್ನವಾಗಿರುತ್ತದೆ. ಇಂತಹ ಗ್ರಾಮೀಣ ಪ್ರದೇಶಗಳಲ್ಲಿ ಸರಕಾರದಿಂದ

ರೂಪುಗೊಂಡ ಲಿಂಗ ಸಮಾನತೆಯ ಆಶಯವುಳ್ಳ ಯೋಜನೆಗಳು, ಯಥಾವತ್ತಾಗಿ ಜಾರಿಗೊಳ್ಳುತ್ತವೆ ಎಂದು ಹೇಳಲಾಗುವುದಿಲ್ಲ. ಸಂವಿಧಾನಾತ್ಮಕ ನೆಲೆಯಲ್ಲಿ ಅದೆಷ್ಟೇ ಯೋಜನೆಗಳನ್ನು ರೂಪಿಸಿದರೂ, ಗ್ರಾಮದೊಳಗಿನ ಪುರುಷ ಪ್ರಾಧಾನ್ಯತೆಯು ಅದನ್ನು ತಟಸ್ಥಗೊಳಿಸುತ್ತದೆ; ತನ್ನ ಅಗತ್ಯಕ್ಕೆ ತಕ್ಕಂತೆ ಸರಕಾರದ ಯೋಜನೆಗಳನ್ನು ತನ್ನ ಯೋಜನೆಗಳನ್ನಾಗಿ ಮಾರ್ಪಡಿಸಿಕೊಳ್ಳುತ್ತದೆ. ತನ್ನ ಅಪೇಕ್ಷೆಗೆ ತಕ್ಕಂತೆ ಹೊಂದಿಕೊಳ್ಳದವರನ್ನು ಹಾಗೂ ರೂಪುಗೊಳ್ಳದವರನ್ನು ಅಸ್ತಿತ್ವವಿಲ್ಲದಂತೆ ಸಂಪೂರ್ಣವಾಗಿ ಪಾತಾಳಕ್ಕೆ ತಳ್ಳುತ್ತದೆ" (ಶೈಲಜ ಹಿರೇಮಠ, ೨೦೧೪, ಪು-೨೩). ಹಾಗಾಗಿಯೇ ಪಿತೃಪ್ರಧಾನ ವ್ಯವಸ್ಥೆ ಸೃಷ್ಟಿಸಿರುವ ಮೌಲ್ಯಗಳನ್ನು ಕಡ್ಡಾಯವಾಗಿ ಪಾಲಿಸಲೇ ಬೇಕು. ಮುಖ್ಯವಾಗಿ ಇಂತಹ ಜಾತಿ ಸಮುದಾಯಗಳ ದೃಷ್ಟಿಯಲ್ಲಿ ಸಂವಿಧಾನ ಬದ್ಧ ಕಾನೂನು ಎಂಬುದು ಇರುವುದೇ ಇಲ್ಲ. ಬದಲಾಗಿ ಅವರೇ ಒಂದು ಪ್ರತ್ಯೇಕವಾದ ಅಘೋಷಿತ ಸಂವಿಧಾನವನ್ನು ರಚಿಸಿಕೊಂಡಿರುತ್ತಾರೆ. ಈ ನಿಯಮಗಳು ಸಂಪ್ರದಾಯ ಆಚರಣೆಗಳ ರೂಪದಲ್ಲಿ ಪಾಲಿತವಾಗುತ್ತಿರುತ್ತವೆ. ಹಾಗಾಗಿಯೇ ಅಲ್ಲಿನ ನಿಯಮಗಳು ತುಂಬಾ ಬಲಿಷ್ಠವಾಗಿರುತ್ತವೆ.

ಚಾಮರಾಜನಗರ ಜಿಲ್ಲೆಯಲ್ಲಿ ಉಪ್ಪಾರ ಸಮುದಾಯದವರಲ್ಲಿ ಹೆಣ್ಣು ಮಕ್ಕಳಿಗೆ ೧೮ ವರ್ಷವೇ ಅಂತಿಮವಾಗಿರುತ್ತದೆ. ಮುಖ್ಯವಾಗಿ ಹೆಣ್ಣನ್ನು ಹೆತ್ತ ತಂದೆ ತಾಯಂದಿರಿಗೆ ತಮ್ಮ ಮಗಳಿಗೆ ೧೮ ವರ್ಷದೊಳಗೆ ವಿವಾಹ ಮಾಡಬೇಕು ಎಂಬ ಒತ್ತಡವಿದ್ದರೆ ಮೀರಿದ ಗಂಡಿನ ತಂದೆ ತಾಯಂದಿರು ೧೮ ವರ್ಷದೊಳಗಿನ ಹೆಣ್ಣನ್ನೇ ತಮ್ಮ ಮನೆಯ ಸೊಸೆಯನ್ನಾಗಿ ತಂದುಕೊಳ್ಳಬೇಕು ಎಂಬ ಒತ್ತಡ ಅವರಲ್ಲಿರುತ್ತದೆ. ಹಾಗಾಗಿಯೇ ಈ ಸಮುದಾಯದವರಲ್ಲಿ ಬಾಲ್ಯ ವಿವಾಹಗಳು ನಡೆಯುತ್ತಿವೆ. ಈ ವಯಸ್ಸಿನ ಮಿತಿಯ ಹಿಂದೆ ಬಹುದೊಡ್ಡ ರಾಜಕಾರಣವಿರುವುದು ಕಂಡುಬರುತ್ತದೆ. ಅಂದರೆ ಈ ಸಂಪ್ರದಾಯದ ಹಿಂದೆ ಹೆಣ್ಣು ಮಗುವಿಗೆ ೧೮ ವರ್ಷ ತುಂಬುದರೊಳಗೆ ವಿವಾಹ ಮಾಡುವುದರಿಂದ ಆಕೆ ಮಾನಸಿಕವಾಗಿ ಚಂಚಲವಾಗಿರುವುದಿಲ್ಲ ಮತ್ತು ದೈಹಿಕವಾಗಿ ಶುದ್ಧಳಾಗಿರುತ್ತಾಳೆ ಎಂಬ ಕಲ್ಪನೆ ಇದೆ. ಹಾಗಾಗಿ ಚಿಕ್ಕ ಮಕ್ಕಳಿಗೆ ವಿವಾಹ ಮಾಡುವ ಮೂಲಕವೇ ತನ್ನ ಸಮುದಾಯದ ಜಾತಿ ಶುದ್ಧತೆಯನ್ನು ಎತ್ತಿ ಹಿಡಿಯುತ್ತಿರುತ್ತದೆ. ವಾಸ್ತವದಲ್ಲಿ ಕೆಳ ಜಾತಿ, ಮಧ್ಯಮ ಜಾತಿಗಳಲ್ಲಿಯೇ ಈ ಬಾಲ್ಯ ವಿವಾಹ ಪದ್ಧತಿ ಹೆಚ್ಚಾಗಿರುವುದು ಕಂಡುಬರುತ್ತದೆ. ಅಂದರೆ ಉನ್ನತ ಜಾತಿ ಎಂದು ಗುರುತಿಸಲ್ಪಟ್ಟಿರುವ ಬ್ರಾಹ್ಮಣ ಜಾತಿಯಲ್ಲಿ ಬಾಲ್ಯ ವಿವಾಹಗಳು ನಡೆಯುತ್ತಿರುವ ಉದಾಹರಣೆಗಳು ದೊರೆಯುವುದಿಲ್ಲ. ಇದಕ್ಕೆ ಕಾರಣವೂ ಇದೆ. ವಸಾಹತು ಸಂದರ್ಭದಲ್ಲಿ ಬ್ರಾಹ್ಮಣ ಸಮುದಾಯದಲ್ಲಿ ಬಾಲ್ಯ ವಿವಾಹ ಪದ್ಧತಿ ಹೆಚ್ಚಾಗಿ ರೂಢಿಯಲ್ಲಿತ್ತು. ಹಾಗಾಗಿ ಅಂದು ಬಾಲ್ಯ ವಿವಾಹ ನಿಷೇಧ ಕಾಯಿದೆಯನ್ನು ಜಾರಿಗೆ ತರುವ ಸಂದರ್ಭದಲ್ಲಿ ವಿರೋಧಗಳನ್ನು ವ್ಯಕ್ತಪಡಿಸಿದರು. ಹಾಗೆಯೇ ಸಮಾಜದಲ್ಲಿನ ಅನಿಷ್ಟ ಪದ್ಧತಿಗಳ ವಿರುದ್ಧ ಹೋರಾಟ ನಡೆಸಿದವರೆಲ್ಲರೂ ಉನ್ನತ ಜಾತಿಗೆ ಸೇರಿದವರೇ ಆಗಿದ್ದಾರೆ. ಹಾಗಾಗಿಯೇ ಬಹಳಷ್ಟು

ವಿರೋಧಗಳು ವ್ಯಕ್ತವಾದವು. ಆದರೆ ಈ ವಿರೋಧಗಳ ನಡುವೆಯೂ ನಿಷೇಧ ಕಾಯಿದೆ ಜಾರಿಯಾಯಿತು. ನಂತರದ ಬೆಳವಣಿಗೆಯಲ್ಲಿ ಬ್ರಾಹ್ಮಣ ಸಮುದಾಯದಲ್ಲಿ ಈ ವಿವಾಹ ಪದ್ಧತಿ ನಿಧಾನವಾಗಿ ಮರೆಯಾಯಿತು ಎಂದು ಹೇಳಬಹುದು. ಏಕೆಂದರೆ ವೇದಗಳ ಕಾಲದಿಂದಲೂ ಶಿಕ್ಷಣಕ್ಕೆ ತೆರೆದುಕೊಂಡವರು ಬ್ರಾಹ್ಮಣರೇ ಆಗಿದ್ದಾರೆ. ಹಾಗಾಗಿ ವ್ಯವಸ್ಥೆಯಲ್ಲಿ ಏನೇ ಬದಲಾವಣೆಗಳು ಸಂಭವಿಸಿದರೂ ಅವುಗಳನ್ನು ಮೊದಲು ಈ ಸಮುದಾಯವೇ ಅಳವಡಿಸಿಕೊಂಡಿತು. ಹಾಗಾಗಿ ಆಧುನೀಕರಣ, ಜಾಗತೀಕರಣದ ಎಲ್ಲ ಬದಲಾದ ಅಂಶಗಳನ್ನು ಮೊದಲು ಅಳವಡಿಸಿಕೊಂಡದ್ದು ಈ ಸಮುದಾಯವೇ ಎಂದು ಹೇಳಬಹುದು. ಹಾಗಾಗಿ ಇಂದು ಈ ಸಮುದಾಯದಲ್ಲಿ ಹೆಣ್ಣುಮಕ್ಕಳಿಗೆ ಮೊದಲು ಶಿಕ್ಷಣವನ್ನು ಕೊಡಿಸುತ್ತಾರೆ. ನಂತರ ಅವರಿಗೆ ಉದ್ಯೋಗದ ಭದ್ರತೆಗಾಗಿ ಸಿದ್ಧತೆ ನಡೆಸುತ್ತಾರೆ. ಉದ್ಯೋಗ ದೊರೆತ ನಂತರವೇ ವಿವಾಹದ ಬಗೆಗೆ ಪ್ರಸ್ತಾಪವಾಗುತ್ತದೆ. ಹಾಗಾಗಿ ಬ್ರಾಹ್ಮಣ ಸಮುದಾಯದಲ್ಲಿ ಹುಡುಗಿಗೆ ೨೫, ೩೦ ವರ್ಷ ದಾಟಿದರೂ ವಿವಾಹದ ಬಗೆಗೆ ಯಾವುದೇ ರೀತಿಯಲ್ಲಿ ಯೋಚಿಸುವುದಿಲ್ಲ. ಈ ವಯಸ್ಸು ವಿವಾಹ ಯೋಗ್ಯ ವಯಸ್ಸೇ ಆಗಿರುತ್ತದೆ. ಅಂದರೆ ಬಾಲ್ಯ ವಿವಾಹ ಎಂಬುದರ ಬಗೆಗೆ ಈ ಸಮುದಾಯ ಅಷ್ಟೊಂದು ಮಹತ್ವ ಕೊಡುವುದಿಲ್ಲ. ಇದು ಈ ಸಮುದಾಯದಲ್ಲಿ ಆದಂತಹ ಮಹತ್ವದ ಬೆಳವಣಿಗೆ ಎಂದು ಹೇಳಬಹುದು. ಆದರೆ ಯಾವ ಸಮುದಾಯ ವಿವಾಹದ ವಿಷಯದಲ್ಲಿ ಹೆಣ್ಣಿಗೆ ಕಟ್ಟುಪಾಡುಗಳನ್ನು ಹಾಕಿತ್ತೋ ಅದೇ ಸಮುದಾಯ ಈ ಕಟ್ಟುಪಾಡುಗಳನ್ನು ಮುರಿದು ಮುಂದುವರೆದಿದೆ. ಹಾಗೆಯೇ ಮಹಿಳಾ ಉದ್ಯೋಗವನ್ನು ಒಂದು ನೆಲೆಯಲ್ಲಿ ಒಪ್ಪಿಕೊಂಡಿದೆ ಎಂದು ಹೇಳಬಹುದು. ಆದರೆ ಕೆಳಜಾತಿ, ಕೆಳವರ್ಗ, ಮಧ್ಯಮ ಜಾತಿಗಳಲ್ಲಿ ಮತ್ತು ಹಿಂದುಳಿದ ಜನಾಂಗಗಳಲ್ಲಿ ಜಾತಿಯೇ ಪ್ರಮುಖ ಪ್ರಶ್ನೆಯಾಗಿರುವುದರಿಂದ ಜಾತಿ ಶುದ್ಧತೆಯನ್ನು ನಿರೂಪಿಸಲು ತಮ್ಮ ಕುಟುಂಬದ ಹೆಣ್ಣು ಮಕ್ಕಳಿಗೆ ಬಹು ಬೇಗನೇ ವಿವಾಹ ಮಾಡುತ್ತಿರುವುದು ಕಂಡು ಬರುತ್ತದೆ. ಈ ಕಟ್ಟುಪಾಡುಗಳು ಮಾತ್ರ ತಳ ಸಮುದಾಯಗಳಲ್ಲಿ ಇನ್ನೂ ಜೀವಂತವಾಗಿವೆ. ಹಾಗಾಗಿ ಇಂದಿಗೂ ಬಾಲ್ಯ ವಿವಾಹಗಳು ಕೆಳ ಸಮುದಾಯಗಳಲ್ಲಿ ನಡೆಯುತ್ತಲೇ ಇವೆ. ಈ ಸಾಂಪ್ರದಾಯಿಕ ನಂಬಿಕೆಗಳು ಬಾಲ್ಯ ವಿವಾಹ ನಿಷೇಧ ಕಾನೂನಿನ ಅನುಷ್ಠಾನಕ್ಕೆ ಬಹುದೊಡ್ಡ ತೊಡಕಾಗಿದೆ. ಇನ್ನು ಕೆಲವು ಸಂಪ್ರದಾಯಗಳು ಒಂದು ಕುಟುಂಬದ ಹಿತಾಸಕ್ತಿಯನ್ನು ಹೊರತುಪಡಿಸಿ, ಇಡೀ ಊರಿನ ಹಿತಾಸಕ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ನಡೆಯುತ್ತವೆ.

ರಾಜ್ಯದಲ್ಲಿ ಮಳೆಯಾಧಾರಿತ ಕೃಷಿ ಕುಟುಂಬಗಳೇ ಅಧಿಕವಾಗಿವೆ. ಹಾಗಾಗಿ ಸರಿಯಾದ ಕಾಲಕ್ಕೆ ಮಳೆ ಬಾರದಿದ್ದರೆ, ರೈತರು ಆತಂಕಕ್ಕೆ ಈಡಾಗುತ್ತಾರೆ. ಈ ಕಾರಣಕ್ಕಾಗಿ ಸರಿಯಾದ ಸಮಯಕ್ಕೆ ಮಳೆ ಬರಲೆಂಬುದು ಜನರ ನಿರೀಕ್ಷೆಯಾಗಿರುತ್ತದೆ. ಒಂದುವೇಳೆ ಮಳೆ ಬಾರದಿದ್ದರೆ, ಮೂಢನಂಬಿಕೆಗಳಿಗೆ ಬಲಿಯಾಗಿ ಹಲವಾರು ಆಚರಣೆಗಳನ್ನು ಮಾಡುವುದಕ್ಕೆ ಮುಂದಾಗುತ್ತಾರೆ. ಅಂದರೆ ಕತ್ತೆಗಳ ಮದುವೆ, ಕಪ್ಪೆಗಳ ಮದುವೆ ಮುಂತಾಗಿ ಮಾಡುವುದರ

ಮೂಲಕ ಮಳೆರಾಯನನ್ನು ಆಹ್ವಾನಿಸುವ ಕೆಲಸವನ್ನು ಮಾಡುತ್ತಾರೆ. ಇದೊಂದು ಜನರ ಮೂಢನಂಬಿಕೆಯಷ್ಟೇ. ಆದರೆ ಮಳೆ ಬಂದೇ ಬರುತ್ತದೆ ಎಂದು ನಿಖರವಾಗಿ ಹೇಳಲು ಅವರಿಗೆ ಸಾಧ್ಯವಿಲ್ಲ. ಹಾಗೆಯೇ ಇದೇ ಸಾಲಿನಲ್ಲಿ ಸೇರುವ ಇನ್ನೊಂದು ಪ್ರಕಾರದ ಮದುವೆಯೆಂದರೆ, ಚಿಕ್ಕ ಮಕ್ಕಳ ಮದುವೆಯನ್ನು ಮಾಡಿದರೆ ಮಳೆ ಬರುತ್ತದೆ ಎಂಬುದು ಜನರ ನಂಬಿಕೆ. ಅದೂ ಇಬ್ಬರು ಗಂಡುಮಕ್ಕಳ ನಡುವೆ. ಈ ಮದುವೆಯಲ್ಲಿ ಹೆಣ್ಣುಮಗುವಿನ ಪಾತ್ರವಿರುವುದಿಲ್ಲ. ಈ ಬಗೆಯ ವಿವಾಹ ಚಿಕ್ಕಮಗಳೂರಿನ ಗವನಹಳ್ಳಿಯಲ್ಲಿ ನಡೆದಿರುವುದು ಪತ್ರಿಕೆಗಳಲ್ಲಿ ವರದಿಯಾಗಿದೆ. "ಗವನಹಳ್ಳಿಯ ಮುರಳೀಧರರಾಜು ಅವರ ಮಗ ೬ನೇ ತರಗತಿಯ ಮನೋಜ್ ಮದುಮಗ, ಯೋಗೀಶ್ ರಾಜು ಅವರ ಮಗ ಗುರು ಮದುವಣಗಿತ್ತಿ. ಇವರಿಬ್ಬರ ಮದುವೆ ಶಾಸ್ತ್ರಗಳು ಆರಂಭವಾಗಿದ್ದು ಮದುವೆಯ ೯ ದಿನಗಳ ಮುಂಚೆಯೇ. ಹುಣ್ಣಿಮೆಯ ರಾತ್ರಿಯಂದು ಮದುವೆ ಮಾಡುವುದು ತಲೆತಲಾಂತರದಿಂದ ಬಂದ ಪದ್ಧತಿ. ಕೆಲ ವರ್ಷಗಳಿಂದ ಈ ಆಚರಣೆ ನಿಂತು ಹೋಗಿದ್ದು, ಈ ಬಾರಿ ಬರ ಪರಿಸ್ಥಿತಿ ಇರುವುದರಿಂದ ಗ್ರಾಮಸ್ಥರೆಲ್ಲಾ ಸೇರಿಕೊಂಡು ಮಕ್ಕಳ ಮದುವೆ ಸಂಪ್ರದಾಯಕ್ಕೆ ಮತ್ತೆ ಚಾಲನೆ ನೀಡಿದ್ದಾರೆ. ಊರು ಹೊರಗಿನ ಕೊಳವೆಬಾವಿ ಬಳಿ ಗಂಗೆಪೂಜೆ ಸಲ್ಲಿಸಿ ಮದುವೆ ಶಾಸ್ತ್ರ ಆರಂಬಿಸಲಾಯಿತು. ಅರ್ಚಕ ರವಿ ಸಾರಥ್ಯದಲ್ಲಿ ರಾತ್ರಿ ೧೦:೩೦ಕ್ಕೆ ಮಾಂಗಲ್ಯಧಾರಣೆ ನಡೆಯಿತು. ಬಾಲ್ಯವಿವಾಹ ಎಂದು ಯಾರೂ ಈ ಮದುವೆ ತಡೆಯಲಿಲ್ಲ. ಸುಮಾರು ೫೦೦ ಜನರ ಸಮ್ಮುಖದಲ್ಲಿ ಈ ಮಕ್ಕಳು ಮಳೆ, ಬೆಳೆ, ಊರಿನ ಸುಭೀಕ್ಷೆಗಾಗಿ ಮದುವೆಯಾಗಿಯೇ ಬಿಟ್ಟರು"(ವಿಜಯ ಕರ್ನಾಟಕ ದಿನಪತ್ರಿಕೆ, ೨೭ ಮಾರ್ಚ್ ೨೦೧೩). ಇದು ಇಬ್ಬರು ಗಂಡು ಮಕ್ಕಳ ವಿವಾಹವಾದರೂ ಇದು ಅಂತಿಮವಾಗಿ ಬಾಲ್ಯವಿವಾಹವನ್ನು ಸಾಂಕೇತೀಸುತ್ತದೆ. ಮುಖ್ಯವಾಗಿ ಇಂತಹ ವಿವಾಹಗಳು ಗ್ರಾಮೀಣ ಭಾಗಗಳಲ್ಲಿ ಇಂದಿಗೂ ನಡೆಯುತ್ತಲೇ ಇವೆ. ಇಂತಹ ವಿವಾಹ ಪದ್ಧತಿಗಳು ಎಳೆಯ ವಯಸ್ಸಿನ, ಆಟವಾಡಿಕೊಂಡು ಇರಬೇಕಾದ ಮಕ್ಕಳ ಮೇಲೆ ವಿವಾಹವೆಂಬುದು ಒತ್ತಡವನ್ನು ಸೃಷ್ಟಿಸುತ್ತದೆ. ಆದರೆ ಹೊರ ಪ್ರಪಂಚಕ್ಕೆ ತಿಳಿಯುವುದು ಅತ್ಯಂತ ವಿರಳವೆಂದೇ ಹೇಳಬಹುದು. ಮಾಧ್ಯಮಗಳು ಇಂತಹ ಘಟನೆಗಳನ್ನು ಹೊರಹಾಕಿದಾಗ ಮಾತ್ರ ಸಮಾಜದ ಎಲ್ಲ ಜನರಿಗೂ ತಿಳಿಯುತ್ತದೆ. ಒಟ್ಟಾರೆಯಾಗಿ ಸಾಂಪ್ರದಾಯಿಕ ನಂಬಿಕೆಗಳು ಬಾಲ್ಯ ವಿವಾಹಗಳಿಗೆ ಪ್ರಮುಖ ಕಾರಣಗಳಾಗಿ ಮಾರ್ಪಟ್ಟಿವೆ. ಹಾಗೆಯೇ ಇವುಗಳು ಬಾಲ್ಯ ವಿವಾಹ ನಿಷೇಧ ಕಾಯಿದೆಯ ಅನುಷ್ಠಾನಕ್ಕೆ ಬಹುದೊಡ್ಡ ತೊಡಕನ್ನುಂಟು ಮಾಡುತ್ತಿವೆ.

### ೯.೫. ವಲಸೆ ಕಾರಣಗಳು

ವಲಸೆಯು ಕೂಡ ಬಾಲ್ಯ ವಿವಾಹ ನಿಷೇಧ ಕಾಯಿದೆಯ ಅನುಷ್ಠಾನಕ್ಕೆ ತೊಡಕಗಿ ಮಾರ್ಪಟ್ಟಿದೆ. ಮುಖ್ಯವಾಗಿ ಉತ್ತರ ಕರ್ನಾಟಕದ ಜನರು ಉದ್ಯೋಗವನ್ನರಸಿ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಅಂತಹ ಸಂದರ್ಭದಲ್ಲಿ ತಮ್ಮ ಮಗಳ ಮದುವೆಯನ್ನು ಬಹು ಬೇಗನೇ ಮಾಡಿ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುವುದು ಮತ್ತು ಉದ್ಯೋಗವನ್ನರಸಿ

ಬೇರೆ ಸ್ಥಳಗಳಿಗೆ ಹೋಗುವುದು ಅವರ ಮುಖ್ಯ ಉದ್ದೇಶವಾಗಿರುತ್ತದೆ. ಹಾಗಾಗಿಯೇ ಉದ್ಯೋಗವನ್ನರಸಿ ವಲಸೆ ಹೋಗುವ ಕುಟುಂಬಗಳಲ್ಲಿ ಬಾಲ್ಯ ವಿವಾಹಗಳು ನಡೆಯುವುದು ಸಾಮಾನ್ಯ ಸಂಗತಿಯಾಗಿದೆ. ಅಂದರೆ ಕುಟುಂಬದ ಸದಸ್ಯರೆಲ್ಲರೂ ವಲಸೆ ಹೋದಾಗ ಮನೆಯಲ್ಲಿ ಹೆಣ್ಣುಮಕ್ಕಳನ್ನು ಮಾತ್ರ ಬಿಟ್ಟು ಹೋಗುವುದಿಲ್ಲ ಹಾಗೆಯೇ ತಮ್ಮ ಒಂದೆ ವಲಸೆ ಸ್ಥಳಕ್ಕೂ ಕರೆದುಕೊಂಡು ಹೋಗುವುದಿಲ್ಲ. ಈ ಎರಡೂ ಸ್ಥಳಗಳಲ್ಲಿ ಅವರನ್ನು ಬಿಟ್ಟು ಹೋಗುವುದರಿಂದ ತಂದೆ ತಾಯಿಗೆ ಆತಂಕ ಸೃಷ್ಟಿಯಾಗುತ್ತದೆ. ಅವರು ವಲಸೆ ಹೋಗುವುದರ ಒಳಗಾಗಿ ತಮ್ಮ ಮಕ್ಕಳ ಮದುವೆಯನ್ನು ಮಾಡಿಬಿಡುತ್ತಾರೆ. ಇಲ್ಲದಿದ್ದರೆ ಮಕ್ಕಳನ್ನು ಸುರಕ್ಷಿತವಾಗಿ ಕಾಪಾಡಿಕೊಳ್ಳುವ ಆತಂಕ ಎದುರಾಗುತ್ತದೆ. ಹಾಗೆಯೇ ಹೆಣ್ಣುಮಕ್ಕಳು ಬೇರೆ ದಾರಿ (ಪ್ರೀತಿ,ಪ್ರೇಮ) ಹಿಡಿದರೆ ಹೇಗೆ? ಎಂಬುದು ಅವರ ಆತಂಕವಾಗಿರುತ್ತದೆ. ಹಾಗಾಗಿ ಕುಟುಂಬ ಸದಸ್ಯರು ಉದ್ಯೋಗವನ್ನರಸಿ ಬೇರೆ ಬೇರೆ ಸ್ಥಳಗಳಿಗೆ ತೆರಳುವ ಮುಂಚೆಯೇ ವಿವಾಹದ ಮಾಡಿಬಿಡುವ ಕೆಲಸಕ್ಕೆ ಮುಂದಾಗುತ್ತಾರೆ. ಇಲ್ಲಿ ತಮ್ಮ ಮಕ್ಕಳ ವಯಸ್ಸಿನ ಬಗೆಗೆ ಯಾವುದೇ ರೀತಿಯ ಪರಿವೇ ಇರುವುದಿಲ್ಲ. ಹಾಗಾಗಿ ಇಂತಹ ಕುಟುಂಬಗಳಲ್ಲಿ ಬಾಲ್ಯ ವಿವಾಹಗಳು ನಡೆಯುತ್ತಿರುವುದು ಕಂಡು ಬರುತ್ತವೆ. ಅಧ್ಯಯನ ಕ್ಷೇತ್ರದ ನಾಲ್ಕು ಜಿಲ್ಲೆಗಳಲ್ಲಿ ಈ ಬಗೆಯ ಪ್ರಕರಣಗಳು ದೊರೆತಿದ್ದು, ಅವುಗಳನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಮರಿಯಮ್ಮನಹಳ್ಳಿ ತಾಂಡಾದ ರವೀಂದ್ರನಾಯ್ಕ ಮತ್ತು ಲಕ್ಷ್ಮಿಬಾಯಿ ಇವರು ತಮ್ಮ ಮಗಳಿಗೆ ಚಿಕ್ಕ ವಯಸ್ಸಿನಲ್ಲಿ ವಿವಾಹ ಮಾಡಿ, ತಾವು ಕೆಲಸವನ್ನರಸಿ ಕಬ್ಬು ಬೆಳೆದ ಪ್ರದೇಶಗಳಿಗೆ ತೆರಳಿರುವ ಸಂಗತಿ ತಿಳಿದು ಬಂದಿದ್ದರಿಂದ ಅವರನ್ನು ಭೇಟಿಯಾಗಿ ಮಾತನಾಡಿಸಿದಾಗ ಅವರು ಹೇಳಿದ್ದು ಹೀಗೆ "ನಾವು ಬಾಳ ಬಡವ್ರು ಐದೀವಿ. ಇಲ್ಲಿ ದುಡಿಯಾಕ ಕೆಲ್ಸಾನೇ ಇಲ್ಲ. ಮತ್ತೆ ಜೀವ್ನ ಹೆಂಗ ನಡ್ಸೋದು. ಪ್ರತೀ ವರ್ಸ ಕಬ್ಬನ ಸೀಜನ್ ದಾಗ ಬ್ಯಾರೆ ಬ್ಯಾರೆ ಊರಿಗಿ ಕಬ್ಬು ಕಡಿಯಾಕ ಹೋಗ್ತೀವಿ. ಹಂಗ ಹೋದಾಗ ಮನ್ಯಾಗ ಮಗಳ್ನ ಒಬ್ಬನ್ನೇ ಬಿಟ್ಟು ಹೋಗಾಕ ಬರಂಗಿಲ್ಲ. ಯಾಕಂದ್ರ ಊರಾಗಿನ ಜನ ಒಳ್ಳೇರಲ್ಲ. ಮಗ್ಳಿಗಿ ಏನಾದ್ರೂ ಮಾಡಿಬಿಟ್ರೆ ಅಂತ ಭಯ. ಮತ್ತೆ ನಾವು ಕಬ್ಬು ಕಡಿಯಾಕ ಹೋದಲ್ಲಿಗಿ ಕರ್ಕಂಡು ಹೋಗಾಕೂ ಆಗಂಗಿಲ್ಲ. ಯಾಕಂದ್ರೆ ಕೈಗೆ ಬಂದ ಹೆಣ್ಮಗಳ್ನ ಊರೂರು ಸುತ್ಸೋದು ಚೆನ್ನಾಗಿರಲ್ಲ. ಹಂಗಾಗಿ ಅವ್ಳಿಗಿ ಮದುವಿ ಮಾಡಿ ಬಿಟ್ರೆ ಆಕಿ ಜವಾಬ್ದಾರಿ ಗಂಡನ ಕಡಿಗಿ ಇರ್ತೈತಲ್ಲಾ ಅಂತ ತಿಳ್ದು ಮದುವಿ ಮಾಡಿದ್ವಿ" ಎಂದರು.

ಗದಗ ತಾಲೂಕಿನ ಚಿಕ್ಕೊಪ್ಪ ಗ್ರಾಮದ ರೇವಣಪ್ಪ ಎಂಬುವವರೂ ಸಹ ತಮ್ಮ ಕುಟುಂಬ ಸಮೇತ ಉದ್ಯೋಗವನ್ನರಸಿ ಬೇರೆ ಬೇರೆ ಸ್ಥಳಗಳಿಗೆ ಹೋಗುವುದರಿಂದ ತಮ್ಮ ಮಕ್ಕಳ ಮದುವೆಯನ್ನು ಬಹು ಬೇಗನೇ ಮಾಡಿದ್ದಾರೆ. ಇವರು ಮಾಡಿರುವುದು ಬಾಲ್ಯವಿವಾಹವಾದರೂ ಅದು ಅವರಿಗೆ ತಿಳಿದಿಲ್ಲ. ಬದಲಾಗಿ ಅವರ ಆಶಯ ಪೂರ್ಣಗೊಳ್ಳಬೇಕು ಅಷ್ಟಕ್ಕೆ ಮಾತ್ರ ಸೀಮಿತರಾಗಿದ್ದಾರೆ. ಇವರೇ ಹೇಳುವಂತೆ " ನಾವು ಪ್ರತೀ

ವರ್ಸ ಗುಳೆ ಹೋಗ್ತೀವಿ. ಸುಮಾರು ಎರಡು ಮೂರು ತಿಂಗ್ಳ ಅಲ್ಲೇ ಇದ್ದು ಬರ್ತೀವಿ. ಅಂತಾದ್ರಾಗ ವಯಸ್ಸಿಗಿ ಬಂದ ಹೆಣ್ಮಕ್ಕಳ್ನ ಕಟ್ಕೆಂಡು ಹೋಗಾದು ಅಂದ್ರೆ ಬಾಳ ತ್ರಾಸು. ಯಾಕಂದ್ರೆ ಗೊತ್ತು ಪರಿಚಯ ಇಲ್ದೇ ಇರೋ ಊರುಗುಳಿಗಿ ಹೋಗ್ತೀವಿ. ಅಲ್ಲಿ ಜನ ಹೆಂಗಿರ್ತಾರೋ ಏನೋ. ನಾವು ಕೆಲ್ಸ ಮಾಡಾದನ್ನ ಬಿಟ್ಟು ಹೆಣ್ಮಕ್ಕಳ್ನ ನೋಡಿಕೆಂಡು ಕುಂದ್ರಬೇಕಾಗತೈತಿ. ಹಂಗಂತ ಮನ್ಯಾಗೇ ಬಿಟ್ಟು ಹೋದ್ರೆ ನಮ್ ಜೀವ ಇಲ್ಲೇ ಇರ್ತೈತಿ. ಯಾಕಂದ್ರೆ ವಯಸ್ಸಿಗಿ ಬಂದ ಹೆಣ್ಮಗ್ಳು ಯಾರು ಏನು ಮಾಡಿಬಿಡ್ತಾರೋ? ಹೆಂಗ ಐದಾಳೋ ಅಂತ ಚಿಂತಿ ಆಗತಿರ್ತೈತಿ. ಹಂಗಾಗಿ ಇದೆಲ್ಲಾ ಏನೂ ಬ್ಯಾಡ ಅಂತೇಳಿ, ಎಷ್ಟೇ ಕಷ್ಟ ಆಗ್ಲಿ ಈ ಸಾರಿ ಮದುವಿ ಮಾಡೇ ಬಿಡಾನು ಅಂತ ನಿರ್ಧಾರ ಮಾಡಿ, ಮಗಳ್ದು ಮದುವಿ ಮಾಡಿದೆ. ಈಗ ನಾವು ಎಲ್ಲಿಗೋದ್ರೂ ಯಾರ ಚಿಂತೀನೂ ಇಲ್ಲ. ಮತ್ತೆ ಮಗ್ಳು ಗಂಡನ ಮನ್ಯಾಗ ಆರಾಮಾಗಿ ಐದಾಳ" ಎಂದರು.

ಹೀಗೆ ಉದ್ಯೋಗವನ್ನರಸಿ ವಲಸೆ ಹೋಗುವ ಕುಟುಂಬಗಳಲ್ಲಿನ ಸಮಸ್ಯೆಗಳು ತುಂಬಾ ಭಿನ್ನವಾಗಿರುವುದನ್ನು ಕಾಣಬಹುದು. ಈ ಸಮಸ್ಯೆಗಳ ಕಾರಣವಾಗಿ ಹೆಣ್ಣುಮಕ್ಕಳನ್ನು ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಬಂಧನಕ್ಕೆ ತಳ್ಳುತ್ತಿರುವುದು ಕಂಡುಬರುತ್ತದೆ. ಮುಖ್ಯವಾಗಿ ತಂದೆ ತಾಯಿಯರ ಆತಂಕ ಒಂದೇ. ಅದು ಹೆಣ್ಣುಮಕ್ಕಳ ಜೀವನದ ಬಗೆಗೆ. ಅಂದರೆ ವ್ಯವಸ್ಥೆಯು ರೂಪಿಸಿರುವ ಮದುವೆಯ ನಿಯಮಗಳು ಹೀಗೆ ಆತಂಕಕ್ಕೆ ಕಾರಣವಾಗುತ್ತವೆ ಮತ್ತು ಆಧುನಿಕತೆಯ ಕಾರಣದಿಂದಾಗಿ ಪುರುಷರು ಮಹಿಳೆಯರನ್ನು ನೋಡುವ ಬಗೆಯೇ ಬೇರೆಯಾಗಿದೆ. ಅಂದರೆ ಎಲ್ಲರನ್ನೂ ಲೈಂಗಿಕ ನೆಲೆಯಲ್ಲಿಯೇ ನೋಡುತ್ತಿರುವುದು ವಿಪರ್ಯಾಸವೇ ಸರಿ. ಹಾಗಾಗಿಯೇ ಇಂದು ಸ್ತ್ರೀಯರ ಮೇಲೆ ಲೈಂಗಿಕ ಹಲ್ಲೆ, ಅತ್ಯಾಚಾರಗಳಂಥವು ನಡೆಯುತ್ತಿವೆ. ಆಶ್ಚರ್ಯಕರ ಸಂಗತಿಯೆಂದರೆ ಸಂಬಂಧಗಳಿಗೂ ಬೆಲೆ ಇಲ್ಲದಂತೆ ಅತ್ಯಾಚಾರಗಳು ಸಂಭವಿಸುತ್ತಿವೆ. ಜೊತೆಗೆ ಚಿಕ್ಕ, ಎಳೆಯ ಮಕ್ಕಳು ಎನ್ನದೇ ಅವರ ಮೇಲೆ ಲೈಂಗಿಕ ಹಲ್ಲೆಗಳು ನಡೆಯುತ್ತಿವೆ. ಇವುಗಳಿಂದ ವಿಚಲಿತಗೊಂಡ ತಂದೆ ತಾಯಂದಿರು ತಮ್ಮ ಮಕ್ಕಳನ್ನು ಬಹು ಬೇಗನೇ ವಿವಾಹ ಬಂಧನಕ್ಕೆ ತಳ್ಳುತ್ತಿದ್ದಾರೆ. ಹಾಗಾಗಿಯೇ ಬಾಲ್ಯ ವಿವಾಹಗಳ ಪ್ರಮಾಣವೂ ಅಧಿಕವಾಗಿರುವುದು ಕಂಡುಬರುತ್ತದೆ. ಈ ಆತಂಕಗಳ ಕಾರಣವಾಗಿ ವಲಸೆ ಹೋಗುವ ಕುಟುಂಬಗಳು ತಮ್ಮ ಮಕ್ಕಳ ಮೇಲಿನ ಜವಾಬ್ದಾರಿಯನ್ನು ಬಹು ಬೇಗನೇ ಕಳೆದುಕೊಳ್ಳಲು ನಿರ್ಧರಿಸುತ್ತಾರೆ. ಹಾಗೆಯೇ ಕೆಲವು ಸಮುದಾಯಗಳಲ್ಲಿ ತಮ್ಮನ್ನು ಆರೈಕೆ ಮಾಡಲು ಹೆಣ್ಣುಮಕ್ಕಳು ಬೇಕಾಗುತ್ತಾರೆ ಎಂಬ ಕಾರಣಕ್ಕೆ ತಮ್ಮ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡುತ್ತಾರೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಬೆಳಗಾವಿ ಭಾಗದ ಕುರುಬ ಸಮುದಾಯದವರು ಬರ ಪರಿಸ್ಥಿತಿಯ ಸಂದರ್ಭದಲ್ಲಿ ತಮ್ಮ ಕುರಿಗಳಿಗೆ ಆಹಾರವನ್ನು ಹುಡುಕಿಕೊಂಡು ಬೇರೆ ಬೇರೆ ಸ್ಥಳಗಳಿಗೆ ವಲಸೆ ಬರುತ್ತಾರೆ. ಅಂತಹ ಸಂದರ್ಭದಲ್ಲಿ ತಮ್ಮ ಮಕ್ಕಳ ಮದುವೆಯನ್ನು ಮಾಡುವುದರ ಮೂಲಕ ಅಂದರೆ ಗಂಡು

ಮಗನಾಗಿದ್ದರೆ ಅವನನ್ನು ಶಾಲೆಯಿಂದ ಬಿಡಿಸಿ ತಮ್ಮ ಕುರಿ ಹಿಂಡಿನೊಂದಿಗೆ ಬರಲು ಸೂಚಿಸುತ್ತಾರೆ. ಅಂತಹ ಸಂದರ್ಭದಲ್ಲಿ ತಮ್ಮ ಮಗನಿಗೆ ವಿವಾಹ ಮಾಡುವುದರ ಮೂಲಕ ಹೆಣ್ಣು ಮಗುವನ್ನು ತಮ್ಮ ಜೊತೆಯಲ್ಲಿಯೇ ಕರೆದುಕೊಂಡು ಹೋಗುತ್ತಾರೆ. ಆಕೆ ಕುರಿ ಹಿಂಡಿನೊಂದಿಗೆ ಕಾಲ್ನಡಿಗೆಯಲ್ಲಿಯೇ ಪಯಣಿಸಬೇಕಾಗುತ್ತದೆ. ಇವರ ಮುಖ್ಯ ಉದ್ದೇಶ ಕುರಿಯ ಹಿಂಡು ಎಲ್ಲಿ ನಿಲ್ಲುತ್ತದೆಯೋ ಅಲ್ಲಿ ಪುರುಷರಿಗೆ ಅಡುಗೆ ಮಾಡುವುದು ಮತ್ತು ಇನ್ನಿತರೆ ಕೆಲಸಗಳನ್ನು ನೋಡಿಕೊಳ್ಳುವುದಾಗಿರುತ್ತದೆ. ಹಾಗಾಗಿಯೇ ವಲಸೆ ಹೋಗುವ ಸಮುದಾಯಗಳು ತಮ್ಮ ಮಕ್ಕಳಿಗೆ ಬೇಗನೇ ವಿವಾಹ ಮಾಡುವುದನ್ನು ಕಾಣಬಹುದಾಗಿದೆ. ಹಾಗೆಯೇ ಅಲೆಮಾರಿ ಅರೆಅಲೆಮಾರಿ ಸಮುದಾಯಗಳೆಂದೇ ಗುರುತಿಸಿಕೊಂಡಿರುವ ಬುಡ್ಗಜಂಗಮ, ಬೇಡ ಜಂಗಮ, ಬೋವಿ, ವಡ್ಡರ್, ಕೊರಮ, ಕೊರವ, ಹಕ್ಕಿಪಿಕ್ಕಿ, ತೋಡ, ದೊಂಬೀದಾಸ, ಸಿಕ್ಕಲಿಗಾರ, ಶೀಳ್ಯೇಕ್ಯಾತರು ಹೀಗೆ ಕರ್ನಾಟಕದಲ್ಲಿ ೩೨ ಅಲೆಮಾರಿ, ಅರೆ ಅಲೆಮಾರಿ ಸಮುದಾಯಗಳಿರುವುದು ಕಂಡುಬರುತ್ತದೆ. ಈ ಎಲ್ಲಾ ಸಮುದಾಯದವರಲ್ಲಿಯೂ ಸಹ ಬಾಲ್ಯವಿವಾಹ ಪದ್ಧತಿ ಹಿಂದಿನಿಂದಲೂ ರೂಢಿಯಲ್ಲಿದೆ. ಆದರೆ ಇವರು ಶಿಕ್ಷಣಕ್ಕೆ ತೆರೆದುಕೊಂಡಿರುವುದು ಮತ್ತು ಆಧುನಿಕತೆಗೆ ಮುಖ ಮಾಡುತ್ತಿದ್ದಾರೆ ಹಾಗಾಗಿ ಇವರಲ್ಲಿ ಬಾಲ್ಯ ವಿವಾಹಗಳ ಸಂಖ್ಯೆ ಕಡಿಮೆಯಾಗುತ್ತಿದೆ ಎಂದು ಹೇಳಲಾಗುತ್ತಿದೆ. ಆದರೆ ಹೀಗೆ ಶಿಕ್ಷಣಕ್ಕೆ ತೆರೆದುಕೊಂಡವರ ಸಂಖ್ಯೆ ತುಂಬಾನೇ ಕಡಿಮೆ ಇದೆ ಎಂದು ಹೇಳಬಹುದು. ಒಟ್ಟಾರೆಯಾಗಿ ವಲಸೆಯು ಬಾಲ್ಯ ವಿವಾಹ ನಿಷೇಧ ಕಾನೂನಿನ ಅನುಷ್ಠಾನಕ್ಕೆ ತೊಡಕಾಗಿ ಮಾರ್ಪಟ್ಟಿದೆ.

### ೯.೬. ಶೈಕ್ಷಣಿಕ ವ್ಯವಸ್ಥೆಯಲ್ಲಿನ ಕೊರತೆಗಳು

ವ್ಯವಸ್ಥೆಯಲ್ಲಿ ಶೈಕ್ಷಣಿಕ ಕಾರಣಗಳಿಗಾಗಿ ಅಂದರೆ ಶೈಕ್ಷಣಿಕ ಸೌಲಭ್ಯಗಳ ತೊಂದರೆಗಳಿಂದಾಗಿ ಹಲವು ಬಾಲ್ಯ ವಿವಾಹಗಳು ನಡೆಯುತ್ತಿರುವುದು ಕಂಡುಬಂದಿದೆ. ಶಿಕ್ಷಣವನ್ನು ಪೂರ್ಣಗೊಳಿಸದೇ ಪ್ರಾಥಮಿಕ ಹಂತದಲ್ಲಿಯೇ ನಿಲುಗಡೆಗೊಳ್ಳುತ್ತಿರುವ ಮತ್ತು ಹಾಗೆ ಶಾಲೆಗಳಿಂದ ಹೊರಗುಳಿದಂತಹ ಹಲವು ಮಕ್ಕಳು ಇಂದು ಬಾಲ್ಯ ವಿವಾಹಗಳಿಗೆ ಒಳಗಾಗುತ್ತಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಪ್ರೌಢ ಶಿಕ್ಷಣದ ವ್ಯವಸ್ಥೆ ಇಲ್ಲದಾಗಿದೆ. ಹಾಗಾಗಿ ಅನಕ್ಷರತೆಯ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ. ರಾಜ್ಯದಲ್ಲಿನ ಶಿಕ್ಷಣದ ಪ್ರಮಾಣವನ್ನು ಗಮನಿಸಿದರೆ ಇಲ್ಲಿನ ಜನರ ಅನಕ್ಷರತೆ ಎಷ್ಟಿದೆ ಎಂಬುದು ತಿಳಿದುಬರುತ್ತದೆ. ೨೦೧೧ರ ಜನಗಣತಿಯ ಪ್ರಕಾರ ರಾಜ್ಯದ ಒಟ್ಟು ಶಿಕ್ಷಣದ ಮಟ್ಟ ೭೫.೩೬% ರಷ್ಟಿದೆ. ಇದರಲ್ಲಿ ಪುರುಷರ ಶಿಕ್ಷಣದ ಪ್ರಮಾಣ ಶೇ. ೮೨.೪೭ರಷ್ಟಿದ್ದು, ಮಹಿಳಾ ಶಿಕ್ಷಣದ ಪ್ರಮಾಣ ಶೇ. ೬೬.೦೧ರಷ್ಟಿದೆ. ಇದನ್ನು ಗಮನಿಸಿದರೆ ಪರುಷರ ಶೈಕ್ಷಣಿಕ ಸ್ಥಿತಿಗಿಂತ ಮಹಿಳಾ ಶಿಕ್ಷಣದ ಪ್ರಮಾಣ ತುಂಬಾ ಕಡಿಮೆ ಇರುವುದು ಕಂಡುಬರುತ್ತದೆ. ಇನ್ನು ಗ್ರಾಮೀಣ ಪ್ರದೇಶಗಳಲ್ಲಿನ ಶೈಕ್ಷಣಿಕ ಸ್ಥಿತಿಗತಿಯನ್ನು ಗಮನಿಸಿದರೆ ೨೦೧೧ರ ಜನಗಣತಿಯ ಪ್ರಕಾರ ಗ್ರಾಮೀಣ ಭಾಗದಲ್ಲಿ ಪುರುಷ ಶೈಕ್ಷಣಿಕ ಸ್ಥಿತಿಯ ಪ್ರಮಾಣ ಶೇ.೭೭.೬೧ ರಷ್ಟಿದ್ದರೆ, ಮಹಿಳೆಯರ ಶೈಕ್ಷಣಿಕ ಪ್ರಮಾಣ

ಶೇ.೫೮.೩೨ ರಷ್ಟಿದೆ. ಹಾಗೆಯೇ ನಗರ ಪ್ರದೇಶದಲ್ಲಿನ ಶೈಕ್ಷಣಿಕ ಸ್ಥಿತಿಗತಿಯ ಬಗೆಗಿನ ಅಂಕಿಅಂಶಗಳ ಶೇಕಡಾವಾರು ಪ್ರಮಾಣವನ್ನು ನೋಡಿದಾಗ ೨೦೧೧ರ ಜನಗಣತಿಯ ಪ್ರಕಾರ ಪುರುಷರ ಶಿಕ್ಷಿತರ ಸಂಖ್ಯೆ ೯೦.೦೪%ರಷ್ಟಿದ್ದರೆ, ಮಹಿಳಾ ಶಿಕ್ಷಿತರ ಸಂಖ್ಯೆ ೭೭.೯೭%ರಷ್ಟಿದೆ. ಶಿಕ್ಷಣದ ಕುರಿತಂತೆ ಈ ಎಲ್ಲಾ ಶೇಕಡಾವಾರು ಪ್ರಮಾಣವನ್ನು ಗಮನಿಸಿದರೆ ಪುರುಷರಗಿಂತ ಮಹಿಳೆಯರ ಶೈಕ್ಷಣಿಕ ಸ್ಥಿತಿಗತಿ ತುಂಬಾ ಹಿಂದುಳಿದಿದೆ. ಮುಖ್ಯವಾಗಿ ಈ ಬಗೆಯ ಶಿಕ್ಷಣದ ಪ್ರಮಾಣ ಕಡಿಮೆ ಇರುವುದಕ್ಕೆ ಹಲವಾರು ಕಾರಣಗಳಿವೆ. ಆದರೂ ಅವುಗಳನ್ನು ನಿವಾರಿಸಲು ಹಲವಾರು ಕಾರ್ಯ ಯೋಜನೆಗಳನ್ನೂ ಸರಕಾರಗಳು ಹಮ್ಮಿಕೊಂಡಿವೆ. ಈ ಶಿಕ್ಷಣದ ಪ್ರಮಾಣ ಕಡಿಮೆ ಇರುವ ಕಾರಣಕ್ಕಾಗಿ ಸಮಾಜದಲ್ಲಿ ಹಲವಾರು ಸಮಸ್ಯೆಗಳು ತಲೆದೋರಿರುವುದು ಕಂಡುಬರುತ್ತದೆ. ಅದರಲ್ಲೂ ಮುಖ್ಯವಾಗಿ ಬಾಲ್ಯವಿವಾಹದಂತಹ ಅನಿಷ್ಠ ಪದ್ದತಿ ಇನ್ನೂ ಜೀವಂತವಿರುವುದಕ್ಕೆ ಅನಕ್ಷರತೆಯೂ ಒಂದು ಕಾರಣವಾಗಿದೆ. ಬಾಲ್ಯ ವಿವಾಹಗಳು ಹೆಚ್ಚಾಗಲು ಶೈಕ್ಷಣಿಕವಾಗಿ ಹಲವಾರು ಕಾರಣಗಳು ಇರುವುದನ್ನು ಗುರುತಿಸಲಾಗಿದೆ, ಅ. ಅನಕ್ಷರತೆ/ ಅಜ್ಞಾನ ಆ.ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳು ಇಲ್ಲದೇ ಇರುವುದು. ಇ. ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವುದರಿಂದ ಕೆಡುತ್ತಾರೆ ಎಂಬ ನಂಬಿಕೆ. ಇವುಗಳನ್ನು ಒಂದೊಂದಾಗಿ ಪ್ರಕರಣಗಳ ಮೂಲಕ ಕೆಳಗಿನಂತೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅ) ಅನಕ್ಷರತೆ/ ಅಜ್ಞಾನ :** ಅನಕ್ಷರತೆ ಎಂಬುದು ಮಾನವರಿಗೆ ಒಂದು ಬಗೆಯಲ್ಲಿ ಎಲ್ಲಾ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವಂತೆ ಮಾಡುತ್ತದೆ. ಇದರ ಕಾರಣವಾಗಿ ಅಜ್ಞಾನ ಎಂಬುದು ಮಾನವರಲ್ಲಿ ಅಧಿಕವಾಗಿರುವುದನ್ನು ಕಾಣಬಹುದು. ಅಂದರೆ ಮಾನವರು ವೈಜ್ಞಾನಿಕವಾಗಿ ಯೋಚಿಸುವ ಮತ್ತು ಹಕ್ಕುಗಳ ಬಗೆಗೆ ಯಾವುದೇ ಬಗೆಯ ತಿಳುವಳಿಕೆಯನ್ನು ಪಡೆಯದೇ ಇರುವುದನ್ನು ಕಾಣಬಹುದು. ಈ ಕಾರಣವಾಗಿ ಜನರು ಬಡತನದಲ್ಲಿಯೇ ಜೀವಿಸುತ್ತಿರುವುದು ಮತ್ತು ಹಲವು ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡುಬರುತ್ತಿದೆ. ಮುಖ್ಯವಾಗಿ ಕುಟುಂಬದಲ್ಲಿ ಹಿರಿಯರ ಅನಕ್ಷರತೆಯ ಕಾರಣವಾಗಿ ತಮ್ಮ ಮಕ್ಕಳನ್ನು ಬಾಲ್ಯವಿವಾಹವೆಂಬ ಕೂಪಕ್ಕೆ ತಳ್ಳುತ್ತಿದ್ದಾರೆ. ಮತ್ತೆ ಕೆಲವರು ತಮ್ಮ ಅಜ್ಞಾನದ ಕಾರಣವಾಗಿ ಬೇರೆಯವರ ಮಾತುಗಳನ್ನು ನಿಜವೆಂದು ನಂಬಿ ತಮ್ಮ ಮಕ್ಕಳಿಗೆ ಬಾಲ್ಯದಲ್ಲಿಯೇ ವಿವಾಹ ಮಾಡಿರುವಂತಹ ಘಟನೆಗಳು ಸಂಭವಿಸಿವೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಬಾಗಲಕೋಟೆ ತಾಲೂಕಿನ ಗೋವಿಂದಕೊಪ್ಪ ಗ್ರಾಮದ ಅಂಜಿನಮ್ಮ ಎಂಬುವವರು ತಮಗಿರುವ ಒಬ್ಬಳೇ ಮಗಳನ್ನು ಬಾಲ್ಯದಲ್ಲಿಯೇ ವಿವಾಹ ಮಾಡಿರುವುದು ಕಂಡುಬಂದಿದೆ. ಇವರು ಹೇಳುವಂತೆ "ನನಿಗೆ ಇರೋದು ಇಬ್ರು ಮಕ್ಕು. ನನ ಗಂಡ ತೀರ್ಕೆಂಡು ಬಾಳ ವರ್ಸ ಆತು. ಇರೋ ಒಬ್ಬ ಮಗ ಆಕ್ಸಿಡೆಂಟ್‌ನಾಗ ತೀರ್ಕೆಂಡ, ಆಮ್ಯಾಲ ಉಳಿದಿದ್ದು ಒಬ್ಳೆ ಮಗ್ಳು. ಅವಳ್ದು ಮದುವಿ ಮಾಡಬೇಕು ಅಂತ ಅನ್ಕಂಡಿದ್ದೆ. ಅದೇ ಟೈಮ್ನಾಗ ನಮಿಗೆ ಪರಿಚಯ ಇರೋ ತಿಮ್ಮಣ್ಣ ಅನ್ನೋರು ನಿಮ್ ಮಗ್ಳಿಗಿ ಹುಡುಗನ್ನ ನೋಡೇನಿ ಅದಕ್ಕ ನೀವು ಒಪ್ಪಿದ್ರ ಕರ್ಕಂಡು ಬರ್ತೀನಿ ಅಂತ ಹೇಳಿದ್ರು.

ಆವಾಗ ನಾವು ಏನ್ ಕೆಲ್ಸ ಮಾಡ್ತಾನ, ಯಾವೂರು ಅಂತೆಲ್ಲಾ ಕೇಳಿದ್ವಿ. ಅದೆನ್ನೆಲ್ಲಾ ಹೇಳಿದ್ಮೇಲೆ ಆಸ್ತಿಗೀಸ್ತಿ ಬಾಳ ಐತಿ ಅಂತ ಗೊತ್ತಾತು. ಆದ್ರ ಮದುಪಿ ಮಾಡಿಕೊಟ್ರ ಮಗ್ಳು ಬಾಳ ಚೆನ್ನಾಗಿರ್ತಾಳ, ಅಂತ ಅಂದಿದ್ಕ ಮದುಪಿಗಿ ಒಪ್ಪಿದೆ. ಮದುಪಿಯೇನೋ ಮಾಡಿದ್ವಿ, ಆದ್ರೆ ಮಗಳ್ದು ಮದುವಿ ಆಗಿ ಆರೇಳು ತಿಂಗ್ಳಿಗೇನೇ ಅಪ್ಪಿಗೆ ಈವಾಗಾಗ್ಲೇ ಒಂದು ಮದುವಿ ಆಗೇತಿ, ಮೊದ್ಲನೇ ಹೆಂಡ್ತಿನೂ ಐದಾಳ ಮತ್ತೆ ಅಕಿತೇಲಿನೂ ಜೀವ್ನ ಮಾಡ್ತದಾನ ಅಂತ ಗೊತ್ತಾತು. ಆದ್ರ ಏನ್ ಮಾಡೋದು ಮದುವಿ ಅಂತು ಆಗಿಬಿಟ್ಟೇತಿ. ಮಗಳ್ನ ಕರ್ಕಂಡು ಬರಂಗಿಲ್ಲ. ಅದಕ್ಕೆ ಏನೇ ಆಗ್ಲಿ ಅವ್ನಂತೇಲೇ ಜೀವ್ನ ಮಾಡು ಅಂತ ಧೈರ್ಯ ತುಂಬಿದೆ. ಆದ್ರ ಅವ್ನು ಬಾಳ ಕಾಟ ಕೊಡ್ತಾಕತ್ತಿದ. ಈಗ ಅನ್ಸಾಕತ್ತೇತಿ ಯಾಕರ ಮದುವಿ ಮಾಡಿದ್ವಿ ಅಂತ. ಹುಡುಗನ್ನ ನೋಡಿದ್ ತಿಮ್ಮಣ್ಣಿ ಸತ್ತೋಗ್ಯಾನ. ತಿಮ್ಮಣ್ಣ ಬಾಳ ನಂಬಿಕಸ್ಥ. ಅವ್ನು ಹೇಳಿದ್ ಮ್ಯಾಲೆ ಹಿಂದ ಮುಂದ ಯೋಚ್ನೆ ಮಾಡ್ದಂಗ ಮದುವಿಗಿ ಒಪ್ಪಿದೆ. ಗಂಡಿನ ಕಡೆಯವ್ರು ತಿಮ್ಮಣ್ಣಗೂ ಮೋಸ ಮಾಡ್ಯಾರ. ನಾನು ಓದಿಲ್ಲ, ಮಗ್ಳೂನ್ನೂ ಸತೆ ಓದ್ಸಲಿಲ್ಲ. ಹಂಗಾಗಿ ಈ ಪೇಚಾಟಕ್ಕ ಬಿದ್ವಿ, ನಾವು ನಮ್ ಕಷ್ಟಾನ ಯಾರ್ತೇಲಿ ಹೇಳ್ಕೊಳ್ಳಾನು. ಏನೇ ಆಗ್ಲಿ ಅಂತ ಸುಮ್ನಿದ್ದು ಬಿಟ್ಟೇವಿ ಎಂದರು.

ಕುಟುಂಬದಲ್ಲಿನ ಹಿರಿಯರ ಅಜ್ಞಾನದ ಅಥವಾ ಅನಕ್ಷರತೆಯ ಕಾರಣವಾಗಿ ಮಕ್ಕಳನ್ನು ಈ ಬಗೆಯ ಸಂಕಷ್ಟಗಳಿಗೆ ಸಿಲುಕಿಸುತ್ತಿದ್ದಾರೆ. ಅಂಜಿನಮ್ಮನವರು ಸ್ವಲ್ಪ ಮಟ್ಟಿಗಾದರೂ ಓದಿಕೊಂಡಿದ್ದರೆ ಈ ಬಗೆಯ ಮೋಸಕ್ಕೆ ಸಿಲುಕುತ್ತಿರಲಿಲ್ಲ. ಮತ್ತು ತಮ್ಮ ಮಗಳಿಗೆ ಬಹು ಬೇಗನೇ ವಿವಾಹ ಮಾಡುತ್ತಿರಲಿಲ್ಲ. ಆದರೆ ಅವರ ಅಜ್ಞಾನವೇ ಇದಕ್ಕೆ ಕಾರಣವಾಗಿದೆ. ಜೊತೆಗೆ ಕುಟುಂಬದ ಹಿರಿಯ ಯಾವಾಗಲೂ ಪುರುಷನೇ ಆಗಿರುತ್ತಾನೆ. ಹಾಗಾಗಿ ಮಹಿಳೆಯರು ಪ್ರತೀ ಹಂತದಲ್ಲಿಯೂ ಆತನ ಉಪಸ್ಥಿತಿಯನ್ನು ಬಯಸುತ್ತಾರೆ. ಜೊತೆಗೆ ಸಮಾಜವು ಹೇಳಿಕೊಟ್ಟಿರುವಂತೆ ಪುರುಷನೇ ಕುಟುಂಬದ ಮುಖ್ಯ ಒಡೆಯ ಎಂಬುದು ಈ ಬಗೆಯ ಆಲೋಚನೆಗೆ ಎಡೆಮಾಡಿಕೊಡುತ್ತದೆ. ಅಂಜಿನಮ್ಮನ ಪರಿಸ್ಥಿತಿಯೂ ಹಾಗೇ ಆಗಿದೆ. ಕುಟುಂಬವನ್ನು ನಡೆಸಬೇಕಾದಂತಹ ಯಜಮಾನರೇ ಇಲ್ಲದಿದ್ದಾಗ, ಕುಟುಂಬದ ಎಲ್ಲಾ ಜವಾಬ್ದಾರಿಗಳನ್ನು ನಿಭಾಯಿಸುವುದು ಕಷ್ಟದ ಸಂಗತಿ ಎಂದು ಭಾವಿಸಿದ್ದಾರೆ. ಹಾಗಾಗಿಯೇ ಮಗಳ ಮದುವೆಯನ್ನು ಬಹು ಬೇಗನೇ ಮಾಡಲು ಮುಂದಾಗಿದ್ದಾರೆ. ಈ ಆಲೋಚನಾ ಕ್ರಮ ಅಂಜಿನಮ್ಮಳದ್ದಲ್ಲ. ಬದಲಾಗಿ ವ್ಯವಸ್ಥೆಯು ಮಹಿಳೆಯರು ಹೀಗೆಯೇ ಇರಬೇಕು ಎಂಬುದನ್ನು ತೋರಿಸಿಕೊಟ್ಟಿದೆ. ಹಾಗಾಗಿಯೇ ಅಂಜಿನಮ್ಮನವರು ಹೀಗೆ ಯೋಚಿಸಿರುವುದರಲ್ಲಿ ಅನುಮಾನವಿಲ್ಲ. ಅಂದರೆ ವ್ಯವಸ್ಥೆಯ ಭಾಗವಾಗಿರುವ ಅಂಜಿನಮ್ಮನವರು ತಮ್ಮ ಮಗಳ ಮದುವೆಯನ್ನು ಮಾಡುವುದು ತಮ್ಮ ಆದ್ಯ ಕರ್ತವ್ಯವೆಂದು ಭಾವಿಸಿದ್ದಾರೆ. ಮನೆಗೆ ಗಂಡಿನ ಆಸರೆ ಇರಲೆಂದು ಮದುವೆ ಮಾಡಿದ ಅವರು ಮೋಸಹೋಗಿದ್ದಾರೆ. ಇದು ಮದುವೆಯಾದ ನಂತರ ತಿಳಿದು ಬಂದಿದೆ. ಈ ಬಗೆಯಲ್ಲಿ ಅನಕ್ಷರತೆ, ಅಜ್ಞಾನದ ಕಾರಣವಾಗಿ ಜನರು ತಮ್ಮ ಮಕ್ಕಳ ಭವಿಷ್ಯವನ್ನು ಎಳೆಯದರಲ್ಲಿಯೇ ಹಾಳು ಮಾಡುತ್ತಿದ್ದಾರೆ.

**ಆ. ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳು ಇಲ್ಲದೇ ಇರುವುದು ಮತ್ತು ಕಾಲೇಜುಗಳು ಗ್ರಾಮೀಣ ಭಾಗದಿಂದ ದೂರದಲ್ಲಿರುವುದು** : ಭಾರತವು ಗ್ರಾಮೀಣ ಪ್ರದೇಶಗಳನ್ನು ಹೆಚ್ಚಾಗಿ ಹೊಂದಿರುವ ದೇಶವಾಗಿದ್ದು, ಪ್ರತೀ ಗ್ರಾಮಗಳಲ್ಲಿಯೂ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳು ಇರುವುದನ್ನು ಕಾಣಬಹುದು. ಆದರೆ ಈ ಸೌಲಭ್ಯ ಎಲ್ಲಾ ಗ್ರಾಮೀಣ ಪ್ರದೇಶಗಳಿಗೆ ಅನ್ವಯಿಸುತ್ತದೆ ಎಂದು ಹೇಳಲಾಗುವುದಿಲ್ಲ. ಕೆಲವು ಗ್ರಾಮಗಳಲ್ಲಿ ಮಾಧ್ಯಮಿಕ ಮತ್ತು ಪ್ರೌಢಶಾಲೆಗಳೇ ಇಲ್ಲವಾಗಿದೆ. ಪ್ರಾಥಮಿಕ ಹಂತವನ್ನು ಪೂರ್ಣಗೊಳಿಸಿದ ನಂತರ ಪ್ರೌಢ ಶಿಕ್ಷಣಕ್ಕಾಗಿ ಬೇರೊಂದು ಊರಿಗೆ ಹೋಗುವಂತಹ ಪರಿಸ್ಥಿತಿ ಇದೆ. ಹಾಗಾಗಿಯೇ ಎಷ್ಟೋ ಹೆಣ್ಣುಮಕ್ಕಳು ಶಾಲೆಯಿಂದ ವಂಚಿತರಾಗುತ್ತಿದ್ದಾರೆ. ಮುಖ್ಯವಾಗಿ ಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳ ಕೊರತೆ ಎದ್ದು ಕಾಣುತ್ತಿರುವುದು ವಾಸ್ತವ ಸತ್ಯ. ಒಂದುವೇಳೆ ಮೂಲಭೂತ ಸೌಲಭ್ಯಗಳನ್ನು ಸರ್ಕಾರಗಳು ಒದಗಿಸಿವೆಯೆಂದರೂ ಅವುಗಳ ಸ್ವರೂಪ ಮತ್ತು ಬಳಕೆಯಾಗಲ್ಪಡುತ್ತಿರುವುದರ ಕುರಿತು ತಿಳಿದುಕೊಳ್ಳಬೇಕಾಗಿದೆ. ಏಕೆಂದರೆ ಬಹಳಷ್ಟು ಶಾಲೆಗಳಲ್ಲಿ ಮಹಿಳೆಯರಿಗೆ ಶೌಚಾಲಯದ ವ್ಯವಸ್ಥೆ ಇಲ್ಲವಾಗಿದೆ. ಕೆಲವು ಪ್ರದೇಶಗಳಲ್ಲಿ ಕಾಲೇಜುಗಳು ಇವೆಯಾದರೂ, ಸುಸಜ್ಜಿತವಾದ ಕೊಠಡಿಗಳು ಇಲ್ಲವಾಗಿವೆ. ಮಕ್ಕಳು ಮರದ ಕೆಳಗೆ ಪಾಠ ಕೇಳುವಂತಹ ಸ್ಥಿತಿ ನಿರ್ಮಾಣವಾಗಿದೆ. ಹಾಗೆಯೇ ತಮ್ಮ ಊರುಗಳಿಂದ ಶಾಲೆಗೆ ಹೋಗುವುದಕ್ಕೆ ಸರಿಯಾದ ಸಾರಿಗೆ ವ್ಯವಸ್ಥೆಯೂ ಇಲ್ಲದಂತಹ ಸ್ಥಿತಿಯನ್ನು ಬಹಳಷ್ಟು ಗ್ರಾಮಗಳಲ್ಲಿನ ಮಕ್ಕಳು ಎದುರಿಸುತ್ತಿದ್ದಾರೆ. ಹಾಗಾಗಿಯೇ ಕುಟುಂಬದಲ್ಲಿನ ಪೋಷಕರು ತಮ್ಮ ಮಕ್ಕಳನ್ನು ಶಾಲೆಗೆ ಹೋಗುವುದರಿಂದ ಬಿಡಿಸಿ ಮದುವೆ ಮಾಡಲು ನಿರ್ಧರಿಸುತ್ತಿದ್ದಾರೆ. ಇದಕ್ಕೆ ಬಲಿಯಾಗುವವರು ಹೆಣ್ಣುಮಕ್ಕಳೇ ಹೊರತು ಗಂಡುಮಕ್ಕಳಲ್ಲ. ಹುಡುಗನಾಗಿದ್ದರೆ ಆತನಿಗೆ ಎಲ್ಲಾ ಬಗೆಯ ಸೌಲಭ್ಯಗಳು ಒದಗಿಸಿಕೊಡಲಾಗುತ್ತದೆ. ಹಾಗೆಯೇ ಶಾಲೆ ತಮ್ಮ ಊರಿನಿಂದ ಎಷ್ಟೇ ದೂರದಲ್ಲಿದ್ದರೂ ಸಹ ಅವನ ಓದನ್ನು ಮಾತ್ರ ಮೊಟಕುಗೊಳಿಸಲು ಹೇಳುವುದಿಲ್ಲ. ಬದಲಾಗಿ ಅವನೇ ಬೇಸತ್ತು ಶಾಲೆಗೆ ಹೋಗುವುದನ್ನು ಬಿಟ್ಟರೂ ಒತ್ತಾಯ ಪೂರ್ವಕವಾಗಿ ಮತ್ತೆ ಶಾಲೆಗೆ ಕಳುಹಿಸುವಂತಹ ಸ್ಥಿತಿ ಇದೆ. ಆದರೆ ಹೆಣ್ಣುಮಕ್ಕಳ ವಿಷಯದಲ್ಲಿ ಹಾಗಾಗುವುದಿಲ್ಲ. ಮೊದಲು ಹೆಣ್ಣುಮಗು ಹುಟ್ಟಿತೆಂದರೇನೇ ಮೂಗು ಮುರಿಯುವಂತಹ ಸ್ಥಿತಿ ಇದೆ. ಇಂತಹ ಸಂದರ್ಭದಲ್ಲಿ ಅವಳನ್ನು ಶಾಲೆಗೆ ಕಳುಹಿಸುವುದೆಂದರೆ ದೂರದ ಮಾತು. ಕೆಲವು ಕುಟುಂಬಗಳಲ್ಲಿ ಇವುಗಳನ್ನು ಮೀರಿ ಶಾಲೆಗೆ ಕಳುಹಿಸುತ್ತಿದ್ದಾರೆ ನಿಜ ಆದರೆ ಯಾವಾಗ ಶಾಲೆಯನ್ನು ಮೊಟಕುಗೊಳಿಸಲು ಹೇಳುತ್ತಾರೆ ಎಂಬುದು ತಿಳಿಯುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಶಾಲೆಗಳು ಎಲ್ಲಾ ಬಗೆಯ ಮೂಲಭೂತ ಸೌಲಭ್ಯಗಳನ್ನು ಹೊಂದಿರಬೇಕು ಅಂದಾಗ ಮಾತ್ರ ತಂದೆ ತಾಯಂದಿರು ತಮ್ಮ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸಲು ಮುಂದಾಗುತ್ತಾರೆ. ಹೆಣ್ಣುಮಕ್ಕಳಿಗೆ ಶಾಲೆಗಳಲ್ಲಿ ಸರಿಯಾದ ರಕ್ಷಣೆ ಇಲ್ಲದಿರುವುದರಿಂದ ಅವರ ರಕ್ಷಣೆಯ ಕಾರಣವೇ ಶಾಲೆಯನ್ನು ಬಿಡಿಸಲು ಮುನ್ನೆಲೆಗೆ ಬರುತ್ತದೆ. ಅವರ ಆಶಯವೂ ಅದೇ ಆಗಿರುತ್ತದೆ. ಹೀಗೆ ಗ್ರಾಮೀಣ ಪ್ರದೇಶಗಳಲ್ಲಿನ ಜನರು ತಮ್ಮ ಹೆಣ್ಣುಮಕ್ಕಳನ್ನು ಶಾಲೆ

ದೂರವಾಗುತ್ತದೆ ಎಂಬ ಕಾರಣದಿಂದಲೋ ಅಥವಾ ಶಾಲೆಯಲ್ಲಿ ಪಾಠಮಾಡುವಂತಹ ಗುರುಗಳು ಸರಿಯಾಗಿ ಪಾಠ ಮಾಡುತ್ತಿಲ್ಲವೆಂತಲೋ ಅಥವಾ ಶಾಲೆಯಲ್ಲಿನ ಸೌಲಭ್ಯಗಳು ಸರಿಯಾಗಿ ಇಲ್ಲವೆಂತಲೋ ಈ ಕಾರಣಗಳಿಂದ ತಮ್ಮ ಹೆಣ್ಣುಮಕ್ಕಳು ಶಾಲೆಗೆ ಹೋಗುವುದರಿಂದ ಬಿಡಿಸುತ್ತಿದ್ದಾರೆ. ಹಾಗೆಯೇ ಅವರ ಮದುವೆಗೆ ಮುನ್ನುಡಿಯನ್ನು ಹಾಕುತ್ತಿದ್ದಾರೆ. ಅವರಿಗೆ ಇನ್ನು ಹದಿನೆಂಟು ವರ್ಷ ವಯಸ್ಸು ಆಗಿರುವುದಕ್ಕಿಂತ ಮುಂಚೆಯೇ ಅವರಿಗೆ ವಿವಾಹವನ್ನು ಮಾಡುವ ಸ್ಥಿತಿ ನಿರ್ಮಾಣವಾಗಿದೆ. ಈ ಬಗೆಯ ಕಾರಣಗಳಿಂದ ಹೆಣ್ಣು ಮಕ್ಕಳನ್ನು ಶಾಲೆಯಿಂದ ಬಿಡಿಸಿ ಬಾಲ್ಯ ವಿವಾಹ ಮಾಡಿರುವಂತಹ ಪ್ರಕರಣಗಳು ಕಂಡುಬಂದಿವೆ. ಅವುಗಳನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಕೊಪ್ಪಳ ತಾಲೂಕಿನ ಬಿಳೇಬಾವಿ ಗ್ರಾಮದ ಈರಪ್ಪ ಎಂಬುವವರು ತಮ್ಮ ಮಗಳು ೧೦ನೇ ತರಗತಿ ಓದಿದ ನಂತರ ಶಾಲೆಯನ್ನು ಬಿಡಿಸಿ ಮದುವೆ ಮಾಡಿದ್ದಾರೆ. ಇವರು ಹೇಳುವುದೇನೆಂದರೆ " ನಾನು ನನ್ ಮಗ್ಳಿಗಿ ಹತ್ನೇ ಕ್ಲಾಸು ಓದ್ಸಿನಿ. ಮುಂದೆ ಓದ್ಸಬೇಕು ಅಂದ್ರೆ ನಮ್ಮೂರಿಂದ ಬಾಳ ದೂರ ಹೋಗ್ಬೇಕು. ಅಲ್ಲಿಗಿ ಹೋಗಿ ಓದ್ಬೇಕಂದ್ರ ಬಾಳ ಕಷ್ಟ ಆಗ್ತದ. ಮತ್ತೆ ಇಲ್ಲಿತನ ಓದ್ಸಿದ್ದೇ ಬಾಳ ಆತು. ಇನ್ನೆಲ್ಲಿಂದ ಓದ್ಸಬೇಕು. ಆವಾಗ್ಲೇ ನಮ್ ಸಂಬಂಧಿಕ್ರೆಲ್ಲಾ ಮದುವಿ ಯಾವಾಗ ಮಾಡ್ತೀಯಂತ ಪೀಡ್ಸಕತ್ತಿದ್ರು. ಮಗಳು ಚೆನ್ನಮ್ಮ ಓದ್ತಿನಿ ಅಂತ ಅಂದ್ಲು. ಆದ್ರ ಹದಿನೈದು ಕಿಲೋಮೀಟರ್ ದೂರ ಹೋಗಿ ಓದ್ಬೇಕು ಅಂತ ಯಾವ ದೇವ್ರು ಹೇಳ್ಯಾರ. ಸಾಕು ಇಲ್ಲಿತನ ಓದಿದ್ದು, ಇನ್ನ ನೀನು ಮದುವಿ ಮಾಡ್ಕೆಂಡು ಗಂಡನ ಮನಿಗಿ ಹೋಗ್ಬೇಕಾದೋಳು. ಇಲ್ಲಿಗಿ ನೀನು ಓದೋದನ್ನ ನಿಲ್ಸಿಬುಡು ಅಂತ ಹೇಳಿದ್ವಿ. ಅಕಿನು ಸತೆ ಏನೂ ಎದುರುತ್ರ ಕೊಡ್ಲಿಲ್ಲ. ಹಂಗಾಗಿ ಅಕಿಗಿ ಒಳ್ಳೆ ಕಡಿಗಿ ಹುಡುಗನ್ನ ನೋಡಿ ಮದುವಿ ಮಾಡೇವಿ" ಎಂದರು.

ಬಳ್ಳಾರಿ ತಾಲೂಕಿನ ಸಿಂದ್ವಾಳ ಗ್ರಾಮದ ಆನಂದ ಎಂಬುವವರು ಶಾಲೆಯಲ್ಲಿ ಸರಿಯಾದ ಕೊಠಡಿಗಳು ಇಲ್ಲದೇ ಇರುವುದರಿಂದ ಮತ್ತು ಹೆಣ್ಣುಮಕ್ಕಳಿಗೆ ಯಾವುದೇ ರಕ್ಷಣೆ ಇಲ್ಲದಿದ್ದನ್ನು ಗಮನಿಸಿ ತಮ್ಮ ಮಗಳನ್ನು ಶಾಲೆಯಿಂದ ಬಿಡಿಸಿ, ಮದುವೆ ಮಾಡಿರುವುದು ಕಂಡುಬರುತ್ತದೆ. ಇವರು ಹೇಳುವಂತೆ "ನಮ್ ಊರಾಗ ಏಳ್ನೇ ಕ್ಲಾಸ್‌ತನ ಸಾಲಿ ಐತಿ. ಆಮ್ಯಾಲೆ ಎಂಟ್ನೇ ಕ್ಲಾಸಿಗಿ ಮೋಕಕ್ಕ ಹೋಗ್ಬೇಕು. ಇಲ್ಲಿಂದ ಏನಿಲ್ಲ ಅಂದ್ರು ಇಪ್ಪತ್ತು ಕಿಲೋಮೀಟರ್ ಆಗ್ತೈತಿ. ಆಮ್ಯಾಲೆ ನಮ್ಮೂರಾಗಿನ ಸಾಲ್ಯಾಗ ಮೇಸ್ಟ್ರುಗುಳು ಪಾಠ ಹೆಂಗ ಹೇಳಿಕೊಡ್ತಾರೋ ಏನೋ. ದೇವ್ರಿಗೇ ಗೊತ್ತು. ಸಾಲ್ಯಾಗಿನ ಮಕ್ಳು ಸರಿಗೇ ಓದಂಗಿಲ್ಲ. ಮತ್ತೆ ರೂಮ್‌ಗುಳು ಸರೀಗೇ ಇಲ್ಲ. ಮಳಿ ಬಂದ್ರೆ ಎಲ್ಲೆಂದ್ರಲ್ಲಿ ಸೋರ್ತಾವ. ಹಂಗೆ ಗ್ವಾಡೀಮ್ಯಾಲೆ ಎಲ್ಲೆಂದ್ರಲ್ಲಿ ಸಿಮೆಂಟ್ ಉದ್ರತ್ತೈತಿ. ಇಂತ ರೂಮ್‌ನ್ಯಾಗ ಕುಂತ್ಗಂಡು ನಮ್ ಮಕ್ಳು ಸಾಲಿ ಕಲಿಬೇಕು. ಇಲ್ಲಿ ಪರಿಸ್ತಿತಿನೇ ಸರಿಗಿಲ್ಲ. ಹಂಗಾಗಿ ಹೆಣ್ಣು ಹುಡ್ರಿಗಿ ಕಾಲ್ಮಡಿಗಿ ಸತೆ ಜಾಗ ಇಲ್ಲ. ಅವ್ರಿಗಿ ಕಾಲ್ಮಡಿ ಬಂದ್ರೆ ಹೊಲ್ದಾಗ ಮಾಡಿ ಬರ್ಬೇಕು. ಹಿಂಗೈತಿ ನಮ್ ಊರಾಗಿನ ಸಾಲಿ

ಪರಿಸ್ಥಿತಿ. ಇಂಗಿರ್ಬೇಕಾದ್ರೆ ಮಕ್ಳನ್ನ ಸಾಲಿಗಿ ಕಳ್ಸಬೇಕಂದ್ರ ಎಂಗ್. ಮನ್ಯಾಗ ಆರಾಮಾಗಿ ಕೆಲ್ಸ ಮಾಡಿಕೆಂಡು ಇರ್ತಾಳ. ಮನ್ಯಾಗಿನ ಕೆಲ್ಸ ಮಾಡಿದ್ರೆ ಅವ್ರ ಅಮ್ಮಗಾದ್ರೂ ಸಹಾಯ ಆಗತ್ತೈತಿ. ಆಮ್ಯಾಲೆ ಹೆಣ್ಮಕ್ಳು ಸಾಲಿ ಕಲ್ತು ಏನ್ ಮಾಡಾದೈತಿ. ಅವ್ರು ಎಷ್ಟತ್ತಿದ್ರು ಗಂಡನ್ ಮನಿಗಿ ಹೋಗೋರು. ಅಪ್ರಗಿ ಯಾಕ ಸಾಲಿ ಅಂತೇಳಿ ಬಿಡ್ಸಿದೆ. ಸಾಲಿ ಬಿಡ್ಸಿ ಆರೇಳು ತಿಂಗ್ಳಿಗೇನೇ ಮಗಳ್ದು ಮದುವಿ ಮಾಡಿಬಿಟ್ವಿ" ಎಂದರು.

ಚಿಕ್ಕ ವಯಸ್ಸಿಗೇನೇ ಮದುವಿ ಮಾಡಿದ್ದೀರಲ್ಲ ಅದು ತಪ್ಪಲ್ವಾ ಎಂದಾಗ, ಮಗ್ಳು ಮದುವಿ ವಯಸ್ಸಿಗಿ ಬಂದ್ ಮ್ಯಾಲೇನೇ ಮದುವಿ ಮಾಡಿದ್ದು. "ಆಕಿ ಕೈಗೆ ಬಂದು ಎರ್ಡು ವರ್ಸ ಮನ್ಯಾಗೇ ಐದಾಳ. ಕೈಗೆ ಬಂದು ಆರೇಳು ತಿಂಗ್ಳಿಗೇನೇ ಮದುವಿ ಮಾಡ್ತಾರ ಅಂತಾದ್ರಾಗ ನಾನು ಇನ್ನ ಎರ್ಡು ವರ್ಸ ಲೇಟ್ ಮಾಡೇನಿ. ಕಾನೂನು ಬಾಳ  ಹೇಳ್ತೈತಿ. ಆದ್ರ ನಮ್ ಪರಿಸ್ಥಿತಿನ ಯಾರು ಅರ್ಥ ಮಾಡ್ಕೆಬೇಕು ಹೇಳ್ರಿ. ಇಲ್ಲಿ ಸಾಲಿಗಿ ಕಳ್ಸಾನು ಅಂದ್ರೆ ಅಲ್ಲಿನ ಪರಿಸ್ಥಿತಿ ನೋಡಿ ಬ್ಯಾಡ ಅಂತ ಬಿಡ್ಸಿದೆ. ಸಾಲಿ ಚನ್ನಾಗಿದ್ರ ಮಕ್ಳನ್ನ ಓದ್ಸಾಕ ಮನ್ಸ ಬರ್ತೈತಿ. ಇಲ್ಲಾಂದ್ರ ಹೆಂಗ್ ಓದ್ಸತಾರ. ಆಮ್ಯಾಲ ಇಲ್ಲಿ ಓದು ಮುಗೀತು ಅಂದ್ರ ಮುಂದಿನ ಓದಿಗಿ ಮೋಕಕ್ಕ ಹೋಗ್ಬೇಕು. ಇಲ್ಲಿ ಸಾಲಿ ಗತೀನೇ ಹಿಂಗೈತಿ ಅಂತಾದ್ರಾಗ ಇನ್ನ ಮೋಕ್ದಾಗಿರೋ ಸಾಲಿ ಗತಿ ಏನಾಗಿರ್ತೈತೋ, ಅಲ್ಲಿಗಿ ಸಾಲಿಗಿ ಹೋಗಿ ಮಕ್ಳು ಏನ್ ಕಲಿತಾವೋ ಅಂತ ಭಯ ಆತು. ಅದಕ್ಕೆ ಮಗಳ್ನ ಸಾಲಿಲಿಂದ ಬಿಡ್ಸಿದೆ. ಆಮ್ಯಾಲೆ ಕೈಗೆ ಬಂದ್ ಮಕ್ಳನ ಬಾಳ ದಿನ ಮನ್ಯಾಗ ಇಟ್ಗಬಾರ್ದು. ಇದೆಲ್ಲಾನೂ ಲೆಕ್ಕ ಹಾಕಿದ್ರ ನಾನು ನನ್ ಮಗ್ಳಿಗಿ ಮದುವಿ ಮಾಡಿದ್ದು ಸರಿಗೇ ಐತಿ" ಎಂದರು.

ಹೀಗೆ ಗ್ರಾಮೀಣ ಪ್ರದೇಶಗಳಲ್ಲಿನ ಜನರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವುದೇ ಒಂದು ಮಹತ್ತರ ಸಂಗತಿಯಾಗಿರುತ್ತದೆ. ಅದರಲ್ಲಿಯೂ ಹೆಣ್ಣುಮಕ್ಕಳನ್ನು ಶಾಲೆಗೆ ಅಥವಾ ಕಾಲೇಜಿಗೆ ಕಳುಹಿಸಬೇಕೆಂದರೆ ಹಿಂಜರಿಯುತ್ತಾರೆ. ಅಂತಹ ಸಂದರ್ಭದಲ್ಲಿ ಗ್ರಾಮಗಳಲ್ಲಿ ಇರುವ ಶಾಲೆಗಳು ಸುಸಜ್ಜಿತವಾಗಿ ಇರದೇ ಇದ್ದರೆ, ಅಂತಹ ಶಾಲೆಗಳಿಗೆ ಹೆಣ್ಣುಮಕ್ಕಳನ್ನು ಕಳುಹಿಸುವುದು ಕಷ್ಟದ ಸಂಗತಿ. ಹೆಣ್ಣುಮಕ್ಕಳು ಪ್ರೌಢಶಿಕ್ಷಣವನ್ನು ಪಡೆಯುವುದು ಕನಸಿನ ಮಾತಾಗಿರುತ್ತದೆ. ಹಾಗಾಗಿಯೇ ಅವರನ್ನು ಬಹು ಬೇಗನೇ ಮದುವೆಯೆಂಬ ಕೂಪಕ್ಕೆ ತಳ್ಳುತ್ತಿದ್ದಾರೆ. ಮೇಲಿನ ಎರಡು ಪ್ರಕರಣಗಳನ್ನು ಗಮನಿಸಿದರೆ ಮೊದಲನೇ ಪ್ರಕರಣದಲ್ಲಿನ ಈರಪ್ಪನವರು ಹೇಳುವಂತೆ ತಮ್ಮ ಮಗಳಿಗೆ ಕಾಲೇಜಿಗೆ ಕಳುಹಿಸಲು ಇಷ್ಟವಿದೆ. ಆದರೆ ತಮ್ಮ ಗ್ರಾಮದಿಂದ ಬಹಳ ದೂರ ಇರುವ ಕಾಲೇಜಿಗೆ ಹೋಗಬೇಕಾಗುತ್ತದೆ ಎಂಬ ಕಾರಣಕ್ಕೆ ಹೈಸ್ಕೂಲಿಗೇ ಕೊನೆ ಮಾಡಿಸಿದ್ದಾರೆ. ಇಲ್ಲಿ ಮಹಿಳೆಯರ ರಕ್ಷಣೆಯ ಜವಾಬ್ದಾರಿಯ ಕುರಿತ ಪ್ರಶ್ನೆ ಉದ್ಭವಿಸುತ್ತದೆ. ಗ್ರಾಮದಿಂದ ದೂರವಿರುವ ಶಾಲಾ ಕಾಲೇಜುಗಳಿಗೆ ಹೆಣ್ಣುಮಕ್ಕಳನ್ನು ಕಳುಹಿಸುವುದು ತೀರಾ ಕಡಿಮೆ. ಇತ್ತೀಚೆಗೆ ಇದು ಬದಲಾಗಿದೆಯಾದರೂ ಅದರ ಪ್ರಮಾಣ ಮಾತ್ರ ತುಂಬಾನೇ ಕಡಿಮೆ. ಗ್ರಾಮೀಣ ಭಾಗಗಳಲ್ಲಿ ಇಂದಿಗೂ ಹೆಣ್ಣುಮಕ್ಕಳ ರಕ್ಷಣೆಯ ಬಗೆಗೆ

ಇನ್ನಿಲ್ಲದ ಆತಂಕವಿರುತ್ತವೆ. ಈ ಆತಂಕದ ಹಿಂದಿನ ಉದ್ದೇಶ ಕುಟುಂಬದ ಮತ್ತು ಮನೆತನದ ಗೌರವ, ಪ್ರತಿಷ್ಠೆಯ ಪ್ರಶ್ನೆ ಯಾವಾಗಲೂ ಕಾಡುತ್ತಿರುತ್ತದೆ. ಸಾಮಾಜಿಕ ಮೌಲ್ಯಗಳಿಗೆ ಕಟ್ಟುಬಿದ್ದು ಜನರು ತಮ್ಮ ಮಕ್ಕಳು ಇನ್ನು ಚಿಕ್ಕ ವಯಸ್ಸಿನವರಿದ್ದಾರೆ ಎಂಬುದನ್ನೂ ಮರೆತು ಬಾಲ್ಯ ವಿವಾಹಗಳಿಗೆ ಒಳಗುಮಾಡುತ್ತಿದ್ದಾರೆ. ಹಾಗೆಯೇ ಜನರು ವಾಸಿಸುವ ಗ್ರಾಮಗಳಲ್ಲಿನ ಶಾಲೆಗಳ ಕೊರತೆಗಳು ಸರಿಯಾಗಿ ಇಲ್ಲದಿದ್ದರೂ, ಅದರ ನೇರ ಪರಿಣಾಮ ಹೆಣ್ಣುಮಕ್ಕಳ ಶಿಕ್ಷಣದ ಮೇಲೆ ಬೀಳುತ್ತದೆ. ಅಂದರೆ ಪ್ರತಿಯೊಂದು ಗ್ರಾಮಗಳಲ್ಲಿಯೂ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಶಾಲೆಗಳಿರುವುದು ಕಂಡುಬರುತ್ತದೆ. ಆದರೆ ಈ ಶಿಕ್ಷಣ ಕೇವಲ ಒಂದರಿಂದ ನಾಲ್ಕನೆಯ ತರಗತಿಯ ವರೆಗೋ ಅಥವಾ ಏಳನೆಯ ತರಗತಿಯವರೆಗೋ ಇರುತ್ತದೆ. ಮುಂದಿನ ಹಂತದ ವಿದ್ಯಾಭ್ಯಾಸಕ್ಕಾಗಿ ಅಲ್ಲಿನ ಮಕ್ಕಳು ಬೇರೆ ಊರುಗಳಿಗೆ ಹೋಗಬೇಕಾಗುತ್ತದೆ. ಈ ಸಂದರ್ಭದಲ್ಲಿ ಗಂಡುಮಕ್ಕಳಿಗೆ ಆಯ್ಕೆಗಳಿರುತ್ತವೆ. ಆದರೆ ಹೆಣ್ಣುಮಕ್ಕಳಿಗೆ ಯಾವುದೇ ಬಗೆಯ ಆಯ್ಕೆಗಳು ಇರುವುದಿಲ್ಲ. ಏಕೆಂದರೆ ಅಲ್ಲಿಯವರೆಗೆ ಓದಿಸಿದ್ದೇ ದೊಡ್ಡ ಕಾರ್ಯವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಬೇರೆ ಊರುಗಳಿಗೆ ಕಳುಹಿಸುವುದು ಕನಸಿನ ಮಾತಾಗಿರುತ್ತದೆ. ಇನ್ನು ಕೆಲವು ಸಂದರ್ಭಗಳಲ್ಲಿ ಗ್ರಾಮಗಳಲ್ಲಿಯೇ ಇರುವ ಶಾಲೆಗಳಲ್ಲಿನ ಕಟ್ಟಡಗಳು ಸರಿಯಾಗಿ ಇಲ್ಲದಿದ್ದಾಗ ಅಥವಾ ಅಲ್ಲಿನ ಶಿಕ್ಷಕರು ಮಕ್ಕಳಿಗೆ ಸರಿಯಾಗಿ ಪಾಠ ಹೇಳಿಕೊಡದಿದ್ದಾಗ, ಹೆಣ್ಣುಮಕ್ಕಳನ್ನು ಶಾಲೆಯಿಂದ ಬಿಡಿಸುವಂತಹ ಸಂದರ್ಭಗಳೇ ಅಧಿಕವಾಗಿರುತ್ತವೆ. ಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳ ಕೊರತೆ ಕಂಡುಬಂದರೂ, ಅದರ ನೇರ ಪರಿಣಾಮ ಹೆಣ್ಣುಮಕ್ಕಳ ಶಿಕ್ಷಣದ ಮೇಲಾಗುತ್ತದೆ. ಹೀಗೆ ಬಾಲ್ಯ ವಿವಾಹಗಳು ನಡೆಯಲು ಇದೂ ಒಂದು ಕಾರಣವಾಗಿ ಮಾರ್ಪಟ್ಟಿರುವುದು ಪ್ರಕರಣಗಳಿಂದ ಕಂಡುಬರುತ್ತದೆ.

**ಇ. ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವುದರಿಂದ ಕೆಡುತ್ತಾರೆ ಎಂಬ ನಂಬಿಕೆ** : ಒಂದು ಕಡೆ ಶಾಲೆಗಳಲ್ಲಿನ ಮೂಲಭೂತ ಸೌಲಭ್ಯಗಳು ಇಲ್ಲದಿದ್ದರೆ ಹೆಣ್ಣುಮಕ್ಕಳನ್ನು ಶಿಕ್ಷಣದಿಂದ ವಂಚಿತರನ್ನಾಗಿಸುವ ಸ್ಥಿತಿ ಇದೆ. ಹಾಗೆಯೇ ಇನ್ನೊಂದು ನಂಬಿಕೆಯೆಂದರೆ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವುದರಿಂದ ಕೆಡುತ್ತಾರೆ ಎಂಬುದು. ಈ ನಂಬಿಕೆಯ ಕಾರಣವಾಗಿ ಹೆಣ್ಣುಮಕ್ಕಳನ್ನು ಶಾಲೆಗಳಿಂದ ಹೊರಗುಳಿಸುತ್ತಿದ್ದಾರೆ. ಈ ನಂಬಿಕೆಯ ಹೇರಿಕೆ ಕೇವಲ ಹೆಣ್ಣುಮಕ್ಕಳ ಮೇಲೆಯೇ ಹೊರತು ಗಂಡು ಮಕ್ಕಳ ಮೇಲಲ್ಲ. ಏಕೆಂದರೆ ವ್ಯವಸ್ಥೆಯಲ್ಲಿನ ಮೌಲ್ಯಗಳು ಇರುವುದೇ ಹಾಗೆ. ವ್ಯವಸ್ಥೆಯಲ್ಲಿ ಹೆಣ್ಣುಮಕ್ಕಳಿಗೆ ಯಾವುದೇ ಸ್ವಾತಂತ್ರ್ಯವಿಲ್ಲದಿರುವ ಸಂಗತಿ ತಿಳಿದೇ ಇದೆ. ಅವರು ಸಾಯುವವರೆಗೂ ಪುರುಷನ ಅಧೀನದಲ್ಲಿಯೇ ಇರಬೇಕು. ಇಲ್ಲದಿದ್ದರೆ ಅವರು ಕೆಡುತ್ತಾರೆ ಎಂಬ ನಂಬಿಕೆ ಬಲವಾಗಿ ಬೇರೂರಿಬಿಟ್ಟಿದೆ. ಮನುವಾದಿ ಮೌಲ್ಯಗಳು ಜನರಲ್ಲಿ ಹಾಸುಹೊಕ್ಕಾಗಿವೆ. ಹೆಣ್ಣುಮಕ್ಕಳು ಶಾಲೆಗೆ ಹೋಗುವುದರಿಂದ ಕೆಡುತ್ತಾರೆ

ಎಂಬ ಕಾರಣಕ್ಕಾಗಿಯೇ ಶಿಕ್ಷಣದಿಂದ ವಂಚಿತರನ್ನಾಗಿಸಿ ವಿವಾಹ ಬಂಧನಕ್ಕೆ ಒಳಗು ಮಾಡುತ್ತಿದ್ದಾರೆ. ಇಲ್ಲಿ ಗಂಡು ಮಕ್ಕಳು ಶಾಲೆಗೆ ಹೋಗುವುದರಿಂದ ಕೆಡುವುದಿಲ್ಲ ಎಂಬ ನಂಬಿಕೆ ಬಲವಾಗಿದೆ. ಹಾಗೆಯೇ ಅವರು ಸ್ವೇಚ್ಛಾಚಾರಿಗಳಾಗಿ ಬದುಕುವ ಅವಕಾಶವನ್ನು ವ್ಯವಸ್ಥೆ ಒದಗಿಸಿಕೊಟ್ಟಿದೆ. ಹಾಗಾಗಿಯೇ ಗಂಡು ಮಕ್ಕಳ ಶಿಕ್ಷಣಕ್ಕೆ ಅಧಿಕವಾದ ಪ್ರೋತ್ಸಾಹ ದೊರೆಯುತ್ತಿದೆ. ಹೆಣ್ಣುಮಕ್ಕಳು ಶಾಲೆಗೆ ಹೋಗುವುದರಿಂದ ಕೆಡುತ್ತಾರೆ ಎಂಬುದಕ್ಕೆ ಹಲವಾರು ಉದಾಹರಣೆಗಳನ್ನು ನೀಡಿರುವುದು ಕಂಡುಬರುತ್ತದೆ. ಈ ಉದಾಹರಣೆಗಳು ಪಿತೃಪ್ರಧಾನ ವ್ಯವಸ್ಥೆಗೆ ಹಿಡಿದ ಕನ್ನಡಿಯಂತಿವೆ. ಅಂದರೆ ಕುಟುಂಬದ ಹಿರಿಯರು ಯೋಚಿಸುವ ನೆಲೆಗಳು ಇಂದಿಗೂ ಸಾಂಪ್ರದಾಯಿಕವಾಗಿವೆ ಎಂದೇ ಹೇಳಬಹುದು. ಈ ಆಲೋಚನೆಯ ಕಾರಣದಿಂದ ಹೆಣ್ಣುಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡುತ್ತಿರುವುದು ಕಂಡುಬರುತ್ತಿದೆ. ಹೆಣ್ಣುಮಕ್ಕಳು ಶಾಲೆಗೆ ಹೋಗುವುದರಿಂದ ಯಾವ ರೀತಿಯಲ್ಲಿ ಕೆಡುತ್ತಾರೆ ಎಂಬುದಕ್ಕೆ ಹಲವಾರು ಕಾರಣಗಳನ್ನು ವಕ್ತೃಗಳು ನೀಡಿದ್ದಾರೆ. ಅಂದರೆ ವಿಜಾತಿಯ ಹುಡುಗರನ್ನು ಪ್ರೀತಿಸುವುದು ಮತ್ತು ಯಾರಿಗೂ ಹೇಳದಂತೆ ಓಡಿ ಹೋಗಿ ಮದುವೆಯಾಗುವುದು, ತಂದೆ ತಾಯಿ ಮಾತನ್ನು ಕೇಳದೇ ಇರುವುದು ಹೀಗೆ ಹಲವು ಕಾರಣಗಳನ್ನು ನೀಡುತ್ತಾರೆ. ಈ ಕಾರಣಗಳನ್ನು ಮುಂದಿಟ್ಟುಕೊಂಡು ಹೆಣ್ಣುಮಕ್ಕಳನ್ನು ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡುತ್ತಿದ್ದಾರೆ. ಇವುಗಳನ್ನು ಪ್ರಕರಣಗಳ ಮೂಲಕವೇ ವಿವರಿಸಿಕೊಳ್ಳುವುದು ಅಗತ್ಯವಾಗಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ವ್ಯಾಸನಕೆರೆ ಗ್ರಾಮದಲ್ಲಿನ ನಿರ್ಮಲ ಎನ್ನುವ ಹುಡುಗಿ ಇನ್ನು ಏಳನೇ ತರಗತಿ ಓದುತ್ತಿರುವಾಗಲೇ ಆಕೆಯನ್ನು ಶಾಲೆಯಿಂದ ಬಿಡಿಸಿ ಮದುವೆ ಮಾಡಿದ್ದಾರೆ. ಈಗ ಆ ಹುಡುಗಿಗೆ ಒಂದು ಮಗು ಇದೆ. ಇವರನ್ನು ಭೇಟಿಯಾದಾಗ ಅವರು ಹೇಳಿದ್ದು ಹೀಗೆ "ನಮ್ ಅಪ್ಪ ಅಮ್ಮಗ ಇಬ್ರೆ ಮಕ್ಳು. ನಾನೇ ಚಿಕ್ಕೋಳು. ನಮ್ ಅಣ್ಣ ಒಬ್ಬೋನು ಐದಾನ. ನಾನು ಇನ್ನ ಏಳ್ನೇ ಕ್ಲಾಸು ಓತಿದ್ದೆ. ಆವಾಗ್ಲೇ ಸಾಲಿ ಬಿಡಿಸಿಬಿಟ್ರು. ಯಾಕಂತ ಕೇಳಿದ್ರೆ ನೀನು ಸಾಲಿಗಿ ಹೋಗಾದು ಬ್ಯಾಡ ಮನ್ಯಾಗೇ ಕೆಲ್ಸ ಮಾಡ್ಕೆಂಡು ಇರು. ಅಮ್ಮಗ ಸತೆ ಆಸ್ರಾಗ್ತೈತಿ ಅಂತ ಹೇಳಿದ್ರು. ನಾನು ಓದ್ಬೇಕು ಅಂತ ಹೇಳಿದ್ರೂ ಸತೆ ಕೇಳ್ಲಿಲ್ಲ. ಬಿಡ್ಸಿ ಬಿಟ್ರು. ಸಾಲಿ ಬಿಡ್ಸಿ ಒಂದು ವರ್ಸಕ್ಕ ನನಿಗಿ ಮದುವಿ ಮಾಡಿದ್ರು. ಆಮ್ಯಾಲೆ ಗೊತ್ತಾತು. ನನ್ನ ಯಾಕ ಸಾಲಿಗಿ ಕಳಿಸ್ಲಿಲ್ಲ ಅಂತ. ಊರಾಗ ನಮ್ ಜನ್ದಾಗಿನ ಹುಡುಗ ಬ್ಯಾರೆ ಜಾತಿ ಹುಡುಗೀನ್ನ ಪ್ರೀತ್ಸಿದ್ನಂತೆ. ಅವ್ರು ಯಾರ್ಗೂ ಹೇಳ್ಲಾರ್ದಂಗ ಊರುಬಿಟ್ಟು ಓಡಿ ಹೋಗಿ ಮದುವಿ ಆಗ್ಯಾರಂತೆ. ಅದನ್ನೆ ನೆಪ ಮಾಡ್ಕೆಂಡು ನನ್ ಮದುವೀನ ಜಲ್ದಿ ಮಾಡಿಬಿಟ್ರು" ಎಂದರು. ನಿರ್ಮಲ ಅವರ ತಂದೆಯನ್ನು ಮಾತನಾಡಿಸಿದಾಗ ಅವರು ಹೇಳಿದ್ದು ಹೀಗೆ "ಸಾಲಿ ಕಳ್ಸಾಕ ನಮಿಗೇನು ತೊಂದ್ರಿ ಇದ್ದಿಲ್ಲ. ಆದ್ರ ಊರಾಗಿನ ಹುಡುಗ್ರು ಹಿಂಗ ಪ್ರೀತಿಗೀತಿ ಅಂತ ಮನಿಬಿಟ್ಟು ಓಡಿ ಹೋದ್ರ ಇಲ್ಲಿ

ನಮ್ ಗತಿ ಏನು?. ಸಾಲಿಗಿ ಹೋಗ್ತೀವಂತ ಹೇಳಿ ಹಂಗೆ ಓಡಿ ಹೋದ್ರ ನಮ್ ಮರ್ಯಾದಿ ಏನ್ ಆಗ್ಬೇಕು? ನಮ್ ಮಗ್ಳು ಹಂಗೇನಿಲ್ಲ. ಆದ್ರೂ ಗಂಡ್ಮಕ್ಳು ಹೇಳಾಕ ಬರಂಗಿಲ್ಲ. ಯಾವಾಗ ಹೆಂಗ್ ಇರ್ತಾರ ಅಂತ. ನಮ್ ಊರಾಗೇ ನಮ್ ಮಂದ್ಯಾಗಿನ ಹುಡುಗ ಹಿಂಗ ಪ್ರೀತಿ ಗೀತಿ ಅಂತೇಳಿ ಬ್ಯಾರೆ ಜಾತಿ ಹೆಣ್ಮಗಳ್ನ ಓಡಿಸಿಕೆಂಡು ಹೋಗಿ ಮದುವಿ ಆದ. ಇಲ್ಲಿ ನೋಡಿದ್ರ ಅವ್ರ ಅಪ್ಪ ಅಮ್ಮಂದು ಪರಿಸ್ಥಿತಿ ಹೇಳ್ಬಾರ್ದು ಹಂಗಾಗೇತಿ. ಅವ್ರು ಊರಾಗ ತಲಿಎತ್ತಿ ನಿಲ್ಲಾಕಾಗಲ್ಲ ಹಂಗ ಆಗೇತಿ. ಅವ್ನು ಇಲ್ಲೆ ಕಾಲೇಜಿಗೆ ಹೋಗ್ತಿದ್ದ. ಆ ಹುಡುಗಿ ಸತೆ ಕಾಲೇಜಿಗಿ ಹೋಗ್ತಿದ್ಲು. ಇಬ್ರಿಬ್ರು ಹಿಂಗ್ ಮಾಡಿಬಿಟ್ರು. ಚೆನ್ನಾಗಿ ಓದ್ಲಿ ಅಂತೇಳಿ ಸಾಲಿಗಿ ಕಳಿಸಿದ್ರೆ ಇವ್ರು ಹಿಂಗ ಮಾಡ್ತಾರ. ಒಂದೆರ್ಡು ಅಕ್ಷರ ಕಲ್ತ್ರು ಅಂದ್ರೆ ಆತು ಯಾರ ಮಾತು ಸತೆ ಕೇಳಂಗಿಲ್ಲ. ತಂದೆ ತಾಯಿಗೇ ಮಂತ್ರ ಹೇಳ್ತಿರ್ತಾರ. ಎದುರು ಮಾತಾಡೋದು, ಅವ್ರಿಗೆ ಯೆಂಗ ತಿಳಿತ್ತೈತೋ ಹಂಗ ಮಾತಾಡೋದು, ಅವ್ರು ಮಾಡಿದ್ದೇಲಾ ಸರಿ ಅನ್ನೋ ಅಹಂ ಅವ್ರಿಗಿ ಇರ್ತೈತಿ. ಹಿಂಗ ಆದ್ರ ಮುಂದಿನ ಜೀವ್ನ ಹೆಂಗ. ಪ್ರೀತಿಗೀತಿ ಅಂತ ಓಡಿಹೋಗೋದು, ತಂದಿತಾಯಿಗಿ ಎದುರು ಮಾತಾಡೋದು ಇದನ್ನೆಲ್ಲಾ ನೋಡಿದ್ರ. ನಾವು ಹುಟ್ಸಿದ್ ಮಕ್ಕಿಂದ ಊರಾಗ ನಮ್ ಮರ್ಯಾದಿ ತಗ್ಸಿಕೆಳ್ಳಬೇಕಾದ ಪರಿಸ್ಥಿತಿ ಬಂದ್ಯೆತಿ. ಇದೆಲ್ಲಾ ಯಾಕ ಬೇಕು ಅಂತೇಳಿ. ಇರೋದು ಒಬ್ಬೇ ಮಗ್ಳು. ಯಾವತ್ತಿದ್ರೂ ಮದುವಿ ಆಗಿ ಬ್ಯಾರೆ ಮನಿಗಿ ಸೇರ್ಬೇಕಾದೋಳು. ಸಾಲಿ ಓದ್ಸಾದು ಸಾಕು ಅಂತೇಳಿ ಬಿಡ್ಸಬಿಟ್ವಿ. ಒಂದು ವರ್ಸ ಮನ್ಯಾಗೇ ಕೆಲ್ಸ ಮಾಡಿಕೆಂಡು ಇದ್ದು. ಮನಿ ಕೆಲ್ಸಾನೆಲ್ಲಾ ಕಲ್ತು ಬಿಟ್ಲು. ಆಮ್ಯಾಲೆ ಮದುವಿ ಮಾಡಿದ್ವಿ. ಈಗ ನನಿಗೆ ಯಾವ ಯೋಚ್ನೆನೂ ಇಲ್ಲ. ಇಬ್ರು ಮಕ್ಳ ಮದುವೀನೂ ಮಾಡಿಬಿಟ್ಟೀನಿ. ಅವ್ರ ಪಾಡಿಗಿ ಅವ್ರು ಜೀವ್ನ ನಡ್ಸಿಕೆಂಡು ಹೋಗಕತ್ಯಾರ" ಎಂದರು.

ಈ ಒಂದು ಪ್ರಕರಣ ಸಾಂಕೇತಿಕವಾಗಿ ವಿವರಿಸಲಾಗಿದೆಯಾದರೂ, ಈ ಬಗೆಯ ನಂಬಿಕೆಗಳನ್ನು ಹೊಂದಿರುವ ಹಲವು ಪ್ರಕರಣಗಳು ಕಂಡುಬರುತ್ತದೆ. ವ್ಯವಸ್ಥೆಯಲ್ಲಿ ಜಾತಿಯ ಮೂಲಭೂತವಾದ ಹೆಚ್ಚಾಗಿ ತಾಂಡವವಾಡುತ್ತಿರುವುದು ವಾಸ್ತವ ಸತ್ಯ. ಈ ಜಾತಿಯ ಲೆಕ್ಕಾಚಾರಗಳು ಬಹು ಕಠಿಣವಾಗಿರುತ್ತವೆ. ವಿವಾಹಕ್ಕೆ ಇವೇ ಮೂಲ ಆಧಾರವಾಗಿರುತ್ತವೆ. ಏಕೆಂದರೆ ಒಂದು ಜಾತಿಯ ಸಮುದಾಯ ಬೇರೊಂದು ಜಾತಿಯ ಸಮುದಾಯದೊಂದಿಗೆ ವಿವಾಹ ಸಂಬಂಧಗಳನ್ನು ಏರ್ಪಡಿಸುವುದಿಲ್ಲ. ಅಂತರ್ಜಾತೀಯ ವಿವಾಹಗಳಿಗೆ ಹಿಂದಿನಿಂದಲೂ ವಿರೋಧವಿದ್ದು ಇಂದಿಗೂ ಮುಂದುವರೆದಿದೆ. ಹೀಗೆ ಅಂತರ್ಜಾತೀಯ ವಿವಾಹವಾದವರನ್ನು ಕೊಲೆ ಮಾಡಿರುವ ಘಟನೆಗಳೂ ವ್ಯವಸ್ಥೆಯಲ್ಲಿ ಕಂಡುಬರುತ್ತವೆ. ಅಂದರೆ ಮರ್ಯಾದಾ ಹತ್ಯೆಗಳು ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇವೆ. ಮುಖ್ಯವಾಗಿ ಕುಟುಂಬದ ಮರ್ಯಾದೆಯನ್ನು ಕಾಪಾಡಿಕೊಳ್ಳುವುದಕ್ಕೋಸ್ಕರ ಈ ಬಗೆಯ ಹತ್ಯೆಗಳು ನಡೆಯುತ್ತಿವೆ. ಗ್ರಾಮೀಣ ಭಾಗಗಳಲ್ಲಿ ಈ ಬಗೆಯಲ್ಲಿ ಅಂದರೆ ಯಾರಾದರೂ ಪ್ರೀತಿಸಿ, ವಿವಾಹವಾದಂತಹದ್ದು ಕಂಡುಬಂದರೆ, ಅವರನ್ನು ವ್ಯವಸ್ಥೆ ನೋಡುವಂತಹ ರೀತಿಯೇ ಬೇರೆಯಾಗಿರುತ್ತದೆ.

ಅದರಲ್ಲಿಯೂ ಅಂತರ್ಜಾತೀಯ ವಿವಾಹವಾದರಂತೂ ಅವರನ್ನು ವ್ಯವಸ್ಥೆಯಿಂದಲೇ ಅನ್ಯರನ್ನಾಗಿ ನೋಡಲಾಗುತ್ತದೆ. ಈ ಬಗೆಯ ಪ್ರಕರಣಗಳು ಗ್ರಾಮೀಣ ಭಾಗಗಳಲ್ಲಿ ಕಂಡುಬಂದರೆ, ಅಲ್ಲಿನ ಜನರು ಮಂಜಾಗ್ರತಾ ಕ್ರಮಗಳನ್ನು ಕೈಗೊಳ್ಳುತ್ತಾರೆ. ಅಂದರೆ ತಮ್ಮ ಮನೆಯ ಹೆಣ್ಣುಮಕ್ಕಳು ಈ ಬಗೆಯ ಘಟನೆಗಳಿಗೆ ಒಳಗಾಗದಿರಲಿ ಎಂಬ ಕಾರಣಕ್ಕೆ ಬಹು ಬೇಗನೇ ವಿವಾಹ ಮಾಡುವುದನ್ನು ಕಾಣಬಹುದು. ಒಂದು ಕುಟುಂಬದ ಮರ್ಯಾದೆಯ ಪ್ರಶ್ನೆ ಎದುರಾದರೆ ಇನ್ನೊಂದು ಈ ಮರ್ಯಾದೆಯನ್ನು ಹೆಣ್ಣುಮಕ್ಕಳೇ ಹಾಳುಮಾಡುತ್ತಿದ್ದಾರೆ ಅಥವಾ ಅವರಿಂದಲೇ ಕುಟುಂಬದ ಮರ್ಯಾದೆ ನಾಶವಾಗುತ್ತಿದೆ ಎಂಬುದು. ಈ ಎರಡೂ ನೆಲೆಗಳನ್ನು ಗಮನಿಸಿದರೆ ಕುಟುಂಬದ ಗೌರವ ಅಥವಾ ಮರ್ಯಾದೆಯನ್ನು ಕಾಪಾಡುವುದು ಅಥವಾ ಮುಂದುವರೆಸಿಕೊಂಡು ಹೋಗುವುದು ಎಂಬುದು ಯಾವತ್ತೂ ಗಂಡಿಗೆ ಅನ್ವಯಿಸುವುದಿಲ್ಲವೇ? ಗಂಡಿನ ಜಾವಾಬ್ದಾರಿ ಇಲ್ಲವೇ? ಒಂದುವೇಳೆ ಕುಟುಂಬದಲ್ಲಿ ಪುರುಷನು ತಮ್ಮದಲ್ಲದ ಜಾತಿಯ ಹುಡುಗಿಯನ್ನು ಪ್ರೀತಿಸಿ ವಿವಾಹವಾದರೆ ಅವರನ್ನು ಕೆಲವು ಸಮಯದವರೆಗೆ ಇವರನ್ನು ಕುಟುಂಬದ ಚಟುವಟಿಕೆಗಳಿಂದ ದೂರವಿಟ್ಟಿರುತ್ತಾರೆ. ನಂತರದ ದಿನಗಳಲ್ಲಿ ಎಲ್ಲರೂ ಅನ್ಯೋನ್ಯವಾಗಿ ಜೀವಿಸುತ್ತಾರೆ. ಇಲ್ಲಿ ಕುಟುಂಬದ ಗೌರವ ಗಂಡಿನಿಂದ ಹಾಳಾದರೂ ಅದನ್ನು ಸಹಿಸಿಕೊಳ್ಳುತ್ತದೆ, ಮತ್ತು ತಿದ್ದಿಕೊಳ್ಳುತ್ತದೆ ಈ ವ್ಯವಸ್ಥೆ. ಇಲ್ಲಿ ಕುಟುಂಬದ ಗೌರವ ಗಂಡಿನಿಂದ ಹಾಳಾದರೂ ಅದರ ಜವಾಬ್ದಾರಿ ಮಾತ್ರ ಹೆಣ್ಣು ಹೊರಬೇಕಾಗುತ್ತದೆ. ಇದಕ್ಕೆ ಹೆಣ್ಣೇ ಕಾರಣ ಎಂಬುದಾಗಿ ಬಿಂಬಿಸಲಾಗುತ್ತದೆ. ಈ ಬಗೆಯ ಆಲೋಚನೆಯ ಕಾರಣದಿಂದ ಹೆಣ್ಣು ಪ್ರತೀ ಹಂತದಲ್ಲಿಯೂ ದೂಷಿಸಲ್ಪಡುತ್ತಿದ್ದಾಳೆ. ಮೇಲಿನ ಪ್ರಕರಣದಲ್ಲಿ ಹೇಳುವಂತೆ ತಮ್ಮ ಮಕ್ಕಳೇ ತಮ್ಮ ಮತ್ತು ಮನೆಯ ಮರ್ಯಾದೆಯನ್ನು ಕಳೆಯುತ್ತಿದ್ದಾರೆ ಎಂಬಂತಹ ಆತಂಕದ ಮಾತುಗಳು ಕೇಳಿಬರುತ್ತಿವೆ. ಈ ಆತಂಕವೇ ಇನ್ನಿತರೆ ಮಹಿಳೆಯರನ್ನು ಬೇರೊಂದು ಸಮಸ್ಯೆಗೆ ಎಡೆಮಾಡಿಕೊಡುತ್ತದೆ. ಅಂದರೆ ಬಾಲ್ಯ ವಿವಾಹವಾಗಲು ಇದೊಂದು ಪ್ರಮುಖ ಕಾರಣವಾಗಿ ಮಾರ್ಪಡುತ್ತದೆ. ಕುಟುಂಬದಲ್ಲಿನ ಹೆಣ್ಣುಮಕ್ಕಳಿಗೆ ಮನೆಗೆಲಸವನ್ನು ಹೇಳಿಕೊಡುವುದರಲ್ಲಿನ ಉತ್ಸಾಹ ಶಿಕ್ಷಣ ಕೊಡಿಸುವುದರಲ್ಲಿ ಇರುವುದಿಲ್ಲ. ಏಕೆಂದರೆ ಹೆಣ್ಣುಮಕ್ಕಳು ಓದು ಕಲಿತು ಏನು ಮಾಡಬೇಕಾಗಿದೆ. ಅವರು ಎಂದಿದ್ದರೂ ಗಂಡನ ಮನೆಗೆ ಸೇರುವವರು ಎಂಬ ಮನೋಭಾವ ಬಲಿಷ್ಠವಾಗಿ ಬೇರೂರಿಬಿಟ್ಟಿದೆ. ಹಾಗಾಗಿಯೇ ಕುಟುಂಬದಲ್ಲಿನ ತಂದೆ ತಾಯಂದಿರು ತಮ್ಮ ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಿಸುವುದರಲ್ಲಿ ಹಿಂದೇಟು ಹಾಕುತ್ತಿದ್ದಾರೆ. ಇದುವೇ ಬಾಲ್ಯ ವಿವಾಹಕ್ಕೆ ಪ್ರಮುಖ ಕಾರಣವಾಗಿ ಮಾರ್ಪಡುತ್ತಿದೆ. ಅಧ್ಯಯನ ಕ್ಷೇತ್ರವ್ಯಾಪ್ತಿಯಾದಂತಹ ನಾಲ್ಕು ಜಿಲ್ಲೆಗಳಲ್ಲಿನ ಬಾಲ್ಯ ವಿವಾಹ ಪ್ರಕರಣಗಳನ್ನು ಸಂಗ್ರಹಿಸಿ ಅವರನ್ನು ಭೇಟಿಯಾಗಿ ಅವರಿಂದ ಮಾಹಿತಿಯನ್ನು ಪಡೆದಾದ ನಂತರ ಶೈಕ್ಷಣಿಕ ಕಾರಣಗಳು ಬಾಲ್ಯವಿವಾಹಕ್ಕೆ ಯಾವ ಪ್ರಮಾಣದಲ್ಲಿ ಕಾರಣವಾಗಿವೆ ಎಂಬುದನ್ನು ಕೆಳಗಿನ ಕೋಷ್ಟಕ ಮತ್ತು ನಕ್ಷೆಯಲ್ಲಿ ಗುರುತಿಸಲಾಗಿದೆ.

**ಕೋಷ್ಟಕ ೯.೬**

**ಶೈಕ್ಷಣಿಕ ವ್ಯವಸ್ಥೆಯಲ್ಲಿನ ಕೊರತೆಗಳು**

| ಶೈಕ್ಷಣಿಕ ಕಾರಣಗಳು | ಹೌದು | | ಇಲ್ಲ | | ಈ ಪ್ರಶ್ನೆಗೆ ಮೌನ ವಹಿಸಿದವರು | |
|---|---|---|---|---|---|---|
| ಅನಕ್ಷರತೆ/ ಅಜ್ಞಾನ | ೨೨೮ | ೭೬% | ೪೦ | ೧೩.೩೩% | ೩೨ | ೧೦.೬೬% |
| ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳು ಇಲ್ಲದೇ ಇರುವುದು | ೧೩೪ | ೪೪.೬೬% | ೮೨ | ೨೭.೩೩% | ೮೪ | ೨೮% |
| ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವುದರಿಂದ ಕೆಡುತ್ತಾರೆ ಎಂಬ ನಂಬಿಕೆ | ೧೯೬ | ೬೫.೩೩% | ೨೬ | ೮.೬೬% | ೭೮ | ೨೬% |




**ರೇಖಾಚಿತ್ರ ೯.೬ ಶೈಕ್ಷಣಿಕ ವ್ಯವಸ್ಥೆಯಲ್ಲಿನ ಕೊರತೆಗಳು**

ಅಧ್ಯಯನ ಕ್ಷೇತ್ರದ ನಾಲ್ಕು ಜಿಲ್ಲೆಗಳಲ್ಲಿನ ಬಾಲ್ಯ ವಿವಾಹಕ್ಕೆ ಸಂಬಂಧಿಸಿದ ಪ್ರಕರಣಗಳಲ್ಲಿನ ವಕ್ತೃಗಳನ್ನು ನೇರವಾಗಿ ಭೇಟಿಯಾಗಿ ಅವರು ನೀಡಿದಂತಹ ಮಾಹಿತಿಯನ್ನು ಆಧರಿಸಿ ಶೈಕ್ಷಣಿಕವಾಗಿ ಇರುವಂತಹ ಕಾರಣಗಳನ್ನು ಗುರುತಿಸಲಾಗಿದೆ. ಮುಖ್ಯವಾಗಿ ಮುನ್ನೂರು ಪ್ರಕರಣಗಳಲ್ಲಿನ ವಕ್ತೃಗಳಲ್ಲಿ ಶೇ.೭೬ರಷ್ಟು ಪ್ರಮಾಣದ ಜನರು ಅನಕ್ಷರಸ್ಥರಾಗಿದ್ದಾರೆ. ಈ ಕಾರಣಕ್ಕಾಗಿಯೇ ಬಾಲ್ಯ ವಿವಾಹಗಳು ಅಧಿಕವಾಗಿರುವುದು ಕಂಡುಬರುತ್ತಿವೆ. ಜೊತೆಗೆ ಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳು ಇಲ್ಲದೇ ಇರುವ ಕಾರಣಕ್ಕಾಗಿ ಮಕ್ಕಳನ್ನು ಅದರಲ್ಲಿಯೂ ಹೆಣ್ಣುಮಕ್ಕಳನ್ನು ಶಾಲೆಯಿಂದ ಬಿಡಿಸಿ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ

ಮಾಡಿದಂತಹ ಪ್ರಮಾಣ ಶೇ.೪೪.೬೬ರಷ್ಟಿದೆ. ಈ ಕಾರಣವನ್ನು ಅಲ್ಲಗೆಳೆದವರ ಪ್ರಮಾಣ ಶೇ.೨೭.೩೩ರಷ್ಟಿದೆ, ಹಾಗೆಯೇ ಈ ಪ್ರಶ್ನೆಗೆ ಉತ್ತರಿಸದೇ ಮೌನವಹಿಸಿದವರ ಪ್ರಮಾಣ ಶೇ.೨೮ರಷ್ಟಿರುವುದು ಕಂಡುಬರುತ್ತದೆ. ಇನ್ನು ಹೆಣ್ಣುಮಕ್ಕಳು ಶಾಲೆಗೆ ಹೋಗುವುದರಿಂದ ಕೆಡುತ್ತಾರೆ ಎಂಬ ಮನೋಭಾವದಿಂದಾಗಿ ಅವರನ್ನು ಶಾಲೆಯಿಂದ ಬಿಡಿಸಿ ಪಿವಾಹ ಬಂಧನಕ್ಕೆ ಒಳಗು ಮಾಡಿದಂತಹ ಪ್ರಮಾಣ ಶೇ.೬೫.೩೩ರಷ್ಟಿದೆ. ಹೀಗೆ ಅನಕ್ಷರತೆ, ಶಾಲೆಗಳಲ್ಲಿನ ಮೂಲಭೂತ ಸೌಲಭ್ಯಗಳು ಇಲ್ಲದೇ ಇರುವುದು ಮತ್ತು ಹೆಣ್ಣುಮಕ್ಕಳು ಶಾಲೆಗೆ ಕಳುಹಿಸುವುದರಿಂದ ಕೆಡುತ್ತಾರೆ ಎಂಬ ಭಾವನೆ ಈ ಎಲ್ಲಾ ಕಾರಣಗಳಿಗಾಗಿ ಚಿಕ್ಕ ಮಕ್ಕಳಿರುವಾಗಲೇ ವಿವಾಹ ಬಂಧನಕ್ಕೆ ಒಳಗು ಮಾಡಲಾಗುತ್ತದೆ. ಹಾಗಾಗಿಯೇ ನಾಲ್ಕೂ ಜಿಲ್ಲೆಗಳಲ್ಲಿ ಬಾಲ್ಯವಿವಾಹಗಳ ಪ್ರಮಾಣ ಅಧಿಕವಾಗಿರುವುದನ್ನು ಕಾಣಬಹುದಾಗಿದೆ. ಈ ಮೇಲಿನ ಎಲ್ಲಾ ಕಾರಣಗಳಿಗಾಗಿ ಶಾಲೆಗೆ ಹೋಗುವಂತಹ ಮಕ್ಕಳ ಸಂಖ್ಯೆಯೂ ಕಡಿಮೆಯಾಗಿರುವುದು ಕಂಡುಬರುತ್ತದೆ. ೨೦೧೩–೧೪ರ ಸರ್ವೆ ಪ್ರಕಾರ ಕರ್ನಾಟಕದಲ್ಲಿ ಪ್ರಾಥಮಿಕ ಹಂತದಿಂದ ಹಿಡಿದು ಪ್ರೌಢಶಾಲೆಯವರೆಗೆ ಶಾಲೆ ಬಿಟ್ಟ ಮಕ್ಕಳ ಪ್ರಮಾಣವನ್ನು ಗಮನಿಸಬೇಕಾದ ಅಗತ್ಯತೆ ಇದೆ. ಏಕೆಂದರೆ ನಾನಾ ಕಾರಣಗಳಿಗಾಗಿ ಶಾಲೆಯನ್ನು ಬಿಡುವ ಮತ್ತು ಶಾಲೆಯಿಂದ ಬಿಡಿಸುವ ಕಾರ್ಯಗಳು ನಡೆಯುತ್ತವೆ. ಹೀಗೆ ಶಾಲೆಬಿಟ್ಟಂತಹ ಮಕ್ಕಳನ್ನು ನೇರವಾಗಿ ಮದುವೆ ಎಂಬ ಸಂಸ್ಥೆಗೆ ತಳ್ಳುತ್ತಿರುವುದು ಒಂದು ವಿಪರ್ಯಾಸವೇ ಸರಿ. ಹಾಗಾಗಿ ಶಾಲೆಬಿಟ್ಟ ಮಕ್ಕಳ ಪ್ರಮಾಣವನ್ನು ನೋಡುವುದಾದರೆ,

**ಕೋಷ್ಟಕ ೯.೬.೧**

**ಕರ್ನಾಟಕದಲ್ಲಿ ಶಾಲೆಬಿಟ್ಟ ಮಕ್ಕಳ ಜಾತಿವಾರು ಪ್ರಮಾಣ**

| Caste | Primary level | | | Upper primary | | | Elementary | | | Secondary level | | |
|---|---|---|---|---|---|---|---|---|---|---|---|---|
| | B | G | T | B | G | T | B | G | T | B | G | T |
| SC | 2.41 | 2.06 | 2.24 | 1.99 | 2.83 | 2.39 | 2.26 | 2.33 | 2.29 | 28.58 | 27.03 | 27.85 |
| ST | 3.62 | 3.53 | 3.58 | 4.03 | 3.87 | 3.96 | 3.77 | 3.65 | 3.71 | 28.85 | 26.56 | 27.78 |
| OBC | -- | -- | -- | 2.94 | 3.22 | 3.07 | 0.94 | 0.82 | 0.88 | 23.95 | 21.77 | 22.88 |
| Muslim | 2.44 | 2.41 | 2.42 | 6.80 | 3.60 | 5.22 | 3.94 | 2.82 | 3.39 | 35.21 | 34.03 | 34.60 |

**Source :** School Education in India; U-DISE-2014-15; National University of Educational Planning and Administration And Department of School Education and Literacy; Ministry of Human Resource Development; Government of India; 2015. ( B-Boys, G-Girls, T-Total)




**ರೇಖಾಚಿತ್ರ ೯.೬.೧ ಕರ್ನಾಟಕದಲ್ಲಿ ಶಾಲೆಬಿಟ್ಟ ಮಕ್ಕಳ ಜಾತಿವಾರು ಪ್ರಮಾಣ**

ಮೇಲಿನ ಕೋಷ್ಟಕವನ್ನು ಗಮನಿಸಿದರೆ ೨೦೧೩-೧೪ನೇ ಸಾಲಿನಲ್ಲಿ ಕರ್ನಾಟಕದಲ್ಲಿ ಶಾಲೆಯಿಂದ ಹೊರಗುಳಿದ ಮಕ್ಕಳ ಪ್ರಮಾಣವನ್ನು ಕೊಡಲಾಗಿದೆ. ಶಾಲೆಯಿಂದ ಹೊರಗುಳಿದ ಹುಡುಗ ಮತ್ತು ಹುಡುಗಿಯರ ಪ್ರಮಾಣದಲ್ಲಿ ಸ್ವಲ್ಪಮಟ್ಟಿಗಿನ ವ್ಯತ್ಯಾಸವಿರುವುದನ್ನು ಕಾಣಬಹುದು. ಎಲ್ಲಾ ಜಾತಿಗಳಲ್ಲಿಯೂ ಇದು ಸಾಮಾನ್ಯವಾಗಿ ಕಂಡುಬರುತ್ತದೆ. ಮುಖ್ಯವಾಗಿ ಪ್ರಾಥಮಿಕ ಹಂತದಿಂದ ಹಿಡಿದು ಪ್ರೌಢ ಶಿಕ್ಷಣದವರೆಗಿನ ಪ್ರಮಾಣದಲ್ಲಿ ಏರಿಕೆಯಾಗಿದೆ. ಅಂದರೆ ಪ್ರೌಢ ಹಂತಕ್ಕೆ ಬರುವ ವೇಳೆಗಾಗಲೇ ಮಕ್ಕಳು ಶಾಲೆಯಿಂದ ಹೊರಗುಳಿಯುವಂತದ್ದು ಹೆಚ್ಚಾಗಿರುವುದನ್ನು ಗಮನಿಸಬಹುದು. ಮುಖ್ಯವಾಗಿ ಮುಸ್ಲಿಂ ಸಮುದಾಯದವರಲ್ಲಿ ಪ್ರೌಢ ಹಂತಕ್ಕೆ ಬರುವ ಮಕ್ಕಳು ತುಂಬಾನೇ ಕಡಿಮೆ. ಶಾಲೆಯಿಂದ ಹೊರಗುಳಿದ ಮಕ್ಕಳು ನೇರವಾಗಿ ವಿವಾಹ ಸಂಸ್ಥೆಗೆ ಸೇರುವುದರಿಂದ ಅವರುಗಳೆಲ್ಲರೂ ಬಾಲ್ಯವಿವಾಹಗಳಿಗೆ ತುತ್ತಾಗಿರುತ್ತಾರೆ. ಹೆಣ್ಣುಮಕ್ಕಳು ಬೇರೆ ಬೇರೆ ಕಾರಣಗಳಿಗಾಗಿ ಶಾಲೆಯಿಂದ ಹೊರಗುಳಿಯುವಂತಹ ಸ್ಥಿತಿ ಇದೆ. ಅಧ್ಯಯನ ಕ್ಷೇತ್ರ ವ್ಯಾಪ್ತಿಯಾದ ಬಳ್ಳಾರಿ, ಕೊಪ್ಪಳ, ಗದಗ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆಯನ್ನು ಗಮನಿಸಿದರೆ ಇಲ್ಲಿನ ಮಕ್ಕಳ ಶೈಕ್ಷಣಿಕ ಸ್ಥಿತಿಗತಿಯನ್ನು ಗುರುತಿಸಬಹುದಾಗಿದೆ. ೨೦೧೪-೧೫ರಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ ಶಾಲೆಯಿಂದ ಹೊರಗುಳಿದ ೬ರಿಂದ ೧೪ ವರ್ಷ ವಯಸ್ಸಿನ ಮಕ್ಕಳ ಸಂಖ್ಯೆಯನ್ನು ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

### ಕೋಷ್ಟಕ ೯.೬.೨

### ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ

| ಜಿಲ್ಲೆ | ೬ ರಿಂದ ೧೪ ವರ್ಷ ವಯಸ್ಸಿನ ಮಕ್ಕಳ ಸಂಖ್ಯೆ | | | ಶಾಲೆಯಿಂದ ಹೊರಗುಳಿದ ೭ ರಿಂದ ೧೪ ವರ್ಷ ವಯಸ್ಸಿನ ಮಕ್ಕಳ ಸಂಖ್ಯೆ | | |
|---|---|---|---|---|---|---|
| | ಹುಡುಗರು | ಹುಡುಗಿಯರು | ಒಟ್ಟು | ಹುಡುಗರು | ಹುಡುಗಿಯರು | ಒಟ್ಟು |
| ಬಳ್ಳಾರಿ | ೧೯೬೩೭೨ | ೧೮೩೭೦೭ | ೩೮೦೦೭೯ | ೫೨೯೭ | ೫೮೪೨ | ೧೧೧೩೯ |
| ಕೊಪ್ಪಳ | ೧೧೨೧೧೩ | ೧೦೫೨೯೧ | ೨೧೭೪೦೪ | ೩೭೦೮ | ೩೯೫೬ | ೭೬೬೪ |
| ಗದಗ | ೭೫೫೭೦ | ೭೧೮೯೩ | ೧೪೭೪೬೩ | ೧೭೬೦ | ೧೭೧೭ | ೩೪೭೭ |
| ಬಾಗಲಕೋಟೆ | ೧೬೦೬೧೪ | ೧೫೦೧೭೨ | ೩೧೦೭೮೬ | ೩೧೬೮ | ೩೩೬೬ | ೬೫೩೪ |

Source : Children Census 2011,SSA and Department of Public Instruction,2014-15

ನಾಲ್ಕು ಜಿಲ್ಲೆಗಳಲ್ಲಿ ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆಯಲ್ಲಿ ಹುಡುಗರ ಸಂಖ್ಯೆಗಿಂತ ಹುಡುಗಿಯರ ಸಂಖ್ಯೆಯೇ ಅಧಿಕವಾಗಿರುವುದನ್ನು ಕಾಣಬಹುದು. ಹೀಗೆ ಶಾಲೆಯಿಂದ ಹೊರಗುಳಿದ ಮಕ್ಕಳು ನೇರವಾಗಿ ವಿವಾಹಕ್ಕೆ ಬಂಧನಕ್ಕೆ ಸಿಲುಕುತ್ತಾರೆ. ಮುಖ್ಯವಾಗಿ ಬಾಗಲಕೋಟೆ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯ ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಒಟ್ಟಾರೆಯಾಗಿ ಈ ಮೇಲಿನ ಅಂಕಿ ಅಂಶಗಳನ್ನು ಗಮನಿಸಿದರೆ ಬಾಲ್ಯ ವಿವಾಹಗಳು ಹೆಚ್ಚಾಗಲು ಮತ್ತು ಶಾಲೆಯಿಂದ ಹೊರಗುಳಿಯುವ ಮಕ್ಕಳ ಪ್ರಮಾಣ ಒಂದಕ್ಕೊಂದು ಸಾಮ್ಯತೆಯನ್ನು ಹೊಂದಿರುವುದು ಕಂಡುಬರುತ್ತದೆ. ಹಾಗಾದರೆ ಅಧ್ಯಯನ ಕ್ಷೇತ್ರದ ನಾಲ್ಕು ಜಿಲ್ಲೆಗಳಲ್ಲಿ ಇರುವಂತಹ ಜನಸಂಖ್ಯೆ ಮತ್ತು ಅಲ್ಲಿನ ಜನರ ಶೈಕ್ಷಣಿಕ ಮಟ್ಟವನ್ನು ಗಮನಿಸಬೇಕಾದ ಜರೂರಿದೆ. ಏಕೆಂದರೆ ಶಿಕ್ಷಣದ ಮಟ್ಟ ಜನರ ಜೀವನದ ಮೇಲೆ ನೇರವಾದ ಪ್ರಭಾವವನ್ನು ಬೀರುತ್ತದೆ. ಹಾಗೆಯೇ ಶಿಕ್ಷಣದ ಪ್ರಮಾಣ ಮತ್ತು ಬಾಲ್ಯವಿವಾಹ ಪದ್ಧತಿ ಇವೆರಡಕ್ಕೂ ನೇರವಾದ ಸಂಬಂಧವಿದೆ. ಆ ಕಾರಣಕ್ಕಾಗಿ ಮೊದಲು ನಾಲ್ಕು ಜಿಲ್ಲೆಗಳಲ್ಲಿನ ಜನಸಂಖ್ಯಾ ಪ್ರಮಾಣ ಮತ್ತು ಸಾಕ್ಷರತೆಯ ಪ್ರಮಾಣವನ್ನು ಕೆಳಗಿನ ಕೋಷ್ಟಕಗಳಲ್ಲಿ ತಿಳಿಸಲಾಗಿದೆ.

**ಕೋಷ್ಟಕ ೯.೬.೩**

**೨೦೧೧ರ ಜನಗಣತಿಯ ಪ್ರಕಾರ ನಾಲ್ಕು ಜಿಲ್ಲೆಗಳ ಜನಸಂಖ್ಯೆ ಮತ್ತು ಸಾಕ್ಷರರ ಸಂಖ್ಯೆ**

| ಜಿಲ್ಲೆ | ಒಟ್ಟು ಜನಸಂಖ್ಯೆ | | | ಸಾಕ್ಷರರ ಸಂಖ್ಯೆ | | |
|---|---|---|---|---|---|---|
| | ಪುರುಷರು | ಸ್ತ್ರೀಯರು | ಒಟ್ಟು | ಪುರುಷರು | ಸ್ತ್ರೀಯರು | ಒಟ್ಟು |
| ಬಳ್ಳಾರಿ | ೧೨೩೬೯೫೪ | ೧೨೧೫೬೪೧ | ೨೪೫೨೫೯೫ | ೮೧೩೪೪೦ | ೬೦೮೧೮೧ | ೧೪೨೧೬೨೧ |
| ಕೊಪ್ಪಳ | ೬೯೯೯೨೬ | ೬೮೯೯೯೪ | ೧೩೮೯೯೨೦ | ೪೬೮೭೮೫ | ೩೪೦೩೦೦೦ | ೮೦೯೦೮೫ |
| ಗದಗ | ೫೩೭೧೪೭ | ೫೨೭೪೨೩ | ೧೦೬೪೫೭೦ | ೩೯೭೧೭೮ | ೩೦೨೯೯೯ | ೭೦೦೧೭೭ |
| ಬಾಗಲಕೋಟೆ | ೯೫೦೧೧೧ | ೯೩೯೬೪೨ | ೧೮೮೯೭೫೨ | ೬೪೧೨೮೮ | ೪೭೨೦೨೪ | ೧೧೧೩೪೧೨ |

ಮೂಲ : Census of India 2011 Karnataka, Series-30, Part-XII; District Census Handbooks(Bellary,koppal,Gadag,Bagalkot); Directorate Of Census Operations Karnataka; Government of India copyright, 2014.

**ಕೋಷ್ಟಕ ೯.೬.೪**

**ನಾಲ್ಕು ಜಿಲ್ಲೆಗಳಲ್ಲಿನ ಸ್ತ್ರೀಯರ ಮತ್ತು ಪುರುಷರ ಒಟ್ಟು ಶಿಕ್ಷಣದ ಶೇಕಡಾವಾರು ಪ್ರಮಾಣ**

| ಜಿಲ್ಲೆ | ಶಿಕ್ಷಣದ ಶೇಕಡಾವಾರು ಪ್ರಮಾಣ |
|---|---|
| ಬಳ್ಳಾರಿ | ೬೭.೪೩ |
| ಕೊಪ್ಪಳ | ೬೮.೦೯ |
| ಗದಗ | ೭೫.೧೨ |
| ಬಾಗಲಕೋಟೆ | ೬೮.೮೨ |

ಮೂಲ : Census of India 2011 Karnataka, Series-30, Part-XII; District Census Handbooks( Bellary,koppal,Gadag, Bagalkot); Directorate Of Census Operations Karnataka; Government of India copyright, 2014.




ರೇಖಾಚಿತ್ರ ೯.೬.೪ ನಾಲ್ಕು ಜಿಲ್ಲೆಗಳ ಶಿಕ್ಷಣದ ಶೇಕಡಾವಾರು ಪ್ರಮಾಣ

೨೦೧೧ರ ಜನಗಣತಿಯ ಪ್ರಕಾರ ಈ ನಾಲ್ಕು ಜಿಲ್ಲೆಗಳಲ್ಲಿನ ಒಟ್ಟು ಜನರ ಸಾಕ್ಷರತೆಯ ಪ್ರಮಾಣವನ್ನು ಮೇಲಿನ ಕೋಷ್ಟಕದಲ್ಲಿ ನೀಡಲಾಗಿದೆ. ಮೇಲಿನ ನಾಲ್ಕು ಜಿಲ್ಲೆಗಳಲ್ಲಿನ ಶಿಕ್ಷಣದ ಪ್ರಮಾಣವನ್ನು ಗಮನಿಸಿದರೆ ಗದಗ ಜಿಲ್ಲೆಯು ಅತೀ ಹೆಚ್ಚು ಅಂದರೆ ಶೇ.೭೫.೧೨ರಷ್ಟು ಸಾಕ್ಷರರನ್ನು ಒಳಗೊಂಡಿದೆ. ಹಾಗೆಯೇ ಬಾಗಲಕೋಟೆ–೬೮.೮೨%, ಕೊಪ್ಪಳ–೬೮.೦೯% ಮತ್ತು ಕೊನೆಯಲ್ಲಿ ಬಳ್ಳಾರಿ– ೬೭.೪೩%ರಷ್ಟು ಪ್ರಮಾಣದಲ್ಲಿ ಸಾಕ್ಷರರನ್ನು ಒಳಗೊಂಡಿವೆ. ಈ ಎಲ್ಲಾ ಜಿಲ್ಲೆಗಳಲ್ಲಿ ಸಾಕ್ಷರತೆಯ ಪ್ರಮಾಣ ಶೇಕಡಾ ೫೦ಕ್ಕಿಂತ ಅಧಿಕವಾಗಿದೆಯಾದರೂ, ಬಾಲ್ಯ ವಿವಾಹಗಳು ಮಾತ್ರ ಹಾಗೆಯೇ ಮುಂದುವರೆಯುತ್ತಿವೆ. ಮುಖ್ಯವಾಗಿ ಹೇಳುವುದಾದರೆ ಈ ನಾಲ್ಕು ಜಿಲ್ಲೆಗಳಲ್ಲಿನ ಸ್ತ್ರೀ–ಪುರುಷರ ಸಾಕ್ಷರತೆಯ ಪ್ರಮಾಣ ಮತ್ತು ಬಾಲ್ಯವಿವಾಹಕ್ಕೆ ನೇರವಾದ ಸಂಬಂಧವಿದೆ. ಹಾಗಾಗಿ ಈ ನಾಲ್ಕು ಜಿಲ್ಲೆಗಳಲ್ಲಿ ಸ್ತ್ರೀ–ಪುರುಷರ ಸಾಕ್ಷರತೆ ಮತ್ತು ಬಾಲ್ಯವಿವಾಹಗಳ ಪ್ರಮಾಣವನ್ನು ಗಮನಿಸಬೇಕಾದುದು ಅಗತ್ಯವಾಗಿದೆ. ಮೊದಲು ಪುರುಷರ ಸಾಕ್ಷರತೆ ಮತ್ತು ಅವರು ಬಾಲ್ಯವಿವಾಹಗಳಿಗೆ ಒಳಗಾದದಂತಹ ಪ್ರಮಾಣವನ್ನು ಕೆಳಗಿನ ಕೋಷ್ಟಕಗಳಲ್ಲಿ ವಿವರಿಸಲಾಗಿದೆ.

**ಕೋಷ್ಟಕ ೯.೬.೫**

**೨೧ವರ್ಷಕ್ಕೂ ಪೂರ್ವದಲ್ಲಿಯೇ ವಿವಾಹಕ್ಕೆ ಒಳಗಾದವರ ಶೇಕಡಾವಾರು ಪ್ರಮಾಣ**

| ಜಿಲ್ಲೆ | ೨೦೧೧ರ ಜನಗಣತಿ ಪ್ರಕಾರ ಪುರುಷ ಸಾಕ್ಷರರ ಶೇಕಡಾವಾರು ಪ್ರಮಾಣ | ೨೧ವರ್ಷಕ್ಕೂ ಪೂರ್ವದಲ್ಲಿಯೇ ವಿವಾಹಕ್ಕೆ ಒಳಗಾದವರ ಶೇಕಡಾವಾರು ಪ್ರಮಾಣ | |
|---|---|---|---|
| | | ೨೦೦೭–೦೮ | ೨೦೧೨–೧೩ |
| ಬಳ್ಳಾರಿ | ೭೬.೬೪ | ೧೮.೨ | ೧೦.೨ |
| ಕೊಪ್ಪಳ | ೭೮.೫೪ | ೧೮.೪ | ೯.೯ |
| ಗದಗ | ೮೪.೬೬ | ೭.೭ | ೬.೭ |
| ಬಾಗಲಕೋಟ | ೭೯.೨೩ | ೧೬.೩ | ೧೦.೧ |

**ಮೂಲ: ಡಿ.ಎಲ್.ಎಚ್.ಎಸ್.–ಆರ್.ಸಿ.ಎಚ್ ೨೦೦೭–೦೮ ಮತ್ತು ಡಿ.ಎಲ್.ಎಚ್.ಎಸ್.– ೪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಭಾರತ ಸರ್ಕಾರ–೨೦೧೨–೧೩).**




**ರೇಖಾಚಿತ್ರ ೯.೬.೫. ೨೧ವರ್ಷಕ್ಕೂ ಪೂರ್ವದಲ್ಲಿಯೇ ವಿವಾಹಕ್ಕೆ ಒಳಗಾದವರ ಶೇಕಡಾವಾರು ಪ್ರಮಾಣ**

ಕೋಷ್ಟಕದಲ್ಲಿ ತಿಳಿಸಿರುವಂತೆ ಪುರುಷ ಸಾಕ್ಷರರ ಪ್ರಮಾಣ ಶೇಕಡಾ ೭೫ಕ್ಕಿಂತ ಅಧಿಕವಾಗಿದೆ. ಅದರಲ್ಲಿಯೂ ಗದಗ ಜಿಲ್ಲೆಯಲ್ಲಿ ಅಧಿಕ ಪ್ರಮಾಣದಲ್ಲಿ ಸಾಕ್ಷರರಾಗಿರುವುದು ತಿಳಿದುಬರುತ್ತದೆ. ಮುಖ್ಯವಾಗಿ ಈ ಎಲ್ಲಾ ಜಿಲ್ಲೆಗಳಲ್ಲಿನ ಪುರುಷರು ೨೧ವರ್ಷಕ್ಕೂ ಪೂರ್ವದಲ್ಲಿ ವಿವಾಹ ಬಂಧನಕ್ಕೆ ಒಳಗಾಗುವವರ ಪ್ರಮಾಣವನ್ನು ಗಮನಿಸಿದರೆ ಗದಗ ಜಿಲ್ಲೆಯಲ್ಲಿ ಶೇ. ೭.೭ ರಷ್ಟಿದೆ (೨೦೦೭-೦೮ರಲ್ಲಿ) ಹಾಗೆಯೇ ೨೦೧೨-೧೩ರಲ್ಲಿ ಶೇ.೬.೭ರಷ್ಟಿದೆ. ಬಳ್ಳಾರಿಯಲ್ಲಿ ಶೇ. ೧೮.೨ (೨೦೦೭-೦೮) ಮತ್ತು ಶೇ.೧೦.೨ (೨೦೧೨-೧೩); ಕೊಪ್ಪಳದಲ್ಲಿ ೨೦೦೭-೦೮ರಲ್ಲಿ ಶೇಕಡಾ ೧೮.೪ ಇದ್ದು ೨೦೧೨-೧೩ರಲ್ಲಿ ೯.೯ರಷ್ಟಾಗಿದೆ. ಹಾಗೆಯೇ ಬಾಗಲಕೋಟ ಜಿಲ್ಲೆಯಲ್ಲಿ ೨೦೦೭-೦೮ರಲ್ಲಿ ೧೬.೩ರಷ್ಟಿದ್ದದ್ದು ೨೦೧೩-೧೪ರಲ್ಲಿ ೧೦.೧ರಷ್ಟಾಗಿದೆ. ಅಂದರೆ ವರ್ಷದಿಂದ ವರ್ಷಕ್ಕೆ ಬಾಲ್ಯ ವಿವಾಹಗಳ ಪ್ರಮಾಣದಲ್ಲಿ ಗಣನೀಯ ಪ್ರಮಾಣದಲ್ಲಿ ಕಡಿಮೆ ಯಾಗುತ್ತಿರುವುದು ಕಂಡುಬರುತ್ತದೆ. ಆದರೆ ಹೆಣ್ಣುಮಕ್ಕಳ ವಿಷಯದಲ್ಲಿ ಹಾಗಾಗುವುದಿಲ್ಲ. ಇವರ ಶಿಕ್ಷಣದ ಪ್ರಮಾಣದಲ್ಲಿಯೂ ಹಾಗೆಯೇ ಅಂದರೆ ಪುರುಷ ಸಾಕ್ಷರರಿಗಿಂತ ಮಹಿಳಾ ಸಾಕ್ಷರರ ಸಂಖ್ಯೆ ಕಡಿಮೆ ಇರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ನೋಡುವುದಾದರೆ ಸ್ತ್ರೀಯರ ಸಾಕ್ಷರತೆಯ ಪ್ರಮಾಣ ಮತ್ತು ಬಾಲ್ಯ ವಿವಾಹಕ್ಕೆ ಒಳಗಾದವರ ಪ್ರಮಾಣವನ್ನು ಕೆಳಗಿನ ಕೋಷ್ಟಕಗಳಲ್ಲಿ ಗಮನಿಸಬಹುದಾಗಿದೆ.

**ಕೋಷ್ಟಕ ೯.೬.೬.**

**೧೮ ವರ್ಷಕ್ಕೂ ಪೂರ್ವದಲ್ಲಿಯೇ ವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳ ಪ್ರಮಾಣ**

| ಜಿಲ್ಲೆ | ೨೦೧೧ರ ಜನಗಣತಿ ಪ್ರಕಾರ ಸ್ತ್ರೀಯರ ಸಾಕ್ಷರತೆಯ ಪ್ರಮಾಣ | ೧೮ ವರ್ಷಕ್ಕೂ ಪೂರ್ವದಲ್ಲಿಯೇ ವಿವಾಹಕ್ಕೆ ಒಳಗಾದವರ ಪ್ರಮಾಣ | |
|---|---|---|---|
| | | ೨೦೦೭-೦೮ | ೨೦೧೨-೧೩ |
| ಬಳ್ಳಾರಿ | ೫೮.೦೯ | ೩೬.೩ | ೨೦.೯ |
| ಕೊಪ್ಪಳ | ೫೭.೫೫ | ೪೪.೭ | ೧೪.೨ |
| ಗದಗ | ೬೫.೪೪ | ೩೨.೪ | ೧೮.೪ |
| ಬಾಗಲಕೋಟ | ೫೮.೪೦ | ೪೭.೫ | ೨೫.೨ |

ಮೂಲ: ಡಿ.ಎಲ್.ಎಚ್.ಎಸ್.-ಆರ್.ಸಿ.ಎಚ್ ೨೦೦೭-೦೮ ಮತ್ತು ಡಿ.ಎಲ್.ಎಚ್.ಎಸ್.- ೪ ( ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಭಾರತ ಸರ್ಕಾರ-೨೦೧೨-೧೩).




**ರೇಖಾಚಿತ್ರ ೯.೬.೬. ೧೮ ವರ್ಷಕ್ಕೂ ಪೂರ್ವದಲ್ಲಿಯೇ ವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳ ಪ್ರಮಾಣ**

ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ೨೦೧೧ರ ಜನಗಣತಿಯ ಪ್ರಕಾರ ಸ್ತ್ರೀಯರ ಶಿಕ್ಷಣದ ಪ್ರಮಾಣ ಬಳ್ಳಾರಿ ಜಿಲ್ಲೆಯಲ್ಲಿ ೫೮.೦೯% ರಷ್ಟಿದ್ದು, ೨೦೧೨-೧೩ ರಲ್ಲಿನ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸಮೀಕ್ಷೆಯ ಪ್ರಕಾರ ಶೇ. ೨೦.೯ರಷ್ಟು ಪ್ರಮಾಣದಲ್ಲಿ ಬಾಲ್ಯವಿವಾಹಗಳು ನಡೆದಿವೆ. ಆದರೆ ೨೦೦೭-೦೮ರ ಡಿ.ಎಲ್.ಎಚ್.ಎಸ್.-ಆರ್.ಸಿ.ಎಚ್ ಸಮೀಕ್ಷೆಯ ಪ್ರಕಾರ ಶೇ.೩೬.೩ರಷ್ಟಿದೆ. ಇದಕ್ಕೆ ಹೋಲಿಸಿದರೆ ಶೇ.೧೫.೪ರಷ್ಟು ಕಡಿಮೆಯಾಗಿರುವುದು ತಿಳಿದುಬರುತ್ತದೆ. ಹಾಗೆಯೇ ಉಳಿದ ಜಿಲ್ಲೆಗಳಲ್ಲಿಯೂ ಸಹ ೨೦೦೭-೦೮ರಲ್ಲಿನ ಡಿ.ಎಲ್.ಎಚ್.ಎಸ್.-ಆರ್.ಸಿ.ಎಚ್ ಸಮೀಕ್ಷೆಗೆ ಹೋಲಿಸಿದರೆ ೨೦೧೨-೧೩ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸಮೀಕ್ಷೆಯಲ್ಲಿನ ವರದಿಯಂತೆ ಬಾಲ್ಯ

ವಿವಾಹದ ಶೇಕಡಾವಾರು ಪ್ರಮಾಣದಲ್ಲಿ ಗಣನೀಯ ಪ್ರಮಾಣದ ಇಳಿಕೆಯಾಗಿರುವುದು ಕಂಡುಬರುತ್ತದೆ. ಮಕ್ಕಳ ಶಿಕ್ಷಣದ ಮಟ್ಟ ಹೆಚ್ಚಾದಂತೆಲ್ಲಾ ಬಾಲ್ಯ ವಿವಾಹಗಳ ಸಂಖ್ಯೆ ಕಡಿಮೆಯಾಗುತ್ತದೆ. ಮುಖ್ಯವಾಗಿ ಸ್ತ್ರೀಪುರುಷರ ಶಿಕ್ಷಣದ ಪ್ರಮಾಣದಲ್ಲಿ ಇನ್ನೂ ಹೆಚ್ಚು ಸುಧಾರಣೆ ಆಗಬೇಕಿದೆ. ಆದರೆ ವ್ಯವಸ್ಥೆಯಲ್ಲಿ ಮಹಿಳೆಯರ ಬಗೆಗೆ ಇರುವಂತಹ ಮನೋಭಾವ ಬದಲಾವಣೆಯಾಗದ ಹೊರತು ಮಹಿಲಾ ಶಿಕ್ಷಣದಲ್ಲಿ ಬದಲಾವಣೆಯಾಗುವುದಿಲ್ಲ. ಪುರುಷ ಸಾಕ್ಷರರಿಗಿಂತ ಮಹಿಳಾ ಸಾಕ್ಷರರ ಪ್ರಮಾಣ ತುಂಬಾ ಹೆಚ್ಚಾಗಿದೆ. ಹಾಗಾಗಿಯೇ ಮಹಿಳೆಯರು ಇನ್ನೂ ಪುರುಷನ ಅಧೀನದಲ್ಲಿಯೇ ಉಳಿಯುವಂತಹ ಸ್ಥಿತಿ ಇದೆ. ೨೦೧೧ರ ಜನಗಣತಿಯ ಪ್ರಕಾರ ಅಧ್ಯಯನ ಕ್ಷೇತ್ರದ ನಾಲ್ಕು ಜಿಲ್ಲೆಗಳಲ್ಲಿ ಸ್ತ್ರೀ ಪುರುಷರ ಸಾಕ್ಷರತೆಯ ಪ್ರಮಾಣವನ್ನು ಗಮನಿಸಿದರೆ ಎಷ್ಟು ಪ್ರಮಾಣದಲ್ಲಿ ಮಹಿಳೆಯರ ಶಿಕ್ಷಣಕ್ಕೆ ಪುರುಷ ವ್ಯವಸ್ಥೆ ಅವಕಾಶ ಮಾಡಿಕೊಟ್ಟಿದೆ ಎಂಬುದು ತಿಳಿದುಬರುತ್ತದೆ.

**ಕೋಷ್ಟಕ ೯.೬.೭**

**ಸಾಕ್ಷರತೆಯ ಪ್ರಮಾಣ**

| ಜಿಲ್ಲೆ | ಸಾಕ್ಷರತೆಯ ಪ್ರಮಾಣ (ಶೇಕಡಾವಾರು) | |
|---|---|---|
| | ಪುರುಷರು | ಸ್ತ್ರೀಯರು |
| ಬಳ್ಳಾರಿ | ೭೬.೬೪ | ೫೮.೦೯ |
| ಕೊಪ್ಪಳ | ೭೮.೫೪ | ೫೭.೫೫ |
| ಗದಗ | ೮೪.೬೬ | ೬೫.೪೪ |
| ಬಾಗಲಕೋಟ | ೭೯.೨೩ | ೫೮.೪೦ |




ರೇಖಾಚಿತ್ರ ೯.೬.೭ ಸಾಕ್ಷರತೆಯ ಪ್ರಮಾಣ

ನಾಲ್ಕು ಜಿಲ್ಲೆಗಳಲ್ಲಿನ ಸ್ತ್ರೀಪುರುಷರ ಸಾಕ್ಷರತೆಯ ಪ್ರಮಾಣವನ್ನು ಗಮನಿಸಿದರೆ ಪುರುಷ ಸಾಕ್ಷರತೆಗಿಂತ ಮಹಿಳಾ ಸಾಕ್ಷರತೆಯ ಪ್ರಮಾಣ ಕಡಿಮೆ ಇರುವುದು ಕಂಡುಬರುತ್ತದೆ. ಮುಖ್ಯವಾಗಿ ವ್ಯವಸ್ಥೆಯಲ್ಲಿ ಪುರುಷರಿಗೆ ಇರುವಷ್ಟು ಅವಕಾಶಗಳು ಮಹಿಳೆಯರಿಗೆ ಇಲ್ಲವಾಗಿವೆ. ಇದಕ್ಕೆ ಮುಖ್ಯ ಕಾರಣ ಮೇಲಿನ ಪ್ರಕರಣಗಳು ಹೇಳಿರುವ ಎಲ್ಲಾ ಅಂಶಗಳು.

ವ್ಯವಸ್ಥೆಯಲ್ಲಿ ಮಹಿಳೆಯರ ಶಿಕ್ಷಣದ ಮಟ್ಟ ಕಡಿಮೆಯಾಗಿರಲು ಮತ್ತು ಆ ಕಾರಣಕ್ಕಾಗಿ ಬಾಲ್ಯ ವಿವಾಹಗಳು ಹೆಚ್ಚಾಗಿ ನಡೆಯುತ್ತಿರುವುದಕ್ಕೆ ಹಲವಾರು ಶೈಕ್ಷಣಿಕ ಕಾರಣಗಳನ್ನು ವಕ್ತೃಗಳ ಹೇಳಿಕೆಗಳಿಂದಲೇ ನೀಡಲಾಗಿದೆ. ಮುಖ್ಯವಾಗಿ ಕುಟುಂಬದಲ್ಲಿ ಆರ್ಥಿಕ ಸ್ಥಿತಿಗತಿಗೆ ಅನುಗುಣವಾಗಿ ಶಾಲೆಗೆ ಕಳುಹಿಸುವ ಪ್ರಮಾಣವನ್ನು ತುಲನೆ ಮಾಡುವುದಾದರೆ ಪುರುಷರಿಗೆ ಮೊದಲ ಆಧ್ಯತೆ ದೊರೆಯುತ್ತದೆ. ಆದರೆ ಮಹಿಳೆಗೆ ಇದರಿಂದ ದೂರ ಉಳಿಯುವಂತೆ ಮಾಡಲಾಗುತ್ತದೆ. ಮಹಿಳಾ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸ್ವಾತಂತ್ರ್ಯ ಮತ್ತು ಸಮಾನತೆಯ ಹರಿಕಾರನೆಂದು ಗುರುತಿಸಿಕೊಳ್ಳುವ ರೂಸೋನ ಚಿಂತನೆ ಹೀಗಿದೆ. "ಹೆಂಗಸರ ವಿದ್ಯಾಭ್ಯಾಸ ಯಾವಾಗಲೂ ಪುರುಷರ ಹಿತದೃಷ್ಟಿಯಿಂದಲೇ ನಿರೂಪಿತವಾಗಿದೆ. ನಮ್ಮನ್ನು ಖುಷಿಪಡಿಸಲು, ನಮಗೆ ಪ್ರಯೋಜನವಾಗಲು, ನಮ್ಮನ್ನು ಪ್ರೀತಿಸಿ ಆಧರಿಸಲು ಅನುಕೂಲವಾಗುವಂತಹ ವಿದ್ಯಾಭ್ಯಾಸ ಹೆಂಗಸಿಗೆ ಬೇಕಾಗಿದೆ. ಎಳೆಯ ವಯಸ್ಸಿನಲ್ಲಿ ಮಕ್ಕಳಿಗೆ ಪಾಠ ಕಲಿಸಲು, ಬೆಳೆದವರಿಗೆ ಅವರ ಆರೈಕೆ ಮಾಡಲು, ದೊಡ್ಡವರಾದಾಗ ಬುದ್ಧಿವಾದ ಹೇಳಲು, ಸಂತೈಸಲು, ನಮ್ಮ ಬಾಳನ್ನು ಹಸನು ಮಾಡಲು ಹೆಂಗಸರಿಗೆ ವಿಧ್ಯೆ ಬೇಕು. ಇವು ಹೆಂಗಸರ ಕರ್ತವ್ಯಗಳು. ಇದನ್ನು ಎಳೆಯ ವಯಸ್ಸಿನಲ್ಲಿಯೇ ಮಕ್ಕಳಿಗೆ ಕಲಿಸಬೇಕು" (ಸುಮಿತ್ರಾಬಾಯಿ ಬಿ.ಎನ್ ಮತ್ತು ತೇಜಸ್ವಿ ನಿರಂಜನ; ಪು–೧೬) ಎಂಬುದಾಗಿ ಹೇಳಿದ್ದಾನೆ. ಇವರ ಆಲೋಚನೆಯೆಲ್ಲವೂ ಸಾಂಪ್ರದಾಯಿಕವಾಗಿದ್ದು, ಅವುಗಳನ್ನು ಉತ್ತೇಜಿಸಲು ಮತ್ತು ಸಮಾಜದಲ್ಲಿ ಲಿಂಗ ತಾರತಮ್ಯ ಹಾಗೆಯೇ ಮುಂದುವರೆಯಲು ಕಾರಣೀಭೂತವಾಗಿದೆ. ಆದರೆ ಈತನ ಹೇಳಿಕೆಯನ್ನು ೧೮ನೆಯ ಶತಮಾನದಲ್ಲಿನ ಮೇರಿ ವುಲ್‌ಸ್ಟನ್‌ಕ್ರಾಫ್ಟ್‌ಳು ಪ್ರಬಲವಾಗಿ ವಿರೋಧಿಸುತ್ತಾಳೆ. ಕ್ರಾಫ್ಟ್‌ಳು ಪುರುಷರ ಬುದ್ಧಿಮತ್ತೆಯ ಕಪಟತನವನ್ನು ತುಂಬಾ ಚೆನ್ನಾಗಿ ನಿರೂಪಿಸುತ್ತಾಳೆ. ಕ್ರಾಫ್ಟ್‌ಳು ರೂಸೋನ ವಿಷಯಗಳನ್ನು ಅವನ ಮಾತುಗಳಲ್ಲಿಯೇ ಮುಂದುವರೆಸಿ ಸ್ವಾತಂತ್ರ್ಯ ಸಮಾನತೆಯ ಹರಿಕಾರನೆನಿಸಿಕೊಂಡ ರೂಸೋ ಮಾನವ ಸಮುದಾಯದ ಅರ್ಧ ಭಾಗದ ಸ್ವಾತಂತ್ರ್ಯವನ್ನು ಇಡೀ ಮನುಕುಲದ ಸ್ವಾತಂತ್ರ್ಯವೆಂಬಂತೆ ಪರಿಗಣಿಸಬೇಕೆಂದು ಒತ್ತಾಯಿಸಿದ ಬಗೆಯನ್ನು ಅದರ ನಿಜ ಸ್ವರೂಪವನ್ನು ತನ್ನ ಗ್ರಂಥದ ಐದನೇ ಅಧ್ಯಾಯದಲ್ಲಿ ಬಿಚ್ಚಿಡುತ್ತಾಳೆ. ಹಾಗಾಗಿ ಸಮಾಜ ಪರಿವರ್ತನೆಯ ಹರಿಕಾರರು ಎಂದು ಗುರುತಿಸಿಕೊಂಡಿರುವವರು ವ್ಯವಸ್ಥೆಯಲ್ಲಿ ಲಿಂಗ ಅಸಮಾನತೆ ಹಾಗೆಯೇ ಉಳಿಯುವಂತೆ ಮಾಡಿರುವುದನ್ನು ಕಾಣಬಹುದಾಗಿದೆ.

ಕುಟುಂಬದಲ್ಲಿನ ಮಹಿಳೆಯರನ್ನು ಶಾಲೆಯಿಂದ ದೂರ ಉಳಿಸಿ ಅವರನ್ನು ಬಾಲ್ಯ ವಿವಾಹಕ್ಕೆ ತಳ್ಳುತ್ತಿರುವ ಸಂಗತಿಗಳು ಈಗಾಗಲೇ ಚರ್ಚಿಸಲಾಗಿದೆ. ಹೆಣ್ಣುಮಕ್ಕಳನ್ನು ಶಾಲೆಯಿಂದ ದೂರುಳಿಸಲು ಮುಖ್ಯ ಕಾರಣಗಳೆಂದರೆ, ಹೆತ್ತವರು ತಮ್ಮಲ್ಲಿ ಒಡಮೂಡಿರುವ ಸಾಂಪ್ರದಾಯಿಕ ಧೋರಣೆಗಳು ಮತ್ತು ಸಮಾಜದ ಮೌಲ್ಯಗಳು ಕಾರಣವಾಗುತ್ತವೆ. ಚಿಕ್ಕ ವಯಸ್ಸಿನಲ್ಲಿ ಮಕ್ಕಳು ಶಾಲೆಯನ್ನು ತೊರೆಯುತ್ತಾರೆ ಎಂದರೆ ಅದರಲ್ಲಿ ಮಕ್ಕಳಿಗಿಂತ ಹೆತ್ತವರ ಆಸಕ್ತಿಗಳೇ ಪ್ರಧಾನವಾಗಿ ಕೆಲಸ ಮಾಡುತ್ತಿರುತ್ತವೆ. ಹೆತ್ತವರ ಧೋರಣೆಗಳು ಹೇಗಿರುತ್ತವೆ ಎಂದರೆ ಅವಳು ಓದಿ ಏನು ಸಾಧಿಸಬೇಕಿದೆ? ಹುಡುಗಿ ಹೆಚ್ಚು ಓದಿದರೆ ಅವಳಿಗೆ ಗಂಡು ಹುಡುಕುವುದು ತುಂಬಾ ಕಷ್ಟದ ಕೆಲಸ ಎಂಬ ಆಲೋಚನಾ ಕ್ರಮದಿಂದಾಗಿ ಹೆಣ್ಣುಮಕ್ಕಳನ್ನು ಶಾಲೆಯಿಂದ ದೂರ ಇರಿಸಲಾಗುತ್ತಿದೆ. ಹಾಗೆಯೇ ಸಮಾಜವೂ ಸಹ ಹೆಣ್ಣುಮಕ್ಕಳ ಬಗೆಗೆ ತನ್ನದೇ ಆದ ಪ್ರತ್ಯೇಕ ಧೋರಣೆಯನ್ನು ಹೊಂದಿದೆ. ಮುಖ್ಯವಾಗಿ "ಹೆಣ್ಣು ಹೆಚ್ಚು ಕಲಿತರೆ ಅಹಂಕಾರಿಯಾಗುತ್ತಾಳೆ; ಗಂಡ ಮತ್ತು ಗಂಡಸರನ್ನು ಉಪೇಕ್ಷಿಸುತ್ತಾಳೆ ಎಂಬ ನಿಲುವು ಕೆಲವು ಹೆತ್ತವರ/ಸಹೋದರರ ನೆಲೆಯಲ್ಲಿ, ಬಂಧು ಬಾಂಧವರ ನೆಲೆಯಲ್ಲಿ ಪ್ರಕಟವಾಗುವುದಿದೆ. ಹಾಗೆಯೇ ಹುಡುಗಿಯನ್ನು ಕಾಲೇಜಿಗೆ ಕಳುಹಿಸಿದರೆ ಪ್ರೀತಿ ಪ್ರೇಮದ ಜಾಡು ಹಿಡಿದು ಎಲ್ಲೆಲ್ಲೋ ಓಡಾಡಿ ಹಾಳಾಗ್ತಾರೆ. ಅನಂತರ ಅವರನ್ನು ನಿಯಂತ್ರಿಸುದಾಗಲೀ, ಅವರ ಮೇಲೆ ನಿಗಾ ಇಡುವುದಾಗಲೀ ಅಸಾಧ್ಯ ಎಂಬ ಮಾತುಗಳೂ ಕೇಳಿಬರುತ್ತವೆ. ನಿರ್ದಿಷ್ಟ ಜಾತಿ ಧರ್ಮಗಳಲ್ಲಿ ಹೆಣ್ಣು ಮಕ್ಕಳು ಕಾಲೇಜು ಮೆಟ್ಟಿಲು ಹತ್ತಿಲ್ಲದ ಸಂದರ್ಭಗಳಲ್ಲಂತೂ ಹೆಣ್ಣು ಮಕ್ಕಳ ಮೇಲಿನ ಒತ್ತಡಗಳು ಇನ್ನಿಷ್ಟು ಬಲವಾಗಿರುತ್ತವೆ. ಜನರಿಂದ ಬಂಧು ಬಾಂಧವರಿಂದ ಟೀಕೆ, ಹೆತ್ತವರ ಅಳುಕಿಗೆ ಒಂದು ನೆಲೆಯ ಕಾರಣವಾದರೆ, ಏನಾದರೂ ಹೆಚ್ಚು ಕಡಿಮೆ ಆದರೆ ಮನೆತನಕ್ಕೇ ಕಪ್ಪು ಮಸಿ ಬಳಿದಂತಾದೀತು ಎಂಬ ಆತಂಕ ಇನ್ನೊಂದು ಕಾರಣವಾಗಿರುತ್ತದೆ" (ಸಬಿಹಾ ಭೂಮಿಗೌಡ, ೨೦೧೪, ಪು–೧೦೩). ಹೀಗೆ ಕುಟುಂಬದ ಮತ್ತು ಸಮಾಜದ ಹಿತಾಸಕ್ತಿಗಳಿಗೆ ಹೆಣ್ಣುಮಕ್ಕಳ ವಿದ್ಯಾಭ್ಯಾಸ ಅರ್ಧದಲ್ಲಿಯೇ ಮೊಟುಕುಗೊಳ್ಳುತ್ತಿದೆ. ಜೊತೆಗೆ ಹೀಗೆ ಮೊಟುಕುಗೊಂಡ ನಂತರ ಅವರು ವೈವಾಹಿಕ ಜೀವನಕ್ಕೆ ತಳ್ಳಲ್ಪಡುತ್ತಾರೆ. ಇದು ಬಾಲ್ಯ ವಿವಾಹಕ್ಕೆ ಎಡೆಮಾಡಿಕೊಡುತ್ತದೆ.

ಬಾಲ್ಯ ವಿವಾಹಕ್ಕೆ ಶೈಕ್ಷಣಿಕವಾಗಿ ಇರುವ ಕಾರಣಗಳನ್ನು ವಕ್ತೃಗಳ ಆಧಾರದಿಂದ ಗುರುತಿಸಲಾಗಿದೆಯಾದರೂ, ಹೆಚ್ಚು ಸಂದರ್ಭಗಳಲ್ಲಿ ಸಮಾಜದ ಧೋರಣೆಗಳು ಮಹಿಳೆಯರು ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿರುವುದನ್ನು ಕಾಣಬಹುದು. ಹೀಗೆ ವಂಚಿತರಾದ ಮಕ್ಕಳು ಬಾಲ್ಯ ವಿವಾಹಕ್ಕೆ ಒಳಗಾದಂತಹದ್ದನ್ನು ವಕ್ತೃಗಳ ಹೇಳಿಕೆಗಳಿಂದಲೇ ದೃಡಪಡುತ್ತದೆ. ಮುಖ್ಯವಾಗಿ ಹೆಣ್ಣುಮಕ್ಕಳು ಶಿಕ್ಷಣದಿಂದ ವಂಚಿತರಾಗಲು ಅವರ ಹಿತಾಸಕ್ತಿಗಿಂತ ತಂದೆ ತಾಯಿಯರ, ಬಂಧು ಬಾಂಧವರ, ಶಾಲೆಗಳಲ್ಲಿನ ಶಿಕ್ಷಕರ, ಸಮಾಜದ ನಿಲುವುಗಳು ಹಾಗೆಯೇ ಶಾಲಾ ಕಾಲೇಜುಗಳ ಭೌತಿಕ ಸ್ಥಿತಿಗತಿಗಳು ಹೆಚ್ಚು ಕಾರಣೀಭೂತವಾಗಿರುತ್ತವೆ.

"ಹೆಣ್ಣುಮಕ್ಕಳು ಶಿಕ್ಷಣವಂಚಿತರಾಗುವ ವಿವಿಧ ಸಂದರ್ಭಗಳು ಮತ್ತು ವಯೋಮಾನಗಳನ್ನು ಅನುಸರಿಸಿ ಐದು ನೆಲೆಗಳನ್ನು ಮತ್ತು ಆ ನೆಲೆಗಳಲ್ಲಿರುವ ಒತ್ತಡಗಳನ್ನು ಹೀಗೆ ಸಂಗ್ರಹಿಸಬಹುದಾಗಿದೆ.

೧. ಶಾಲೆಗೇ ಸೇರದಿರುವ ವರ್ಗ
೨. ಶಾಲೆಗೆ ಸೇರಿ ಏಳನೇ ತರಗತಿಗೆ ಬರುವ ಮೊದಲೇ ಇಲ್ಲವೇ ಏಳನೇ ತರಗತಿಯಲ್ಲಿ ಪಾಸಾಗಿ ಶಾಲೆಯನ್ನು ತೊರೆಯುವ ವರ್ಗ.
೩. ಹೈಸ್ಕೂಲಿಗೆ ಸೇರಿ ಎಸ್.ಎಸ್.ಎಲ್.ಸಿ. ಗಿಂತ ಮುಂಚೆ ಇಲ್ಲವೇ ನಂತರ ಪಾಸಾಗಿ ಶಿಕ್ಷಣ ವಂಚಿತರಾಗುವ ವರ್ಗ.
೪. ಪಿ.ಯು.ಸಿ. ನಂತರ ಶಿಕ್ಷಣವನ್ನು ತೊರೆಯುವ ವರ್ಗ.
೫. ಪದವಿ ಹಂತದಲ್ಲಿ ಮತ್ತು ಪದವಿ ನಂತರ ಶಿಕ್ಷಣವನ್ನು ತೊರೆಯುವ ವರ್ಗ"(ಸಬಿಹಾ ಭೂಮೀಗೌಡ, ೨೦೧೪, ಪು-೧೦೫).

ಹೀಗೆ ಈ ಐದು ನೆಲೆಗಳಲ್ಲಿಯೂ ಹೆಣ್ಣುಮಕ್ಕಳು ಶಿಕ್ಷಣದಿಂದ ವಂಚಿತರಾಗಿ ವಿವಾಹ ಬಂಧನಕ್ಕೆ ಒಳಗಾಗುತ್ತಾರೆ. ಮುಖ್ಯವಾಗಿ ಸಾಮಾಜಿಕ ಧೋರಣೆಗಳು ಮತ್ತು ಸಾಂಪ್ರದಾಯಿಕ ಮನಸ್ಸುಗಳು ಈ ಬಗೆಯ ವಿವಾಹಗಳಿಗೆ ಕಾರಣೀಭೂತವಾಗಿರುತ್ತವೆ. ಒಟ್ಟಾರೆಯಾಗಿ ಬಾಲ್ಯ ವಿವಾಹಕ್ಕೆ ಶೈಕ್ಷಣಿಕ ಕಾರಣಗಳೂ ಸಹ ಪ್ರಮುಖ ಕಾರಣವಾಗಿರುವುದು ಕಂಡುಬರುತ್ತದೆ.

**೯.೭. ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳ ಅನುಷ್ಠಾನದ ಕ್ರಮಗಳು : ಎದುರಾದ ತೊಡಕುಗಳು**

ಸರ್ಕಾರದ ಇಲಾಖೆಗಳು ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ಬಾಲ್ಯ ವಿವಾಹಗಳನ್ನು ತಡೆಯಲು ಹಲವಾರು ಪ್ರಯತ್ನಗಳನ್ನು ಮಾಡುತ್ತಲೇ ಇವೆ. ಆದರೆ ಇವುಗಳ ಕಾರ್ಯಪ್ರವೃತ್ತದ ಆಚೆಗೂ ಬಾಲ್ಯ ವಿವಾಹಗಳು ನಡೆಯುತ್ತಿವೆ. ಮುಖ್ಯವಾಗಿ ಸರ್ಕಾರಿ ಮತ್ತು ಸರ್ಕಾರೇತರ ಸಂಘಸಂಸ್ಥೆಗಳ ಅಧಿಕಾರಿಗಳು ಬಾಲ್ಯ ವಿವಾಹಗಳನ್ನು ತಡೆಯಲು ಮುಂದಾದ ಸಂದರ್ಭದಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಮುಖ್ಯವಾಗಿ ಈ ಸಮಸ್ಯೆಗಳೇ ಬಾಲ್ಯ ವಿವಾಹ ನಿಷೇಧ ಕಾಯಿದೆಯ ಜಾರಿಯಲ್ಲಿನ ಬಹು ದೊಡ್ಡ ತೊಡಕುಗಳಾಗಿವೆ. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಅಧಿಕಾರಿಗಳನ್ನು ಮತ್ತು ಯುನಿಸೆಫ್ ಸಂಸ್ಥೆಯ ಅಧಿಕಾರಿಗಳನ್ನು ಸಂದರ್ಶಿಸಿ ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ ಬಾಲ್ಯ ವಿವಾಹ ನಿಷೇಧ ಕಾಯಿದೆ ಜಾರಿಯಲ್ಲಿನ ತೊಡಕುಗಳನ್ನು ಮುಂದಿನಂತೆ ವಿಶ್ಲೇಷಿಸಲಾಗಿದೆ.

ಸರ್ಕಾರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಡಿಯಲ್ಲಿ ಬರುವಂತಹ ಅಂಗನವಾಡಿ ಕೇಂದ್ರಗಳು ಮತ್ತು ಆರೋಗ್ಯ ಇಲಾಖೆಯಡಿಯಲ್ಲಿ ಕಾರ್ಯನಿರ್ವಹಿಸುವ ಆಶಾ

ಕಾರ್ಯಕರ್ತೆಯರು ಗ್ರಾಮೀಣ ಪ್ರದೇಶಗಳಲ್ಲಿ ಉತ್ತಮವಾದ ಕೆಲಸಗಳನ್ನು ನಿರ್ವಹಿಸುತ್ತಿದ್ದಾರೆ. ಭಾರತದ ಪ್ರತಿಯೊಂದು ಗ್ರಾಮಗಳಲ್ಲಿಯೂ ಅಂಗನವಾಡಿ ಕೇಂದ್ರಗಳು ಇವೆ. ಹಾಗಾಗಿ ಇಲ್ಲಿ ಕಾರ್ಯ ನಿರ್ವಹಿಸುವಂತಹ ಶಿಕ್ಷಕಿಯರು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ರಚಿಸಿರುವಂತಹ ಬಾಲ್ಯ ವಿವಾಹ ತಡೆ ಸಮಿತಿಯಲ್ಲಿ ಗ್ರಾಮ ಮಟ್ಟದ ಸದಸ್ಯರಾಗಿರುತ್ತಾರೆ. ಇವರು ಆ ಸಮಿತಿಯ ತಳಸ್ಥರದಲ್ಲಿ ಕಂಡುಬಂದರೂ, ಇವರ ಪಾತ್ರ ಪ್ರಮುಖವಾಗಿದೆ. ಏಕೆಂದರೆ ಗ್ರಾಮೀಣ ಪ್ರದೇಶಗಳಲ್ಲಿಯೇ ಬಾಲ್ಯ ವಿವಾಹಗಳು ಹೆಚ್ಚಾಗಿ ನಡೆಯುತ್ತವೆಯಾದ್ದರಿಂದ ಅಲ್ಲಿ ನಡೆಯುವ ಪ್ರತಿಯೊಂದು ವಿವಾಹದ ಮಾಹಿತಿ ಸಿಗುವುದು ಇವರಿಗೆ. ಹಾಗೆಯೇ ಆಶಾ ಕಾರ್ಯಕರ್ತೆಯರೂ ಬಾಲ್ಯ ವಿವಾಹಗಳನ್ನು ತಡೆಯಲು ಸಹಕರಿಸಬೇಕೆಂದು ಸರ್ಕಾರ ಆದೇಶಿಸಿರುವುದರಿಂದ ಅವರೂ ಸಹ ಕಾರ್ಯಪ್ರವೃತ್ತರಾಗಿದ್ದಾರೆ. ಹಾಗಾಗಿ ಗ್ರಾಮೀಣ ಭಾಗಗಳಲ್ಲಿ ಬಾಲ್ಯ ವಿವಾಹ ನಿಷೇಧ ಕಾನೂನು ಸರಿಯಾಗಿ ಅನುಷ್ಠಾನಗೊಳ್ಳಲು ಅಂಗನವಾಡಿ ಕಾರ್ಯಕರ್ತೆಯರು ಮತ್ತು ಆಶಾ ಕಾರ್ಯಕರ್ತೆಯರ ಪಾತ್ರ ಬಹು ದೊಡ್ಡದಿದೆ. ಗ್ರಾಮಗಳಲ್ಲಿ ಯಾವುದೇ ಒಂದು ಮಗು ಜನಿಸಿದರೆ, ಮರಣಿಸಿದರೆ ಅವುಗಳ ದಾಖಲಾತಿ ಇವರಲ್ಲಿರುತ್ತದೆ. ಹಾಗೆಯೇ ವಿವಾಹಗಳ ಮಾಹಿತಿಯೂ ಇವರಲ್ಲಿರುತ್ತದೆ. ತಾಯಿ ಮರಣ ಮತ್ತು ಶಿಶು ಮರಣ ಪ್ರಮಾಣಗಳನ್ನು ಕಡಿಮೆ ಮಾಡುವುದರ ಸಲುವಾಗಿ ಆಶಾ ಕಾರ್ಯಕರ್ತೆಯರು ಬಹಳಷ್ಟು ಕೆಲಸಗಳನ್ನು ನಿಭಾಯಿಸುತ್ತಿದ್ದಾರೆ. ಆದರೆ ಇವರು ನಿರ್ವಹಿಸಲು ಸಮರ್ಥರಿದ್ದಾಗಲೂ ಸಮಾಜ ಇವರನ್ನು ಹಾಗೆ ಮಾಡಲು ಬಿಡುವುದಿಲ್ಲ. ಏಕೆಂದರೆ ಸ್ಥಳೀಯ ಪಿತೃಪ್ರಧಾನ ವ್ಯವಸ್ಥೆಯ ವಿರುದ್ಧ ಅವರು ಮಾತನಾಡುವುದು ತುಂಬಾನೇ ಕಷ್ಟದ ಕೆಲಸವಾಗಿರುತ್ತದೆ. ಹೀಗೆ ಗ್ರಾಮದಲ್ಲಿ ಬಾಲ್ಯ ವಿವಾಹ ನಡೆಯುತ್ತಿದೆ ಎಂಬ ಮಾಹಿತಿಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿಗಳಿಗೆ ತಿಳಿಸಿದ ಕಾರಣಕ್ಕೆ ಆ ಊರಿನ ಜನರ ವಿರೋಧವನ್ನು ಕಟ್ಟಿಕೊಂಡಂತಹ ಅಂಗನವಾಡಿ ಮತ್ತು ಆಶಾ ಕಾರ್ಯಕರ್ತೆಯರು ಬಹಳಷ್ಟು ಜನರಿದ್ದಾರೆ. ಇವರು ಯಾವ ಬಗೆಯ ಸಮಸ್ಯೆಗಳನ್ನು ಎದುರಿಸಿದ್ದಾರೆ ಎಂಬುದನ್ನು ಅವರ ಮಾತಿನಲ್ಲಿಯೇ ತಿಳಿಯುವುದಾದರೆ, ಹೊಸಪೇಟೆ ತಾಲೂಕಿನ ಹನುಮನಹಳ್ಳಿ ಗ್ರಾಮದ ಅಂಗನವಾಡಿ ಕಾರ್ಯಕರ್ತೆಯಾದ ಸುಶೀಲಮ್ಮನವರು ತಮ್ಮ ಊರಿನಲ್ಲಿ ನಡೆಯುತ್ತಿದ್ದ ಬಾಲ್ಯವಿವಾಹದ ಮಾಹಿತಿಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿಗಳಿಗೆ ತಿಳಿಸಿದ್ದರು. ಅವರು ನೇರವಾಗಿ ವಿವಾಹ ಮಾಡಲು ನಿಶ್ಚಯಿಸಿದ್ದ ಕುಟುಂಬಕ್ಕೆ ಬೇಟಿಕೊಟ್ಟು ಬಾಲ್ಯ ವಿವಾಹ ಮಾಡುವುದು ತಪ್ಪು. ಮಕ್ಕಳ ಶಿಕ್ಷಣದ ಬಗೆಗೆ ಹೆಚ್ಚಿನ ಒತ್ತು ಕೊಡಿ ಎಂದು ಮಕ್ಕಳ ಪಾಲಕರಿಗೆ ತಿಳಿಸಿದ್ದಾರೆ. ಆದರೆ ಅದನ್ನು ಕುಟುಂಬದ ಸದಸ್ಯರು ವಿರೋಧಿಸಿದ್ದಾರೆ. ಹಾಗಾಗಿ ಕುಟುಂಬದ ಸದಸ್ಯರಿಗೆ ನಿಮ್ಮ ಮೇಲೆ ಕೇಸ್ ಮಾಡಬೇಕಾಗುತ್ತದೆ ಎಂದು ಹೇಳಿದ ಕಾರಣಕ್ಕಾಗಿ ಅವರು ಸುಮ್ಮನಾಗಿದ್ದಾರೆ. ಜೊತೆಗೆ ಅವರಿಂದ ಒಂದು ಮುಚ್ಚಳಿಕೆ ಪತ್ರವನ್ನೂ ಬರೆಯಿಸಿಕೊಂಡಿದ್ದಾರೆ. ತಮ್ಮ ಮಗಳ ಮದುವೆ ನಿಂತು ಹೋಯಿತಲ್ಲಾ ಎಂಬ ದುಃಖದಿಂದ ಕೋಪಗೊಂಡ ಕುಟುಂಬ ಸದಸ್ಯರು ಈ ವಿಷಯವನ್ನು ಅಧಿಕಾರಿಗಳಿಗೆ ಯಾರು

ಹೇಳಿದರು ಎಂಬುದನ್ನು ಭೇಧಿಸಲು ಆರಂಭಿಸಿದ್ದಾರೆ, ಕೊನೆಗೆ ಅಂಗನವಾಡಿ ಕಾರ್ಯಕರ್ತೆಯಾದ ಸುಶೀಲಮ್ಮ ಈ ವಿಷಯವನ್ನು ಅಧಿಕಾರಿಗಳಿಗೆ ತಿಳಿಸಿ ಮದುವೆ ನಿಲ್ಲಲು ಕಾರಣಳಾಗಿದ್ದಾಳೆ ಎಂಬುದನ್ನು ತಿಳಿದು ಆಕೆಯನ್ನು ಹೊಡೆಯಲು ಹೋದ ಘಟನೆ ನಡೆದಿದೆ. ಈ ವಿಷಯ ತಿಳಿದು ಅವರನ್ನು ಭೇಟಿಯಾದಾಗ ಅವರು ಹೇಳಿದ್ದು ಹೀಗೆ "ನಾನು ಇದೇ ಊರಾಗ ಬಾಲವಾಡಿ ಸಾಲಿಗೆ ಹೋಗ್ತೀನಿ. ಸರ್ಕಾರಿ ಇಲಾಖೆಯವರು ನಮಿಗೆ ಒಂದು ಪತ್ರ ಕಳಿಸಿದ್ರು, ಊರಾಗ ಯಾವುದೇ ಬಾಲ್ಯ ವಿವಾಹಗಳು ನಡದ್ರ ಆ ವಿಚಾರವನ್ನು ತಕ್ಷಣ ಇಲಾಖೆಗೆ ತಿಳಿಸಬೇಕು ಅಂತ ಹೇಳಿದ್ರು. ಮತ್ತೆ ನಮಿಗೆ ಟ್ರೇನಿಂಗ್ ಕೂಡ ಕೊಟ್ಟಿದ್ರು, ಅದಕ್ಕೆ ನಾನು ನಮ್ಮ ಊರಾಗೇ, ನಮ್ ಕಣ್ಣೆದ್ರುಗೇ ಬಾಲ್ಯ ವಿವಾಹ ಆಗೋದನ್ನು ನೋಡಿ ನೋಡಿ ಹೆಂಗ ಸುಮ್ನೆ ಇರ್ಬೇಕು. ಹಂಗ ಆಗಂಗಿಲ್ಲ. ಹಿಂಗ ಒಂದ್ಸಲ ನಮ್ ಊರಾಗ ಸಣ್ಣ ಮಕ್ಕಳಿಗಿ ಮದುವಿ ಮಾಡಾಕ ಹೊಂಟದ್ರು. ಅದಕ್ಕ ಮೊದ್ಲು ನಾನೇ ಅವ್ರ ಮನಿಗಿ ಹೋಗಿ ಸಣ್ಣ ಮಕ್ಳಿಗಿ ಮದುವಿ ಮಾಡಾದು ತಪ್ಪು. ಕಾನೂನು ಪ್ರಕಾರ ಜೈಲಿಗಿ ಹೋಗ್ಬೇಕಾಗತೈತಿ ಅಂತ ಹೇಳಬೇಕು ಅಂತ ಅನ್ಕಂಡಿದ್ದೆ. ಆದ್ರೆ ಆ ಮಂದಿ ಸರಿಗಿಲ್ಲ. ನನ್ನನ್ನ ಏನಾರಾ ಮಾಡಿದ್ರೆ ಅಂತ ಹೆದ್ರಿಕಿ ಆತು. ಅದಕ್ಕ ನಾನು ಈ ವಿಚಾರಾನ ನಮ್ಮ ಹಿರಿಯ ಅಧಿಕಾರಿಗಳಿಗಿ ತಿಳಿಸಿದೆ. ಅವ್ರು ಈ ವಿಚಾರ ತಿಳ್ದು ಸೀದಾ ಆ ಮನಿಗೇ ಬಂದು ವಿಚಾರಿಸಿದ್ರು. ಅದು ಬಾಲ್ಯವಿವಾಹ ಅನ್ನೋದು ತಿಳ್ಕಂಡು, ಮದುವಿ ಮಾಡೋವಂತ ತಂದಿ ತಾಯಿಗಳಿಗಿ ಮತ್ತು ಅವ್ರ ಸಂಬಂಧಿಕ್ರಿಗಿ ಬುದ್ದಿ ಹೇಳಿದ್ರು. ಮನಿಮಂದಿ ಮದುವಿ ನಿಲ್ಸಾಕ ಒಪ್ಲಿಲ್ಲ. ಅದಕ್ಕ ನೀವು ಹಿಂಗ ಹಠ ಹಿಡದ್ರ ನಿಮ್ ಮ್ಯಾಲೆ ಕೇಸ್ ಮಾಡ್ತೀವಿ ಅಂತ ಅಧಿಕಾರಿಗೋಳು ಹೆದ್ರಿಕಿ ಹಾಕಿದ್ರು. ಆವಾಗ ಸುಮ್ನಾದ್ರು, ಕೊನಿಗಿ ೧೮ ವರ್ಸ ತುಂಬೋತನ ಮದುವಿ ಮಾಡಂಗಿಲ್ಲ ಅಂತೇಳಿ ಒಂದು ಪತ್ರ ಬರ್ದು ಕೊಟ್ರು. ಅಧಿಕಾರಿಗೋಳು ಆ ಮನಿಲಿಂದ ಸೀದಾ ನಮ್ ಸಾಲಿತಾಗ ಬಂದು ನನ್ನ ಮಾತಾಡಿಸಿಕೊಂಡು ಹೋದ್ರು. ಅದನ್ನ ಎಲ್ಲಾರೂ ನೋಡ್ಕೆಂಡು ಇದ್ರು. ಅವ್ರಿಗಿ ಸಾರ್ ನಾನೇ ನಿಮಿಗೆ ಹೇಳಿದ್ದು ಅಂತ ಯಾರ್ಗೂ ಹೇಳ್ಬೇಡ್ರಿ, ಯಾಕಂದ್ರ ಆ ಮಂದಿ ಸರಿಗಿಲ್ಲ ಅಂತ ಹೇಳಿದೆ. ಅದಕ್ಕ ಅವ್ರಿದ್ದು ಇದು ಬಾಳ ಸೂಕ್ಷ್ಮ ವಿಷಯ ಇದನ್ನ ಯಾರ್ಗೂ ಹೇಳೋದಿಲ್ಲ. ಒಂದುವೇಳೆ ನಿಮಿಗೆ ಏನಾದ್ರು ತೊಂದ್ರಿ ಆದ್ರೆ ನಮಿಗೆ ಒಂದು ಮಾತು ತಿಳ್ಸಿ, ಸೀದಾ ಪೊಲೀಸ್ ಸ್ಟೇಷನ್ನಿಗೆ ಹೋಗಿ ಕಂಪ್ಲೇಂಟ್ ಕೊಟ್ಟು ಬಿಡ್ರಿ ಅಂತ ಹೇಳಿದ್ರು. ಅಧಿಕಾರಿಗಳೇನೋ ಮದುವೀನ ನಿಲ್ಲಿಸಿದ್ರು. ಆಮ್ಯಾಲ ಆ ಮನಿಯವ್ರು ಇದಕ್ಕ ಕಾರಣ ಯಾರು ಅನ್ನೋದನ್ನ ಪತ್ತೆ ಹಚ್ಚಾಕ ಸುರು ಮಾಡಿದ್ರು. ನನಿಗೆ ಬಾಳ ಹೆದ್ರಿಕಿ ಆಗಿತ್ತು. ಯಾಕಂದ್ರ ಮನಿಗಿ ಬಂದು ಗಲಾಟಿ ಮಾಡಿದ್ರೆ ಹೆಂಗ. ಈ ವಿಚಾರ ನನ ಗಂಡಗ ಗೊತ್ತಾದ್ರೆ ಮತ್ತೆ ನನ್ನ ಹೊಡಿಯೋದು ಬಡಿಯೋದು ಮಾಡ್ತಾನ ಅಂತೇಳಿ ಬಾಳ ಹೆದ್ರಿಕಿ ಆಗಿತ್ತು. ಮದುವಿ ನಿಂತು ಸುಮಾರು ಎರಡು ತಿಂಗ್ಳಿಗಿ ನಾನು ಮದುವಿ ನಿಲ್ಲಾಕ ಕಾರಣ ಅನ್ನೋದು ಗೊತ್ತಾತು. ಅದಕ್ಕ ಆ ಮನಿಯವ್ರು ಸೀದಾ ಅಂಗನವಾಡಿತಾಗ ಬಂದು ಹೆದ್ರಿಸಿ ಹೋದ್ರು. ಆ ಮನ್ಯಾಗಿನ ಹೆಣ್ಮಕ್ಳಂತೂ ಕೆಟ್ ಕೆಟ್ ಮಾತ್ನಿಂದ ಬೈಕಂಡು ಹೋದ್ರು. ನನಿಗಂತೂ ಸಾಕಾಗಿ ಹೋಗಿತ್ತು. ಈ ವಿಚಾರಾನ ನಮ್ ಮ್ಯಾಲಿನ ಅಧಿಕಾರಿಗಳಿಗೆ ತಿಳಿಸಿದ್ರೆ ಅವ್ರು ಸ್ವಲ್ಪ ಧೈರ್ಯ

ಕೊಟ್ರು. ಆದ್ರೆ ಮನ್ಯಾಗ ಈ ವಿಚಾರ ತಿಳ್ಸಿ ನನ ಗಂಡ ಊರಾಗಿನ ಉಸಾಬರಿ ನಿನಿಗೆ ಯಾಕ ಬೇಕು, ಯಾರು ಯಾವಾಗಾದ್ರು ಮದುವಿ ಮಾಡ್ಲಿ, ನಿನಿಗೆ ಏನಾಗ್ಬೇಕು. ಈಗ ನಮ್ ಮ್ಯಾಲೆ ಅವ್ರು ಸಾಯೋವರ್ಗೂ ಸೇಡು ಇಟ್ಕಂಡೇ ಇರ್ತಾರ. ಯಾವಾಗ ಎಲ್ಲಿ ಸಿಗ್ತಾರ ಅಂತ ಕಾಯ್ಕಂಡು ಇರ್ತಾರ. ಹಿಂಗೆಲ್ಲಾ ಆಗ್ತಾವ ಅಂದಿದ್ರೆ ನಾನು ಅಲ್ಲಿಗೆ ಸೇರಿಸ್ತಾನೇ ಇರ್ಲಿಲ್ಲ. ಮಂದಿಕೂಟ ಬೈಸಿಕೆಳ್ಳಾದು ಯಾಕ ಬೇಕು. ಅಂತ ಚೆನ್ನಾಗಿ ಬೈದುಬಿಟ್ಟ. ನಾನೇನೋ ಒಳ್ಳೇದನ್ನ ಮಾಡಾಕ ಹೋದ್ರೆ ಎಲ್ಲಾರೂ ನನ್ನೇ ಬೈಯಾಕತ್ಯಾರ ಅಂತೇಳಿ ನನಿಗೆ ಬಾಳ ಬೇಜಾರು ಆತು" ಎಂದು ಹೇಳಿದರು.

ದೇವಲಾಪುರ ಗ್ರಾಮದ ಅಂಗನವಾಡಿ ಮತ್ತು ಆಶಾ ಕಾರ್ಯಕರ್ತೆಯರು ಇಬ್ಬರೂ ಸೇರಿ ತಮ್ಮ ಗ್ರಾಮದಲ್ಲಿ ನಡೆಯುತ್ತಿದ್ದ ಬಾಲ್ಯವಿವಾಹವನ್ನು ತಡೆದ ಕಾರಣಕ್ಕಾಗಿ ಅವರು ತಮ್ಮ ಊರಿನ ಜನರಿಂದ ಸಮಸ್ಯೆಗಳನ್ನು ಎದುರಿಸಿರುವುದು ಕಂಡುಬರುತ್ತದೆ. ಆಶಾಕಾರ್ಯಕರ್ತೆಯಾದ ಚಂದ್ರಮ್ಮನವರು ಹೇಳುವಂತೆ "ನಮ್ ಊರಾಗ ಬಾಲ್ಯವಿವಾಹ ನಡೀತಿತ್ತು. ನಾನು ಮತ್ತು ಅಂಗನವಾಡಿ ಟೀಚರ್ ಜ್ಯೋತಿ ಇಬ್ರೂ ಸೇರಿ ಆ ಮನಿಗಿ ಹೋಗಿ ಹಿಂಗ ಸಣ್ಣ ಮಕ್ಳಿಗಿ ಮದುವಿ ಮಾಡಾದು ಕಾನೂನು ಪ್ರಕಾರ ತಪ್ಪು. ಏನಾದ್ರು ಮದುವಿ ಮಾಡಿದ್ರೆ ಜೈಲಿಗೆ ಹೋಗ್ಬೇಕಾಗತೈತಿ ಅಂತ ತಿಳ್ಸಿ ಹೇಳಿದ್ವಿ. ಆದ್ರೆ ಅವ್ರು ಕೇಳಾಕ ತೈಯಾರಿರ್ಲಿಲ್ಲ. ನಮ್ ಮನ್ಯಾಗಿನ ಮದುವಿ ನೀವು ಯಾರು ಮಾಡ್ಬ್ಯಾಡ್ರಿ ಅಂತ ಹೇಳಾಕ. ನಮ್ ಮಕ್ಳು ನಮ್ ಇಷ್ಟ. ನಮಿಗಿ ಅನುಕೂಲ ಇದ್ದಾಗ ಮದುವಿ ಮಾಡ್ತೀವಿ. ಹಂಗ ಈಗ ನಮ್ ಮಕ್ಳಿಗಿ ಮದುವಿ ಮಾಡಾಕ ಕಾಲ ಕೂಡಿ ಬಂದೇತಿ ಅದನ್ನ ನಿಲ್ಸಾಕ ಯಾರಿಂದ್ಲೂ ಆಗಂಗಿಲ್ಲ. ನೀವು ಹಿಂಗ ಮಾತಾಡದನ್ನ ಬಿಟ್ಟುಬಿಡ್ರಿ ಅಂತ ಹೇಳಿದ್ರು. ಮತ್ತೆ ನಮ್ ಮನ್ಯಾಗಿನ ಮದುವ್ಯಾಗ ಮೂಗು ತೂರ್ಸಾಕ ಬಂದ್ರೆ ಅದ್ರ ಕತೀನೇ ಬ್ಯಾರೆ ಆಗ್ತೈತಿ ನೋಡ್ರಿ, ಸುಮ್ನೆ ಹೋಗ್ರಿ ಅಂತ ಹೆದ್ರಿಸಿದ್ರು. ಅದಕ್ಕ ನಾವು ಅವ್ರಿಗೆ ಎಷ್ಟೇ ಹೇಳಿದ್ರು ಕೇಳಂಗಿಲ್ಲ ಅಂತ ತಿಳ್ದು. ನೇರವಾಗಿ ಈ ವಿಷಯಾನ ನಮ್ ಮ್ಯಾಲಿನ ಅಧಿಕಾರಿಗಳಿಗೆ ತಿಳಿಸಿದ್ವಿ, ಅವ್ರು ಒಂದು ಟೀಮ್ ಮಾಡ್ಕೆಂಡು ಬಂದು ಸೀದಾ ಅವ್ರ ಮನೀಗೇ ಹೋದ್ರು. ಅಧಿಕಾರಿಗಳೆಲ್ಲಾ ಅವ್ರ ಮನಿಗೆ ಬಂದದ್ದು ನೋಡಿ ಊರಾಗಿನ ಜನಾಯೆಲ್ಲಾ ಗಾಬ್ರಿ ಆಗಾಕತ್ತಿದ್ರು. ನಮ್ ಮ್ಯಾಲಿನ ಮ್ಯಾನೇಜರ್ ಆ ಮನ್ಯಾಗಿನ ಹಿರೇರಿಗೆ ಬಾಲ್ಯವಿವಾಹದ ಬಗ್ಗಿ ಬಾಳ ತಿಳಿಸಿ ಹೇಳಿದ್ರು. ಆದ್ರೆ ಅವ್ರು ಕೇಳಾಕ ತೈಯಾರಿರ್ಲಿಲ್ಲ. ಮತ್ತೆದ ಅಧಿಕಾರಿಗಳ್ನೇ ಹೆದ್ರಸಾಕ ನೋಡಿದ್ರು. ಅವ್ರು ಸೀದಾ ಪೊಲೀಸ್ರಿಗಿ ಪೋನ್ ಮಾಡಿ ಕರ್ಸಿಕೆಂಡ್ರು. ಆಮ್ಯಾಲೆ ಅವ್ರು ಸುಮ್ನಾದ್ರು, ಅವ್ರ ಎದ್ರುಗೆ ಒಂದು ಮುಚ್ಚಳಿಕಿ ಪತ್ರ ಬರ್ದು ಕೊಟ್ರು. ಆ ಪತ್ರಾನ ತಗಂಡು ಅಧಿಕಾರಿಗೋಳು ಹೋದ್ರು. ಆಮ್ಯಾಲೆ ಇಷ್ಟೆಲ್ಲಾ ಆಗಾದಕ್ಕ ನಾವೇ ಕಾರಣ ಅಂತ ನಮ್ ಮ್ಯಾಲೆ ಊರಾಗಿನ ಜನಾನೆಲ್ಲಾ ಸಿಟ್ಟಾಗಿಬಿಟ್ಟಿದ್ರು. ನಮ್ ಕೆಲ್ಸಾನ ಸರೀಗಿ ಮಾಡಾಕ ಬಿಡ್ತಿದ್ದಿಲ್ಲ. ಮದುವಿ ನಿಲ್ಸಿದ್ ಪಾಪ ನಿಮ್ಮನ್ನ ಸುಮ್ನೆ ಬಿಡಂಗಿಲ್ಲ. ನಿಮ್ ಮಕ್ಳಿಗಿ ಒಳ್ಳೇದಾಗಲ್ಲ ಅಂತ ಬಾಳ ಬಾಳ ಬೈಯಾಕತ್ತಿದ್ರು. ನಾವು ಹೆಣ್ಮಕ್ಳು. ಯಾರಾದ್ರು ಏನಾದ್ರು ಮಾಡಿಬಿಟ್ರೆ ಅಂತ

ಬಾಳ ಹೆದ್ರಿಕೆಂಡಿದ್ವಿ. ಆದ್ರೆ ಸ್ವಲ್ಪ ದಿನಕ್ಕ ಅವ್ರು ನಿಶ್ಚಯಿಸಿದ್ದ ಮದುವೀನ ಯಾರ್ಗೂ ಗೊತ್ತಾಗ್ದಂಗ ಮಾಡಿಬಿಟ್ರು. ಈ ವಿಚಾರ ಬಾಳ ದಿನ ಆದ್ ಮ್ಯಾಲ ಗೊತ್ತಾತು. ನಾವು ಕಷ್ಟ ಪಟ್ಟಿದ್ದು ಹೊಳ್ಯಾಗ ಹುಂಚೆಣ್ಣು ತೊಳ್ದಂಗಾತು. ಜನ್ರಿಗೆ ಯಾವಾಗ ಬುದ್ದಿ ಬರ್ತ್ರೈತೋ ಗೊತ್ತಿಲ್ಲ. ನಾವೇನಾದ್ರು ಒಳ್ಳೇದನ್ನ ಮಾಡ್ಬೇಕಂದ್ರ ಊರಾಗಿನ ಜನ ಸುಮ್ನೆ ಬಿಡಂಗಿಲ್ಲ. ಎಲ್ಲಾದಕ್ಕೂ ಅಡ್ಡ ಬರ್ತಾರ. ಮನ್ಯಾಗಿನ ಜನ ಸತೆ ನಮ್ ಮ್ಯಾಲೆ ಸಿಟ್ಟಿಗಿ ಬಂದಿದ್ರು. ಏನ್ ಮಾಡಾದು ಎಲ್ಲಾನೂ ಸಹಿಸ್ಕೆಂಡು ಹೋಗ್ಬೇಕು ಅಷ್ಟೇ" ಎಂದರು.

ಈ ವಿಷಯವನ್ನು ನಿಮ್ಮ ಅಧಿಕಾರಿಗಳಿಗೆ ತಿಳಿಸಲಿಲ್ಲವೇ ಎಂದು ಕೇಳಿದಾಗ?, ಅವ್ರು ಮದುವೀನ ಯಾರ್ಗೂ ಗೊತ್ತಾಗ್ಲಾರ್ದಂಗ ಮಾಡಿದ್ದು, ಸ್ವಲ್ಪದಿನಕ್ಕ ನಮಿಗೆ ಗೊತ್ತಾದಾಗ, ಬಾಳ ಬೇಜಾರಾತು. ಯಾಕಂದ್ರ ಇನ್ನ ಸಣ್ ಹುಡುಗಿ ಐದಾಳ. ಆಕಿ ಇನ್ನ ಏಳ್ನೇ ಕ್ಲಾಸು ಓದ್ತಿದ್ಲು. ಅಕಿಗಿ ಮದುವಿ ಮಾಡಿಬಿಟ್ರಲ್ಲಾ ಅಂತ ಅವ್ರ ಮ್ಯಾಲ, ಮತ್ತೆ ಇಷ್ಟ ಸಣ್ ಹುಡಿಗೀನ್ನ ಮದುವಿ ಮಾಡ್ಕೆಂಡು ಹೋದ್ರಲ್ಲಾ ಅಂತ ಗಂಡಿನ ಕಡೆಯವ್ರ ಮ್ಯಾಲ ಬಾಳ ಸಿಟ್ ಬಂದಿತ್ತು. ಹಿಂಗ ಮದುವಿ ಮಾಡಿದ್ ಮ್ಯಾಲ ಈ ವಿಚಾರಾನ ಮೇಲಿನ ಅಧಿಕಾರಿಗಳಿಗಿ ತಿಳಿಸಿದ್ವಿ. ಅವ್ರು ಸೀದಾ ಮದುವಿ ಮನಿಗಿ ಬಂದು ವಿಚಾರ ಮಾಡಿದ್ರು. ಆದ್ರೆ ಆ ಮನೇರು ಮದುವೀನ ಮಾಡೇ ಇಲ್ಲ. ನಮ್ ಮಕ್ಳನ್ನ ಊರಿಗಿ ಕಳಿಸೇವಿ ಅಂತ ಸುಳ್ಳು ಹೇಳಾಕತ್ತಿದ್ರು. ಆದ್ರೆ ನಮ್ ಸಿಡಿಪಿಓ ಸಾರ್ ಕೇಳ್ಲಿಲ್ಲ. ಆಕಿನ್ನ ನಾಳೇನೇ ಕರ್ಸಿ ನಮಿಗೆ ತೋರ್ಸಬೇಕು ಅಂತ ಹೇಳಿ ಹೋದ್ರು. ಅದಕ್ಕ ಆ ಮನೇರು ಒಪ್ಪಿದ್ರು. ತಿರುಗಾ ದಿನ ಮತ್ತೆ ಸಾಹೇಬ್ರು ಬಂದ್ರು. ಅಷ್ಟೊತ್ತಿಗಾಗ್ಲೆ ಅಕಿನ್ನ ಕರ್ಸಿದ್ರು. ಆದ್ರೆ ಅಕಿ ಕೊಳ್ಳಾಗ ತಾಳಿ, ಕಾಲಾಗ ಉಂಗ್ರ ಇರ್ಲಿಲ್ಲ. ಅದನ್ನ ಕಂಡು ಅನುಮಾನ ಬಂದು ಈಕಿನ್ನ ನಮ್ ಬಾಲ ಮಂದಿರಕ್ಕ ಕಳಸ್ರಿ ಅಂತ ಹೇಳಿದ್ರು. ಆದ್ರೆ ಅವ್ರು ಅದಕ್ಕ ಒಪ್ಲಿಲ್ಲ. ಸಾಹೇಬ್ರನ್ನೇ ಹೆದ್ರಸಾಕ ಬಂದ್ರು ಜೊತಿಗಿ ಹೊಡಿಯಾಕ ಬಂದ್ರು. ಅದಕ್ಕ ಅವ್ರು ಪೋಲೀಸ್ ಸ್ಟೇಷನ್ನಿಗಿ ಪೋನ್ ಮಾಡಿ ಎಸ್.ಐ. ಸಾಹೇಬ್ರನ್ನ ಕರ್ಸಿದ್ರು. ಆಮ್ಯಾಲೆ ಅದೇ ಹುಡುಗೀನ್ನ ಮದುವಿ ಮಾಡ್ಕೆಂಡ ಹುಡುಗನ್ನ ಕಡೇವ್ರಿಂದ ಮದುವಿ ಆಗಿರೋ ವಿಚಾರ ಗೊತ್ತಾತು. ಹಂಗಾಗಿ ಆ ಮನಿಯವ್ರ ಮೇಲೆ ಕೇಸ್ ಮಾಡಿದ್ರು. ಈ ಕೇಸ್ಲಿಂದ ಹೊರಗ್ ಬರ್ಬೇಕಂತ ತಿಳ್ಕಂಡು ನಿರ್ಧಾರ ಮಾಡಿ ಕೊನಿಗಿ ಒಂದಿನ ನಮ್ ಮಗ್ಳಿಗಿ ಜಲ್ದಿ ಮದುವಿ ಮಾಡಿದ್ದು ತಪ್ಪಾತು. ಆಕಿಗಿ ೧೮ ವರ್ಷ ತುಂಬೋತನ ಗಂಡನ ಮನಿಗಿ ಕಳ್ಸಾಂಗಿಲ್ಲ. ಅಲ್ಲಿತನ ಓದಿಸ್ತೀವಿ ಅಂತೇಳಿ ಒಂದು ಪತ್ರ ಬರ್ದು ಕೊಟ್ರು. ಆದ್ರೆ ಕೇಸ್ ಹಂಗೆ ಉಳದೈತಿ" ಎಂದರು.

ಸಮಾಜದಲ್ಲಿ ಸ್ಥಳೀಯ ಪಿತೃಪ್ರಧಾನ ವ್ಯವಸ್ಥೆ ತುಂಬಾ ಬಲಿಷ್ಠವಾಗಿರುತ್ತದೆ. ಆ ಕಾರಣಕ್ಕಾಗಿ ಜಾತಿ, ವರ್ಗಗಳು ಜನರ ಮೇಲೆ ತುಂಬಾನೇ ಪ್ರಭಾವ ಬೀರಿರುತ್ತವೆ. ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಯಾವ ಜಾತಿಯ ಜನರ ಕುಟುಂಬಗಳು ಹೆಚ್ಚಾಗಿರುತ್ತವೆಯೋ ಅಥವಾ ಯಾರು ಆರ್ಥಿಕವಾಗಿ ಬಲಿಷ್ಠರಾಗಿರುತ್ತಾರೋ, ಅಂತಹವರ ಮಾತುಗಳು ಅಲ್ಲಿ ವೇದವಾಕ್ಯವಾಗಿರುತ್ತವೆ. ಹಾಗಾಗಿ ಅಲ್ಲಿನ ಜನರು ಇವರ ಮಾತುಗಳನ್ನು ಸಹಜವಾಗಿಯೇ

ಕೇಳುತ್ತಿರುತ್ತಾರೆ. ಅವರನ್ನು ಯಾರೂ ಎದುರುಗೊಳ್ಳುವುದಿಲ್ಲ. ಅಂದರೆ ಅವರ ವಿರುದ್ಧವಾಗಿ ಯಾರೂ ಮಾತನಾಡುವುದಿಲ್ಲ. ಇಂತಹ ಸಂದರ್ಭದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿನ ಅಂಗನವಾಡಿ ಕಾರ್ಯಕರ್ತೆಯರು ಮತ್ತು ಆಶಾ ಕಾರ್ಯಕರ್ತೆಯರು ತಮಗೆ ವಹಿಸಿದ ಕೆಲಸಗಳನ್ನು ಸರಿಯಾಗಿ ನಿಭಾಯಿಸಲು ತುಂಬಾನೇ ಕಷ್ಟಕರವಾಗಿರುತ್ತದೆ. ಏಕೆಂದರೆ ಜನರಿಗೆ ಒಳ್ಳೆಯದಾಗುತ್ತದೆ ಎಂದರೆ ಅದನ್ನು ಸ್ವೀಕರಿಸುವ ಮತ್ತು ಕೆಟ್ಟದ್ದಾಗುತ್ತದೆ ಎಂದರೆ ಅದನ್ನು ಧಿಕ್ಕರಿಸುವ ವ್ಯವಸ್ಥೆ ಎಲ್ಲೆಡೆಯಲ್ಲಿಯೂ ಕಂಡುಬರುತ್ತದೆ. ಆದರೆ ಕುಟುಂಬಕ್ಕೆ ಅಥವಾ ಒಂದು ಸಮುದಾಯಕ್ಕೆ ಒಳ್ಳೆಯದೆಂದು ತಿಳಿದದ್ದು ಸಂವಿಧಾನದ ಆಶಯಗಳಿಗೆ ಅದು ಕೆಟ್ಟದ್ದಾಗಿರಬಹುದು. ಹಾಗೆಯೇ ಸಂವಿಧಾನದ ಆಶಯಗಳು ಜಾತಿ ಸಮುದಾಯಗಳಿಗೆ ಕೆಟ್ಟದ್ದಾಗಿ ಕಾಣಬಹುದು. ಅದನ್ನು ಪ್ರಶ್ನಿಸಿದರೆ ಆಗ ಅದರ ವಿರುದ್ಧ ಕಿಡಿಕಾರುವ ಜನರು ತುಂಬಾನೇ ಕಂಡುಬರುತ್ತಾರೆ. ಹಾಗೆಯೇ ಅದನ್ನು ಪ್ರಶ್ನಿಸಿದ ಜನರು ಊರಿಗೆ ಕೆಟ್ಟವರಾಗಿ ಕಾಣಬಹುದಾದ ಎಲ್ಲ ಸಾಧ್ಯತೆಗಳು ಇರುತ್ತವೆ. ಇದು ಬಾಲ್ಯ ವಿವಾಹದ ಸಂದರ್ಭದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಮುಖ್ಯವಾಗಿ ಬಾಲ್ಯ ವಿವಾಹಗಳು ಸಮಾಜದ ಅಭಿವೃದ್ಧಿಗೆ ಮಾರಕವಾದವುಗಳು. ಅದು ಜನರಿಗೆ ತಿಳಿಸುವುದು ಎಂದರೆ ಬಹು ಕಷ್ಟದ ಸಂಗತಿಯಾಗಿರುತ್ತದೆ. ಹಾಗಾಗಿ ಗ್ರಾಮೀಣ ಭಾಗಗಳಲ್ಲಿನ ಅಂಗನವಾಡಿ ಕೇಂದ್ರದ ಶಿಕ್ಷಕಿಯರು ಮತ್ತು ಆಶಾ ಕಾರ್ಯಕರ್ತೆಯರಿಗೆ ಇದರ ಕುರಿತ ಅರಿವನ್ನು ಮೂಡಿಸುವ ಕೆಲಸವನ್ನು ವಹಿಸಿಕೊಡಲಾಗಿದೆ. ಆದರೆ ಇದು ಅವರಿಗೆ ಸುಲಭದ ಕೆಲಸವಾದರೂ, ಜೀವಕ್ಕೆ ಅಪಾಯ ತರುವಂತಹದ್ದಾಗಿದೆ ಎಂಬುದು ಮೇಲಿನ ಎರಡು ಪ್ರಕರಣಗಳಿಂದ ತಿಳಿದುಬರುತ್ತದೆ. ಏಕೆಂದರೆ ಮೊದಲನೇ ಪ್ರಕರಣದಲ್ಲಿನ ಸುಶೀಲಮ್ಮನವರು ಬಾಲ್ಯ ವಿವಾಹ ಮಾಡುತ್ತಿರುವ ಕುಟುಂಬಕ್ಕೆ ತಿಳಿ ಹೇಳುವ ಮೊದಲ ಪ್ರಯತ್ನವನ್ನು ಮಾಡಲೇ ಇಲ್ಲ. ಕಾರಣ ಆ ಕುಟುಂಬದವರು ತುಂಬಾನೇ ಬಲಿಷ್ಟರಾದವರು. ಅವರು ಏನು ಬೇಕಾದರೂ ಮಾಡಬಹುದು ಎಂದು ಹೆದರಿಕೊಂಡು ಸುಮ್ಮನಾಗಿದ್ದಾರೆ. ಆದರೆ ಇದು ಅವರಿಗೆ ಉಚಿತವಲ್ಲವೆಂದು ತಿಳಿದು ತಮ್ಮ ಮೇಲಿನ ಅಧಿಕಾರಗಳಿಗೆ ಮಾಹಿತಿಯನ್ನು ರವಾನಿಸಿದ್ದಾರೆ. ಇದನ್ನು ಅವರು ಅಳುಕಿನಿಂದಲೇ ಮಾಡಿದ್ದಾರೆ. ಹಾಗೆಯೇ ಇನ್ನೊಂದು ಪ್ರಕರಣದಲ್ಲಿನ ಚಂದ್ರಮ್ಮ ಮತ್ತು ಜ್ಯೋತಿಯವರು ಬಾಲ್ಯ ವಿವಾಹ ನಿಲ್ಲಿಸಿದ ಕಾರಣಕ್ಕಾಗಿ ಜನರಿಂದ ಮತ್ತು ಕುಟುಂಬದ ಸದಸ್ಯರಿಂದ ಹಲವು ನಿಂದನೆಗಳಿಗೆ ಒಳಗಾಗಿದ್ದಾರೆ. ಇವುಗಳು ಬಾಲ್ಯ ವಿವಾಹ ಪದ್ಧತಿಯನ್ನು ನಿರ್ಮೂಲನೆ ಮಾಡಲು ತುಂಬಾ ತೊಡಕನ್ನುಂಟು ಮಾಡಿರುವ ಸಂಗತಿಗಳಾಗಿವೆ. ಹಾಗೆಯೇ ಕಾನೂನಿನ ಬಗೆಗೆ ಅರಿವನ್ನು ಮೂಡಿಸಲು ಹಲವು ಅಡ್ಡಿ ಆತಂಕಗಳನ್ನು ಸೃಷ್ಟಿಸುತ್ತವೆ. ಅವರು ನಿಶ್ಚಯಿಸಿದ ವಿವಾಹಗಳು ಸರಿಯಾದ ಸಮಯಕ್ಕೆ ನೆರವೇರಲಿಲ್ಲ ಮತ್ತು ನಿಲ್ಲಲ್ಪಟ್ಟವು ಎಂಬ ಕಾರಣಕ್ಕೆ ಅಂಗನವಾಡಿ ಮತ್ತು ಆಶಾ ಕಾರ್ಯಕರ್ತೆಯರನ್ನು ಹಿಂಸಿಸಿರುವುದು ಜನರ ಮನಸ್ಥಿತಿ ಎಂಥಹದ್ದು ಎಂಬುದನ್ನು ತಿಳಿಸುತ್ತದೆ. ಅವರಿಗೆ ಮುಖ್ಯವಾದುದು ತಮ್ಮ ಮಕ್ಕಳ ಭವಿಷ್ಯವಲ್ಲ. ಬದಲಾಗಿ ಅವರನ್ನು ಬಹು ಬೇಗನೇ ವಿವಾಹಕ್ಕೆ ಒಳಪಡಿಸಿ ತಮ್ಮ ಜವಾಬ್ದಾರಿಯಿಂದ ವಿಮುಖರಾಗುವುದು. ಹೀಗೆ ಜನರಲ್ಲಿ

ಈ ಆಲೋಚನೆ ಬಲಿಷ್ಠವಾಗಿರುವುದರಿಂದ ಯಾವುದು ತಪ್ಪು ಯಾವುದು ಸರಿ ಎಂಬುದನ್ನು ತಿಳಿಯುವುದರಲ್ಲಿ ಎಡವುತ್ತಿರುವುದು ಕಂಡುಬರುತ್ತದೆ. ಮುಖ್ಯವಾಗಿ ಸಮಾಜ ಯಾವಾಗಲೂ ಪುರುಷನ ಪರವಾಗಿರುವುದರಿಂದ ಅವರ ಮೂಗಿನ ನೇರಕ್ಕೇ ಎಲ್ಲವನ್ನೂ ಆಲೋಚಿಸುತ್ತದೆ. ಆದರೆ ಹೆಣ್ಣುಮಕ್ಕಳ ಸಮಸ್ಯೆಗಳು ಅವರ ಕಣ್ಣಿಗೆ ಕಾಣಿಸುವುದಿಲ್ಲ. ಜೊತೆಗೆ ಈ ಸ್ಥಳೀಯ ಪಿತೃಪ್ರಧಾನ ವ್ಯವಸ್ಥೆ ಎಷ್ಟೊಂದು ಬಲಿಷ್ಠವಾಗಿರುತ್ತದೆ ಎಂದರೆ ಸಂವಿಧಾನದ ಆಶಯಗಳನ್ನೂ ಗಾಳಿಗೆ ತೂರುವಂತಹ ಮನಃಸ್ಥಿತಿಯನ್ನು ಹೊಂದಿರುತ್ತದೆ. ಹಾಗಾಗಿಯೇ ಎರಡನೇ ಪ್ರಕರಣದಲ್ಲಿ ಬಾಲ್ಯ ವಿವಾಹವನ್ನು ಮಾಡುವುದಿಲ್ಲ ಎಂದು ಮುಚ್ಚಳಿಕೆ ಪತ್ರವನ್ನು ಬರೆದುಕೊಟ್ಟಿದ್ದರೂ ಅದನ್ನು ಲೆಕ್ಕಿಸದೇ ವಿವಾಹ ಮಾಡಿದ್ದಾರೆ. ಅಂದರೆ ಇಲ್ಲಿ ಸಂವಿಧಾನದ ಆಶಯಗಳಿಗಿಂತ ಅವರ ಕುಟುಂಬದ ಗೌರವ ಪ್ರತಿಷ್ಠೆಗಳೇ ಮುಖ್ಯವಾಗಿರುತ್ತವೆ. ಅದನ್ನು ಉಳಿಸಿಕೊಳ್ಳಲು ಯಾವ ನಿಯಮಗಳನ್ನಾದರೂ ಮುರಿಯಬಲ್ಲರು. ಒಂದುವೇಳೆ ಅವರ ವಿರುದ್ಧ ಮಾತನಾಡಿದರೆ ಅವರು ಇಡೀ ಸಮಾಜದ ವಿರೋಧವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಆ ಬಗೆಯ ವಾತಾವರಣವನ್ನು ನಿರ್ಮಿಸಿಬಿಟ್ಟಿರುತ್ತಾರೆ. ಅಂದರೆ ಒಂದು ಕುಟುಂಬದ ಆಶಯ ಇಡೀ ಸಮಾಜದ ಅಥವಾ ಇಡೀ ಹಳ್ಳಿಯ ಆಶಯವೆಂಬಂತೆ ಬಿಂಬಿಸಲ್ಪಡುತ್ತದೆ. ಹಳ್ಳಿಯ ಜನರೂ ಕುಟುಂಬಕ್ಕೆ ಆದಂತಹ ಅನ್ಯಾಯವೆಂದೇ ಭಾವಿಸುತ್ತದೆಯೇ ವಿನಃ, ಚಿಕ್ಕ ವಯಸ್ಸಿನಲ್ಲಿ ವಿವಾಹ ಮಾಡುವುದು ತಪ್ಪು, ಅದು ಕಾನೂನು ಪ್ರಕಾರ ಶಿಕ್ಷಾರ್ಹ ಅಪರಾಧ ಎಂಬುದನ್ನು ತಿಳಿಯುವುದಿಲ್ಲ. ಹಾಗಾಗಿ ಇಲ್ಲಿ ಕಾನೂನಿನ ಆಶಯಗಳ ಕುರಿತು ಯಾರೂ ಯೋಚಿಸುವುದಿಲ್ಲ. ಬಹಳ ಮುಖ್ಯವಾಗಿ ಹಳ್ಳಿಗಳಲ್ಲಿನ ಪ್ರತಿಯೊಂದು ಕುಟುಂಬದ ಸದಸ್ಯರು ಭಾವನಾ ಜೀವಿಗಳಾಗಿರುತ್ತಾರೆ. ಅವರಲ್ಲಿ ಎಷ್ಟೇ ವೈಮನಸ್ಸುಗಳಿದ್ದರೂ ಅಥವಾ ಜಾತಿ ಆತಂಕಗಳಿದ್ದರೂ ಅವುಗಳಾವುವೂ ಇಂತಹ ಸಂದರ್ಭದಲ್ಲಿ ಗೋಚರಿಸುವುದಿಲ್ಲ. ಎಲ್ಲರೂ ಒಗ್ಗಟ್ಟಾಗಿ ಬಿಡುತ್ತಾರೆ. ಮುಖ್ಯವಾಗಿ ಈ ಭಾವನಾತ್ಮಕತೆಯ ಕಾರಣದಿಂದ ಎಂಥಹವರನ್ನಾದರೂ ಎದುರು ಹಾಕಿಕೊಳ್ಳಲು ಸಿದ್ಧರಿರುತ್ತಾರೆ. ಹಾಗಾಗಿಯೇ ಬಾಲ್ಯವಿವಾಹಗಳನ್ನು ತಡೆಯಲು ಬಂದಂತಹ ಅಧಿಕಾರಿಗಳ ಮೇಲೂ ಹಲ್ಲೆ ಮಾಡಲು ಮುಂದಾಗಿರುವುದನ್ನು ಕಾಣಬಹುದು. ಹಾಗಾಗಿ ಜನರು ಕಾನೂನನ್ನು ಅರಿಯದೇ ಇರುವುದು ಒಂದು ದೊಡ್ಡ ತೊಡಕಾಗಿದೆ.

ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುವಂತಹ ಅಧಿಕಾರಿಗಳ ಅನುಭವಗಳೇ ವಿಭಿನ್ನವಾಗಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಮುಖ್ಯವಾಗಿ ಬಾಲ್ಯ ವಿವಾಹಗಳನ್ನು ತಡೆಯುವುದರ ಸಲುವಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಈ ಕಾರ್ಯಕ್ರಮಗಳನ್ನು ಸ್ಥಳೀಯ ಮಟ್ಟದ ಸರ್ಕಾರೇತರ ಸಂಘಸಂಸ್ಥೆಗಳನ್ನು ಒಡಗೂಡಿಸಿಕೊಂಡು ಮಾಡುತ್ತಿರುತ್ತಾರೆ. ಜೊತೆಗೆ ಪ್ರತ್ಯೇಕವಾಗಿಯೂ ಮಾಡಲಾಗುತ್ತದೆ. ಇಂತಹ ಸಂದರ್ಭದಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸಿದ ಉದಾಹರಣೆಗಳನ್ನು ಅಧಿಕಾರಿಗಳು ಹಂಚಿಕೊಂಡರು. ಈ ಸಮಸ್ಯೆಗಳೇ ಬಾಲ್ಯ

ವಿವಾಹ ನಿಷೇಧ ಕಾನೂನು ಅನುಷ್ಠಾನಗೊಳ್ಳಲು ತೊಡಕುಗಳಾಗಿವೆ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿಯೊಬ್ಬರು ಬಾಲ್ಯ ವಿವಾಹ ಮಾಡುತ್ತಿದ್ದ ಕುಟುಂಬಕ್ಕೆ ತೆರಳಿ ಆ ವಿವಾಹವನ್ನು ನಿಲ್ಲಿಸಿದ್ದ ಕಾರಣಕ್ಕೆ ಅವರು ಅಲ್ಲಿನ ಜನರಿಂದ ಬಹಿಷ್ಕಾರಕ್ಕೆ ಒಳಗಾಗಿರುವ ಸಂಗತಿಯನ್ನು ತಿಳಿಸಿದರು. ಅವರು ಹೇಳುವಂತೆ "ನಮ್ಮ ಇಲಾಖೆಯ ವ್ಯಾಪ್ತಿಯೊಳಗೆ ಬರುವ ಹಳ್ಳಿಯೊಂದರಲ್ಲಿ ಬಾಲ್ಯ ವಿವಾಹ ನಡೆಯುತ್ತಿದೆ ಎಂಬುದು ಅಂಗನವಾಡಿ ಕಾರ್ಯಕರ್ತೆಯಿಂದ ತಿಳಿದ ಕೂಡಲೇ, ನಮ್ಮ ತಂಡದ ಸಮೇತ ಆ ಊರಿಗೆ ತೆರಳಿದೆವು. ಅಲ್ಲಿ ಮದುವೆಗೆ ಎಲ್ಲಾ ತಯ್ಯಾರಿ ನಡೆದಿತ್ತು. ನಾವು ಹೋದ ಕೂಡಲೇ ಅವರಿಗೆ ಅನುಮಾನ ಉಂಟಾಗಿ, ನಮ್ಮ ಹತ್ತಿರ ಕುಟುಂಬದ ಹಿರಿಯರೊಬ್ಬರು ಮತ್ತು ಊರಿನ ಹಿರಿಯರೊಬ್ಬರು ಇಬ್ಬರೇ ಮಾತನಾಡಲು ಬಂದರು. ಅವರಿಗೆ ನಾವು ಬಂದಿರುವ ಉದ್ದೇಶವನ್ನು ತಿಳಿಸಿದೆವು. ಆದರೆ ಅವರು ಇಲ್ಲಿ ಯಾವುದೇ ಸಣ್ಣ ಮಕ್ಕಳ ಮದುವೆ ನಡೆಯುತ್ತಿಲ್ಲ. ಎಲ್ಲರೂ ಕೈಗೆ ಬಂದಾರೆ, ಅವ್ರ ಮದುವಿ ಮಾಡಾದೂ ತಪ್ಪಾ ಎಂದು ಕೇಳಿದರು. ಅದಕ್ಕೆ ನಾವಿದ್ದು, ಚಿಕ್ಕ ಮಕ್ಕಳಿಗೆ ಮದುವೆ ಮಾಡೋದು ಕಾನೂನು ಪ್ರಕಾರ ತಪ್ಪು, ಹಾಗೆ ಮಾಡಿದರೆ ಶಿಕ್ಷಾರ್ಹ ಅಪರಾಧವಾಗುತ್ತದೆ. ಹಾಗಾಗಿ ನೀವು ಮದುವೆ ಮಾಡಲು ನಿಶ್ಚಯಿಸಿರುವ ಗಂಡು ಮತ್ತು ಹೆಣ್ಣನ್ನು ಕರೆದುಕೊಂಡು ಬನ್ನಿ ಅವರನ್ನು ನೋಡಿ ಹೋಗ್ತೀವಿ ಎಂದು ಹೇಳಿದಾಗ, ಅವರು ಕರೆದುಕೊಂಡು ಬಂದರು. ಆದರೆ ಅವರು ವಿವಾಹಕ್ಕೆ ಯೋಗ್ಯರಾಗಿರುವುದು ಕಂಡುಬಂದಿತು. ಆದರೂ ಇವರು ತೋರಿಸುತ್ತಿರುವ ಮದುವೆಯಾಗುತ್ತಿರುವ ಗಂಡು ಮತ್ತು ಹೆಣ್ಣು ಇವರೇನಾ ಎಂಬ ಅನುಮಾನ ನಮಗೆ ಕಾಡುತ್ತಿತ್ತು. ಮದುವೆಯ ದಿನ ಬಂದರಾಯಿತು ಎಂದು ತಿಳಿದು ಅಲ್ಲಿಂದ ಹೊರಟು ಬಂದೆವು. ಯಾವ ಮುಹೂರ್ತಕ್ಕೆ ಮದುವೆಯನ್ನು ನಿಶ್ಚಯ ಮಾಡಿದ್ದರೋ ಅಂದು ಬಹು ಬೇಗನೇ ವಿವಾಹ ಮಾಡಿಬಿಡಬೇಕೆಂದು ಅವರು ತಿಳಿದಿದ್ದರು. ಈ ವಿಷಯ ಗೊತ್ತಾಗಿ ನಾವು ಮದುವೆಯ ದಿನ ಬಂದೆವು. ಅಷ್ಟೊತ್ತಿಗಾಗಲೇ ವಿವಾಹ ನಡೆದೇ ಹೋಗಿತ್ತು. ಇದನ್ನು ಕಂಡು ಬಹಳ ಸಿಟ್ಟು ಬಂದಿತ್ತು. ಆದರೆ ಆ ಸಿಟ್ಟನ್ನ ಯಾರ ಮೇಲೆ ತೀರಿಸ್ಬೇಕು. ಅಂತೇಳಿ ಸುಮ್ಮನಾಗಿಬಿಟ್ಟೆ. ಈ ಹಿಂದಿನ ದಿನ ನಮ್ಮ ಜೊತೆ ಮಾತನಾಡಿದ ಹಿರಿಯರನ್ನು ಕರೆಯಿಸಿ, ಈ ವಿವಾಹ ಬಾಲ್ಯ ವಿವಾಹವಾಗಿದ್ದು, ಇದನ್ನು ಮಾಡಿದವರ ಮೇಲೆ ಕೇಸ್ ಮಾಡಲಾಗುತ್ತದೆ. ಹಾಗೆಯೇ ಈ ಹಿಂದೆ ನಮಗೆ ಸುಳ್ಳುಹೇಳಿ ಮದುವೆ ಮಾಡಿದ್ದೀರಿ. ಆ ಹಿನ್ನೆಲೆಯಲ್ಲಿಯೂ ಹುಡುಗಿಯ ಮತ್ತು ಹುಡುಗನ ತಂದೆ ತಾಯಿ ಮತ್ತು ಈ ವಿವಾಹಕ್ಕೆ ಸಹಕರಿಸಿದ ಎಲ್ಲರ ಮೇಲೂ ಕೇಸ್ ಮಾಡಲಾಗುತ್ತಿದೆ ಎಂದು ಹೇಳಿದಾಗ ಅಲ್ಲಿ ನೆರೆದಿದ್ದ ಜನರೆಲ್ಲಾ ನಮ್ಮನ್ನ ಸುತ್ತುವರೆದು ನಿಂತುಬಿಟ್ಟರು. ಆಗ ಕೂಡಲೇ ಪೊಲೀಸ್ ಸ್ಟೇಷನ್ನಿಗೆ ಪೋನ್ ಮಾಡಿದಾಗ ಪಿ.ಎಸ್.ಐ. ಮತ್ತು ಅವರ ಸಿಬ್ಬಂದಿ ಬಂದರು. ಆದರೂ ಜನರು ಕೇಳಲಿಲ್ಲ. ನಮ್ಮ ಮತ್ತು ಅಲ್ಲಿನ ಜನರ ನಡುವೆ ಜಗಳ ಶುರುವಾತು. ಪೊಲೀಸ್‌ನವರು ನಮ್ಮ ಜೊತೆ ಇದ್ದಿದ್ದರಿಂದ ನಾವು ಬಚಾವಾದೆವು. ಇಲ್ಲದಿದ್ದರೆ ಏನು ಆಗುತ್ತಿತ್ತೋ ಗೊತ್ತಿಲ್ಲ. ಕೊನೆಗೆ ಜನರ ಈ ಉದ್ಧಟತನಕ್ಕೆ ತಕ್ಕಂತೆ ಅವರ ಮೇಲೆ ಕೇಸ್ ಮಾಡಲಾಯಿತು. ಜೊತೆಗೆ ಹುಡುಗಿಯ ಮತ್ತು

ಹುಡುಗನ ತಂದೆ ತಾಯಿಯಿಂದ ಮುಚ್ಚಳಿಕೆ ಪತ್ರವನ್ನು ಬರೆಯಿಸಿಕೊಳ್ಳಲಾಯಿತು. ಹುಡುಗಿಗೆ ೧೮ವರ್ಷ ಮತ್ತು ಹುಡುಗನಿಗೆ ೨೧ ವರ್ಷ ವಯಸ್ಸಾಗುವವರೆಗೆ ಅವರನ್ನು ದೂರವಿರಿಸಬೇಕು. ಮತ್ತು ಅವರಿಗೆ ಶಿಕ್ಷಣ ಒದಗಿಸಿಕೊಡಬೇಕು ಎಂದು ಆದೇಶಿಸಲಾಯಿತು. ಈಗಲೂ ಆ ಕೇಸು ನಡಿಯುತ್ತಲೇ ಇದೆ. ನಾವು ಬಾಲ್ಯ ವಿವಾಹಗಳನ್ನು ತಡೆಯಬೇಕು ಅಂತ ಅಂದುಕೊಂಡಿರ್ತೀವಿ. ಆದ್ರೆ ಜನ್ರು ಹಂಗ ಮಾಡೋದಕ್ಕೆ ಬಿಡೋದಿಲ್ಲ. ನಮ್ಮನ್ನೇ ಯಾಮಾರ್‍ಸಿಬಿಡ್ತಾರ. ಆದ್ರೂ ಆ ಮುದುವೀನ್ನ ನಿಲ್ಲಿಸಲು ಆಗ್ಲೇ ಇದ್ರೂ ವಿವಾಹಕ್ಕೆ ಒಳಗಾದ ಮಕ್ಕಳಿಗೆ ಶಿಕ್ಷಣ ಒದಗಿಸಿಕೊಡುವಂತೆ ಮಾಡಲಾಯಿತು. ಈಗ ಅವರ ಮೇಲೆ ನಿಗಾ ವಹಿಸಲಾಗಿದೆ" ಎಂದರು.

ಯೂನಿಸೆಫ್ ಸಂಸ್ಥೆಯ ತಾಲೂಕು ಸಂಯೋಜನಾಧಿಕಾರಿಯೊಬ್ಬರು ಹೇಳುವಂತೆ "ಗಂಗಾವತಿಯಲ್ಲಿ ಬಾಲ್ಯವಿವಾಹ ನಡೆಯುತ್ತಿದೆ ಅದನ್ನು ನೀವು ತಡೆಯಬೇಕು ಎಂದು ರೆಡ್ ಅಲರ್ಟ್ಸ್‌ಗೆ ಒಂದು ಕರೆ ಬಂದಾಗ ನಾವು ಮತ್ತು ನಮ್ಮ ತಂಡ ಆ ವಿವಾಹವನ್ನು ನಿಲ್ಲಿಸಬೇಕೆಂದು ನಿರ್ಧರಿಸಿದೆವು. ಮದುವೆ ಮಾಡಲು ನಿಶ್ಚಯಿಸಿದ್ದ ಮನೆಗೆ ತೆರಳಿದೆವು. ಅಲ್ಲಿ ವಿವಾಹ ಮಾಡಲು ಎಲ್ಲಾ ಏರ್ಪಾಡುಗಳನ್ನು ಮಾಡಿಕೊಳ್ಳಲಾಗಿತ್ತು. ಅದು ಇದ್ದಂತವರ ಮದುವೆ. ಒಟ್ಟು ಎರಡು ಮದುವೆಗಳನ್ನು ಮಾಡಲು ನಿಶ್ಚಯಿಸಿದ್ದರು. ಅದರಲ್ಲಿ ಒಂದು ಬಾಲ್ಯ ವಿವಾಹವಾಗಿತ್ತು. ಮುಖ್ಯವಾಗಿ ಈ ವಿಷಯದ ಕುರಿತು ಆ ಕುಟುಂಬದ ಹಿರಿಯರ ಹತ್ತಿರ ಮಾತನಾಡಿದಾಗ ಅವರು ಇಲ್ಲಿ ಯಾವ ಬಾಲ್ಯ ವಿವಾಹಗಳೂ ನಡೆಯುತ್ತಿಲ್ಲ ನಿಮಗೆ ಯಾರೋ ಸುಳ್ಳು ಮಾಹಿತಿ ಕೊಟ್ಟಿದ್ದಾರೆ ಎಂದು ಹೇಳಿದರು. ಆದರೂ ಇಲ್ಲಿ ನಡೆಯುತ್ತಿರುವ ವಿವಾಹಗಳಲ್ಲಿ ಒಂದು ಬಾಲ್ಯ ವಿವಾಹ ಎಂಬುದರ ಬಗೆಗೆ ನಮಗೆ ಖಚಿತವಾದ ಮಾಹಿತಿ ಇತ್ತು. ಹಾಗಾಗಿ ನಾವು ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮದ ಕುರಿತು ಮತ್ತು ಬಾಲ್ಯ ವಿವಾಹ ನಿಷೇಧ ಕಾಯಿದೆಯ ಕುರಿತು ಅವರಿಗೆ ತಿಳಿಹೇಳಲು ಮುಂದಾದಾಗ ನಮ್ಮೊಂದಿಗೆ ಅವರು ಏಕ ವಚನದಲ್ಲಿ ಮಾತನಾಡುವುದರ ಮೂಲಕ ಮನೆಯಿಂದ ಹೊರಗೋಗಲು ತಿಳಿಸಿದರು. ನಾವು ಅಲ್ಲಿಂದ ಹೊರಬಂದು ಅದನ್ನು ಚಾಲೆಂಜಿಂಗಾಗಿ ತಗಂಡು ಮೊದಲು ಆ ವಿವಾಹದಲ್ಲಿ ಪಾಲ್ಗೊಳ್ಳುತ್ತಿರುವ ಹುಡುಗ ಹುಡುಗಿಯರ ಶಾಲಾ ದಾಖಲಾತಿಗಳನ್ನು ತರಿಸಿಕೊಂಡೆವು. ಅವುಗಳ ಪ್ರಕಾರ ಅಲ್ಲಿನ ಒಂದು ಜೋಡಿಗೆ ವಿವಾಹ ವಯಸ್ಸು ಆಗಿರಲೇ ಇಲ್ಲ. ಈ ದಾಖಲೆಗಳನ್ನು ಮುಂದಿಟ್ಟುಕೊಂಡು ಅವರ ಮನೆಗೆ ಮತ್ತೆ ಹೋದಾಗ ಅವರು ಈಗಾಗಲೇ ಮದುವೆ ಕಾರ್ಡುಗಳನ್ನ ಹಂಚಿಬಿಟ್ಟಿದ್ದೇವೆ. ಈಗ ಮದುವೆ ನಿಲ್ಲಿಸಲು ಸಾಧ್ಯವಿಲ್ಲ. ನೀವು ಏನ್ ಬೇಕಾದ್ರೂ ಮಾಡಿಕೊಳ್ರಿ, ನಾವು ಮಾತ್ರ ಮದುವೀನ ನಿಲ್ಲಿಸಲ್ಲ ಎಂದು ಖಡಾಖಂಡಿತವಾಗಿ ಹೇಳಿದರು. ನಮಗೆ ಇಲ್ಲಿ ಬಾಲ್ಯ ವಿವಾಹ ನಡೆಯುತ್ತಿದೆ ಎಂಬುದು ಖಚಿತವಾಯಿತು. ನಾವು ಅದನ್ನ ತಡೆಯಲು ಎಷ್ಟೇ ಪ್ರಯತ್ನ ಪಟ್ಟರೂ ಅದು ಸಾಧ್ಯವಾಗಲಿಲ್ಲ. ನಮಗಂತೂ ತುಂಬಾ ಬೇಜಾರಾಯಿತು. ಕೊನೆಗೆ ಅವರ ಮೇಲೆ ಕೇಸ್ ಮಾಡಬೇಕು ಎಂದು ಯೋಚಿಸಿ, ಕೇಸ್ ಮಾಡಲಾಯಿತು. ನಾನೇ ಆ ಕೇಸನ್ನು ಕೊಟ್ಟಿದ್ದೆ. ಕೋರ್ಟಿನಲ್ಲಿ ಕೇಸ್ ನಡೀತಿತ್ತು. ನಾನು ಮತ್ತು

ನಮ್ಮ ತಂಡದವರೆಲ್ಲಾ ಸೇರಿ ದಾಖಲೆಗಳನ್ನು ಕೋರ್ಟಿಗೆ ಒಪ್ಪಿಸಿದೆವು. ಅಲ್ಲಿ ಮದುವೆಯ ಗಂಡಿನ ತಂದೆ ಇದು ಸುಳ್ಳು ದಾಖಲೆ ನಮ್ಮ ಮಕ್ಕಳಿಗೆ ಮದುವೆಯೇ ಆಗಿಲ್ಲ ಎಂದು ಹೇಳಿದರು. ಅವರು ಮದುವೆಯ ಸಂದರ್ಭದಲ್ಲಿ ಪ್ರಿಂಟ್ ಹಾಕಿಸಿದ ಮದುವೆ ಕಾರ್ಡು ಸಮೇತ ದಾಖಲೆಗಳನ್ನು ಒದಗಿಸಿದ್ದೆವು. ಆದರೆ ಅಲ್ಲಿ ಹುಡುಗನ ಕಡೆ ವಾದಿಸೋ ಲಾಯರ್ ಇದು ಸುಳ್ಳು ದಾಖಲೆ. ಈ ಮದುವೆ ಕಾರ್ಡನ್ನ ಫೋಟೋಶಾಪ್ಗಳಲ್ಲಿ ಹೋಗಿ ಮಿಕ್ಸಿಂಗ್ ಮಾಡಿಸಿ ಪ್ರಿಂಟ್ ಹಾಕಿಸಲಾಗಿದೆ. ನಮ್ಮವರ ಮೇಲೆ ಸುಳ್ಳು ಆರೋಪವನ್ನು ಹೊರಿಸಲಾಗಿದೆ ಎಂದು ಹೇಳಿದರು. ಮದುವೆ ಮಾಡಿದ ಮದುಮಕ್ಕಳನ್ನೂ ಕರೆಸಿದರು. ಅವರೂ ಸಹ ನಮಿಗೆ ಯಾವುದೇ ಮದುವಿ ಆಗಿಲ್ಲ ಅಂತ ಹೇಳಿದ್ರು. ಹುಡುಗಿಗೆ ಹಚ್ಚಿದ್ದ ಹರಿಶಿಣ ಇನ್ನೂ ಹಂಗೆ ಇತ್ತು. ಆದ್ರೆ ತಾಳಿನ ಬಿಚ್ಚಿಟ್ಟು ಬಂದಿದ್ರು. ಇದನ್ನು ತಿಳ್ದು ಕೋರ್ಟ್ ಆ ಕೇಸ್‌ನ ಹೊಡ್ದಾಕ್ತು. ನಾವು ಬಾಲ್ಯ ವಿವಾಹಗಳನ್ನ ತಡಿಬೇಕು ಅಂತ ಎಷ್ಟೇ ಪ್ರಯತ್ನ ಪಟ್ರು ಅದು ಹಂಗೇ ನಡಿತಾನೇ ಇರ್ತವೆ. ಕೋರ್ಟು ದಾಖಲೆಗಳನ್ನ ನಂಬುತ್ತೆ. ನಾವು ಸರಿಯಾದ ದಾಖಲೆಗಳನ್ನು ಒದಗಿಸಿದ್ರೂ ಪ್ರಯೋಜನ ಆಗ್ಲಿಲ್ಲ. ಮದುವಿ ಮಾಡಿಕೊಂಡೋರು ಎಷ್ಟು ಸಲೀಸಾಗಿ ಮದುವೀನೇ ಆಗಿಲ್ಲ ಅಂತ ಹೇಳಿ, ಕಟ್ಟಿದ್ ತಾಳೀನ ತಗ್ದು ಬಂದಿದ್ರು. ಇವ್ರಿಗೆ ಏನ್ ಹೇಳೋದು. ಆ ಮದುಮಕ್ಕಳಿಗೆ ಮದುವೆ ಅಂದ್ರೆ ಏನು, ತಾಳಿ ಅಂದ್ರೆ ಏನು ಅನ್ನೋದೇ ಗೊತ್ತಿಲ್ಲ. ತಾಳಿ ಕಟ್ಟಿದ್ ಮೇಲೆ ಗಂಡ ಇರೋತನ ತಾಳೀನ ತೆಗೆಯೋ ಪದ್ಧತಿ ನಮ್ಮಲ್ಲಿ ಇಲ್ಲ. ಮನೆಯಲ್ಲಿನ ಹಿರಿಯರು ತಾವು ಎಲ್ಲಿ ಜೈಲಿಗೆ ಹೋಗಬೇಕಾಗುತ್ತೋ ಅಂತ ತಿಳ್ದು ಮಕ್ಕಳಿಗಿ ಮದುವೆ ಆಗಿದ್ರೂ ಕಟ್ಟಿದ ತಾಳಿನ ತೆಗೆಸಿಕೊಂಡು ಬಂದಿದ್ರು. ಊರಾಗಿನ ಹಿರಿಯರೂ ಅವರ ಪರವಾಗಿಯೇ ಹೇಳಿಕೆ ಕೊಟ್ಟರು. ಅದನ್ನ ಕೋರ್ಟು ಸುಲಭವಾಗಿ ನಂಬಿತು. ಹಾಗಾಗಿ ಆ ಕೇಸನ್ನ ಖುಲಾಸೆ ಮಾಡಿತು. ಕೇಸ್ ನಡೀಬೇಕಾದ್ರೆ ನನಿಗಂತೂ ಬೆದರಿಕೆ ಕರೆಗಳು ಬಾಳ ಬಂದ್ವು. ನಾನು ಅದಕ್ಕೆಲ್ಲಾ ಹೆದ್ರಿಲಿಲ್ಲ. ಅವ್ರು ದುಡ್ಡು ಇರೋ ಜನ ಹಂಗಾಗಿ ಕೇಸು ಅವರ ಪರವಾಯಿತು" ಎಂದು ಹೇಳಿದರು.

ಹೀಗೆ ವ್ಯವಸ್ಥೆಯಲ್ಲಿ ಇರುವಂತಹ ಶ್ರೀಮಂತ ವರ್ಗ ತನಗೆ ಹೇಗೆ ಬೇಕೋ ಹಾಗೆ ನಡೆದುಕೊಳ್ಳುತ್ತದೆ. ಮುಖ್ಯವಾಗಿ ಬಾಲ್ಯ ವಿವಾಹದ ವಿರುದ್ಧ ಕೋರ್ಟ್ ಮೆಟ್ಟಿಲೇರಿದ ಕೇಸ್ ಶ್ರೀಮಂತ ವರ್ಗದವರ ಪರವಾಗಿ ನಿಲ್ಲುತ್ತದೆ. ನ್ಯಾಯಾಲಯಗಳು ಲಿಖಿತ ದಾಖಲೆಗಳನ್ನು ಅಥವಾ ಕಣ್ಣಿಗೆ ಗೋಚರಿಸುವುದನ್ನು ಸಾಕ್ಷಿಯಾಗಿ ನಂಬುತ್ತದೆ. ಎರಡನೇ ಪ್ರಕರಣದಲ್ಲಿ ದಾಖಲೆಗಳನ್ನು ಒದಗಿಸಿದರೂ ಅದು ಸರಿ ಎಂದು ವಾಧಿಸುವ ದೃಢ ನಿರ್ಧಾರದವರು ಬೇಕಾಗುತ್ತದೆ. ಆದರೆ ಈ ಕೇಸ್‌ನಲ್ಲಿ ಇದು ಸಾಧ್ಯವಾಗಿಲ್ಲ. ಮುಖ್ಯವಾಗಿ ವಿವಾಹವಾದ ಹೆಣ್ಣುಮಕ್ಕಳ ಕೊರಳಲ್ಲಿನ ತಾಳಿಯನ್ನು ತೆಗೆದು ಕೋರ್ಟ್ ಮುಂದೆ ಹಾಜರು ಪಡಿಸಿರುವುದು ಒಂದು ಗಂಭೀರ ಸಂಗತಿಯೇ ಎಂದು ಹೇಳಬಹುದು. ಏಕೆಂದರೆ ಒಂದು ವಿವಾಹವಾಗಲು ತಾಳಿಯ ಪಾತ್ರ ಪ್ರಮುಖವಾಗಿರುತ್ತದೆ. ಒಂದು ಬಾರಿ ಹೆಣ್ಣಿನ ಕೊರಳಲ್ಲಿ ತಾಳಿ ಬಿದ್ದಿತೆಂದರೆ

ಅದನ್ನು ತೆಗೆಯುವಂತಿಲ್ಲ. ಒಂದುವೇಳೆ ತೆಗೆದರೆ ಗಂಡ ಮರಣಿಸಿದಂತೆಯೇ ಎಂಬುದು ಧಾರ್ಮಿಕ ನಂಬಿಕೆ. ಆದರೆ ಈ ಕೇಸ್‌ನಲ್ಲಿ ಇದು ಮುರಿದು ಬೀಳುತ್ತದೆ. ಕೇಸ್ ನಿಂದ ಹೊರ ಬರಲು ಹುಡುಗಿಯ ತಂದೆ ತಾಯಿಗಳು ತಮ್ಮ ಮಗಳಿಗೆ ಕಟ್ಟಿದ ತಾಳಿಯನ್ನೇ ತೆಗೆದು ಹಾಕಿ ಮಗಳನ್ನು ನ್ಯಾಯಾಲಯದ ಮುಂದೆ ತಂದು ನಿಲ್ಲಿಸಿದ್ದಾರೆ. ಇದು ಸಂಪ್ರದಾಯವನ್ನು ಮೀರಿದ ನಡೆಯೆಂದೇ ಹೇಳಬಹುದು. ಮುಖ್ಯವಾಗಿ ತನ್ನ ಅನುಕೂಲಕ್ಕೆ ತಕ್ಕಂತೆ ಸಂಪ್ರದಾಯಗಳನ್ನು ಮುರಿಯುವ ಮತ್ತು ಕಟ್ಟುವ ಕೆಲಸದಲ್ಲಿ ಪಿತೃಪ್ರಧಾನ ವ್ಯವಸ್ಥೆ ಮುಂದಾಗುತ್ತದೆ. ಇದನ್ನು ಪ್ರಶ್ನಿಸುವ ಕಾರ್ಯ ಯಾರೂ ಮಾಡುವುದಿಲ್ಲ. ಮುಖ್ಯವಾಗಿ ನ್ಯಾಯಾಲಯವು ಮದುವೆಯಲ್ಲಿ ಹೆಣ್ಣಿಗೆ ಕಟ್ಟಿದ ತಾಳಿ ತುಂಬಾ ಶ್ರೇಷ್ಠವಾದದ್ದು, ಅದನ್ನು ಯಾವುದೇ ಕಾರಣಕ್ಕೂ ತೆಗೆಯುವುದಿಲ್ಲ ಎಂಬ ನಂಬಿಕೆಯನ್ನು ಹೊಂದಿರುತ್ತದೆ. ಹಾಗಾಗಿಯೇ ಹುಡುಗಿಯ ಕೊರಳಲ್ಲಿ ತಾಳಿ ಇರದೇ ಇರುವುದನ್ನು ಕಂಡ ನ್ಯಾಯಾಲಯ ಆ ಕೇಸನ್ನು ಹೊಡೆದು ಹಾಕುತ್ತದೆ. ಹೀಗೆ ಬಾಲ್ಯ ವಿವಾಹ ನಡೆದಿದ್ದರೂ ಅದನ್ನು ಸಾಬೀತು ಪಡಿಸಬೇಕಾದಾಗ ತೊಂದರೆಗಳು ಎದುರಾಗುತ್ತವೆ. ಇದೊಂದು ಬಹು ದೊಡ್ಡ ತೊಡಕಾಗಿದೆ ಎಂದು ಹೇಳಬಹುದು. ಅಧಿಕಾರದ ಸಂಗತಿಗಳು ಇಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಅಂದರೆ ಶ್ರೀಮಂತ ಕುಟುಂಬ ತನಗೆ ಬೇಕಾದ ಹಾಗೆ ನಡೆದುಕೊಳ್ಳಬಹುದು ಎಂಬ ಆಲೋಚನಾ ಕ್ರಮದಲ್ಲಿರುತ್ತದೆ. ಅಧಿಕಾರ ಮತ್ತು ಜ್ಞಾನದ ಮಾದರಿಗಳು ಒಂದಕ್ಕೊಂದು ಪರಸ್ಪರ ಸಂಬಂಧವನ್ನು ಹೊಂದಿರುತ್ತವೆ. ಮೇಲಿನ ಪ್ರಕರಣದಲ್ಲಿ ಶ್ರೀಮಂತ ವರ್ಗ ತನಗೆ ವ್ಯವಸ್ಥೆಯಲ್ಲಿರುವ ಅಧಿಕಾರದ ಬಲದಿಂದಾಗಿಯೇ ಈಗಾಗಲೇ ಸೃಷ್ಟಿಸಲ್ಪಟ್ಟ ಜ್ಞಾನವನ್ನು ಮುರಿಯಲು ಸಾಧ್ಯವಾಯಿತು. ಅಂದರೆ ತನಗೆ ಬೇಕಾದ ಹಾಗೆ ಇರುವ ಜ್ಞಾನವನ್ನು ಬಳಸಿಕೊಂಡಿರುವುದು ಮತ್ತು ಆ ಮೂಲಕ ತನ್ನ ಕಾರ್ಯ ಸಾಧನೆಯನ್ನು ಸಾಧಿಸಿರುವುದು ಕಂಡುಬರುತ್ತದೆ. ಇದು ಬಾಲ್ಯ ವಿವಾಹ ನಿಷೇಧ ಕಾನೂನಿನ ಅರಿವನ್ನು ಮೂಡಿಸುವ ಸಂದರ್ಭದಲ್ಲಿ ಕಂಡು ಬಂದ ಬಹು ದೊಡ್ಡ ತೊಡಕಾಗಿದೆ.

ಬಾಲ್ಯ ವಿವಾಹದ ವಿರುದ್ಧ ಸಮರ ಸಾರಿ ಅದರ ದುಷ್ಪರಿಣಾಮಗಳ ಕುರಿತು ಜನರಲ್ಲಿ ಅರಿವನ್ನು ಮೂಡಿಸುವ ಕೆಲಸದಲ್ಲಿ ತೊಡಗಿರುವ ಮಹಿಳೆಯರ ಮೇಲೆ ಮಾರಣಾಂತಿಕ ಹಲ್ಲೆಗಳಾಗಿರುವ ಉದಾಹರಣೆಗಳೂ ಕಾಣಸಿಗುತ್ತವೆ. ಅಕ್ಷಯ ತೃತೀಯ ಮದುವೆಗಳಿಗೆ ಪ್ರಾಶಸ್ತ್ಯ ದಿನವಾಗಿರುತ್ತದೆ ಎಂಬ ನಂಬಿಕೆ ಜನರಲ್ಲಿದೆ. ಈ ದಿನದಂದು ವಿವಾಹವನ್ನು ಮಾಡಿದರೆ, ದಂಪತಿಗಳ ಜೀವನ ಸುಖಕರವಾಗಿರುತ್ತದೆ ಎಂಬುದು ನಂಬಿಕೆ. ಇದು ಉತ್ತರ ಭಾರತದಲ್ಲಿ ಅತೀ ಹೆಚ್ಚಾಗಿದೆ. ಈ ಕಾರಣಕ್ಕಾಗಿಯೇ ಅಂದು ನಡೆಯುವ ಹೆಚ್ಚಿನ ಮದುವೆಗಳಲ್ಲಿ ಬಾಲ್ಯ ವಿವಾಹಗಳ ಸಂಖ್ಯೆ ಅಧಿಕವಾಗಿರುತ್ತವೆ. ಇಂತಹ ದಿನದಂದು ನಡೆಯುವ ಬಾಲ್ಯ ವಿವಾಹಗಳನ್ನು ತಡೆಯಬೇಕೆಂದು ಮುನ್ನೆಡೆದಿದ್ದ ಅಂಗನವಾಡಿ ಕಾರ್ಯಕರ್ತೆಯಾಗಿರುವ ಶಕುಂತಲಾ ವರ್ಮ ತನ್ನ ಎರಡೂ ಕೈಗಳನ್ನು ಕಳೆದುಕೊಂಡಿದ್ದಾರೆ. "ಮಧ್ಯಪ್ರದೇಶದ ರಾಜಧಾನಿಯಾದ ಭೋಪಾಲ್ ಸಮೀಪದ ಹಳ್ಳಿಯೊಂದರಲ್ಲಿ ಅಕ್ಷಯ ತೃತೀಯ ದಿನದಂದು

ಬಾಲ್ಯ ವಿವಾಹಗಳು ನಡೆಯುತ್ತಿರುವ ವಿಷಯ ತಿಳಿದು ಆ ಗ್ರಾಮಕ್ಕೆ ತೆರಳಿ ಜನರ ಮನವೊಲಿಸಿ ಬಾಲ್ಯ ವಿವಾಹ ಮಾಡದಿರುವಂತೆ ಮನವಿ ಮಾಡಿಕೊಂಡಿದ್ದಾರೆ. ಒಂದು ವೇಳೆ ಮಾಡಿದರೆ ಮದುವೆಯಾಗುವ ಬಾಲಕ, ಬಾಲಕಿಯರ ಜನನ ಪ್ರಮಾಣ ಪತ್ರವನ್ನು ಪರಿಶೀಲಿಸಿ ಕಾನೂನು ಕ್ರಮ ಜರುಗಿಸುವ ಎಚ್ಚರಿಕೆಯನ್ನೂ ನೀಡಿದ್ದರು. ಇದರಿಂದ ಸಿಡಿದೆದ್ದ ಗ್ರಾಮದ ಜನರು ಗ್ರಾಮಕ್ಕೆ ಬರುತ್ತಿದ್ದ ಶಕುಂತಲಾರಿಗೆ ನಾನಾ ರೀತಿಯಲ್ಲಿ ಕಿರುಕುಳಗಳನ್ನು ನೀಡಿದ್ದಾರೆ. ಅಕ್ಷಯ ತೃತೀಯ ಮುನ್ನಾದಿನ ಅಪರಿಚಿತ ವ್ಯಕ್ತಿಯೊಬ್ಬ ಶಕುಂತಲಾ ಅವರ ಮನೆಗೆ ಬಂದು ವಿಳಾಸ ವಿಚಾರಿಸುವ ನೆಪದಲ್ಲಿ ಬಾಗಿಲು ಬಡಿದಿದ್ದಾನೆ. ಶಕುಂತಲಾ ಅವರು ಬಾಗಿಲು ತೆರೆದ ನಂತರ ಖಡ್ಗದಿಂದ ಅವರ ಎರಡೂ ಕೈಗಳನ್ನು ದಾರುಣವಾಗಿ ಕತ್ತರಿಸಿ ಪರಾರಿಯಾಗಿದ್ದಾನೆ. ಶಕುಂತಲಾ ಅವರು ಎರಡೂ ಕೈಗಳನ್ನು ಕಳೆದುಕೊಂಡು ಸಾವು ಬದುಕಿನ ನಡುವೆ ಹೋರಾಟ ನಡೆಸಿದ್ದಾರೆ.

ಇದೇ ರೀತಿಯ ಇನ್ನೊಂದು ಘಟನೆ ರಾಜಸ್ಥಾನದಲ್ಲಿ ನಡೆದಿದೆ. ಮುಖ್ಯವಾಗಿ ಈ ಘಟನೆ ದೇಶಾದ್ಯಂತ ಸಂಚಲನವನ್ನು ಸೃಷ್ಟಿಸಿತ್ತು. ರಾಜಸ್ಥಾನ ರಾಜ್ಯದ ಭತೇರಿ ಗ್ರಾಮದ ಭಾವ್ರಿದೇವಿ (ಭನ್ವಾರಿದೇವಿ) ಎಂಬ ದಲಿತ ಮಹಿಳೆ ತಮ್ಮ ಗ್ರಾಮದಲ್ಲಿ ನಡೆಯುತ್ತಿದ್ದ ಬಾಲ್ಯ ವಿವಾಹಗಳನ್ನು ತಡೆದ ಕಾರಣಕ್ಕಾಗಿ ಗ್ರಾಮದ ಉನ್ನತ ಜಾತಿಯ ಮುಖಂಡರಿಂದ ಅತ್ಯಾಚಾರಕ್ಕೆ ಒಳಗಾದ ಮಹಿಳೆಯಾಗಿದ್ದಾಳೆ. ಮುಖ್ಯವಾಗಿ ಭಾವ್ರಿದೇವಿ ಕಮ್ಮಾರ್ ಜಾತಿಗೆ ಸೇರಿದ ದಲಿತ ಮಹಿಳೆಯಾಗಿದ್ದಾಳೆ. ಈ ಗ್ರಾಮದಲ್ಲಿ ಗುಜ್ಜಾರ್ ಜಾತಿಯೇ ಜಾತಿ ಶ್ರೇಣೀಕರಣದಲ್ಲಿ ಉನ್ನತ ಸ್ಥಾನದಲ್ಲಿತ್ತು. ಅಕ್ಷಯ ತೃತಿಯ ದಿನದಂದು ಈ ಗ್ರಾಮದ ಗುಜ್ಜಾರ್ ಸಮುದಾಯದಲ್ಲಿ ಬಾಲ್ಯ ವಿವಾಹಗಳನ್ನು ನಡೆಸಲಾಗುತ್ತಿತ್ತು. ಸಾಥಿನ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ಭಾವ್ರಿದೇವಿ ಈ ವಿವಾಹಗಳನ್ನು ತಡೆದಿದ್ದಳು. ಇದರಿಂದಾಗಿ ಜಾತಿಯಲ್ಲಿ ಉನ್ನತ ಶ್ರೇಣಿಯಲ್ಲಿದ್ದ ಗುಜ್ಜಾರ್ ಸಮುದಾಯದ ಪ್ರತಿಷ್ಠೆಗೆ ಧಕ್ಕೆ ತಂದಿತ್ತು. ಇದರಿಂದ ಕುಪಿತಗೊಂಡ ಈ ಸಮುದಾಯದ ಮುಖಂಡರು ಭಾವ್ರಿದೇವಿ ಕಾರ್ಯ ನಿರ್ವಹಿಸುತ್ತಿದ್ದ ಸ್ಥಳಕ್ಕೆ ಹೋಗಿ ಸಾಮೂಹಿಕ ಅತ್ಯಾಚಾರವನ್ನು ಎಸಗಿದ್ದರು. ಇದು ಇಡೀ ದೇಶದಲ್ಲಿಯೇ ಸಂಚಲನವನ್ನುಂಟು ಮಾಡಿತ್ತು. ಈ ಕೃತ್ಯವನ್ನು ಎಸಗಿದ ಗುಜ್ಜಾರ್ ಸಮುದಾಯದ ಮುಖಂಡರನ್ನು ಕೆಲಸದ ಸ್ಥಳದಲ್ಲಿ ನಡೆದ ಲೈಂಗಿಕ ಅತ್ಯಾಚಾರದ ಕಾಯಿದೆಯ ಅಡಿಯಲ್ಲಿ ಪ್ರಕರಣವನ್ನು ದಾಖಲಿಸಲಾಯಿತು. ಮುಖ್ಯವಾಗಿ ಇದೇ ಕಾಯಿದೆ ಮುಖ್ಯ ಭೂಮಿಕೆಗೆ ಬಂದು ಬಾಲ್ಯ ವಿವಾಹ ನಿಷೇಧ ಕಾನೂನು ಮುನ್ನೆಲೆಗೆ ಬರಲೇ ಇಲ್ಲ. ಮುಖ್ಯವಾಗಿ ಅಂದಿನ ಸಂದರ್ಭದಲ್ಲಿ ಈ ವಿಷಯವನ್ನು ಚರ್ಚೆಗೆ ಒಳಪಡಿಸಿದ್ದರೆ, ಬಾಲ್ಯ ವಿವಾಹ ನಿಷೇಧ ಕಾಯಿದೆಯಲ್ಲಿ ಹಲವು ಬದಲಾವಣೆಯನ್ನು ತರಲು ಸಾಧ್ಯತೆ ಇತ್ತು. ಆದರೆ ಇದು ಸಾಧ್ಯವಾಗಲಿಲ್ಲ. ಹಾಗಾಗಿ ಬಾಲ್ಯ ವಿವಾಹಗಳನ್ನು ತಡೆಯುವ ಇಚ್ಛೆಯುಳ್ಳವರ ಮೇಲೆ ಸಮಾಜದ ಪಿತೃಪ್ರಧಾನ ವ್ಯವಸ್ಥೆ ಕ್ರೂರವಾಗಿ ನಡೆದುಕೊಳ್ಳುವ ರೀತಿಯನ್ನು ಗುರುತಿಸಬಹುದಾಗಿದೆ.

ಈ ಎರಡೂ ಘಟನೆಗಳು ಸಮಾಜದ ಕ್ರೂರ ಮನಃಸ್ಥಿತಿಯನ್ನು ತೋರಿಸುತ್ತವೆ. ಮುಖ್ಯವಾಗಿ ಸಮಾಜದ ಅನಿಷ್ಟ ಪದ್ಧತಿಯಾಗಿರುವ ಬಾಲ್ಯ ವಿವಾಹವನ್ನು ತಡೆಯುವ ಉತ್ತಮ ಉದ್ದೇಶವನ್ನು ಹೊಂದಿದ್ದರೂ, ಗ್ರಾಮದ ಸ್ಥಳೀಯ ಜನರು ಇದನ್ನು ತಿಳಿದುಕೊಳ್ಳದೇ ಶಕುಂತಲಾರ ಎರಡೂ ಕೈಗಳನ್ನು ಕತ್ತರಿಸಿರುವುದು ಅಮಾನವೀಯ ಘಟನೆಯಾಗಿದೆ. ಇಂತಹ ಎಷ್ಟೋ ಘಟನೆಗಳು ದೇಶದಾದ್ಯಂತ ಸಂಭವಿಸುತ್ತಲೇ ಇರುತ್ತವೆ. ಆದರೆ ಇವುಗಳು ಹೊರ ಪ್ರಪಂಚಕ್ಕೆ ತಿಳಿಯುವುದು ತುಂಬಾನೇ ಕಡಿಮೆ ಎಂದು ಹೇಳಬಹುದು.

ಮಹಿಳೆಯರು ಎಂದರೆ ಸಮಾಜದಲ್ಲಿ ಅಸಮರ್ಥರು ಎಂಬ ಭಾವನೆ ಇದೆ. ಆದರೆ ಈ ಅಸಮರ್ಥತೆ ಅವರಿಗೆ ಹುಟ್ಟಿನಿಂದ ಬಂದುದುದಲ್ಲ, ಬದಲಾಗಿ ಸಾಮಾಜೀಕರಣದ ಪ್ರಕ್ರಿಯೆಯ ಸಂದರ್ಭದಲ್ಲಿ ವ್ಯವಸ್ಥೆ ಆಕೆಯನ್ನು ಅಸಮರ್ಥರನ್ನಾಗಿಸುತ್ತದೆ. ಹಾಗಾಗಿಯೇ ಪುರುಷರು ಬಲಿಷ್ಠರಾಗಿ ಗುರುತಿಸಿಕೊಳ್ಳುತ್ತಾರೆ. ಈ ಮನೋಭಾವನೆಯಿಂದಲೇ ಮಹಿಳೆಯರ ಮೇಲೆ ದೌರ್ಜನ್ಯಗಳು ನಡೆಯುತ್ತಲೇ ಇವೆ. ಇದು ಶಕುಂತಲಾ ಅವರ ಪ್ರಕರಣದಲ್ಲಿ ಕಂಡುಬರುತ್ತದೆ. ಶಕುಂತಲಾ ಅವರ ಮೇಲೆ ಆದ ಹಲ್ಲೆ ಪುರುಷ ವ್ಯವಸ್ಥೆಯ ಕ್ರೂರ ಮನಸ್ಥಿತಿಯನ್ನು ತೋರಿಸುತ್ತದೆ. ಹಾಗೆಯೇ ತನ್ನಲ್ಲಿರುವ ಭಯದ ಹಿನ್ನೆಲೆಯನ್ನೂ ಬಿಚ್ಚಿಡುತ್ತದೆ. ಅಂದರೆ ಒಬ್ಬ ಮಹಿಳೆಯ ಕಾರಣದಿಂದ ತಾವು ಜೈಲಿಗೆ ಹೋಗಬೇಕಾಗುತ್ತದಲ್ಲಾ ಎಂಬ ಭಯ ಮತ್ತು ಇದೊಂದು ಸಮುದಾಯದ ಪ್ರತಿಷ್ಠೆಯ ಪ್ರಶ್ನೆಯಾಗಿ ಕಾಡಿರುವುದು ಕಂಡುಬರುತ್ತದೆ. ಆ ಕಾರಣಕ್ಕಾಗಿಯೇ ಶಕುಂತಲಾ ಅವರ ಎರಡೂ ಕೈಗಳನ್ನು ಕತ್ತರಿಸುವ ಕೆಲಸಕ್ಕೆ ಕೈ ಹಾಕಿದೆ. ಇನ್ನೊಂದು ಪ್ರಕರಣದಲ್ಲಿ ಮಹಿಳೆಯ ಮೇಲೆ ಅತ್ಯಾಚಾರವನ್ನೇ ಎಸಗಿರುವುದು ತಿಳಿದುಬರುತ್ತದೆ. ಪ್ರಾಚೀನ ಕಾಲದಿಂದಲೂ ಪುರುಷ ವ್ಯವಸ್ಥೆಯ ಕಣ್ಣು ಹೆಣ್ಣಿನ ಪಾವಿತ್ರ್ಯ ಮತ್ತು ಅಪವಿತ್ರತೆಯ ಅಂಶಗಳ ಸುತ್ತಲೇ ಸುತ್ತುತ್ತಾ ಬಂದಿದೆ. ಹೆಣ್ಣಿನ ಪಾತಿವ್ರತ್ಯೆಯ ಕಲ್ಪನೆಯ ಕಾರಣ ಅದನ್ನು ಉಳಿಸಿಕೊಂಡು ಬರಲೇಬೇಕು. ಇಲ್ಲವಾದರೆ ಆಕೆಯನ್ನು ವ್ಯವಸ್ಥೆ ಕೀಳಾಗಿ ಕಾಣುತ್ತದೆ. ಆ ಜವಾಬ್ದಾರಿ ಮಹಿಳೆಯದ್ದೇ ಆಗಿರುತ್ತದೆ. ಹಾಗಾಗಿ ಪುರುಷ ವ್ಯವಸ್ಥೆ ಮಹಿಳೆಯರ ಮೇಲೆ ಅತ್ಯಾಚಾರವನ್ನು ಎಸಗುವುದರ ಮೂಲಕ ಅದನ್ನೊಂದು ಅಸ್ತ್ರವನ್ನಾಗಿ ಮಾಡಿಕೊಂಡಿದೆ. ಒಂದು ಸಾರಿ ಅವಿವಾಹಿತ ಮಹಿಳೆ ಅತ್ಯಾಚಾರಕ್ಕೆ ಸಿಲುಕಿದಳೆಂದರೆ ಆಕೆಗೆ ವಿವಾಹ ಎಂಬುದು ದೂರದ ಮಾತೇ ಆಗಿರುತ್ತದೆ. ಕೆಲವು ಸಂದರ್ಭಗಳಲ್ಲಿ ಮಹಿಳೆಯರ ಮೇಲಿನ ಅತ್ಯಾಚಾರವೆಂಬುದು ಪುರುಷ ಪ್ರಧಾನ ಸಮಾಜದ ಕಾನೂನುಬದ್ಧ ನಡವಳಿಕೆಯಂತೆಯೇ ರೂಪುಗೊಂಡಿರುತ್ತದೆ. ಹಾಗಾಗಿ ಮಹಿಳೆಯರು ತಮ್ಮನ್ನು ಇಂಥ ದುಷ್ಟಶಕ್ತಿಗಳಿಂದ ರಕ್ಷಿಸಿಕೊಳ್ಳಲು ಹಲವಾರು ತಂತ್ರಗಳನ್ನು ರೂಪಿಸಿಕೊಳ್ಳಬೇಕಾದ ಅನಿವಾರ್ಯತೆ ಇದೆ. ಬಾಲ್ಯವಿವಾಹಗಳನ್ನು ತಡೆಯುವುದಕ್ಕಾಗಿ ಶ್ರಮಿಸಿದ ಮಹಿಳೆಯರ ಮೇಲೆ ಎಸಗಿದ ಈ ಕೃತ್ಯಗಳು ಅಮಾನವೀಯವಾದುದು. ಇಂತಹ ಕೃತ್ಯಗಳು ಬಾಲ್ಯವಿವಾಹ ಪದ್ಧತಿಯನ್ನು ವ್ಯವಸ್ಥೆಯಿಂದ ತೊಡೆದು ಹಾಕಲು ಬಹಳ ದೊಡ್ಡ ಅಡ್ಡಿಯನ್ನುಂಟು ಮಾಡುತ್ತದೆ.

೯.೮. ಇತರೆ ತೊಡಕುಗಳು

ಬಾಲ್ಯ ವಿವಾಹಗಳು ಇಂದಿಗೂ ಜೀವಂತವಾಗಿರಲು ಮೇಲಿನ ಎಲ್ಲಾ ಕಾರಣಗಳ ಜೊತೆಗೆ ಇತರೆ ಕಾರಣಗಳೂ ಸಹ ಕಂಡುಬರುತ್ತವೆ. ಅವುಗಳೆಂದರೆ ಅ. ಕುಟುಂಬದಲ್ಲಿನ ವ್ಯವಹಾರಗಳನ್ನು ನೋಡಿಕೊಳ್ಳುವುದು, ಆ. ಗಂಡು ಮಕ್ಕಳೇ ವಿವಾಹ ಮಾಡೆಂದು ದುಂಬಾಲು ಬೀಳುವುದು. ಇ. ಹುಡುಗಿಯರು ಕಪ್ಪಾಗಿರುವ ಕಾರಣ ಹೀಗೆ ಈ ಬಗೆಯ ಕಾರಣಗಳಿಗಾಗಿಯೂ ಹೆಣ್ಣುಮಕ್ಕಳು ಬಾಲ್ಯದಲ್ಲಿಯೇ ವಿವಾಹ ಬಂಧನಕ್ಕೆ ಒಳಗಾಗುತ್ತಿದ್ದಾರೆ. ಇವುಗಳನ್ನು ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರದೇಶಗಳಲ್ಲಿನ ವಕ್ತೃಗಳ ಮಾಹಿತಿಯನ್ನಾಧರಿಸಿ ಕೆಳಗಿನಂತೆ ವಿವರಿಸಿಕೊಳ್ಳಲಾಗಿದೆ.

**ಅ. ಕುಟುಂಬದಲ್ಲಿನ ವ್ಯವಹಾರಗಳನ್ನು ನೋಡಿಕೊಳ್ಳುವುದು** : ಕುಟುಂಬದಲ್ಲಿ ಕೇವಲ ಹೆಣ್ಣುಮಕ್ಕಳೇ ಇದ್ದಂತಹ ಸಂದರ್ಭದಲ್ಲಿ ಆ ಕುಟುಂಬದಲ್ಲಿ ತಂದೆ ಮಾಡುತ್ತಿರುವ ವ್ಯವಹಾರಗಳನ್ನು ನೋಡಿಕೊಳ್ಳಲು ಒಂದು ಗಂಡಿನ ಅವಶ್ಯಕತೆ ಬೇಕು ಎಂಬುದು ಪುರುಷ ವ್ಯವಸ್ಥೆಯ ಧೋರಣೆ. ಇಂತಹ ಸಂದರ್ಭದಲ್ಲಿ ತಮ್ಮ ಹೆಣ್ಣು ಮಕ್ಕಳಿಗೆ ಬಹು ಬೇಗನೇ ವಿವಾಹ ಮಾಡುವುದರ ಮೂಲಕ, ಕುಟುಂಬಕ್ಕೆ ಒಂದು ಗಂಡನ್ನು ತಂದೊಕೊಳ್ಳುವ ಸ್ಥಿತಿ ಕಂಡುಬರುತ್ತದೆ. ಮುಖ್ಯವಾಗಿ ಈ ಬಗೆಯ ಕಾರಣವನ್ನು ನೀಡಿ ತಮ್ಮ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಮಾಡಿದ ಪ್ರಕರಣಗಳು ಕಂಡುಬಂದಿವೆ. ಇದನ್ನು ವಕ್ತೃಗಳ ಮಾತಿನಲ್ಲಿಯೇ ವಿವರಿಸಿಕೊಳ್ಳುವುದು ಅಗತ್ಯವಾಗಿದೆ. ಹೊಸಪೇಟೆ ತಾಲೂಕಿನ ಗಾಳೆಮ್ಮನಗುಡಿ ಗ್ರಾಮದ ಯಲ್ಲಪ್ಪ ಎಂಬುವವರು ಅನಕ್ಷರಸ್ಥರಾಗಿದ್ದು, ಇವರಿಗೆ ಮೂರು ಜನ ಹೆಣ್ಣುಮಕ್ಕಳು. ಇವರು ತಮ್ಮ ಊರಿನ ಪಕ್ಕದಲ್ಲಿಯೇ ಇರುವ ಫ್ಯಾಕ್ಟರಿಯಲ್ಲಿ ಲೇಬರ್ ಕಾಂಟ್ರಾಕ್ಟರ್ ಆಗಿದ್ದಾರೆ. ಇವರು ತಮ್ಮ ಎಲ್ಲಾ ವ್ಯವಹಾರಗಳನ್ನು ಮಾಡಲು ಬೇರೊಬ್ಬರನ್ನು ಅವಲಂಬಿಸಿದ್ದರು. ಹಾಗಾಗಿಯೇ ಅವರ ವ್ಯವಹಾರಗಳನ್ನು ನೋಡಿಕೊಳ್ಳಲು ತಮ್ಮ ಮಗಳಿಗೆ ಬಹು ಬೇಗನೇ ವಿವಾಹ ಮಾಡುವುದರ ಮೂಲಕ ಅಳಿಯನನ್ನು ತಮ್ಮ ಮನೆಯಲ್ಲಿಯೇ ಉಳಿಸಿಕೊಂಡಿದ್ದಾರೆ. ಇವರನ್ನು ಮಾತನಾಡಿಸಿದಾಗ ಅವರು ಹೇಳಿದ್ದು ಹೀಗೆ "ನಾನು ಲೇಬರ್ ಕಾಂಟ್ರಾಕ್ಟ ಆಗೀನಿ. ನನಿಗೆ ಓದಾಕ ಬರಿಯಾಕ ಬರಂಗಿಲ್ಲ. ಆದ್ರೆ ನನ್ ವ್ಯವಹಾರಾನೆಲ್ಲಾ ಬೇರೊಂದು ಹುಡುಗನ್ ಕಡಿಗಿಂದ ಮಾಡಿಸ್ತೀನಿ. ಆದ್ರೆ ಈಗಿನ ಪರಿಸ್ಥಿತಿನಾಗ ಯಾರನ್ನ ನಂಬಬೇಕು ಯಾರನ್ನ ಬಿಡ್ಬೇಕು ಅಂತಾನೇ ಗೊತ್ತಿಲ್ಲ. ಎಲ್ಲಿತನ ಬೇರೋರ್ನ ನಂಬಿಕೆಂಡು ಇರೋದು. ನಮ್ಮೋರೆ ಒಬ್ರು ಇದ್ರೆ ಚೆನ್ನಾಗಿರ್ತೈತಿ ಅಂತ ತಿಳ್ದು, ನಮ್ ಸಂಬಂಧಿಕ್ರದಾಗೇ ಒಬ್ಬ ಹುಡುಗನ್ನ ನೋಡಿ ನನ್ ದೊಡ್ಡ್ ಮಗಳಿಗಿ ಮದುವಿ ಮಾಡಿದೆ. ಅವ್ನು ಹತ್ನೇ ಕ್ಲಾಸು ಓದ್ಯಾನ. ಈಗ ಮಗ್ಳು ಅಳಿಯ ಇಬ್ರೂ ಸತೆ ಇಲ್ಲೇ ಐದಾರ. ನನ್ ವ್ಯವಹಾರಾನೆಲ್ಲಾ ಅಳಿಯನೇ ನೋಡ್ಕೆಂತಾನ" ಎಂದರು.

ನಿಮ್ ಮಗಳಿಗೆ ಶಾಲೆಗೆ ಕಳುಹಿಸಿ ಓದಿಸಬಹುದಿತ್ತಲ್ಲಾ? ಸಣ್ಣ ವಯಸ್ಸಿಗೆ ಮದುವಿ ಮಾಡೋದು ಕಾನೂನು ಪ್ರಕಾರ ತಪ್ಪು ಅಂತ ಗೊತ್ತಿಲ್ಲವೇ? ಎಂದು ಕೇಳಿದಾಗ, ನಮ್ ಹೆಣ್ಮಕ್ಕಳಿಗಿ ಸಾಲಿಗಿ ಕಳ್ಸೋದ್ರಿಂದ ಅವ್ರೇನಾದ್ರೂ ನಮಿಗಿ ದುಡ್ಡು ಹಾಕ್ತಾರ? ಇಲ್ಲಲಾ; ಮನ್ಯಾಗಿನ

ಕೆಲ್ಸ ನೋಡಿಕೆಂಡು ಹೋದ್ರೆ ಸಾಕು. ಅವ್ರು ಯಾವತ್ತಿದ್ರೂ ಗಂಡನ ಮನಿಗೆ ಸೇರೋರು. ಹಂಗಾಗಿ ನಾನು ಯಾರ್ನೂ ಓದಿಸ್ಲಿಲ್ಲ. ಸಣ್ ಮಗ್ಳು ಓದ್ತೀನಿ ಅಂತ ಹೇಳಕತ್ತಾಳ. ನೋಡಾನು ಎಲ್ಲಿವರ್ಗೂ ಓದ್ತಾಳೋ ಓದ್ಲಿ. ಓದಿಸ್ತೀನಿ. ಆದ್ರೆ ನನಿಗೆ ನನ್ ವ್ಯವಹಾರಾನ ನೋಡಿಕೆಳ್ಳಾಕ ಅರ್ಜೆಂಟ್ ಒಬ್ರು ಬೇಕಾಗಿತ್ತು. ಬೇರೆ ಯಾರನ್ನ ನೋಡಾದು. ಸ್ವಂತ ಅಳಿಯ ಆದ್ರೆ ಚೆನ್ನಾಗಿರ್ತೈತಲ್ಲಾ ಅಂತ ಜಲ್ದಿ ಮದುವಿ ಮಾಡಿದೆ. ಕಾನೂನು ಹೇಳ್ತೈತಿ ಅಂತ ಹಂಗ ಮಾಡಿದ್ರೆ ಮುಗೀತು. ಕಾನೂನು ಮಾಡೋರಿಗಿ ಏನ್ ಗೊತ್ತು ನಮ್ ಕಷ್ಟ. ಅವ್ರು ಏನಾದ್ರೂ ನಮ್ ಕಷ್ಟಾನಾ ತೀರಿಸ್ತಾರಾ? ಇಲ್ಲಲಾ. ಅದೆಲ್ಲಾ ಜೀವನ್ದಾಗ ಆಗಂಗಿಲ್ಲ. ಈಗ ಮಗ್ಳು ಅಳಿಯ ಇಬ್ರು ನಮ್ ಎದ್ರುಗೇ ಆರಾಮಾಗಿ ಐದಾರ ಎಂದರು.

ಗ್ರಾಮೀಣ ಪ್ರದೇಶಗಳಲ್ಲಿನ ಜನರು ಹೆಚ್ಚಾಗಿ ಅನಕ್ಷರಸ್ಥಾಗಿದ್ದಾರೆ. ಹಾಗೆ ಇರುವಾಗಲೂ ಅವರು ತಮ್ಮ ಜೀವನಕ್ಕೆ ಏನು ಬೇಕೋ ಅದನ್ನು ಮಾಡಿಕೊಂಡಿರುತ್ತಾರೆ. ಮೇಲಿನ ಪ್ರಕರಣದಲ್ಲಿ ಯಲ್ಲಪ್ಪ ಒಬ್ಬ ಅನಕ್ಷರಸ್ಥನಾಗಿದ್ದರೂ ಕುಟುಂಬವನ್ನು ನಡೆಸಲು ಲೇಬರ್ ಕಾಂಟ್ರ್ಯಾಕ್ಟರ್ ಆಗಿದ್ದಾರೆ. ಆದರೆ ಇವರಿಗೆ ಯಾವುದೇ ಬಗೆಯ ಲೆಕ್ಕ ಪತ್ರಗಳನ್ನು ಹೇಗೆ ನಿಭಾಯಿಸಬೇಕು ಎಂಬುದು ಗೊತ್ತಿಲ್ಲ. ಹಾಗಾಗಿಯೇ ತಮ್ಮ ವ್ಯವಹಾರಗಳನ್ನು ನೋಡಿಕೊಳ್ಳಲು ಬೇರೊಬ್ಬರ ಮೇಲೆ ಅವಲಂಬಿತರಾಗಿದ್ದರು. ಇದರಿಂದ ಶಾಶ್ವತವಾಗಿ ಹೊರಬರಲು ತಮ್ಮ ಮಗಳ ಮದುವೆಯನ್ನು ಮಾಡುವುದರ ಮೂಲಕ ಸ್ವಂತ ಅಳಿಯನಿಗೆ ತಮ್ಮ ವ್ಯವಹಾರಗಳನ್ನು ನೋಡಿಕೊಳ್ಳಲು ಬಿಟ್ಟಿದ್ದಾರೆ. ಯಲ್ಲಪ್ಪ ಅವರು ತಮ್ಮ ಮಕ್ಕಳಿಗೆ ಒಳ್ಳೆಯ ಶಿಕ್ಷಣವನ್ನು ಕೊಡಿಸಿದ್ದರೆ, ಅವರೇ ಆ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದರು. ಆದರೆ ಅವರು ಆ ಕೆಲಸ ಮಾಡದೇ ಅವರಿಗೆ ವಿವಾಹ ಮಾಡಿದ್ದಾರೆ. ಅಂದರೆ ಕುಟುಂಬದಲ್ಲಿನ ಪುರುಷರ ಆಲೋಚನಾ ನೆಲೆಗಳು ಯಾವಾಗಲೂ ಹೆಣ್ಣನ್ನು ವ್ಯವಹಾರ ಜ್ಞಾನವಿಲ್ಲದವಳು ಎಂದೇ ಗುರುತಿಸುತ್ತದೆ. ಹಾಗಾಗಿಯೇ ಯಲ್ಲಪ್ಪ ಅವರು ತಮ್ಮ ಮಗಳು ಚಿಕ್ಕವಳು ಎಂಬುದನ್ನೂ ಸಹ ನೋಡದೇ ಮಗಳಿಗೆ ವಿವಾಹ ಮಾಡಿದ್ದಾರೆ. ಇಲ್ಲಿ ಮಹಿಳೆ ಒಂದು ಸಾಧನವಾಗಿ ಬಳಕೆಯಾಗಲ್ಪಟ್ಟಿರುವುದು ಕಂಡುಬರುತ್ತದೆ. ಅಂದರೆ ಲೇಬರ್ ಕಾಂಟ್ರ್ಯಾಕ್ಟ್ ಎಂಬುದು ಕುಟುಂಬದ ಹೊರಗಿನ ವ್ಯವಹಾರವಾಗಿದ್ದು, ಅಲ್ಲಿ ಮಹಿಳೆಗೆ ಯಾವುದೇ ಬಗೆಯ ಅವಕಾಶಗಳಿಲ್ಲ. ಮಹಿಳೆ ಈ ಬಗೆಯ ವ್ಯವಹಾರಗಳನ್ನು ನಿಭಾಯಿಸಲು ಅರ್ಹಳಲ್ಲ ಎಂಬ ಮನೋಧರ್ಮವನ್ನು ವ್ಯವಸ್ಥೆ ಹುಟ್ಟು ಹಾಕಿದೆ. ಆ ಕಾರಣಕ್ಕಾಗಿ ಮಹಿಳೆಯರು ಇದರಿಂದ ಹೊರಗುಳಿಯುವ ಸ್ಥಿತಿ ನಿರ್ಮಾಣವಾಗಿದೆ. ಮೇಲಿನ ಪ್ರಕರಣದಲ್ಲಿ ಹೇಳುವಂತೆ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವುದರ ಮೂಲಕ ಅವರನ್ನು ಶಿಕ್ಷಿತರನ್ನಾಗಿ ಮಾಡುವುದರಿಂದ ಯಾವುದೇ ಪ್ರಯೋಜನವಿಲ್ಲ ಎಂಬ ನಿಲುವು ಯಲ್ಲಪ್ಪನವರದು. ಹಾಗಾಗಿಯೇ ಬಾಲ್ಯದಲ್ಲಿಯೇ ವಿವಾಹ ಮಾಡುವುದರ ಮೂಲಕ ಅವರನ್ನು ಶಿಕ್ಷಣದಿಂದ ವಂಚಿತರನ್ನಾಗಿಸಲಾಗುತ್ತದೆ. ಈ ಮೂಲಕ ಬಾಲ್ಯ ವಿವಾಹಗಳಿಗೆ ಎಡೆ ಮಾಡಿಕೊಟ್ಟಂತಾಗುತ್ತದೆ.

**ಆ. ಗಂಡು ಮಕ್ಕಳೇ ವಿವಾಹ ಮಾಡೆಂದು ದುಂಬಾಲು ಬೀಳುವುದು :** ನಾವುಗಳು ವಾಸಿಸುತ್ತಿರುವ ಅಥವಾ ಜೀವಿಸುತ್ತಿರುವ ವ್ಯವಸ್ಥೆ ಪುರುಷ ಪ್ರಧಾನ ವ್ಯವಸ್ಥೆಯಾಗಿದ್ದು, ಇಲ್ಲಿ ಪುರುಷನ ಮಾತೇ ಅಂತಿಮವಾಗಿರುತ್ತದೆ. ಮುಖ್ಯವಾಗಿ ಕುಟುಂಬದಲ್ಲಿ ಹೆಣ್ಣುಮಕ್ಕಳು ತಮಗೆ ವಿವಾಹ ಮಾಡಿರೆಂದು ದುಂಬಾಲು ಬಿದ್ದು ವಿವಾಹವಾದ ಪ್ರಕರಣಗಳು ಕಂಡು ಬಂದಿರುವುದು ತುಂಬಾನೇ ವಿರಳ. ಹಾಗೆ ಕೇಳುವುದಕ್ಕೆ ಮುಂಚಿತವಾಗಿಯೇ ತಂದೆ ತಾಯಂದಿರು ವಿವಾಹಕ್ಕೆ ಒಳಗು ಮಾಡುತ್ತಾರೆ. ಆದರೆ ಗಂಡು ಹುಡುಗನ ವಿಷಯ ಹಾಗಲ್ಲ. ಅವನು ಯಾವಾಗ ವಿವಾಹ ಮಾಡಿಕೊಳುತ್ತೇನೆ ಎಂದು ಹೇಳುತ್ತಾನೋ ಆವಾಗಲೇ ವಿವಾಹ ಮಾಡುತ್ತಾರೆ. ಇಂದು ಆಧುನೀಕರಣಕ್ಕೆ ಒಳಗಾದ ಜನರು ಅತೀ ವೇಗದ ಜೀವನಕ್ಕೆ ಮುಂದಾಗಿದ್ದಾರೆ. ಹಾಗಾಗಿಯೇ ಪುರುಷರು ತಮ್ಮ ವಯಸ್ಸು ಇನ್ನು ಕಾನೂನು ಬದ್ಧ ವಯಸ್ಸನ್ನು ಮೀರಿಲ್ಲ ಎಂಬುದರ ಅರಿವು ಇಲ್ಲದೆಯೇ ವಿವಾಹ ಮಾಡೆಂದು ದುಂಬಾಲು ಬಿದ್ದು ವಿವಾಹ ಬಂಧನಕ್ಕೆ ಒಳಗಾಗುತ್ತಿರುವ ಪ್ರಕರಣಗಳು ದೊರೆಯುತ್ತವೆ. ಇಲ್ಲಿ ವಿವಾಹಕ್ಕೆ ಒಳಗಾಗುವ ಜೋಡಿಗಳ ವಯಸ್ಸು ಕನಿಷ್ಟವೆಂದರೂ ೪ರಿಂದ ೫, ೬ ವರ್ಷಗಳ ವ್ಯತ್ಯಾಸವಿರುತ್ತದೆ. ಅಂದರೆ ಹುಡುಗಿಗಿಂತ ಹುಡುಗನ ವಯಸ್ಸು ಹೆಚ್ಚಿರುತ್ತದೆ. ಇದು ಸಮಾಜ ನಿರ್ಮಿಸಿದ ನಿಬಂಧನೆಯಾಗಿದೆ. ಹೀಗೆಯೇ ವಯಸ್ಸಿನ ಅಂತರವಿರಬೇಕು. ಇಲ್ಲದಿದ್ದರೆ ಅದು ವಿವಾಹವಾಗುವುದಿಲ್ಲ ಎಂಬುದು. ವಿವಾಹದ ವಯಸ್ಸಿನಲ್ಲಿಯೂ ಸಹ ತಾರತಮ್ಯವಿರುವುದರ ಕಾರಣಕ್ಕಾಗಿ ಬಾಲ್ಯ ವಿವಾಹಗಳಿಗೆ ಒಳಗಾಗುವವರ ಪ್ರಮಾಣದಲ್ಲಿ ಹೆಣ್ಣುಮಕ್ಕಳ ಸಂಖ್ಯೆಯೇ ಅಧಿಕವಾಗಿರುವುದನ್ನು ಕಾಣಬಹುದಾಗಿದೆ. ಹೀಗೆ ವಿವಾಹ ಮಾಡೆಂದು ದುಂಬಾಲು ಬಿದ್ದಂತಹ ಹುಡುಗರ ಸಂಖ್ಯೆ ಅಧಿಕವಾಗಿದೆ. ಈ ಬಗೆಯ ಗಂಡುಮಕ್ಕಳ ನಿರ್ಧಾರಗಳಿಗೆ ಒಳಪಟ್ಟು ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಬಂಧನಕ್ಕೆ ಸಿಲುಕಿದ ಬಹಳಷ್ಟು ಪ್ರಕರಣಗಳು ಕಂಡು ಬಂದಿವೆ. ಬಳ್ಳಾರಿ ಜಿಲ್ಲೆಯ ಬಾಣಾಪುರ ಗ್ರಾಮದ ತಿರುಕಪ್ಪ ಎಂಬುವವರ ಮಗನಿಗೆ ಇನ್ನೂ ೧೪ವರ್ಷ ವಯಸ್ಸು. ಅದಾಗಲೇ ಅವನು ತನಗೆ ವಿವಾಹ ಮಾಡಿರೆಂದು ಹಠ ಹಿಡಿದಿದ್ದು, ಅದಕ್ಕಾಗಿ ಅವರು ಆತನ ವಿವಾಹ ಮಾಡಿರುವ ಘಟನೆ ನಡೆದಿದೆ. ಮುಖ್ಯವಾಗಿ ತಿರುಕಪ್ಪನವರು ಹೇಳುವಂತೆ " ನನಿಗೆ ಇರೋದು ಒಬ್ನೆ ಮಗ. ಅವ್ನ ಚೆನ್ನಾಗಿ ಓದಿಸ್ಬೇಕು ಅಂತ ತಿಳ್ಕಂಡಿದ್ದೆ. ಆದ್ರೆ ಅವ್ನು ಊರಾಗಿನ ಪೋಕ್ರಿ ಹುಡುಗ್ರ ಜೊತಿ ಸೇರ್ಕೆಂಡು ಸಾಲಿಗಿ ಹೋಗಾದು ಬಿಟ್ಟು ಬಿಟ್ಟ. ನಾವು ಬಾಳ ಹೇಳಿದ್ವಿ ಸಾಲಿಗಿ ಹೋಗು ಅಂತ ಅವ್ನು ಕೇಳ್ಲಿಲ್ಲ. ಅದಕ್ಕೆ ಹೊಲದ್ ಕೆಲ್ಸಕ್ಕ ಕರ್ಕಂಡು ಹೋಗ್ತಿದ್ದೆ. ಆದ್ರೆ ಅವ್ನು ಒಮ್ಮಿಂದೊಮ್ಮೆಲೇ ಮದುವಿ ಮಾಡ್ರಿ ಅಂತ ಕುಂತಬಿಟ್ಟ. ಏನ್ ಮಾಡೋದು ಅಂತ ಅವ್ನಿಗಿ ಬುದ್ದಿವಾದ ಹೇಳಿದ್ವಿ. ಆದ್ರೆ ಕೇಳಾಕ ತೈಯಾರಿಲ್ಲ. ನನಿಗೆ ಮದುವಿ ಮಾಡ್ರಿ ಇಲ್ಲಾಂದ್ರೆ ಮನಿಬಿಟ್ಟು ಹೋಗ್ತೀನಿ ಅಂತ ಹೆದ್ರಸಾಕತ್ತಿದ. ಅವ್ನು ಹಿಂಗೆ ಒಂದೆರ್ಡುದಿನ ಹಠ ಮಾಡಿ ಸುಮ್ನಾಗ್ತಾನ ಅಂತ ನಾವು ಸುಮ್ನಿದ್ವಿ. ಆದ್ರೆ ಅವ್ನು ನಿಜವಾಗ್ಲೂ ಮನಿ ಬಿಟ್ಟು ಹೋಗಿದ್ದ. ಅವನ್ನ ಹುಡಿಕೆಂಡು ಬರೋದು ಬಾಳ ತ್ರಾಸ ಆತು. ಊರಾಗಿನ ಮಂದಿಯೆಲ್ಲಾ ಕೇಳೋದೇ ಕೇಳೋದು ಯಾಕ ಮನಿ ಬಿಟ್ಟು ಹೋದ ಅಂತ. ಕಾರಣ ಹೇಳಾಕ ನಮಿಗೇ ನಾಚಿಕಿ ಆಗ್ತಿತ್ತು. ಆದ್ರೂ

ದೊಡ್ಡ ಮನ್ಸು ಮಾಡಿ ಮದುವಿ ಮಾಡಾಕ ಒಪ್ಪಿದ್ವಿ. ಹಂಗಾಗಿ ಬಸರಕೋಡಿನಾಗ ಇರೋ ನಮ್ ಸಂಬಂದಿಕ್ರದಾಗೇ ಒಂದು ಹೆಣ್ಣಿನ್ನ ನೋಡಿ ಮದುವಿ ಮಾಡಿದ್ವಿ. ಆ ಹುಡುಗಿ ಕೈಗೆ ಬಂದು ಇನ್ನ ಒಂದು ವರ್ಸಸತೆ ಆಗಿರ್ಲಿಲ್ಲ. ಮದುವಿ ಮಾಡಾಕ ಅವ್ರು ಸತೆ ಒಪ್ಪಿದ್ರು. ಹಂಗಾಗಿ ನನ್ ಮಗನ್ನು ಮದುವಿ ಮಾಡಿಬಿಟ್ವಿ" ಎಂದರು.

ಈ ಪ್ರಕರಣದಲ್ಲಿ ತಿರುಕಪ್ಪನವರು ಇರುವ ಒಬ್ಬನೇ ಮಗನನ್ನು ಓದಿಸಬೇಕೆಂದು ಇಚ್ಛಿಸಿದ್ದರೆ, ಮಗ ಮಾತ್ರ ಮದುವೆ ಮಾಡಿರೆಂದು ಹಠ ಹಿಡಿದಿರುವುದು ಮತ್ತು ಮದುವೆಗಾಗಿ ಮನೆಬಿಟ್ಟು ಹೋಗಿರುವುದು ಕಂಡುಬರುತ್ತದೆ. ಆದರೆ ಇಲ್ಲಿ ಮುಖ್ಯವಾದ ಒಂದು ಪ್ರಶ್ನೆ ಎದುರಾಗುತ್ತದೆ. ಅಂದರೆ ವೆಂಕಟೇಶನಿಗೆ ಇನ್ನು ೨೧ವರ್ಷ ವಯಸ್ಸು ಪೂರ್ಣಗೊಂಡಿಲ್ಲ. ಆದರೂ ಅವನು ತನ್ನ ಸ್ನೇಹಿತರು ಮದುವೆ ಮಾಡಿಕೊಂಡಿದ್ದಾರೆ ಎಂಬ ಕಾರಣವನ್ನಿಟ್ಟುಕೊಂಡು ತನ್ನ ಮದುವೆಯ ಬಗೆಗೆ ಪ್ರಸ್ತಾಪಿಸಿರುವುದರಿಂದ ಈತನ ವಿವಾಹ ಮಾಡಬೇಕೆಂದರೆ ತನಗಿಂತಲೂ ಚಿಕ್ಕ ವಯಸ್ಸಿನ ಹೆಣ್ಣುಮಗಳನ್ನು ನೋಡಿ ವಿವಾಹ ಮಾಡಬೇಕು. ಅಂದಾಗ ಇಲ್ಲಿ ಹುಡುಗನಿಗೆ ಇನ್ನು ಹದಿನಾಲ್ಕು ವರ್ಷ ಎಂದಾಗ ಹುಡುಗಿಗೆ ಅದಕ್ಕಿಂತ ಕನಿಷ್ಠ ಏನಿಲ್ಲವೆಂದರೂ ಮೂರು ನಾಲ್ಕು ವರ್ಷ ಕಡಿಮೆ ವಯಸ್ಸಿರುತ್ತದೆ. ಹಾಗಾಗಿಯೇ ಹುಡುಗ ಹುಡುಗಿ ಇಬ್ಬರೂ ಬಾಲ್ಯ ವಿವಾಹಕ್ಕೆ ಒಳಗಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಹುಡುಗ ಹುಡುಗಿಯ ವಯಸ್ಸಿನ ಬಗೆಗೆ ಯಾವ ತಂದೆ ತಾಯಂದಿರೂ ಯೋಚಿಸುವುದಿಲ್ಲ. ಅದಕ್ಕೆ ಕಾರಣವೂ ಇದೆ. ಅಂದರೆ ಎಷ್ಟು ಬೇಗ ಹುಡುಗಿಯ ಮದುವೆ ಮಾಡಿ ತಮ್ಮ ಜವಾಬ್ದಾರಿಯಿಂದ ಮುಕ್ತಿಯನ್ನು ಪಡೆಯುತ್ತೇವೋ ಎಂಬ ಆಲೋಚನೆ ಹುಡುಗಿಯ ತಂದೆ ತಾಯಿಗೆ ಇರುತ್ತದೆ. ಅಂದರೆ ಹುಡುಗಿ ಯಾವಾಗಲೂ ಹೊರೆ ಎಂಬ ಮನೋಭಾವ ಇದೆ. ಹಾಗಾಗಿಯೇ ಈ ಮನೋಭಾವಗಳೇ ಬಾಲ್ಯ ವಿವಾಹಗಳಿಗೆ ಎಡೆಮಾಡಿಕೊಡುತ್ತವೆ. ಈ ಪ್ರಕರಣದಲ್ಲಿಯೂ ಹಾಗೆಯೇ ಆಗಿರುವುದು. ತನಗಿರುವುದು ಒಬ್ಬನೇ ಮಗ ಎಂಬ ಕಾರಣಕ್ಕೆ ಅವನು ಏನು ಮಾಡಿದರೂ ಸಹಿಸಿಕೊಳ್ಳುವ ತಂದೆ ತಾಯಂದಿರು, ಅದೇ ಹುಡುಗಿಯ ವಿಚಾರದಲ್ಲಿ ಹಾಗಿರುವುದಿಲ್ಲ. ಅವರು ಯಾವಾಗ ಮದುವೆ ಮಾಡಲು ಮುಂದಾಗುತ್ತಾರೋ ಆವಾಗ ತಲೆ ತಗ್ಗಿಸಿ ವಿವಾಹಕ್ಕೆ ಒಪ್ಪಿಗೆಯನ್ನು ಕೊಡಬೇಕು. ಹುಡುಗಿಯೇನಾದರೂ ತಂದೆ ತಾಯಿಯ ಮಾತಿಗೆ ಎದುರಾದರೆ ಸಮಾಜ ಅವಳನ್ನು ನೋಡುವ ರೀತಿಯೇ ಬೇರೆಯಾಗಿರುತ್ತದೆ. ಹುಡುಗಿಯರ ವಿಚಾರದಲ್ಲಿ ತುಂಬಾ ಕಠಿಣವಾದ ಮನೋಭಾವವನ್ನು ಹೊಂದಿರುತ್ತಾರೆ. ಆದರೆ ಹುಡುಗನ ವಿಚಾರದಲ್ಲಿ ತುಂಬಾ ಉದಾರವಾದಿ ಸ್ವಭಾವವನ್ನು ಹೊಂದಿರುತ್ತಾರೆ. ಈ ಬಗೆಯ ತಾರತಮ್ಯದ ಕಾರಣದಿಂದಾಗಿ ಬಾಲ್ಯ ವಿವಾಹಗಳು ನಿರಂತರವಾಗಿ ನಡೆಯುತ್ತಲೇ ಇವೆ.

**ಇ. ಹುಡುಗಿಯರು ಕಪ್ಪಾಗಿರುವ ಕಾರಣ :** ಬಾಲ್ಯ ವಿವಾಹಗಳಿಗೆ ಇದೂ ಒಂದು ಕಾರಣ. ಮುಖ್ಯವಾಗಿ ಕೆಳ ಮತ್ತು ಮಧ್ಯಮ ವರ್ಗದ ಕುಟುಂಬಗಳಲ್ಲಿ ಇದು ಹೆಚ್ಚಾಗಿ ಕಂಡುಬರುತ್ತದೆ.

ತಮಗೆ ಹುಟ್ಟಿದ ಮಗಳು ಕಪ್ಪಾಗಿದ್ದರೆ ತಂದೆ ತಾಯಂದಿರಲ್ಲಿ ಹೆಚ್ಚಿನ ಆತಂಕ ಉಂಟಾಗಿರುತ್ತದೆ. ಅಂದರೆ ಕಪ್ಪಗಿರುವ ಹುಡುಗಿಯನ್ನು ವಿವಾಹ ಮಾಡಿಕೊಳ್ಳಲು ಯಾರೂ ಮುಂದೆ ಬರುವುದಿಲ್ಲ. ಒಂದುವೇಳೆ ಮದುವೆ ಮಾಡಿಕೊಳ್ಳಲು ಒಪ್ಪಿದರೆ ಅವರು ಕೇಳಿದಷ್ಟು ವರದಕ್ಷಿಣೆಯನ್ನು ಕೊಡಬೇಕಾಗುತ್ತದೆ. ಇಲ್ಲವಾದರೆ ವಿವಾಹವಾಗುವುದು ಕಷ್ಟದ ಸಂಗತಿಯಾಗಿರುತ್ತದೆ. ಈ ಬಗೆಯ ಆತಂಕಗಳು ತಂದೆ ತಾಯಂದಿರಲ್ಲಿ ಹೆಚ್ಚಾಗಿರುತ್ತದೆ. ಈ ಕಾರಣವನ್ನಿಟ್ಟುಕೊಂಡು ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಬಂಧನಕ್ಕೆ ಒಳಗಾದ ಅನೇಕ ಉದಾಹರಣೆಗಳು ದೊರೆಯುತ್ತವೆ. ಮುಖ್ಯವಾಗಿ ಈ ಕಾರಣವನ್ನು ಮುಂದಿಟ್ಟುಕೊಂಡು ವಿವಾಹ ಮಾಡಿರುವ ಪ್ರಕರಣಗಳು ಅಧ್ಯಯನ ಕ್ಷೇತ್ರದ ವ್ಯಾಪ್ತಿ ಪ್ರದೇಶದಲ್ಲಿ ಕಂಡುಬಂದಿವೆ. ಅವುಗಳನ್ನು ಕೆಳಗಿನಂತೆ ವಿವರಿಸಲಾಗಿದೆ. ಕೊಪ್ಪಳ ತಾಲೂಕಿನ ವಡ್ಡೇರಹಟ್ಟಿ ಗ್ರಾಮದ ಪರಸಪ್ಪ ಮತ್ತು ಲಕ್ಷ್ಮಮ್ಮ ದಂಪತಿಗಳು ತಮ್ಮ ಮಗಳು ತುಂಬಾ ಕಪ್ಪಾಗಿದ್ದಾಳೆಂದು ಬಹು ಬೇಗನೇ ಮದುವೆ ಮಾಡಿದ್ದಾರೆ. ಇವರನ್ನು ಮಾತನಾಡಿಸಿದಾಗ "ನಮಿಗೆ ಇರೋದು ಇಬ್ರು ಮಕ್ಳು. ಅದ್ರಾಗ ಒಂದು ಹೆಣ್ಣು, ಒಂದು ಗಂಡು. ಸಣ್ಣ ಮಗ್ಳೇ ಸಾವಿತ್ರಿ. ಅಕಿನ್ನ ಇಲ್ಲೇ ನಮ್ ಜನ್ದಾಗೇ ಕೊಟ್ಟು ಮದುವಿ ಮಾಡಿದ್ವಿ. ಅಕಿಗೆ ಓದ್ಬೇಕು ಅಂತ ಇತ್ತು. ಆದ್ರೆ ನಮಿಗಿರೋ ಕಷ್ಟದಾಗ ಅಕಿನ್ನ ಓದ್ಸಾಕ ಆಗ್ಲಿಲ್ಲ. ಮತ್ತೆ ಅಕಿ ಬಾಳ ಕರ್ರಗ ಇದ್ಲು. ಹೆತ್ತೋರಿಗಿ ಹೆಣ್ಣ ಸತೆ ಮುದ್ದು. ಆದ್ರೆ ಅಕಿ ಮದುವೀನ ಮಾಡಾದು ಹೆಂಗಪ್ಪಾ ಅಂತ ಚಿಂತಿ ಆಗಿತ್ತು. ಯಾಕಂದ್ರ ಈಗಿನ್ ಕಾಲ್ದಾಗ ಬೆಳ್ಳಗ ಇದ್ರೇನೇ ಮದುವಿ ಮಾಡಾದು ಕಷ್ಟ. ಅಂತಾದ್ರಾಗ ಕರ್ರಗ ಇದ್ರೆ ಏನ್ ಗತಿ. ಅಕಿದು ಕಂಕಣಬಲ ಎಲ್ಲೆ ಕೂಡಿ ಬಂದ್ಯೆತೋ, ಯಾವಾಗ ಮದುವಿ ಆಗತೈತೋ ಅಂತ ಚಿಂತಿ ಆಗಿತ್ತು. ಮತ್ತೆ ಮನ್ಯಾಗಿನ ಕೆಲ್ಸಾನೆಲ್ಲಾ ಬಾಳ ಚೆನ್ನಾಗಿ ಮಾಡ್ತಿದ್ಲು. ನಾನು ಕೆಲ್ಸಕ್ಕ ಹೋಗಿ ಬರೋಷ್ಟರಾಗ ಕಸಮುಸುರಿ ಎಲ್ಲಾ ಮಾಡಿಕೆಂಡು, ಅಡಿಗಿ ಮಾಡಿರ್ತಿದ್ಲು. ಕೆಲ್ಸ ಮಾಡೋದ್ರಾಗ ಮಾತ್ರ ಬಾಳ ಹುಷಾರಿದ್ಲು. ಇದನ್ನ ನೋಡೇ ನಮ್ ಅಣ್ಣಾ ತನ್ನ ಮಗ್ಗ ಮದುವಿ ಮಾಡಿಕೆಂಡ. ಯಾಕಂದ್ರ ಅವ್ರ ಮನ್ಯಾಗ ಬಾಳ ಕೆಲ್ಸ ಇರ್ತೈತಿ. ತನಿಗಿ ಸೊಸಿ ಆಗಿ ಬರೋಳು ಅದನ್ನೆಲ್ಲಾ ನೋಡ್ಕೆಂಡು ನಿಭಾಯ್ಸಿಕೆಂಡು ಹೋಗುವಂತೋರ್ನ ಹುಡ್ಕತಿದ್ದ. ಆವಾಗ ನನ್ ಮಗ್ಳು ಕಣ್ಣಿಗಿ ಬಿದ್ದಾಳ. ಒಂದಿನ ಬಂದು ನಿನ್ ಮಗ್ಳನ್ನ ಮಗ್ನಿಗಿ ಮದುವಿ ಮಾಡಿ ಕೊಡ್ತೀಯೇನು ಅಂತ ಕೇಳೇ ಬಿಟ್ಟ. ಅದಕ್ಕ ನಾನು ಏನೂ ಮಾತಾಡ್ಲಾರ್ದಂಗ ಒಪ್ಪಿಬಿಟ್ಟೆ. ಆವಾಗ ಹೆಂಗೋ ಮದುವಿ ಮಾಡಿ ಕೊಟ್ವಿ. ಅಕಿ ಏನಾರ ಕೆಲ್ಸ ಕಲ್ತಿದ್ದಿಲ್ಲ ಅಂದ್ರೆ ಯಾರೂ ಸತೆ ಮದುವಿ ಮಾಡಿಕೆಳ್ಳಾಕ ಒಪ್ತಿದ್ದಿಲ್ಲ. ಮಕದಾಗಿನ ಬಣ್ಣ ಕರ್ರಗ ಇದ್ರೆ ಸತೆ ಚೆನ್ನಾಗಿ ಮನಿ ಕೆಲ್ಸ ಮಾಡೋದನ್ನ ಕಲ್ತಿರ್ಬೇಕು. ಇಲ್ಲಾಂದ್ರೆ ಮದುವಿ ಮಾಡಾದು ಬಾಳ ಕಷ್ಟ. ಈಗ ಮಗ್ಳು ಗಂಡನ ಮನ್ಯಾಗಿನ ಎಲ್ಲಾ ಕೆಲ್ಸಾನೂ ಮಾಡ್ಕೆಂಡು ಚೆನ್ನಾಗಿ ಐದಾಳ" ಎಂದರು. ಇದೊಂದು ಪ್ರಕರಣವನ್ನು ಉದಾಹರಣೆಯಾಗಿ ಇಲ್ಲಿ ವಿಶ್ಲೇಷಣೆಗೆ ತೆಗೆದುಕೊಳ್ಳಲಾಗಿದೆ. ಆದರೆ ಇದೇ ರೀತಿ ಇರುವಂತಹ ಅನೇಕ ಉದಾಹರಣೆಗಳು ಕಂಡುಬರುತ್ತವೆ. ಮುಖ್ಯವಾಗಿ ಮೈಬಣ್ಣದ ಬಗೆಗೆ ಹಲವು ರೀತಿಯ ಕಲ್ಪನೆಗಳು ನಮ್ಮಲ್ಲಿವೆ. ಅಂದರೆ ಬಿಳಿಯ ಬಣ್ಣ ಶ್ರೇಷ್ಠ ಕಪ್ಪು ಬಣ್ಣ ಕನಿಷ್ಠ ಎಂಬ ಆಲೋಚನೆ ನಮ್ಮಲ್ಲಿ

ಮೈಗೂಡಿಕೊಂಡಿದೆ. ಆ ಕಾರಣಕ್ಕಾಗಿಯೇ ಶ್ರೇಷ್ಠ ಕಾರ್ಯಗಳಲ್ಲಿ ಕಪ್ಪು ಬಣ್ಣವನ್ನು ಪ್ರದರ್ಶಿಸುವುದಿಲ್ಲ. ಅದು ಕನಿಷ್ಠ, ಅನಿಷ್ಟ ಎಂಬ ಕಲ್ಪನೆ ಎಲ್ಲರಲ್ಲಿಯೂ ಇದೆ. ಈ ಕಲ್ಪನೆಯೇ ಮಾನವನ ಮೈಬಣ್ಣಕ್ಕೂ ಅನ್ವಯಗೊಳ್ಳುತ್ತದೆ. ಮುಖ್ಯವಾಗಿ ಮೈಬಣ್ಣ ಕಪ್ಪಾಗಿದ್ದರೆ, ಅವರನ್ನು ಸಮಾಜ ನೋಡುವ ಜಗೆಯೇ ಒಂದು ರೀತಿಯ ಕನಿಷ್ಠತಮ ಮನೋಭಾವವನ್ನು ಒಡಮೂಡಿಸುತ್ತದೆ. ಹಾಗಾಗಿಯೇ ಕಪ್ಪಗಿರುವ ಗಂಡು ಮಕ್ಕಳು ಜನಿಸಿದರೆ ತಂದೆ ತಾಯಂದಿರು ಅವರ ಬಗೆಗೆ ಯೋಚಿಸುವುದಿಲ್ಲ, ಅದೇ ಮಹಿಳೆ ಕಪ್ಪಾಗಿ ಜನಿಸಿದರೆ ಆಕಾಶವೇ ತಲೆಮೇಲೆ ಬಿದ್ದಹಾಗೆ ಯೋಚನೆಗಳು ಸುತ್ತಿಕೊಳ್ಳುತ್ತವೆ. ಅವರಿಗೆ ವಿವಾಹ ಮಾಡುವುದು ಹೇಗೆ ಎಂಬ ಚಿಂತೆ ಅವರನ್ನು ಕಾಡುತ್ತಿರುತ್ತದೆ. ಸಮಾಜವಾದದ ಹರಿಕಾರ ಎಂದು ಗುರುತಿಸಿಕೊಂಡಿರುವ ಲೋಹಿಯಾ ಅವರು "ಮೈಬಣ್ಣ ಸೌಂದರ್ಯದ ಅಳತೆಗೋಲಲ್ಲ ಎಂಬುದನ್ನು ಹೇಳುತ್ತಾ, ವಿಶ್ಲೇಷಿಸುತ್ತಾ, ಭಾರತದ ಬಹುತೇಕ ದೇವಿಯರು ಕಪ್ಪು ಸುಂದರಿಯರೇ ಆಗಿದ್ದರು ಎಂಬುದನ್ನು ಉದಾಹರಣೆಗಳ ಸಮೇತ ವಿವರಿಸಿದ್ದಾರೆ. ಭಾರತ ಆಫ್ರಿಕನ್ನರಿಂದ ಆಳಲ್ಪಟ್ಟಿದ್ದರೆ ಕಪ್ಪು ಮೈಬಣ್ಣವೇ ಶ್ರೇಷ್ಠವೆನಿಸುತ್ತಿತ್ತು ಎಂದು ಅವರು ಸೂಚಿಸುತ್ತಾರೆ"(ನಾಗಭೂಷಣ ಡಿ.ಎಸ್, ೨೦೦೮, ಪು-೬೭). ಅವರು ಹಾಗೆಯೇ ಮುಂದುವರೆಯುತ್ತಾ "ಮನುಷ್ಯನ ಮೈಬಣ್ಣ ಸೌಂದರ್ಯಕ್ಕೆ ಪ್ರಮಾಣವಲ್ಲ. ಅದು ಮತ್ತಾವುದೇ ಬಗೆಯ ಶ್ರೇಷ್ಠತೆಯ ಪ್ರಮಾಣವೂ ಅಲ್ಲ ಎಂಬುದು ಲೋಹಿಯಾ ಅವರ ವಾದ. ಹೀಗಿದ್ದರೂ ಚಂದವಾದ ಮೈಬಣ್ಣ ಮತ್ತು ಸೌಂದರ್ಯ ಇವೆರೆಡೂ ಒಂದೇ ಎಂದು ನಾವು ತಿಳಿಯುತ್ತೇವೆ. ಮಾನವ ಕೋಟಿಯ ಹೆಚ್ಚು ಸಂಖ್ಯೆಯ ಜನ ಶಾಮಲ ವರ್ಣದವರಿದ್ದಾರೆ. ಶಾಮಲ ವರ್ಣದ ಹೆಣ್ಣು ಶ್ವೇತ ಚರ್ಮದ ಹೆಣ್ಣಿಗಿಂತ ಕಡಿಮೆ ಸುಂದರಿಯೇನೂ ಅಲ್ಲ. ಏಕೆಂದರೆ ಸೌಂದರ್ಯ ಪ್ರಾಪ್ತವಾಗುವುದು ಚರ್ಮದ ಬಣ್ಣದಿಂದಲ್ಲ. ಅದರ ರಚನೆ, ನವಿರು ಮತ್ತು ಮಾಟದಿಂದ. ಆದಾಗ್ಯೂ ಸೌಂದರ್ಯದ ಬಗೆಗಿನ ತಪ್ಪು ತಿಳುವಳಿಕೆಯಿಂದ ಬಹಳಷ್ಟು ಕ್ಲೇಷ ಸೃಷ್ಟಿಯಾಗಿದೆ. ಚರ್ಮದ ಬಣ್ಣದ ಬಗೆಗೆ ತಪ್ಪು ತಿಳುವಳಿಕೆಯ ಕಾರಣದಿಂದಾಗಿ ಅಸಂಖ್ಯಾತ ಗಂಡು ಹೆಣ್ಣುಗಳ ಪ್ರಜ್ಞೆಯಲ್ಲಿ ಅಸಹಜ ವರ್ತನೆಯ ವಿಷಬೀಜ ಬಿತ್ತಲ್ಪಡುತ್ತದೆ. ಅವರ ಆತ್ಮಗಳು ವಿಕೃತಗೊಳ್ಳುತ್ತವೆ. ಹೆಣ್ಣಿನ ಮುಖ ಮತ್ತು ಮೈಮಾಟವು ಗಂಡಿನ ಪಾಲಿಗೆ ಪ್ರಾಯಶಃ ಅನವರತವು ಜಗತ್ತಿನ ಅತ್ಯಂತ ಸುಂದರ ವಸ್ತುವಾಗಿ ಗೋಚರಿಸುತ್ತದೆ. ಹಾಗೆಯೇ ಒಂದು ಮಟ್ಟದವರೆಗೂ ಗಂಡಿನ ಮುಖ ಮತ್ತು ಮಾಟ ಹೆಣ್ಣಿನ ಪಾಲಿಗೆ ಆಕರ್ಷಕವಾಗಿರಬಲ್ಲದು. ಅದನ್ನು ಕುರಿತ ಮೆಚ್ಚುಗೆಗೆ ಪರಂಪರೆ ಮತ್ತು ಪೂರ್ವಗ್ರಹದ ದೋಷ ಅಡ್ಡಿಯುಂಟು ಮಾಡಬಾರದು. ಅಂಥ ತಪ್ಪು ಸೌಂದರ್ಯ ಪ್ರಜ್ಞೆಯನ್ನು ಹೋಗಲಾಡಿಸುವುದೇ ನಮ್ಮ ಕಾಲದ ಒಂದು ಕರ್ತವ್ಯವಾಗಿದೆ. ಜೀವನದ ಎಲ್ಲಾ ರಂಗಗಳಲ್ಲೂ ಕೂಡ ಚರ್ಮದ ಬಣ್ಣದಿಂದ ಉದ್ಭವವಾಗುವ ಎಲ್ಲ ರೀತಿಯ ಅಸಮಾನತೆಗಳನ್ನು ನಿರ್ನಾಮ ಮಾಡಬೇಕಾಗಿದೆ"(ಹಾಲತಿ ಸೋಮಶೇಖರ್, ೨೦೦೭; ಪು-೨೮೯,೨೯೦). ಹೀಗೆ ಕಪ್ಪು ಬಣ್ಣವೇ ಸೌಂದರ್ಯವಲ್ಲ ಬಿಳಿ ಬಣ್ಣವೇ ಸೌಂದರ್ಯವನ್ನು ಹೆಚ್ಚಿಸುತ್ತದೆ ಎಂಬಂತಹ ಆಲೋಚನೆಗಳು ನಮ್ಮಲ್ಲಿ ಗಟ್ಟಿಯಾಗಿ ನೆಲೆಗೊಂಡಿದ್ದರಿಂದ ಕಪ್ಪು

ಬಣ್ಣದ ಬಗೆಗೆ ಆಶಾದಾಯಕವಾಗಿ ಮಾತನಾಡುವುದು ಕಷ್ಟಕರವಾಗಿರುತ್ತದೆ. ಮುಖ್ಯವಾಗಿ ಈ ಆಲೋಚನಾ ಕ್ರಮ ಬದಲಾಗಬೇಕಿದೆ. ಅಂದಾಗ ಮಾತ್ರ ತಂದೆ ತಾಯಂದಿರಿಗೆ ಕಪ್ಪು ಮಕ್ಕಳು ಜನಿಸಿದರೂ, ಯಾವುದೇ ಆತಂಕವಿಲ್ಲದೇ ಇರುವಂತಹ ಸಂದರ್ಭಗಳು ಒದಗಿಬರುತ್ತವೆ. ಒಟ್ಟಾರೆಯಾಗಿ ತಮ್ಮ ಮಗಳು ಕಪ್ಪಾಗಿದ್ದಾಳೆ ಎಂಬ ಕಾರಣಕ್ಕೆ ಬಹು ಬೇಗನೇ ವಿವಾಹ ಬಂಧನಕ್ಕೆ ಒಳಗು ಮಾಡುವಂತಹ ಸಂದರ್ಭಗಳು ಇರುವುದರಿಂದ, ಇದು ಬಾಲ್ಯ ವಿವಾಹಕ್ಕೆ ಎಡೆಮಾಡಿಕೊಟ್ಟಂತಾಗಿದೆ.

ಬಾಲ್ಯ ವಿವಾಹ ನಿಷೇಧ ಕಾಯಿದೆಯ ಕುರಿತಂತೆ ಜನರಲ್ಲಿ ಒಂದು ಅಭಿಪ್ರಾಯ ರೂಪಿಸುವ ಅಗತ್ಯತೆ ಇದೆ. ಇದು ಸಾಧ್ಯವಾಗಬೇಕಾದರೆ ಜನರು ಇದರಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕು. ಅಂದರೆ ಜನರ ಸಹಕಾರದ ಹೊರತಾಗಿ ಯಾವುದೇ ಕಾಯಿದೆ ಕಾನೂನುಗಳು ಸರಿಯಾಗಿ ಅನುಷ್ಠಾನಗೊಳ್ಳುವುದಿಲ್ಲ. ಸರ್ಕಾರಿ ಇಲಾಖಾ ಅಧಿಕಾರಿಗಳಲ್ಲಿನ ಉದಾರವಾದ ನೀತಿಯಿಂದಾಗಿ ಕೆಲವು ಸಂದರ್ಭಗಳಲ್ಲಿ ಬಾಲ್ಯ ವಿವಾಹಗಳು ನಡೆಯುತ್ತವೆ. ಅಂದರೆ ಬಾಲ್ಯ ವಿವಾಹಗಳನ್ನು ತಡೆಯಬೇಕಾದ ವರ್ಗದ ನಿರ್ಲಕ್ಷ್ಯದ ಕಾರಣದಿಂದ ಬಾಲ್ಯ ವಿವಾಹಗಳು ಮುಂದುವರೆಯುತ್ತಲೇ ಇವೆ. ಇವುಗಳನ್ನು ಗುರುತಿಸುವ ಜವಾಬ್ದಾರಿ ಎಲ್ಲ ಜನರ ಮೇಲಿದೆ. ಸರ್ಕಾರಿ ಇಲಾಖೆಗಳಲ್ಲಿ ಬಾಲ್ಯ ವಿವಾಹಗಳ ಕುರಿತಾಗಿ ಜನರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗುತ್ತದೆ. ಮುಖ್ಯವಾಗಿ ಆಸ್ಪತ್ರೆಗಳಿಗೆ ಚಿಕಿತ್ಸೆಗೆ ಬರುವ ಗರ್ಭಿಣಿ ಮಹಿಳೆಯರ ನೈಜ ವಯಸ್ಸಿನ ದಾಖಲೀಕರಣ ಆಗುವುದೇ ಇಲ್ಲ. ಹೀಗೆ ಗರ್ಭಿಣಿ ಮಹಿಳೆಯರ ನಿಜವಾದ ವಯಸ್ಸಿನ ದಾಖಲೀಕರಣ ನಡೆದದ್ದೇ ಆದಲ್ಲಿ ಬಾಲ್ಯ ವಿವಾಹಗಳಿಗೆ ಬಲಿಯಾದ ಹಲವು ಮಹಿಳೆಯರು ಕಾಣಸಿಗುತ್ತಾರೆ. ಹಾಗೆಯೇ ಅವರಿಗೆ ಮುಂದಿನ ಜೀವನದ ನಡೆಯ ಕುರಿತು ಅರಿವು ಮೂಡಿಸುವ ಕೆಲಸವನ್ನು ಮಾಡಬಹುದಾಗಿದೆ. ಆದರೆ ವಾಸ್ತವದಲ್ಲಿ ಈ ದಾಖಲೀಕರಣ ನಡೆಯುವುದೇ ಇಲ್ಲ. ಒಂದು ವೇಳೆ ನಡೆದರೂ ಅದು ವಾಸ್ತವಕ್ಕೇನೂ ಹತ್ತಿರವಾಗಿರುವುದಿಲ್ಲ. ಇದು ಬಹು ದೊಡ್ಡ ತೊಡಕಾಗಿ ಮಾರ್ಪಟ್ಟಿದೆ. ಹಾಗೆಯೇ ನಕಲಿ ಜನ್ಮದಿನಾಂಕ ಪ್ರಮಾಣ ಪತ್ರಗಳನ್ನು ಕೊಡುವುದೂ ಸಹ ಬಹು ದೊಡ್ಡ ತೊಡಕಾಗಿದೆ. ಮುಖ್ಯವಾಗಿ ಗ್ರಾಮೀಣ ಭಾಗಗಳಲ್ಲಿ ಜನರು ತಮ್ಮ ಮಕ್ಕಳಿಗೆ ವಿವಾಹ ಮಾಡಲು ಬೇಕಾದ ಜನ್ಮದಿನಾಂಕ ಪ್ರಮಾಣ ಪತ್ರವನ್ನು ಆಸ್ಪತ್ರೆ ವೈದ್ಯರಿಂದ ಪಡೆಯುವುದು ವಾಡಿಕೆಯಾಗಿದೆ. ಬಹಳಷ್ಟು ಸಂದರ್ಭಗಳಲ್ಲಿ ಇವುಗಳು ವಾಸ್ತವಕ್ಕೆ ದೂರವಾಗಿರುತ್ತವೆ. ಅಂದರೆ ವಾಸ್ತವ ವಯಸ್ಸಿಗಿಂತ ಅವಾಸ್ತವ ವಯಸ್ಸನ್ನು ನಮೂದು ಮಾಡಲಾಗಿರುತ್ತದೆ. ಈ ಕಾರಣದಿಂದಾಗಿ ಸರ್ಕಾರಿ ಆಸ್ಪತ್ರೆಗಳ ಎಲ್ಲ ಸಿಬ್ಬಂಧಿಗಳಿಗೂ ಬಾಲ್ಯ ವಿವಾಹದಿಂದಾಗುವ ಸಮಸ್ಯೆಗಳ ಕುರಿತು ಅರಿವು ಮೂಡಿಸುವ ಕಾರ್ಯ ನಡೆಯಬೇಕಾಗಿದೆ.

ಸಮಾಜ ವ್ಯವಸ್ಥೆಯಲ್ಲಿ ಕುಟುಂಬ ಅತ್ಯಂತ ಪ್ರಭಾವಶಾಲಿಯಾದ ಸಂಸ್ಥೆಯಾಗಿದೆ. ಕುಟುಂಬದಲ್ಲಿನ ಪಾತ್ರಗಳು ಭಿನ್ನವಾಗಿ ರೂಪಿತಗೊಂಡಿದ್ದು, ಪ್ರತಿಯೊಂದು ಪಾತ್ರಕ್ಕೂ ತನ್ನದೇ

ಆದ ಪಾತ್ರ ಜವಾಬ್ದಾರಿಗಳಿರುವುದನ್ನು ಕಾಣಬಹುದು. ಆದರೆ ಪಾತ್ರ ಜವಾಬ್ದಾರಿಗಳ ವಿಷಯದಲ್ಲಿ ತಾರತಮ್ಯ ಏರ್ಪಟ್ಟಿರುವುದು ಮತ್ತು ಆ ಮೂಲಕ ಒಂದು ಲಿಂಗವನ್ನು ಕುಟುಂಬದ ಹಂತದಿಂದಲೇ ಕಡೆಗಣಿಸಲಾಗಿದೆ. ಮುಖ್ಯವಾಗಿ ಸಾಮಾಜೀಕರಣದ ಪ್ರಕ್ರಿಯೆ ಇಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಕುಟುಂಬದಲ್ಲಿನ ತಾರತಮ್ಯಗಳು ಈ ಸಾಮಾಜೀಕರಣದ ಹಂತದಿಂದಲೇ ಆರಂಭವಾಗುತ್ತದೆ. ಹಾಗಾಗಿ ಮಹಿಳೆಯರಿಗೆ ಹೆಚ್ಚಿನ ಜವಾಬ್ದಾರಿಗಳನ್ನು ವಹಿಸಲಾಗಿದೆ. ಹಾಗೆಯೇ ಮಹಿಳೆ ತಾನು ಹುಟ್ಟಿದ ಮನೆಯಿಂದಲೇ ಅನ್ಯಳಾಗಿಯೇ ಗುರುತಿಸಲ್ಪಡುವುದರ ಜೊತೆಗೆ ವಿವಾಹ ಬಂಧನಕ್ಕೆ ಒಳಗಾದ ನಂತರ ಆಕೆಯನ್ನು ಅನ್ಯಳನ್ನಾಗಿಯೇ ನೋಡಲಾಗುತ್ತದೆ. ಹೀಗೆ ಕುಟುಂಬದಲ್ಲಿ ಮಹಿಳೆಯನ್ನು ಯಾವತ್ತಿಗೂ ಒಬ್ಬ ವ್ಯಕ್ತಿಯಾಗಿ ಪರಿಗಣಿಸಿದ್ದೇ ಇಲ್ಲ. ಹಾಗಾಗಿ ಹೆಣ್ಣು ತಾನು ಹುಟ್ಟನಿಂದ ಹಿಡಿದು ಸಾಯುವವರೆಗೆ ಪರಾವಲಂಬಿಯಾಗಿಯೇ ಜೀವಿಸುವ ಅನಿವಾರ್ಯತೆಯನ್ನು ಎದುರಿಸುತ್ತಿದ್ದಾಳೆ. ಕುಟುಂಬದಲ್ಲಿನ ಹೆಣ್ಣುಮಗುವನ್ನು ಒಂದು ವಸ್ತುವನ್ನಾಗಿ ನೋಡುವುದರಿಂದಲೇ ಸಮಸ್ಯೆಗಳು ಉದ್ಭವಿಸುತ್ತವೆ. ಏಕೆಂದರೆ ಕುಟುಂಬದಲ್ಲಿನ ಲಿಂಗಾಧಾರಿತ ಅಸಮಾನತೆಯ ಕಾರಣದಿಂದಾಗಿ ಮಹಿಳೆಯರು ಕುಟುಂಬಕ್ಕೆ ಹೊರೆಯಾಗಿ ಕಂಡುಬರುತ್ತಾರೆ. ಇದು ಜನರ ಜ್ಞಾನವಲಯವನ್ನು ಆವರಿಸಿಕೊಂಡಿರುವುದು ಬಹು ದೊಡ್ಡ ತೊಡಕಾಗಿದೆ. ಹಾಗಾಗಿ ಇದು ಎಲ್ಲಿಯವರೆಗೆ ಜನರ ಆಲೋಚನಾ ನೆಲೆಗಳಲ್ಲಿ ಇರುತ್ತದೆಯೋ ಅಲ್ಲಿಯವರೆಗೆ ಯಾವುದೇ ಕಾನೂನಾದರೂ ಸಂಪೂರ್ಣವಾಗಿ ಅನುಷ್ಠಾನಗೊಳ್ಳಲು ಸಾಧ್ಯವಾಗುವುದಿಲ್ಲ.

ಭಾವನಾತ್ಮಕತೆ ಎಂಬುದು ಮನುಷ್ಯರಲ್ಲಿ ಸಹಜವಾಗಿಯೇ ಒಡಮೂಡಿರುತ್ತದೆ. ಆದರೆ ಇದನ್ನು ಪಿತೃಪ್ರಧಾನ ವ್ಯವಸ್ಥೆ ತನ್ನ ಅನುಕೂಲಕ್ಕೆ ತಕ್ಕಂತೆ ರೂಪಿಸಿಕೊಂಡಿರುತ್ತದೆ. ಹಾಗಾಗಿ ಭಾವನಾತ್ಮಕತೆಯನ್ನು ಮಹಿಳೆಯರಲ್ಲಿ ಗಟ್ಟಿಗೊಳಿಸಲು ವ್ಯವಸ್ಥೆ ಹಲವು ಸಾಮಾಜಿಕ ಸಂಸ್ಥೆಗಳ ಮೂಲಕ ಮಹಿಳೆಯರನ್ನು ಇನ್ನೊಂದು ಬಗೆಯಲ್ಲಿ ಸಾಮಾಜಿಕರಣದ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳುತ್ತದೆ. ಮುಖ್ಯವಾಗಿ ಅಣ್ಣ, ತಮ್ಮ, ತಂದೆ, ತಾಯಿ, ಅಕ್ಕ, ತಂಗಿ, ಪತಿ, ಮಕ್ಕಳು ಹೀಗೆ ಅನೇಕ ಬಗೆಯ ಸಂಬಂಧಗಳು ಮಹಿಳೆಯರನ್ನು ಕುಟುಂಬದ ಆಚೆ ಬಂದು ಆಲೋಚಿಸಲು ಬಿಡುತ್ತಿಲ್ಲ. ಹಾಗೆಯೇ ಶೀಲ, ಪಾತಿವ್ರತ್ಯ, ಗಂಡನಿಗೆ ವಿಧೇಯತೆ ಇವುಗಳು ಮಹಿಳೆಯರಲ್ಲಿ ಹಾಸು ಹೊಕ್ಕಾಗಿರಬೇಕು. ಇವುಗಳೇ ಸಂಸ್ಕೃತಿಯನ್ನು ಬಿತ್ತರಿಸುವ ಮಾನದಂಡಗಳು ಎಂಬುದಾಗಿ ಮಹಿಳೆಯರಲ್ಲಿ ಜ್ಞಾನವನ್ನು ತುಂಬಲಾಗುತ್ತಿದೆ. ಹಾಗಾಗಿಯೇ ಮಹಿಳೆಯರು ಹಕ್ಕಿನ ನೆಲೆಯಲ್ಲಿ ಸಮಾನ ಅವಕಾಶಗಳನ್ನು ಮತ್ತು ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಈ ಸಂಬಂಧಗಳು ಒಂದಕ್ಕೊಂದು ಬಂಧಿಸಲ್ಪಟ್ಟಿವೆ. ಈ ಬಗೆಯ ಸಂಬಂಧಗಳ ಭಾವನಾತ್ಮಕತೆಗೆ ಮಹಿಳೆಯರು ಒಳಗಾಗಿ ತಮ್ಮ ಹಕ್ಕುಗಳಿಂದ ವಂಚಿತರಾಗಿದ್ದಾರೆ. ಹಾಗಾಗಿಯೇ ಮಹಿಳೆಯರಿಗಾಗಿ ರೂಪಿಸಲ್ಪಟ್ಟಿರುವ ಕಾನೂನುಗಳ ಕುರಿತ ಅರಿವನ್ನು

ಪಡೆಯುವುದೂ ಸಹ ತುಂಬಾ ಕಷ್ಟಕರವಾದ ಸಂಗತಿಯಾಗಿದೆ. ಈ ಬಗೆಯ ಆಲೋಚನಾ ಕ್ರಮ ಬಹುದೊಡ್ಡ ತೊಡಕಾಗಿ ಮಾರ್ಪಟ್ಟಿರುವುದು ವಾಸ್ತವ.

ಮಹಿಳೆಯರು ಕುಟುಂಬದ ಆಚೆ ಹೋಗಬಾರದೆಂಬ ಕಟ್ಟಳೆಗಳ ಕಾರಣವಾಗಿ ಬಹುತೇಕ ಕುಟುಂಬಗಳಲ್ಲಿ ಮಹಿಳೆಯರು ಕುಟುಂಬದ ಆಚೆಗಿನ ವಿಷಯಗಳ ಕುರಿತು ಜ್ಞಾನವನ್ನು ಪಡದೇ ಇರುವುದಿಲ್ಲ. ಹಾಗಾಗಿ ಅವರು ಕಾನೂನುಗಳನ್ನು ಅರಿಯುವಲ್ಲಿ ಬಹಳಷ್ಟು ತೊಂದರೆಗಳನ್ನು ಅನುಭವಿಸುತ್ತಿದ್ದಾರೆ. ಕುಟುಂಬದಲ್ಲಿ ಮಹಿಳೆಯರಿಗೆ ವಿಶಿಷ್ಟವಾದ ಜವಾಬ್ದಾರಿಗಳನ್ನು ಹೊರಿಸಲಾಗಿದೆ. ಮುಖ್ಯವಾಗಿ ಮಹಿಳೆ ಸ್ಥಿರಮಾದರಿ ಪಾತ್ರಗಳನ್ನು ಅತ್ಯಂತ ನಿಷ್ಠೆಯಿಂದ ಪಾಲಿಸಬೇಕಾದ ಅನಿವಾರ್ಯತೆಗೆ ಒಳಗಾಗಿದ್ದಾಳೆ. ಅಂದರೆ ಕುಟುಂಬದಲ್ಲಿ ಮಹಿಳೆ ಮಗಳಾಗಿ, ಹೆಂಡತಿಯಾಗಿ, ತಾಯಿಯಾಗಿ ತನ್ನ ಪಾತ್ರ ಕರ್ತವ್ಯಗಳನ್ನು, ಜವಾಬ್ದಾರಿಗಳನ್ನು ನಿರ್ವಹಿಸಲೇಬೇಕು. ಅವುಗಳ ಜೊತೆ ಜೊತೆಗೆ ಕುಟುಂಬದ ಗೌರವವನ್ನು ಕಾಪಾಡುವುದು ಅವಳ ಆದ್ಯ ಕರ್ತವ್ಯವಾಗಿರುತ್ತದೆ. ಅದು ತವರು ಮನೆಯಾಗಿರಬಹುದು ಅಥವಾ ಗಂಡನ ಮನೆಯಾಗಿರಬಹುದು. ಈ ಕಾರಣಕ್ಕಾಗಿ ಹಲವು ಮಹಿಳೆಯರು ಕುಟುಂಬದ ಗೌರವಕ್ಕೆ ಹೆದರಿಕೊಂಡು ಮನೆಯಿಂದ ಆಚೆ ಬರಲೂ ಹೆದರುವಂತಹ ಪರಿಸ್ಥಿತಿಯಲ್ಲಿದ್ದಾರೆ. ಇದೊಂದು ಬಹುದೊಡ್ಡ ತೊಡಕಾಗಿದೆ. ಮುಖ್ಯವಾಗಿ ಗಾಳೆಮ್ಮನಗುಡಿಯ ಸಿದ್ಧಮ್ಮ ಹೇಳುವಂತೆ "ನಮ್ ಮನ್ಯಾಗ ಎಲ್ಲನೂ ನಮ್ ಯಜಮಾನ್ರದೇ ನಡಿಯೋದು. ಅವ್ರು ಏನ್ ಹೇಳ್ತಾರೋ ಅದನ್ನ ಕೇಳ್ಕಂಡು ಇರ್ಬೇಕು ಅಷ್ಟೆ. ಎಲ್ಲಿಗಾದ್ರೂ ಹೋಗ್ಬೇಕಾದ್ರೆ ಅವ್ರ ಪರ್ಮಿಶನ್ ತಗಂಡೇ ಹೋಗ್ಬೇಕು. ಅವ್ರನ್ನ ಕೇಳ್ಕಂಡು ಹೋಗಿಲ್ಲ ಅಂದ್ರೆ ಮುಗೀತು. ಮನ್ಯಾಗ ರಾದ್ಧಾಂತನೇ ಆಗಿಬಿಡ್ತೈತಿ. ಊರಾಗ ಬಾಳಷ್ಟು ಸ್ತ್ರೀಶಕ್ತಿ ಸಂಘಗೋಳು ಐದಾವ ಆದ್ರ ನಾನು ಮಾತ್ರ ಅದ್ರಾಗ ಸೇರಿಲ್ಲ. ನಮ್ ಮಾವ ಅದಕ್ಕ ಅವ್ಕಾಶಾನೇ ಮಾಡಿಕೊಟ್ಟಿಲ್ಲ. ಹಂಗಾಗಿ ನಾನು ಮನ್ಯಾಗೇ ಕೊಳಿಯಾಕತ್ತೇನಿ" ಎಂದರು. ಹಾಗೆಯೇ ಇನ್ನೊಂದು ಪ್ರಕರಣದಲ್ಲಿ ಅಲುವೇಲಮ್ಮನವರು ಹೇಳುವ ಹಾಗೆ "ನಮ್ ಮನ್ಯಾಗ ನಮ್ ಮಾವನೋರ್ದೇ ಎಲ್ಲ. ಅವ್ರು ಏನ್ ಹೇಳ್ತರೋ ಅದನ್ನ ಕೇಳ್ಬೇಕು. ಇಲ್ಲಾಂದ್ರ ಬೈಯ್ಸಿಕೆಳ್ಳಬೇಕಾಗತೈತಿ. ಊರಾಗಿನ ಸ್ತ್ರೀಸಕ್ತಿ ಸಂಘದಾಗ ನಾನು ಸೇರೇನಿ. ಆದ್ರೆ ಅದ್ರಾಗ ರೊಕ್ಕ ಮಾತ್ರ ಕಟ್ಟಾಕತ್ತೇನಿ. ಒಂದು ಮೀಟಿಂಗ್‌ಗೂ ಹೋಗಿಲ್ಲ. ಹೋಗಾಕ ಮನ್ಯಾಗ ಬಿಡಂಗಿಲ್ಲ. ಒಂದ್ಸಾರಿ ಯಾವುದೋ ಫಂಕ್ಸನ್ ಇತ್ತು. ಲಾಯರ್ಗಳು ಬರ್ತಾರ ಎಲ್ಲಾರೂ ಸೇರ್ಬೇಕು ಅಂತ ಹೇಳಿದ್ರು. ಆವಾಗ ಎಲ್ಲಾ ಸ್ತ್ರೀಸಕ್ತಿ ಸಂಘದೋರು ಸೇರಿದ್ರು. ಆದ್ರೆ ನಾನು ಹೋಗ್ತೀನಿ ಅಂದ್ರೆ ಗಂಡ ಕಳಿಸ್ಲಿಲ್ಲ. ಆದ್ರ ಅದೇ ದಿನ ರಾತ್ರಿ ನಮ್ ಸಂಘದ ಅದ್ಯಕ್ಷೆ ರಾಧಮ್ಮ ನಮ್ ಮನೀಗಿ ಬಂದು ಪಕ್ಸನ್ಯಾಗ ಏನೇನು ನಡೀತು ಅಂತ ಎಲ್ಲಾನೂ ಹೇಳಿದ್ಲು. ಹೆಣ್ಮಕ್ಕಿಗಿ ಬಳಷ್ಟು ಕಾನೂನುಗಳು ಐದಾವ ಅಂತ ಹೇಳಿದ್ರಂತ. ಇದೆಲ್ಲಾ ನನಿಗಿ ಗೊತ್ತಾಗ್ಲಿಲ್ಲ. ಇದೆಲ್ಲಾ ಗೊತ್ತಾಗ್ಬೇಕಂದ್ರ ಮನಿಲಿಂದ ಹೊರ್ಗ ಹೋದ್ರೆ ಅಲ್ಲಾ ಗೊತ್ತಾಗಾದು. ಏನ್ ಮಾಡಾದು ಸಂಘದಾಗ ಏನೇನೋ ಮಾಡಾಕತ್ತಾರ ಆದ್ರ ನನಿಗಿ ಒಂದೂ ತಿಳಿವಲ್ಲು. ಮನಿಲಿಂದ ಹೊರ್ಗ

ಹೋಗಾಕ ಬಿಟ್ಟಿಲ್ಲ ತಿಳಿಯೋದು. ಇಲ್ಲೇ ನಾಕು ಗೋಡ್ಯಾಗೇ ಜೀವ್ನ ಆಗಿಬಿಟ್ಟೇತಿ" ಎಂದರು. ಹೀಗೆ ಕುಟುಂಬದಲ್ಲಿ ಮಹಿಳೆಯರನ್ನು ಮನೆಯಲ್ಲಿಯೇ ಬಂಧಿಸಿಡಲಾಗಿದೆ. ಇದುವೇ ಅವರ ಅಭಿವೃದ್ಧಿಗೆ ಮುಳುವಾಗಿದೆ. ಕುಟುಂಬದಲ್ಲಿ ಮಹಿಳೆ ತನ್ನ ವೈಯಕ್ತಿಕ ಬದುಕಿನಿಂದ ಮೊದಲುಗೊಂಡು ಯಾವುದೇ ಸಂಗತಿಯನ್ನು ಸಹ ಅವಳು ತನ್ನ ಹಕ್ಕನ್ನು ಚಲಾಯಿಸುವ, ತನ್ನ ನಿರ್ಧಾರವನ್ನು ಹೇಳುವ ಅಧಿಕಾರವನ್ನು ಕಸಿದುಕೊಳ್ಳಲಾಗಿದೆ. ಪುರುಷನ ಬದುಕಿಗೆ ಮಹಿಳೆ ಪೂರಕವಾಗಿ ಬದುಕುತ್ತಿರುವಾಗಲೂ ಪುರುಷ ಸಮುದಾಯ ಅವಳ ಮೇಲೆ ನಿಯಂತ್ರಣವನ್ನು ಸಾಧಿಸುತ್ತಲೇ ಇದೆ. ಹಾಗೆಯೇ ನಿರಂತರವಾದ ಆಕ್ರಮಣವನ್ನು ನಡೆಸಲಾಗುತ್ತಿದೆ. "ವಿವಾಹಿತ ಮಹಿಳೆಯರ ಕೌಟುಂಬಿಕ ನಿರ್ಬಂಧಗಳು ಆಕೆಯ ಪಾತ್ರವನ್ನು ನಾಲ್ಕು ಪ್ರಕಾರಗಳಾಗಿ ರೂಪಿಸಿವೆ. ಹೆಂಡತಿ, ತಾಯಿ, ಗ್ರಾಹಕಿ ಹಾಗೂ ಸೇವಕಿ ಎಂಬ ನಾಲ್ಕು ಪಾತ್ರಗಳಲ್ಲಿ ಹೆಣ್ಣನ್ನು ಕುರಿತ ನಿರೀಕ್ಷೆಗಳು ಕುಟುಂಬದಲ್ಲಿ ವ್ಯಕ್ತವಾಗುತ್ತವೆ"(ಪ್ರೀತಿ ಶುಭಚಂದ್ರ, ೨೦೦೨, ಪು-೧೬೦). ಈ ಪಾತ್ರಗಳ ನಿರೀಕ್ಷೆ ಹಿಂದೆ ಕುಟುಂಬ ಗೌರವದ ಪ್ರಶ್ನೆ ಅಡಗಿದೆ. ಇದನ್ನು ಮಹಿಳೆ ನಿರ್ವಹಿಸಲೇಬೇಕು. ಇಲ್ಲವಾದಲ್ಲಿ ಪುರುಷ ವ್ಯವಸ್ಥೆಯ ಕಂಗೆಣ್ಣಿಗೆ ಗುರಿಯಾಗಬೇಕಾಗುತ್ತದೆ. ಇಂತಹ ಪರಿಸ್ಥಿಗಳಲ್ಲಿ ಮಹಿಳೆ ಬಾಲ್ಯವಿವಾಹ ನಿಷೇಧ ಕಾನೂನಿನ ಕುರಿತು ಅರಿವನ್ನು ಪಡೆಯುವುದು ತುಂಬಾನೇ ಕಷ್ಟಕರ ಸಂಗತಿಯಾಗಿದೆ. ಹಾಗಾಗಿ ಕುಟುಂಬದ ಆಚೆ ಬಂದು ಶಿಕ್ಷಣಕ್ಕೆ ತೆರೆದುಕೊಳ್ಳುವ ಮಹಿಳೆಯರು ಕಾನೂನುಗಳನ್ನು ಸರಿಯಾದ ರೀತಿಯಲ್ಲಿ ಅಧ್ಯೆಸಿಕೊಳ್ಳಬಲ್ಲವರಾಗಿದ್ದಾರೆ. ಆದರೆ ಈ ವ್ಯವಸ್ಥೆ ಸಮಾಜದಲ್ಲಿ ಇಲ್ಲವಾಗಿದೆ. ಬಾಲ್ಯವಿವಾಹ ಪದ್ಧತಿ ನಿಷೇಧ ಕಾನೂನು ಸರಿಯಾಗಿ ಅನುಷ್ಠಾನಗೊಳ್ಳುವುದಕ್ಕೆ ಇದೊಂದು ತೊಡಕಾಗಿ ಮಾರ್ಪಟ್ಟಿದೆ.

ನಿವೃತ್ತ ಪ್ರಾಥಮಿಕ ಶಾಲಾ ಶಿಕ್ಷಕರೊಬ್ಬರು ಬಾಲ್ಯ ವಿವಾಹವನ್ನು ತಡೆಯುವ ಕೆಲಸಕ್ಕೆ ಮುಂದಾಗಿ ಜೀವ ಬೆದರಿಕೆಯನ್ನು ಹಾಕಿಸಿಕೊಂಡಿರುವ ಪ್ರಕರಣ ಕಂಡುಬಂದಿದೆ. ಬಾಣಾಪುರ ಗ್ರಾಮದ ನಿವೃತ್ತ ಶಾಲಾ ಶಿಕ್ಷಕರಾದ ತಿಪ್ಪೇರುದ್ರಪ್ಪನವರು ತಮ್ಮದೇ ಗ್ರಾಮದಲ್ಲಿ ನಡೆಯುತ್ತಿದ್ದ ಬಾಲ್ಯ ವಿವಾಹವನ್ನು ಮಾಡುತ್ತಿದ್ದ ಕುಟುಂಬದ ಸದಸ್ಯರಿಗೆ ತಿಳಿ ಹೇಳುವುದಕ್ಕೆ ಮುಂದಾಗಿದ್ದಾರೆ. ಆದರೆ ಅವರು ಜೀವ ಬೆದರಿಕೆಯನ್ನು ಅನುಭವಿಸಿರುವುದು ಕಂಡುಬರುತ್ತದೆ. ಅವರು ಹೇಳುವಂತೆ " ನಮ್ ಊರಿನಲ್ಲಿ ಚಿಕ್ಕ ಮಕ್ಕಳಿಗೆ ವಿವಾಹ ಮಾಡಲು ಎಲ್ಲಾ ತಯ್ಯಾರಿ ನಡೆಸಿದ್ದರು. ಅದನ್ನ ತಿಳ್ದು ನಾನು ಅವ್ರ ಮನಿಗೆ ಹೋಗಿ ಸಣ್ಣ ಮಕ್ಕಳಿಗಿ ಮದುವಿ ಮಾಡಾದು ತಪ್ಪು, ಕಾನೂನು ಪ್ರಕಾರ ಶಿಕ್ಷೆ ಅನುಭವಿಸಬೇಕಾಗತ್ತೈತಿ. ಅದಕ್ಕ ಮದುವೀನ ಮಾಡಾದು ನಿಲ್ಲಿಸ್ರಿ ಅಂತ ಹೇಳಿದೆ. ಆಗ ಆ ಮನಿಯವ್ರು ಈಗಾಗ್ಲೇ ಸಂಬಂಧಿಕ್ರಗೆಲ್ಲಾ ಲಗ್ನಪತ್ರಗಳ್ನ ಹಂಚೇವಿ. ಮದುವಿ ನಿಲ್ಸಾಕಂತೂ ಆಗಲ್ಲ ಅಂತ ಹೇಳಬಿಟ್ರು, ನಾನಿದ್ದು ಈ ವಿಷಯ ಅಧಿಕಾರಿಗಳ್ಗೇನಾದ್ರು ಗೊತ್ತಾದ್ರೆ ನೀವೆಲ್ಲಾ ಜೈಲಿಗಿ ಹೋಗ್ಬೇಕಾಗತ್ತೈತಿ ಅಂತ ಹೇಳಿದೆ. ಅವ್ರು ನನ್ ಮಾತನ್ನ ಕಿವಿಗಿ ಹಾಕಿಕೊಳ್ಳಲಿಲ್ಲ. ನಾಣು ಮುಂದೆ ಮಾತಾಡ್ದೆ ಸುಮ್ನೆ ಮನಿಗಿ ಬಂದೆ. ಆವತ್ತಿನ ರಾತ್ರಿ ಅದೇ

ಕುಟುಂಬದ ಸಂಬಂಧಿಕ್ರು ಒಬ್ರು ನನಿಗಿ ಫೋನ್ ಮಾಡಿ ಕೆಟ್ ಕೆಟ್‌ದಾಗಿ ಬೈದಿದ್ರು ಅಲ್ಲೆ, ಸಾಯ್ಸಿ ಬಿಡ್ತೀವಿ ಅನ್ನೋ ಮಟ್ಟಕ್ಕ ಮಾತಾಡಿದ್ರು. ಅಪ್ರಿಗಿ ನಾನೆಲ್ಲಿ ಸರ್ಕಾರಿ ಅಧಿಕಾರಿಗಳಿಗೆ ಹೇಳಿ ಬಿಡ್ತೀನೇನೋ ಅನ್ನೋ ಭಯದಿಂಧ ಹಿಂಗ ಮಾಡಿದ್ರು. ಮತ್ತೆ ನನ್ ಮಗಗ ಸತೆ ಪೋನ್ ಮಾಡಿ ನನ್ ಮ್ಯಾಲೆ ಕಂಪ್ಲೇಂಟ್ ಹೇಳ್ಯಾರ. ಅದಕ್ಕ ಅವ್ನು ಮನಿಗಿ ಬಂದ್ ಕೂಡ್ಲೇ ನನ್ನ ಬೈಯಾಕ ಸುರು ಮಾಡ್ದ. ಹಂಗಾಗಿ ಏನ್ ಮಾಡಾದು ಅಂತ ಸುಮ್ನಾಗಿ ಬಿಟ್ಟೆ. ಒಂದೊಂದ್ಸಾರಿ ನಮ್ ಕಣ್ಣೆದ್ರುಗೇ ಹಿಂಗೆಲ್ಲಾ ಆಗೋದನ್ನ ನೋಡ್ತಿರ್ತೀವಿ ಆದ್ರೆ ನಿಲ್ಸಬೇಕಂದ್ರ ಸಮಾಜ ನಮ್ಮನ್ನ ಸುಮ್ನೆ ಬಿಡಂಗಿಲ್ಲ" ಎಂದು ಹೇಳಿದರು. ವ್ಯವಸ್ಥೆಯಲ್ಲಿ ಬಾಲ್ಯ ವಿವಾಹಗಳನ್ನು ತಡೆಯಬೇಕೆನ್ನುವ ಮನಸುಗಳು ತುಂಬಾ ಇವೆ. ಆದರೆ ಇವರಿಗೆ ಸರಿಯಾದ ಭದ್ರತೆ ಇಲ್ಲ. ಮುಖ್ಯವಾಗಿ ಪುರುಷ ವ್ಯವಸ್ಥೆಯು ತನ್ನ ವಿರುದ್ಧ ಮಾತನಾಡುವ ಯಾವುದೇ ವ್ಯಕ್ತಿಯಾಗಿರಲಿ, ಅವರನ್ನು ಸಹಿಸಿಕೊಳ್ಳುವುದಿಲ್ಲ. ಏಕೆಂದರೆ ತನ್ನ ಎಲ್ಲ ಬಗೆಯ ಪ್ರತಿಷ್ಠೆಗಳಿಗೆ ಧಕ್ಕೆಯಾಗಿಬಿಡುತ್ತದೆ ಎಂಬ ಕಾರಣಕ್ಕಾಗಿ ಅಂತಹ ವ್ಯಕ್ತಿಗಳನ್ನು ದಮನ ಮಾಡಲು ಮುಂದಾಗುತ್ತದೆ. ಮೇಲಿನ ಪ್ರಕರಣದಲ್ಲಿ ಶಾಲಾ ನಿವೃತ್ತ ಶಿಕ್ಷಕರಾದರೂ ಅವರಲ್ಲಿನ ಸಾಮಾಜಿಕ ಕಾಳಜಿಯನ್ನು ಗುರುತಿಸಲೇ ಬೇಕು. ಇವರು ಬಾಲ್ಯ ವಿವಾಹ ಮಾಡುತ್ತಿರುವ ಕುಟುಂಬಕ್ಕೆ ಅರಿವು ಮೂಡಿಸಲು ಮುಂದಾದರೂ ವ್ಯವಸ್ಥೆ ಅವರನ್ನು ತಡೆದಿದೆ. ಇದು ಪುರುಷ ವ್ಯವಸ್ಥೆ ನಿಯಂತ್ರಣವನ್ನು ಹೇರುವ ಗುಣವನ್ನು ತೋರಿಸುತ್ತದೆ.

ಕುಟುಂಬದ ಈ ಬಗೆಯ ವಿಷಯಗಳು ತುಂಬಾ ವೈಯಕ್ತಿಕ ನೆಲೆಗಳಲ್ಲಿ ಚರ್ಚಿಸಲ್ಪಡುತ್ತವೆ. ಹಾಗಾಗಿಯೇ ಬಾಲ್ಯ ವಿವಾಹದಂತಹ ಪ್ರಕರಣಗಳು ನಡೆಯುತ್ತಿದ್ದರೂ ಅವುಗಳನ್ನು ತಡೆಯಲು ಹೋದವರಿಗೆ ಬೆದರಿಕೆಗಳನ್ನು ಹಾಕುವ ಕೆಲಸಕ್ಕೆ ಮುಂದಾಗುತ್ತದೆ. ಯಾವುದೇ ವಿಷಯ ವೈಯಕ್ತಿಕ ನೆಲೆಯಲ್ಲಿ ಚರ್ಚಿತಗೊಳ್ಳುವುದು ತುಂಬಾ ಅಪಾಯಕಾರಿಯಾದುದು. ಪ್ರತಿಯೊಂದು ಬಾಲ್ಯ ವಿವಾಹಗಳ ಸಂದರ್ಭಗಳಲ್ಲಿಯೂ ಇದೇ ಆಗುವುದು. ಕುಟುಂಬದ ಪ್ರತಿಷ್ಠೆಯ ವಿಚಾರವಾಗಿ ಅಥವಾ ಜಾತಿಯ ಮಾನ–ಅಪಮಾನದ ವಿಷಯವಾಗಿ ನೋಡಲಾಗುತ್ತದೆ. ಹಾಗಾಗಿಯೇ ಹಲವು ಸಂದರ್ಭಗಳಲ್ಲಿ ಬಾಲ್ಯ ವಿವಾಹಗಳು ಕಣ್ಣ ಮುಂದೆ ನಡೆಯುತ್ತಿದ್ದರೂ ಅವುಗಳನ್ನು ಗಮನಿಸದೇ ಹಾಗೆಯೇ ಹೋಗುವಂತಹ ಮನಸ್ಥಿತಿಗಳು ನಮ್ಮ ನಡುವೆ ಇವೆ. ಪುರುಷ ವ್ಯವಸ್ಥೆಯ ಈ ಬಗೆಯ ಆಲೋಚನೆಗಳಿಂದ ಇಂದಿಗೂ ಬಾಲ್ಯ ವಿವಾಹಗಳು ನಡೆಯುತ್ತಿವೆ.

ಒಟ್ಟಾರೆಯಾಗಿ ಬಾಲ್ಯ ವಿವಾಹದಿಂದಾಗುವ ದುಷ್ಪರಿಣಾಮಗಳ ಕುರಿತು ಮತ್ತು ಬಾಲ್ಯ ವಿವಾಹ ನಿಷೇಧ ಕಾನೂನಿನ ಕುರಿತು ಜನರಿಗೆ ಅರಿವನ್ನು ಮೂಡಿಸುವ ಸಂದರ್ಭದಲ್ಲಿ ಹಲವಾರು ತೊಡಕುಗಳನ್ನು ಎದುರಿಸಬೇಕಾದ ಅನಿವಾರ್ಯತೆ ಇದೆ. ಮುಖ್ಯವಾಗಿ ಕುಟುಂಬದಲ್ಲಿ ಮಹಿಳೆಯರನ್ನು ಒಂದು ಜೈವಿಕ ಘಟಕವಾಗಿಯೇ ಪರಿಭಾವಿಸಿಕೊಂಡಿರುವುದರಿಂದ ಪುರುಷಶಾಹಿ ವ್ಯವಸ್ಥೆ ಮಹಿಳೆಯರ ಮೇಲೆ ಸುಲಭವಾಗಿ ಅಧಿಕಾರವನ್ನು ಚಲಾಯಿಸುತ್ತಿದ್ದಾರೆ.

ಹಾಗಾಗಿಯೇ ಮಹಿಳೆಯರಿಗೆ ಸಾಮಾಜಿಕ ಅಸ್ತಿತ್ವವನ್ನು ನೀಡುವುದಕ್ಕೆ ನಮ್ಮ ಸಮಾಜ ಇಂದಿಗೂ ಸಿದ್ಧವಿಲ್ಲ. ಖಾಸಗೀ–ಸಾರ್ವಜನಿಕ ಎಂಬ ವರ್ಗೀಕರಣದಲ್ಲಿ ಮಹಿಳೆಯರನ್ನು ಖಾಸಗೀ ವಲಯಕ್ಕೆ ದೂಡಲಾಗಿದೆ. ಅವರಿಗೆ ಯಾವುದೇ ಸಾರ್ವಜನಿಕ ಅವಕಾಶವನ್ನು ನೀಡಿಲ್ಲ. ಹಾಗಾಗಿ ಅವರ ಬದುಕು ಕುಟುಂಬದ ನಾಲ್ಕು ಗೋಡೆಗಳ ಮಧ್ಯೆಯೇ ಉಳಿದುಬಿಟ್ಟಿದೆ. ಹಾಗೆಯೇ ಸಂತಾನೋತ್ಪತ್ತಿಗೆ ಮಾತ್ರ ಸೀಮಿತವಾಗಿಬಿಟ್ಟಿದೆ. ಇದರಿಂದಾಗಿ ಮಹಿಳೆಯರು ಸಂವಿಧಾನದ ಎಲ್ಲ ನಗೆಯ ಹಕ್ಕುಗಳಿಂದ ವಂಚಿತರಾಗಿದ್ದಾರೆ. ಹಾಗೆಯೇ ಜೈವಿಕ ನೆಲೆಯಲ್ಲಿ ಗುರುತಿಸುತ್ತಿರುವುದರಿಂದ ಅವರ ಸ್ವಾತಂತ್ರ್ಯದ ವ್ಯಾಪ್ತಿ ಸೀಮಿತಗೊಳಿಸಲಾಗಿದೆ. ಹಾಗೆಯೇ ಅವರು ತಮ್ಮ ಬದುಕನ್ನು ಕಟ್ಟಿಕೊಳ್ಳಲು ಲಭ್ಯವಿರುವ ಅವಕಾಶಗಳ ವ್ಯಾಪ್ತಿ ಸೀಮಿತವಾಗಿಬಿಟ್ಟಿದೆ. ಹಾಗಾಗಿಯೇ ಮಹಿಳೆಯರು ಕುಟುಂಬದ ಆಚೆ ಬರಲು ಸಾಧ್ಯವಾಗುತ್ತಿಲ್ಲ.

ಬಾಲ್ಯ ವಿವಾಹ ಪದ್ಧತಿ ನಿಷೇಧ ಕಾನೂನಿನ ಅನುಷ್ಠಾನದ ಸಂದರ್ಭದಲ್ಲಿ ಎದುರಾಗುತ್ತಿರುವ ಪ್ರಮುಖ ತೊಡಕುಗಳನ್ನು ಎರಡು ನೆಲೆಗಳಲ್ಲಿ ಗುರುತಿಸಬಹುದು. ಒಂದು ಕುಟುಂಬದ ಒಳಗೆ ಮಹಿಳೆಯರನ್ನು ಬಂಧಿಸಿಡುವುದರ ಮೂಲಕ ಅವರು ಯಾವುದೇ ಕಾಯಿದೆ ಕಾನೂನುಗಳ ಅರಿವನ್ನು ಪಡೆಯದಂತೆ ಮಾಡಿರುವುದು ಮತ್ತು ಸ್ವತಃ ಪುರುಷ ವರ್ಗವೇ ಇಂತಹ ಕಾನೂನುಗಳ ಬಗೆಗೆ ಅಸಡ್ಡೆಯನ್ನು ಹೊಂದಿರುವುದು. ಎರಡನೆಯದಾಗಿ ಸಾರ್ವಜನಿಕ ವಲಯದಲ್ಲಿ ಬಾಲ್ಯವಿವಾಹಗಳನ್ನು ತಡೆಯುವುದಕ್ಕಾಗಿ ಹಲವಾರು ಸರ್ಕಾರಿ ಇಲಾಖೆಗಳು ಮತ್ತು ಸಂಘ ಸಂಸ್ಥೆಗಳು ಕಾರ್ಯ ಮಾಡುತ್ತಿವೆ. ಆದರೆ ಪುರುಷ ವ್ಯವಸ್ಥೆಯ ಮೌಲ್ಯಗಳ ಕಾರಣವಾಗಿ ಇವರೂ ಸರಿಯಾಗಿ ಕಾರ್ಯ ನಿರ್ವಹಿಸದಂತೆ ಆಗುತ್ತಿದೆ. ಹಾಗೆಯೇ ಸರ್ಕಾರಿ ಇಲಾಖೆಗಳಲ್ಲಿನ ಕೆಲವು ಅಧಿಕಾರಿಗಳ ಉಧಾರತನದಿಂದ ಅಥವಾ ನಿರ್ಲಕ್ಷದ ಕಾರಣ ಬಾಲ್ಯ ವಿವಾಹಗಳು ನಿರಂತರವಾಗಿ ಮುಂದುವರೆಯುತ್ತಿರುವುದು ಕಂಡುಬರುತ್ತಿದೆ. ಇವುಗಳೇ ಈ ಕಾನೂನಿನ ಅನುಷ್ಠಾನಕ್ಕೆ ಬಹುದೊಡ್ಡ ತೊಡಕುಗಳಾಗಿವೆ ಎಂದು ಹೇಳಬಹುದು. ಒಟ್ಟಾರೆಯಾಗಿ ಬಾಲ್ಯ ವಿವಾಹ ನಿಷೇಧ ಕಾನೂನಿ ಅನುಷ್ಠಾನ ಸರಿಯಾಗಿ ಅನುಷ್ಠಾನಗೊಳ್ಳಲು ವ್ಯವಸ್ಥೆಯಲ್ಲಿನ ಎಲ್ಲ ಜನರ ಸಹಕಾರ ಅಗತ್ಯವಾಗಿರುತ್ತದೆ. ಇಲ್ಲವಾದರೆ ಇವುಗಳು ಹೀಗೆಯೇ ಮುಂದುವರೆಯುವುದರ ಜೊತೆಗೆ ಹೆಣ್ಣುಮಕ್ಕಳ ಎಲ್ಲ ಬಗೆಯ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುತ್ತದೆ. ಬಹಳ ಮುಖ್ಯವಾಗಿ ಜಾತಿಗಳು ಬಲಿಷ್ಠಗೊಳ್ಳಲು ಸಹಕಾರಿಯಾಗುತ್ತವೆ. ಇದು ಹಾಗಾಗಬಾರದೆಂದರೆ ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸುವುದು ಅಗತ್ಯವಾಗಿದೆ.

ಉಲ್ಲೇಖಗಳು


೧. ನಾಗಭೂಷಣ ಡಿ.ಎಸ್, ೨೦೦೮, ಲೋಹಿಯಾ ಸಮಾಜವಾದ ದರ್ಶನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨. ಪ್ರೀತಿ ಶುಭಚಂದ್ರ, ೨೦೦೨, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕ.ವಿ.ವಿ ಹಂಪಿ.

೩. ಪ್ರಜಾವಾಣಿ, ದಿನಪತ್ರಿಕೆ, ೨೫ ಮೇ ೨೦೦೫.

೪. ಪ್ರಜಾವಾಣಿ, ದಿನಪತ್ರಿಕೆ, ಕರ್ನಾಟಕ ದರ್ಶನ, ೨೭ ಡಿಸೆಂಬರ್ ೨೦೧೬.

೫. ಬೈರಪ್ಪ ಕೆ, ೧೯೯೭, ಭಾರತೀಯ ಸಮಾಜ, ಕೇಂಬ್ರಿಡ್ಜ್ ಪಬ್ಲಿಕೇಷನ್ ಕಂಪನಿ, ಬೆಂಗಳೂರು.

೬. ಮೀರಾ ಎಲ್.ಜಿ, (ಅನು), ೧೯೯೭, ಮಾನುಷಿಯ ಮಾತು, ಅಕ್ಷರ ಚಿಂತನ ಪ್ರಕಾಶನ, ಸಾಗರ.

೭. ಶಿವರಾಜ್ ವಿ ಪಾಟೀಲ, ೨೦೧೧, ಕರ್ನಾಟಕ ರಾಜ್ಯದಲ್ಲಿನ ಬಾಲ್ಯವಿವಾಹ ತಡೆ ಬಗೆಗಿನ ವರದಿ, ಕರ್ನಾಟಕ ಸರ್ಕಾರ, ಬೆಂಗಳೂರು.

೮. ಶೇಷ ನವರತ್ನ, ೨೦೦೯, ಮನುಸ್ಮೃತಿ, ಸಮಾಜ ಪುಸ್ತಕಾಲಯ ಧಾರವಾಡ.

೯. ಶೈಲಜ ಹಿರೇಮಠ, ೨೦೦೩, ಸ್ತ್ರೀ ಕಥನ, ಭುವನ ಪ್ರಕಾಶನ, ಹೊಸಪೇಟೆ.

೧೦. ಶೈಲಜ ಹಿರೇಮಠ, ೨೦೧೬, ಕುಟುಂಬ, ಮಹಿಳೆ,ದೌರ್ಜನ್ಯ ಮತ್ತು ಕಾನೂನು ಪರ್ಯಾಯ ಸಾಧ್ಯತೆಗಳಿಗಿರುವ ತೊಡಕುಗಳು, ಸಂವಾದ, ಎಸ್.ಆರ್.ಗೋವಿಂದು, ಸ್ಫೂರ್ತಿಧಾಮ, ಬೆಂಗಳೂರು.

೧೧. ಸಬಿಹಾ ಭೂಮೀಗೌಡ, ೨೦೧೪, ಮಹಿಳೆ–ಇಂದಿನ ಸವಾಲುಗಳು, ಲಡಾಯಿ ಪ್ರಕಾಶನ, ಗದಗ.

೧೨. ಸಿದ್ಧನಗೌಡ ಪಾಟೀಲ (ಸಂ), ಅಕ್ಟೋಬರ್ ೨೦೧೪, ಹೊಸತು, ಸಂಪುಟ–೧೬, ಸಂಚಿಕೆ– ೩, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೧೩. ಸುಮಿತ್ರಾಬಾಯಿ ಬಿ.ಎನ್ ಮತ್ತು ತೇಜಸ್ವಿ ನಿರಂಜನ, ಸ್ತ್ರೀವಾದಿ ಪ್ರವೇಶಿಕೆ, ಕರ್ನಾಟಕ ಲೇಖಕಿಯರ ಸಂಘ, ಮೈಸೂರು.

೧೪. ಹಾಲತಿ ಸೋಮಶೇಖರ್, ೨೦೦೭, ಮಹಿಳಾ ಚಳವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ; ವಿಸ್ಮಯ ಪ್ರಕಾಶನ, ಮೈಸೂರು.

# ಅಧ್ಯಾಯ ಹತ್ತು

# ಬಾಲ್ಯ ವಿವಾಹ ಪದ್ಧತಿ : ಸಮಸ್ಯೆಯ ಸಂಕೀರ್ಣತೆಗಳು ಮತ್ತು ಪರ್ಯಾಯದ ಶೋಧಗಳು

ಸ್ತ್ರೀವಾದಿ ಚಿಂತನೆಯ ಮೂಲಕ ಸಂಶೋಧನೆಯನ್ನು ಅಳವಡಿಸಿಕೊಂಡು ಬಾಲ್ಯ ವಿವಾಹ ಪದ್ಧತಿಯಲ್ಲಿನ ಹಿಂಸೆಗಳನ್ನು, ಪುರುಷಶಾಹಿ ಹೊಂದಿರುವ ರಾಜಕಾರಣಗಳನ್ನು ಮತ್ತು ಮಕ್ಕಳ ಹಕ್ಕುಗಳು ಬಾಲ್ಯ ವಿವಾಹಗಳಿಂದ ಹೇಗೆ ಮೊಟಕುಗೊಳ್ಳುತ್ತಿವೆ ಎಂಬುದನ್ನು ಗ್ರಹಿಸುವ, ಅರಿಯುವ ಅಗತ್ಯತೆಯ ಹಿನ್ನೆಲೆಯಲ್ಲಿ ಅಧ್ಯಯನವನ್ನು ಕೈಗೊಳ್ಳಲಾಗಿತ್ತು. ಲಿಂಗ ಅಸಮಾನತೆಯ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರ ಮೇಲಿನ ಹಿಂಸೆಗಳಿಗೆ ಪುರುಷ ವ್ಯವಸ್ಥೆಯೇ ಕಾರಣವಾಗಿದ್ದರಿಂದ ಬಾಲ್ಯ ವಿವಾಹ ಪದ್ಧತಿಯನ್ನು ಆಕರವಾಗಿಸಿಕೊಂಡು ಪುರುಷ ವ್ಯವಸ್ಥೆ ಮಹಿಳೆಯರ ಮೇಲೆ ನಡೆಸುತ್ತಿರುವ ಹಿಂಸೆಯನ್ನು ಮತ್ತು ನಾಜೂಕಾಗಿ ಕಿತ್ತುಕೊಳ್ಳುತ್ತಿರುವ ಅವರ ಹಕ್ಕುಗಳನ್ನು ಅರ್ಥೈಸಿಕೊಳ್ಳುವ ಯತ್ನವನ್ನು ಮಾಡಲಾಗಿದೆ. ಸಮಾಜದ ಒಂದು ಭಾಗವಾಗಿರುವ ವಿವಾಹ ಪದ್ಧತಿಯು ಲಿಂಗ ಅಸಮಾನತೆಗಳಿಂದ ಹೊರತಾಗಿಲ್ಲ ಎಂಬುದಕ್ಕೆ ಬಾಲ್ಯ ವಿವಾಹಗಳೇ ಕಾರಣವಾಗಿವೆ. ಮಹಿಳೆಯರು ಎದುರಿಸುತ್ತಿರುವ ಅಧೀನ ನೆಲೆಯ ಸಮಸ್ಯೆಗೆ ಪ್ರಮುಖವಾಗಿ ಸಾಂಪ್ರದಾಯಿಕ ಸಮಾಜವು ಹೆಣ್ಣನ್ನು ಗ್ರಹಿಸಿರುವ ಮತ್ತು ನಡೆಸಿಕೊಳ್ಳುವ ವಿಧಾನದಲ್ಲಿರುವ ತರತಮ ಭಾವವೇ ಕಾರಣ. ಕುಟುಂಬವು ಮಹಿಳೆಯರನ್ನು ಸಂಪನ್ಮೂಲಗಳಿಂದ ದೂರವಿರಿಸುವ ಮೂಲಕ ಜೀವನ ಪರ್ಯಂತ ಭಾವನಾತ್ಮಕತೆಯ, ಕರುಣೆಯ ಪರಿಧಿಯೊಳಗೆ ಬದುಕಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸುತ್ತದೆ. ಮಹಿಳೆಯರ ಶ್ರಮ, ದುಡಿಮೆಗಳು ಅವಳ ಸೇವೆ, ಕರ್ತವ್ಯಗಳೆಂದು ಪ್ರತಿಪಾದಿಸಲ್ಪಟ್ಟು, ಬೆಲೆಯಿಲ್ಲದ ಅಂದರೆ ಆರ್ಥಿಕ ಮೌಲ್ಯವಿಲ್ಲದ ದುಡಿಮೆಯನ್ನಾಗಿಸಿದೆ. ಮಹಿಳೆಯೇ ವ್ಯವಹಾರದ ಸರಕಾಗಿದ್ದಾಳೆ. ಗುಲಾಮಗಿರಿಯ ಪ್ರತಿಫಲವಾಗಿ ದೌರ್ಜನ್ಯಕ್ಕೆ ಒಳಗಾಗುತ್ತಿದ್ದಾಳೆ. ಹೀಗೆ ಹೆಣ್ಣಿನ

ಅಧೀನತೆಗೆ ಪಿತೃಪ್ರಧಾನ ಮೌಲ್ಯಗಳ ಸ್ಥಾಪಿತ ಗ್ರಹಿಕೆಗಳು ಕಾರಣವಾಗುತ್ತವೆ. ಉತ್ತರ ಕರ್ನಾಟಕ ಪ್ರದೇಶವು ಅಭಿವೃದ್ಧಿಯಿಂದ ಹಿಂದುಳಿದ ಪ್ರದೇಶವಾಗಿದ್ದು, ಇಲ್ಲಿನ ಜನರ ಜೀವನ ಮಟ್ಟ ತುಂಬಾ ಚಿಂತಾಜನಕವಾಗಿದೆ. ಇನ್ನು ಮಹಿಳೆಯರ ಸ್ಥಿತಿಗತಿಗಳೂ ಅದೇ ರೀತಿಯಲ್ಲಿರುವುದನ್ನು ಕಾಣಬಹುದಾಗಿದೆ. ಅಂದರೆ ಪ್ರತಿಯೊಂದು ಗ್ರಾಮಗಳಲ್ಲಿನ ಸ್ಥಳೀಯ ಪಿತೃಪ್ರಧಾನ ಮೌಲ್ಯಗಳು ಮಹಿಳೆಯರನ್ನು ಹಿಂಸಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿವೆ. ಹಾಗಾಗಿ ಮಹಿಳೆಯರ ಆರ್ಥಿಕ ಸ್ಥಿತಿಗತಿಗಳು ಸುಧಾರಿಸಿಲ್ಲ ಎಂದೇ ಹೇಳಬಹುದು. ಹೀಗೆ ಮಹಿಳೆಯ ಅಧೀನ ನೆಲೆಗೆ ಅವಳ ಆರ್ಥಿಕ ಅಭದ್ರತೆಯೇ ಪ್ರಮುಖ ಕಾರಣ. ಈ ರೀತಿಯ ಅಭದ್ರತೆಯು ಸೃಷ್ಟಿಗೊಳ್ಳುವುದು ಕುಟುಂಬ ಮೂಲದಿಂದಲೇ ಎಂಬುದು ಗಮನಾರ್ಹ ಸಂಗತಿ. ಹೆಣ್ಣು ಮಕ್ಕಳು ಹುಟ್ಟಿದ ಮನೆಯಲ್ಲಿ ಮತ್ತು ವಿವಾಹದ ನಂತರ ಗಂಡನ ಮನೆಯಲ್ಲಿ ಪುರುಷರಷ್ಟೇ ಸಮಾನ ಹಕ್ಕುಳ್ಳವರು ಎಂಬ ಮನೋಭಾವ ಪಿತೃಪ್ರಧಾನ ವ್ಯವಸ್ಥೆಗೆ ಇನ್ನು ಒಡಮೂಡಿಲ್ಲ. ಹಾಗಾಗಿ ಲಿಂಗ ಸಮಾನತೆಯೆಂಬುದು ಅಗೋಚರವಾಗಿದೆ. ಮುಖ್ಯವಾಗಿ ಮಕ್ಕಳ ಹಕ್ಕುಗಳಿಗಂತೂ ಬೆಲೆಯೇ ಇಲ್ಲವಾಗಿದೆ. ಈ ಭಾಗದಲ್ಲಿನ ಜನರು ಮೂಢನಂಬಿಕೆಗಳಿಗೆ ಒಳಗಾಗುತ್ತಿರುವುದರಿಂದ ಇವುಗಳಿಗೆ ಹೆಣ್ಣುಮಕ್ಕಳೇ ಬಲಿಯಾಗುತ್ತಿದ್ದಾರೆ. ಇಲ್ಲಿನ ಜನರ ಬಡತನ, ಅನಕ್ಷರತೆ, ಮೂಢನಂಬಿಕೆಗಳು ಮತ್ತು ಮಹಿಳೆಯರ ಬಗೆಗಿನ ಕೀಳುಭಾವನೆ ಇವುಗಳೆಲ್ಲವೂ ಮಹಿಳೆಯರ ಮೇಲಿನ ಹಿಂಸೆಗಳನ್ನು ಹೆಚ್ಚಿಸುತ್ತಿವೆ. ಬಾಲ್ಯ ವಿವಾಹ ಪದ್ಧತಿಯು ಈ ಭಾಗಗಳಲ್ಲಿಯೇ ಹೆಚ್ಚಾಗಿ ನಡೆಯುತ್ತಿರುವುದಕ್ಕೆ ಇರುವ ಹಲವಾರು ಕಾರಣಗಳನ್ನು ಈಗಾಗಲೇ ಗುರುತಿಸಲಾಗಿದೆ. ಇವುಗಳ ಮೂಲಕ ಮಕ್ಕಳ ಹಕ್ಕುಗಳನ್ನು ಸುಲಭವಾಗಿ ಮೊಟಕುಗೊಳಿಸುತ್ತಿದ್ದಾರೆ. ಜನರಲ್ಲಿನ ಅನಕ್ಷರತೆ ಸಂವಿಧಾನದ ಯಾವುದೇ ಕಾನೂನುಗಳ ಅರಿವನ್ನು ಪಡೆಯುವಲ್ಲಿ ಸಾಧ್ಯವಾಗುತ್ತಿಲ್ಲ. ಹಾಗಾಗಿ ಮಕ್ಕಳ ಹಕ್ಕುಗಳನ್ನು ರಕ್ಷಿಸುವ ಮತ್ತು ಹೆಣ್ಣುಮಕ್ಕಳ ಶ್ರೇಯೋಭಿವೃದ್ಧಿಗಾಗಿ ಜಾರಿಯಾದ ಬಾಲ್ಯ ವಿವಾಹ ನಿಷೇಧ ಕಾನೂನು ಜನರಿಗೆ ತಿಳಿದುಬರದೇ ಇರುವುದು ಕಂಡುಬರುತ್ತಿದೆ. ಈ ಭಾಗಗಳಲ್ಲಿ ಇಂದಿಗೂ ಬಾಲ್ಯ ವಿವಾಹಗಳು ನಡೆಯುತ್ತಿವೆ. ಈ ನಿಟ್ಟಿನಲ್ಲಿ ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಹಲವು ಬಗೆಯ ಪ್ರಕರಣಗಳು ಅಧ್ಯಯನಕ್ಕೆ ಪೂರಕವಾದವು. ಅವುಗಳನ್ನು ಲಿಂಗಸಮಾನತೆಯ ಆಶಯದಿಂದ ವಿಶ್ಲೇಷಿಸಲಾಗಿದೆ. ಆಗ ಕಂಡುಬಂದಂತಹ ಅಂಶವೇನೆಂದರೆ ಬಾಲ್ಯ ವಿವಾಹ ನಿಷೇಧ ಕಾನೂನಿನ ಅರಿವನ್ನು ಪಡೆಯುವಲ್ಲಿ ಮಹಿಳೆಯರಿಗೆ ಹಲವಾರು ತೊಂದರೆಗಳು ಉಂಟಾಗುತ್ತಿವೆ. ಮಹಿಳೆಯರಿಗೆ ಯಾವುದೇ ವಾಕ್ ಸ್ವಾತಂತ್ರ್ಯವನ್ನು ಕೊಡದೇ ಇರುವುದರಿಂದ ಮಹಿಳೆಯರು ಈ ಪದ್ಧತಿಗಳಿಗೆ ಒಳಗಾಗುತ್ತಿದ್ದಾರೆ. ಈ ಬಗೆಯ ಎಲ್ಲ ಅಂಶಗಳನ್ನು ಪ್ರಬಂಧದಲ್ಲಿ ವಿವರಿಸಲಾಗಿದೆ. ಮುಖ್ಯವಾಗಿ ಅಧ್ಯಯನದಿಂದ ಕಂಡುಬಂದ ಒಟ್ಟಾರೆ ಫಲಿತಗಳನ್ನು ಮುಂದಿನಂತೆ ವಿವರಿಸಲಾಗಿದೆ.

**ಅಧ್ಯಯನದ ಫಲಿತಗಳು**

ಅಧ್ಯಯನದ ಫಲಿತಗಳನ್ನು ಎರಡು ನೆಲೆಯಲ್ಲಿ ಗುರುತಿಸಲಾಗಿದೆ. ಮೊದಲನೆಯದಾಗಿ ಸ್ಥಳೀಯ ಪಿತೃಪ್ರಧಾನ ಮೌಲ್ಯಗಳು ಕಾಯಿದೆಯ ಬಳಕೆಯ ಸಂದರ್ಭದಲ್ಲಿ ಲಿಂಗ ಅಸಮಾನ ಅಂಶಗಳನ್ನು ಸ್ಥಿರೀಕರಿಸಲು ಯಾವ ರೀತಿಯ ಮೌಲ್ಯಗಳನ್ನು ಹುಟ್ಟುಹಾಕಿವೆ ಮತ್ತು ಆ ಮೂಲಕ ಮಹಿಳೆಯರ ಹಕ್ಕುಗಳನ್ನು ಹರಣ ಮಾಡುವಲ್ಲಿ ಯಶಸ್ವಿಯಾಗಿವೆ ಎಂದು ತಿಳಿಯ ಪಡಿಸಬಹುದಾದ ಸಂಗತಿಗಳು ಮತ್ತು ಎರಡನೆಯದಾಗಿ ಬಾಲ್ಯ ವಿವಾಹ ಪದ್ಧತಿ ನಿಷೇಧ ಕಾಯಿದೆ ಸ್ತ್ರೀಪುರುಷರ ನಡುವೆ ಸಮಾನತೆಯನ್ನು ಸಾಧಿಸಲು ಸಹಾಯಕವಾಗುವ ನೆಲೆಯಲ್ಲಿ ರೂಪುಗೊಂಡಿರುವ ಬಗೆ ಮತ್ತು ಆ ಮೂಲಕ ಮಕ್ಕಳ ಮತ್ತು ಮಹಿಳೆಯರ ಹಕ್ಕುಗಳ ಭದ್ರತೆಗೆ ಹೇಗೆ ಸಹಕಾರಿಯಾಗಿದೆ ಎಂಬುದನ್ನು ಕ್ಷೇತ್ರಕಾರ್ಯದ ಮಾಹಿತಿಯನ್ನಾಧರಿಸಿ ಫಲಿತಗಳನ್ನು ಗುರುತಿಸಲಾಗಿದೆ.

ವಸಾಹತುಪೂರ್ವ ಕಾಲಘಟ್ಟದಿಂದ ಹಿಡಿದು ಇಂದಿನ ಆಧುನಿಕೋತ್ತರ ಸಂದರ್ಭದವರೆಗೂ ಬಾಲ್ಯ ವಿವಾಹ ನಿಷೇಧ ಕಾನೂನಿನಲ್ಲಿ ಹಲವಾರು ತಿದ್ದುಪಡಿಗಳಾಗುತ್ತಲೇ ಬಂದಿವೆ. ಇತ್ತೀಚಿನ ಗಮನಾರ್ಹ ಬದಲಾವಣೆಯೆಂದರೆ ಬಾಲ್ಯ ವಿವಾಹವಾಗಿ ಎರಡು ವರ್ಷದವರೆಗೂ ಕೇಸನ್ನು ದಾಖಲಿಸಬಹುದಾಗಿದೆ. ಇದೊಂದು ಮಹತ್ವಪೂರ್ಣ ಬದಲಾವಣೆಯಾಗಿದೆ.

ಸಮಾಜದಲ್ಲಿ ಪುರುಷನೇ ಅಧಿಕಾರದ ಸ್ಥಾನದಲ್ಲಿ ಇರುವವನಾಗಿದ್ದು, ಮಹಿಳೆಯರು ಪುರುಷನ ಅಡಿಯಾಳಾಗಿಯೇ ಜೀವಿಸಬೇಕಾದ ಅನಿವಾರ್ಯತೆಯನ್ನು ಸಮಾಜ ಎತ್ತಿಹಿಡಿಯುತ್ತದೆ. ಮುಖ್ಯವಾಗಿ ವಿವಾಹವೆಂಬುದೇ ಮಹಿಳೆಯರಿಗೆ ಸಮಸ್ಯಾತ್ಮಕವಾಗಿರುವ ಸಂದರ್ಭದಲ್ಲಿ ಬಾಲ್ಯ ವಿವಾಹಗಳು ಮಹಿಳೆಯರಿಗೆ ಬಹು ಬೇಗನೇ ದಾಸ್ಯದ ಸ್ಥಿತಿಯನ್ನು ಒದಗಿಸಿಕೊಡುತ್ತಿವೆ.

ಬಾಲ್ಯ ವಿವಾಹ ಎಂಬುದು ಜಾಗತಿಕ ಸಮಸ್ಯೆಯಾಗಿದ್ದು, ಇದು ಮಾನವ ಹಕ್ಕುಗಳ ವ್ಯಾಪ್ತಿಯಲ್ಲಿ ಕಂಡುಬರುವ ಮಕ್ಕಳ ಹಕ್ಕುಗಳನ್ನು ಸಂಪೂರ್ಣವಾಗಿ ಉಲ್ಲಂಘಿಸುತ್ತದೆ. ಮುಖ್ಯವಾಗಿ ಮಕ್ಕಳ ಹಕ್ಕುಗಳ ಕುರಿತ ಒಡಂಬಡಿಕೆಯಲ್ಲಿನ ಕಲಮು ೧ರಲ್ಲಿ ಸೂಚಿಸಿರುವ ಪ್ರಕಾರ ಮಗು ಎಂದರೆ ೧೮ ವರ್ಷಗಳಿಗಿಂತ ಕಡಿಮೆ ಇರುವ ಪ್ರತಿಯೊಬ್ಬ ಮಾನವ ಜೀವಿ ಎಂದು ಗುರುತಿಸಿದೆ. ಈ ವಯಸ್ಸಿಗಿಂತ ಮೊದಲು ವಿವಾಹವಾಗುವುದು ಶಿಕ್ಷಾರ್ಹ ಅಪರಾಧ ಎಂದು ತಿಳಿಸಿದೆ. ಆದರೆ ಬಾಲ್ಯ ವಿವಾಹಗಳು ಮಕ್ಕಳ ಹಕ್ಕುಗಳ ಮೊದಲ ಕಲಮನ್ನೇ ಉಲ್ಲಂಘಿಸುತ್ತಿವೆ. ಇದರ ಜೊತೆಗೆ ಮಗುವಿನ ಅಭಿವ್ಯಕ್ತಿ ಸ್ವಾತಂತ್ರ್ಯ, ಜೀವಿಸುವ ಹಕ್ಕು, ರಕ್ಷಣೆಯ ಹಕ್ಕುಗಳು ಸಂಪೂರ್ಣವಾಗಿ ಹರಣಗೊಂಡಿವೆ.

ಬಾಲ್ಯದಲ್ಲಿಯೇ ವಿವಾಹ ಬಂಧನಕ್ಕೆ ಸಿಲುಕಿಕೊಳ್ಳುವ ಮಕ್ಕಳಲ್ಲಿ ಹೆಣ್ಣುಮಕ್ಕಳೇ ಅಧಿಕ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ. ಹೆಣ್ಣುಮಗು ವಿವಾಹದ ಮೂಲಕ ತಾನು ಹುಟ್ಟಿದ

ಕುಟುಂಬದಿಂದ ಇನ್ನೊಂದು ಕುಟುಂಬಕ್ಕೆ ವಲಸೆ ಹೋಗುತ್ತಾಳೆ. ಇದರಿಂದ ಗಂಡನ ಮನೆಯವರಿಗೆ ಉಚಿತ ಕೆಲಸದ ಆಳಾಗಿ ಮಾರ್ಪಡುತ್ತಿದ್ದಾಳೆ. ಹಾಗಾಗಿಯೇ ಗಂಡನ ಮನೆಯ ಕೆಲಸದ ಒತ್ತಡಗಳನ್ನು ಭರಿಸಲಾರದೇ ಬಹಳಷ್ಟು ಹೆಣ್ಣುಮಕ್ಕಳು ಆ ಮನೆಯಿಂದ ಹೊರಬಂದು ತವರು ಮನೆಯನ್ನು ಸೇರಿಕೊಂಡಿದ್ದಾರೆ. ಈ ಬಗೆಯ ಕೌಟುಂಬಿಕ ಒತ್ತಡಗಳ ಕಾರಣವಾಗಿ ಮಾನಸಿಕ ಖಿನ್ನತೆಗೆ ಒಳಗಾಗಿದ್ದಾರೆ. ಇದರಿಂದಾಗಿ ಹೆಣ್ಣುಮಕ್ಕಳು ಮಾನಸಿಕ ಮತ್ತು ದೈಹಿಕವಾಗಿ ಹಲವಾರು ದುಷ್ಪರಿಣಾಮಗಳನ್ನು ಎದುರಿಸುತ್ತಿದ್ದಾರೆ. ಮುಖ್ಯವಾಗಿ ಅಪೌಷ್ಟಿಕತೆಯ ಸಮಸ್ಯೆ, ಶಿಶು ಮರಣ, ತಾಯಿ ಮರಣಗಳ ಸಂಖ್ಯೆ ಅಧಿಕವಾಗುತ್ತಿರುವುದು, ಕೌಟುಂಬಿಕ ಹಿಂಸೆಗೆ ಒಳಗಾಗುವುದು ಇವುಗಳ ಜೊತೆಗೆ ಇನ್ನು ಗಂಭೀರ ಸಮಸ್ಯೆಗಳಾದ ವೈಧವ್ಯ, ಅಕಾಲಿಕ ಮರಣಕ್ಕೆ ತುತ್ತಾಗುತ್ತಿದ್ದಾರೆ.

ಹೆಣ್ಣುಮಕ್ಕಳಿಗೆ ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡುತ್ತಿರುವುದರಿಂದ ಅವರು ಲೈಂಗಿಕ ಹಿಂಸೆಗೆ ಒಳಗಾಗುತ್ತಿದ್ದಾರೆ. ಕೆಲವು ಮಹಿಳೆಯರು ಈ ಲೈಂಗಿಕ ಹಿಂಸೆಯನ್ನು ತಾಳಲಾರದೇ ಗಂಡನ ಮನೆಯಿಂದ ಹೊರಬಂದು ತವರು ಮನೆಯನ್ನು ಸೇರಿಕೊಂಡಿದ್ದಾರೆ. ತವರು ಮನೆಯಲ್ಲಿ ಬದುಕಿನ ಅನಿವಾರ್ಯತೆಗಾಗಿ ಅಂದರೆ ತವರು ಮನೆಯಲ್ಲಿನ ಬಡತನವನ್ನು ನಿವಾರಿಸಿಕೊಳ್ಳುವ ಸಲುವಾಗಿ ವೇಶ್ಯಾವಾಟಿಕೆಗೆ ಒಳಗಾಗಿದ್ದಾರೆ. ಇದನ್ನು ವ್ಯವಸ್ಥೆ ತುಂಬಾ ಸಂತೋಷದಿಂದಲೇ ಸ್ವಾಗತಿಸುತ್ತದೆ. ಅಂದರೆ ಹೀಗೆ ವೇಶ್ಯಾವಾಟಿಕೆಗೆ ತೊಡಗಿಕೊಂಡಿರುವ ಹೆಣ್ಣುಮಕ್ಕಳನ್ನು ಲೈಂಗಿಕತೆಯ ನೆಲೆಯಲ್ಲಿಯೇ ಕಾಣುತ್ತದೆ. ಅಂದರೆ ಮಹಿಳೆಯರು ಇರುವುದೇ ಪುರುಷನ ಲೈಂಗಿಕಾಸಕ್ತಿಯನ್ನು ಈಡೇರಿಸಲೆಂದೇ ಎಂಬ ಮನೋಭಾವದಿಂದಾಗಿ ಹೆಣ್ಣುಮಕ್ಕಳನ್ನು ವೇಶ್ಯಾವಾಟಿಕೆಗೆ ತಳ್ಳುವಂತಹ ಮನಸ್ಥಿತಿಯನ್ನು ಪುರುಷ ವ್ಯವಸ್ಥೆ ಹೊಂದಿದೆ. ಇದಕ್ಕೆ ಅಪ್ರಾಪ್ತ ವಯಸ್ಸಿನಲ್ಲಿ ವಿವಾಹವಾಗುವ ಹೆಣ್ಣುಮಕ್ಕಳೇ ಅಧಿಕ ಸಂಖ್ಯೆಯಲ್ಲಿ ಬಲಿಯಾಗುತ್ತಿದ್ದಾರೆ.

ಅಧ್ಯಯನ ಕ್ಷೇತ್ರದ ವ್ಯಾಪ್ತಿ ಪ್ರದೇಶದಲ್ಲಿನ ಜನರು ವ್ಯವಸಾಯವನ್ನೇ ಆಧರಿಸಿಕೊಂಡಿದ್ದಾರೆ. ಹಾಗೆಯೇ ಇಲ್ಲಿರುವ ವ್ಯವಸಾಯ ಭೂಮಿಗಳು ಮಳೆಯನ್ನೇ ಆಧರಿಸಿರುವುದರಿಂದ ಇಲ್ಲಿನ ಜನರಿಗೆ ಕೆಲಸಗಳ ಅಭಾವವಿರುವುದು ಕಂಡುಬರುತ್ತದೆ. ಹಾಗಾಗಿ ಇಲ್ಲಿ ಬಡತನ ಹೆಚ್ಚಾಗಿದೆ. ಬಡತನವನ್ನು ನಿವಾರಿಸಲೆಂದು ರೂಪುಗೊಂಡಿರುವ ಕೇಂದ್ರ ಮತ್ತು ರಾಜ್ಯ ಸರ್ಕಾರದ ಯೋಜನೆಗಳು ಈ ಪ್ರದೇಶಗಳಲ್ಲಿ ಸರಿಯಾಗಿ ಅನುಷ್ಠಾನಗೊಂಡಿಲ್ಲ. ಹಾಗಾಗಿ ಜನರು ಕೂಲಿಯನ್ನರಸಿ ವಲಸೆ ಹೋಗುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸುವ ಬದಲಾಗಿ ಅವರನ್ನು ಕುಟುಂಬಕ್ಕೆ ಹೊರೆಯೆಂದು ಭಾವಿಸುತ್ತಾರೆ. ಹಾಗೆಯೇ ಹೆಣ್ಣುಮಕ್ಕಳ ರಕ್ಷಣೆಯ ಕಾರಣವನ್ನೊಡ್ಡಿ ತಮ್ಮ ಮನೆಯ ಹೆಣ್ಣುಮಕ್ಕಳಿಗೆ ಬಹು ಬೇಗನೇ ವಿವಾಹ ಮಾಡಲು ಮುಂದಾಗುತ್ತಿರುವುದು

ಕಂಡುಬರುತ್ತಿದೆ. ಅಂದರೆ ಸರ್ಕಾರದ ಯೋಜನೆಗಳು ಸರಿಯಾಗಿ ಅನುಷ್ಠಾನಗೊಳ್ಳದಿರುವುದೂ ಸಹ ಪ್ರಮುಖ ಕಾರಣವಾಗಿ ರೂಪುಗೊಂಡಿದೆ.

ಗ್ರಾಮೀಣ ಭಾಗಗಳಲ್ಲಿನ ಬಾಲ್ಯ ವಿವಾಹಗಳನ್ನು ಸಮಾಜದಿಂದ ತೊಡೆದು ಹಾಕಲು ಪ್ರತೀ ಗ್ರಾಮ ಪಂಚಾಯತಿ ಮಟ್ಟದಲ್ಲೂ ಬಾಲ್ಯ ವಿವಾಹ ನಿಷೇಧ ಸಮಿತಿಗಳಿವೆ. ಪಂಚಾಯತಿ ಅಭಿವೃದ್ಧಿ ಅಧಿಕಾರಿ, ಗ್ರಾಮ ಲೆಕ್ಕಿಗ, ಶಾಲಾ ಮುಖ್ಯಶಿಕ್ಷಕರು, ಎಸ್.ಡಿ.ಎಮ್.ಸಿ. ಸದಸ್ಯರು, ಸ್ಥಳೀಯ ಸ್ವಯಂಸೇವಾ ಸಂಸ್ಥೆಯ ಪ್ರತಿನಿಧಿಯೊಬ್ಬರು ನಿಷೇಧ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಾರೆ. ಗ್ರಾಮದಲ್ಲಿ ನಡೆಯುವ ಬಾಲ್ಯ ವಿವಾಹದ ಬಗೆಗೆ ಎಲ್ಲರಿಗೂ ಮಾಹಿತಿ ಇರುತ್ತದೆ. ಜೊತೆಗೆ ಅಂಗನವಾಡಿ ಕಾರ್ಯಕರ್ತೆಯರ ಬಳಿ ಮಕ್ಕಳ ವಯಸ್ಸಿನ ಕುರಿತ ನಿಖರವಾದ ದಾಖಲೆ ಇರುತ್ತದೆ. ಆದರೆ ಸ್ಥಳೀಯ ಪಿತೃಪ್ರಧಾನ ಮೌಲ್ಯಗಳ ಕಾರಣವಾಗಿ ಇವರುಗಳಾರೂ ಬಾಲ್ಯ ವಿವಾಹಗಳ ಬಗೆಗೆ ಮಾಹಿತಿಯನ್ನು ಹೊರಹಾಕುವುದಿಲ್ಲ. ಏಕೆಂದರೆ ಸ್ಥಳೀಯ ರಾಜಕೀಯ ವ್ಯವಸ್ಥೆಯ ಜೊತೆಗೆ ಜಾತಿಯ ಮೌಲ್ಯಗಳು ತುಂಬಾ ಬಲಿಷ್ಠವಾಗಿರುತ್ತದೆ. ಕಾರಣ ಇವುಗಳ ವಿರುದ್ಧ ಮಾತನಾಡಿದರೆ ಮಾನಸಿಕವಾಗಿ, ದೈಹಿಕವಾಗಿ ಹಲವು ತೊಂದರೆಗಳನ್ನು ಎದುರಿಸಬೇಕಾಗುತ್ತದೆ ಎಂಬ ಭಯ ಅವರಲ್ಲಿದೆ. ಇವುಗಳ ಮಧ್ಯೆಯೇ ವ್ಯಾಪ್ತಿ ಪ್ರದೇಶದ ಕೆಲವು ಗ್ರಾಮಗಳಲ್ಲಿ ಬಾಲ್ಯ ವಿವಾಹಗಳನ್ನು ತಡೆಯಲು ಅಂಗನವಾಡಿ ಕಾರ್ಯ ಕರ್ತೆಯರು, ಆಶಾ ಕಾರ್ಯಕರ್ತೆಯರು ಮುಂದಾಗಿರುವುದು ಆಶಾದಾಯಕ ಸಂಗತಿಯಾಗಿದೆ.

ಹೆಣ್ಣುಮಕ್ಕಳು ತಾವು ಹುಟ್ಟಿದ ಮನೆಯಲ್ಲಿ ಅನ್ಯಳಾಗಿಯೇ ಪರಿಗಣಿಸಲ್ಪಟ್ಟಿದ್ದಾರೆ. ಇದರಿಂದಾಗಿ ಅವರ ಹಕ್ಕುಗಳನ್ನು ಸುಲಭವಾಗಿ ಕಿತ್ತುಕೊಳ್ಳಲಾಗುತ್ತಿದೆ ಮತ್ತು ಆ ಮೂಲಕ ಬಹು ಬೇಗನೇ ವಿವಾಹ ಮಾಡಿ ಹೆಣ್ಣುಮಗುವಿನ ಮೇಲಿನ ಅಧಿಕಾರ ಚಲಾಯಿಸುವ ಹಕ್ಕನ್ನು ಇನ್ನೊಂದು ಮನೆಯ ಸದಸ್ಯರಿಗೆ ವರ್ಗಾಯಿಸಲಾಗುತ್ತಿದೆ. ಹಾಗೆಯೇ ರಕ್ತ ಸಂಬಂಧಗಳನ್ನು ಉಳಿಸಿಕೊಳ್ಳುವುದು, ಕುಟುಂಬದ ಹಿರಿಯರ ಆಸೆಯನ್ನು ಈಡೇರಿಸುವ ನೆಪದಲ್ಲಿ ಬಾಲ್ಯವಿವಾಹಗಳು ಹೆಚ್ಚಾಗುತ್ತಿವೆ. ಮುಖ್ಯವಾಗಿ ಈ ಬಗೆಯ ಕೌಟುಂಬಿಕ ಒತ್ತಡಗಳನ್ನು ಪುರುಷ ವ್ಯವಸ್ಥೆಯೇ ರೂಪಿಸಿರುವುದರಿಂದ ಅದರ ಎಲ್ಲ ಬಗೆಯ ಪರಿಣಾಮಗಳು ಹೆಣ್ಣುಮಕ್ಕಳ ಮೇಲಾಗುತ್ತಿದೆ.

ಸಮಾಜದಲ್ಲಿ ಕುಟುಂಬದ ಗೌರವವನ್ನು ಕಾಪಾಡುವುದು ಹೆಣ್ಣುಮಕ್ಕಳ ಜವಾಬ್ದಾರಿ ಎಂಬುದನ್ನು ಪುರುಷ ವ್ಯವಸ್ಥೆ ಮೌಲ್ಯಗಳನ್ನು ರೂಪಿಸಿಬಿಟ್ಟಿದೆ. ಸಮಾಜ ಯಾವಾಗಲೂ ಅಂತರ್ಜಾತೀಯ ವಿವಾಹವನ್ನು ನಿರಾಕರಿಸುತ್ತಲೇ ಬಂದಿದೆ. ಹಾಗಾಗಿ ಕುಟುಂಬದ ಅವಿವಾಹಿತ ಹೆಣ್ಣುಮಗು ಪ್ರೀತಿ ಪ್ರೇಮದಲ್ಲಿ ಸಿಲುಕಿ ಎಲ್ಲಿ ಕುಟುಂಬದ ಗೌರವಕ್ಕೆ ಮಸಿ ಬಳಿಯುತ್ತಾಳೋ ಎಂಬ ಭಯ ಪುರುಷ ಪ್ರಧಾನ ಮನಃಸ್ಥಿತಿಯದ್ದಾಗಿದೆ. ಇದರಿಂದಾಗಿ ಹೆಣ್ಣುಮಕ್ಕಳು ಬಹು ಬೇಗನೇ ವಿವಾಹಿತರಾಗಿ ಗಂಡನ ಮನೆಗೆ ಸೇರಿಕೊಂಡರೆ, ಅವಳ ಬಗೆಗಿನ ಆತಂಕಗಳು, ಭಯ ಮುಂತಾದವು ಕಡಿಮೆಯಾಗುತ್ತವೆ ಎಂಬ ಮನೋಭಾವ ಹಲವು ಕುಟುಂಬ ಸದಸ್ಯರುಗಳಲ್ಲಿ

ಇವೆ. ಹಾಗಾಗಿ ಹೆಣ್ಣುಮಕ್ಕಳಿಗೆ ಬಹು ಬೇಗನೇ ವಿವಾಹ ಮಾಡಲು ನಿರ್ಧರಿಸುತ್ತಿರುವುದು ಕಂಡುಬರುತ್ತದೆ.

ಸರ್ಕಾರಿ ಮತ್ತು ಸರ್ಕಾರೇತರ ಇಲಾಖೆಗಳು ಬಾಲ್ಯ ವಿವಾಹಗಳನ್ನು ತಡೆಯಲು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಲು ಶ್ರಮಿಸುತ್ತಿವೆ. ಮಕ್ಕಳ ಹಕ್ಕುಗಳ ಸಹಾಯವಾಣಿಯಾದ ೧೦೯೮ ಸರಿಯಾದ ಕ್ರಮದಲ್ಲಿ ಉಪಯೋಗವಾಗುತ್ತಿದೆ. ಹೆಣ್ಣುಮಕ್ಕಳು ಇದರ ಲಾಭವನ್ನು ಪಡೆದು ಬಾಲ್ಯ ವಿವಾಹದ ಕುಣಿಕೆಯಿಂದ ತಪ್ಪಿಸಿಕೊಂಡು ಶಿಕ್ಷಣವನ್ನು ಮುಂದುವರೆಸಿದ್ದಾರೆ.

ಬಾಲ್ಯ ವಿವಾಹ ನಿಷೇಧ ಕಾನೂನಿನ ಕಠಿಣ ನಿಯಮಗಳ ಕಾರಣದಿಂದಾಗಿ ಸಾಮೂಹಿಕ ವಿವಾಹಗಳಲ್ಲಿ ಬಾಲ್ಯ ವಿವಾಹಗಳ ಸಂಖ್ಯೆ ಕಡಿಮೆಯಾಗಿದೆ. ಮಠಗಳು ಸಾಮೂಹಿಕ ವಿವಾಹಗಳನ್ನು ಮಾಡುವುದರಲ್ಲಿ ಮುಂಚೂಣಿಯಲ್ಲಿರುತ್ತವೆ. ಇಂತಹ ಮಠಗಳು ಏರ್ಪಡಿಸುವ ಸಾಮೂಹಿಕ ವಿವಾಹಗಳಲ್ಲಿಯೂ ಬಾಲ್ಯ ವಿವಾಹಗಳು ನಡೆಯುತ್ತವೆ. ಆದರೆ ಕೊಪ್ಪಳದ ಗವಿಸಿದ್ದೇಶ್ವರ ಮಠವು ಇತರೆ ಧಾರ್ಮಿಕ ಮಠಗಳಿಗಿಂತ ಭಿನ್ನವಾಗಿ ಕಂಡುಬರುತ್ತದೆ. ಅಂದರೆ ರಾಜ್ಯದ ಇತರೆ ಎಲ್ಲ ಮಠಗಳಿಗೆ ಮಾದರಿಯೆಂಬಂತೆ ಬಾಲ್ಯ ವಿವಾಹದ ವಿರುದ್ಧ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಹಾಗೆಯೇ ಕೊಪ್ಪಳ ಜಿಲ್ಲೆಯಾದ್ಯಂತ ಜಾಗೃತಿ ಜಾಥಾಗಳನ್ನು ಕೈಗೊಂಡಿದೆ. ಪ್ರತೀ ವರ್ಷದಂತೆ ೨೦೧೬ರಲ್ಲಿ ಬಾಲ್ಯ ವಿವಾಹವನ್ನು ತೊಡೆದು ಹಾಕಬೇಕೆಂಬ ಸಂಕಲ್ಪವನ್ನು ಹೊಂದಿ ಜಾತ್ರಾಮಹೋತ್ಸವಕ್ಕೆ ಚಾಲನೆ ನೀಡಿತ್ತು. ಇದರಿಂದಾಗಿ ಕೊಪ್ಪಳ ಜಿಲ್ಲೆಯ ಜನರನ್ನು ಮಾತ್ರವಲ್ಲದೇ, ಕರ್ನಾಟಕದ ನಾನಾ ಜಿಲ್ಲೆಗಳ ಜನರೆಲ್ಲರಿಗೂ ಅರಿವು ನೀಡಿದಂತಾಗಿದೆ.

ಸಾಂಪ್ರದಾಯಿಕ ನಂಬಿಕೆಗಳು ಮಹಿಳೆಯರ ಬದುಕನ್ನು ಅಭದ್ರಗೊಳಿಸಿವೆ. ಅಂದರೆ ಜನರು ಮೂಢನಂಬಿಕೆಗಳ ಕೂಪಕ್ಕೆ ಸಿಲುಕಿ ಚಿಕ್ಕ ಚಿಕ್ಕ ಹೆಣ್ಣುಮಕ್ಕಳಿಗೆ ವಿವಾಹಗಳನ್ನು ಮಾಡುತ್ತಿದ್ದಾರೆ. ಮುಖ್ಯವಾಗಿ ಜಾತಕದ ಕಾರಣಗಳು ಮತ್ತು ಕುಟುಂಬದಲ್ಲಿ ಹಿರಿಯರೊಬ್ಬರು ಮರಣಿಸಿದ ಒಂದು ವರ್ಷದಲ್ಲಿ ವಿವಾಹ ಮಾಡಬೇಕು, ಕಡೇ ಹುಟ್ಟಿನ ಮಗನ ಮದುವೆಯನ್ನು ಕಡೆಯಲ್ಲಿ ಮಾಡಬಾರದು, ನಿರ್ದಿಷ್ಟ ವಯಸ್ಸಿನೊಳಗೇ ಹೆಣ್ಣುಮಕ್ಕಳಿಗೆ ವಿವಾಹ ಮಾಡಬೇಕು ಎಂಬ ನಂಬಿಕೆಗಳು ಹೆಣ್ಣುಮಕ್ಕಳ ಭವಿಷ್ಯವನ್ನು ಕಿತ್ತುಕೊಂಡಿವೆ. ಜೊತೆಗೆ ಬಾಲ್ಯ ವಿವಾಹ ನಿಷೇಧಕ್ಕೆ ಬಹುದೊಡ್ಡ ತೊಡಕಾಗಿ ಮಾರ್ಪಟ್ಟಿವೆ.

ಬಾಲ್ಯ ವಿವಾಹ ನಿಷೇಧ ಕಾನೂನು ಸಮಾಜದ ಎಲ್ಲ ಸಮುದಾಯಗಳಿಗೆ ಅಂದರೆ ಜಾತ್ಯಾತೀತವಾಗಿ ಎಲ್ಲರಿಗೂ ಅನ್ವಯಗೊಳ್ಳುವಂತೆ ರೂಪಿಸಲ್ಪಟ್ಟಿದೆ. ಆದರೆ ವ್ಯವಸ್ಥೆಯಲ್ಲಿ ಉನ್ನತ ಜಾತಿ ಅಥವಾ ಉನ್ನತ ವರ್ಗ ಎಂದು ಗುರುತಿಸಿಕೊಂಡಿರುವ ಬ್ರಾಹ್ಮಣ ಸಮುದಾಯದವರಲ್ಲಿ ಬಾಲ್ಯ ವಿವಾಹಗಳು ಕಂಡು ಬರುತ್ತಿಲ್ಲ. ಹಾಗಾಗಿ ಇವುಗಳು ಕಂಡು ಬರುತ್ತಿರುವ ಜಾತಿಗಳನ್ನು,

ಸಮುದಾಯಗಳನ್ನು ನಿರ್ಧಿಷ್ಟಗೊಳಿಸಿಕೊಂಡು ಬಾಲ್ಯ ವಿವಾಹ ನಿಷೇಧ ಕಾನೂನನ್ನು ಅವುಗಳಿಗೆ ನಿರ್ಧಿಷ್ಟವಾಗಿ ಈ ಸಮುದಾಯಗಳಿಗೇ ಹೆಚ್ಚಿನ ರೀತಿಯಲ್ಲಿ ಅನ್ವಯಿಸಬೇಕಿದೆ. ಇಂತಹ ಜಾತಿ, ಸಮುದಾಯಗಳಲ್ಲಿಯೇ ಇದರ ಕುರಿತ ಅರಿವನ್ನು ಮೂಡಿಸುವ ಕಾರ್ಯ ಮಾಡಬೇಕಿದೆ.

ಸಂವಿಧಾನ ಬದ್ಧವಾಗಿ ರೂಪಿಸಲ್ಪಟ್ಟಂತಹ ಹಲವು ಮಹಿಳಾ ಪರ ಕಾನೂನುಗಳಲ್ಲಿ ಹಲವು ವೈರುಧ್ಯಗಳು ಇರುವುದನ್ನು ಕಾಣಬಹುದು. ಅಂದರೆ ಸಂಪಿಧಾನದ ಐಪಿಸಿ ಸೆಕ್ಷನ್ ೩೭೫ರ ಪ್ರಕಾರ ೧೫ ವರ್ಷ ವಯಸ್ಸಿನ ಒಳಗೆ ಲೈಂಗಿಕ ಕ್ರಿಯೆಗೆ ಒಳಪಡಿಸಿದರೆ, ಅದು ಕಾನೂನಿನ ಪ್ರಕಾರ ಶಿಕ್ಷಾರ್ಹ ಅಪರಾಧವಾಗುತ್ತದೆ. ಇದರ ಪ್ರಕಾರ ಲೈಂಗಿಕ ಸಮ್ಮತಿಯ ವಯಸ್ಸನ್ನು ೧೫ ವರ್ಷ ಮೇಲ್ಪಟ್ಟು ಇರಬೇಕು ಎಂಬುದನ್ನು ಗುರುತಿಸುತ್ತದೆ. ಆದರೆ ಪೋಕ್ಸೋ ಮತ್ತು ಬಾಲ್ಯ ವಿವಾಹ ನಿಷೇಧ ಕಾನೂನು ೧೮ ವರ್ಷ ವಯಸ್ಸಿನ ಒಳಗಿನ ಲೈಂಗಿಕ ಕ್ರಿಯೆಯನ್ನು ನಿಷಿದ್ಧಗೊಳಿಸುತ್ತವೆ. ಇವುಗಳ ಪ್ರಕಾರ ೧೮ ವರ್ಷ ವಯಸ್ಸಿನ ಒಳಗಿನವರೆಲ್ಲರನ್ನೂ ಮಕ್ಕಳು ಎಂಬುದಾಗಿಯೇ ಗುರುತಿಸುತ್ತವೆ. ಹಾಗೆಯೇ ಇದಕ್ಕೆ ಮತ್ತೊಂದು ಕಾಯಿದೆಯ ಉದಾಹರಣೆಯನ್ನು ನೀಡುವುದಾದರೆ ಬಾಲ ಕಾರ್ಮಿಕ ನಿಷೇಧ ಕಾಯಿದೆ. ಈ ಕಾಯಿದೆಯ ಪ್ರಕಾರ ೧೪ ವರ್ಷದೊಳಗಿರುವವರೆಲ್ಲರನ್ನೂ ಮಕ್ಕಳು ಎಂದು ಗುರುತಿಸುತ್ತದೆ. ಈ ವಯಸ್ಸಿನ ಒಳಗಿನ ಮಕ್ಕಳು ಕೆಲಸದಲ್ಲಿ ತೊಡಗಿಕೊಂಡಿದ್ದರೆ, ಅವರನ್ನು ಬಾಲ ಕಾರ್ಮಿಕರು ಎಂದು ಪರಿಗಣಿಸುತ್ತದೆ. ಹೀಗೆ ಕಾನೂನುಗಳಲ್ಲಿ ತಿಳಿಸಿರುವಂತೆ ಮಗು ಅಥವಾ ಮಕ್ಕಳು ಎಂಬುದನ್ನು ನಿರ್ಧಿಷ್ಟ ವಯಸ್ಸಿಗೆ ಸೀಮಿತ ಮಾಡಿಲ್ಲ. ಒಂದೊಂದು ಕಾನೂನಿನಲ್ಲಿ ಮಕ್ಕಳು ಎಂಬುದರ ವಯಸ್ಸಿಗೆ ಸಂಬಂಧಿಸಿದಂತೆ ವೈರುಧ್ಯಗಳು ಇರುವುದನ್ನು ಕಾಣಬಹುದು. ಹಾಗಾಗಿಯೇ ಯಾವುದೇ ಕಾನೂನಿನಲ್ಲಾಗಲೀ ಬಾಲ್ಯ ಎಂಬುದಕ್ಕೆ ಒಂದು ನಿರ್ಧಿಷ್ಟ ವಯಸ್ಸನ್ನು ಗುರುತಿಸಬೇಕು. ಹೀಗೆ ಭಿನ್ನ-ಭಿನ್ನ ನಿರ್ವಚನಗಳು ಇರುವುದರಿಂದಲೇ ಬಾಲ್ಯ ವಿವಾಹ ನಿಷೇಧ ಕಾಯಿದೆಯಡಿಯಲ್ಲಿ ದಾಖಲಾದ ಅಪರಾಧಿಗಳು ಸುಲಭವಾಗಿ ತಪ್ಪಿಸಿಕೊಳ್ಳಲು ಮಾರ್ಗಗಳು ದೊರೆಯುತ್ತವೆ.

ಬಾಲ್ಯ ವಿವಾಹಗಳನ್ನು ಮಾಡುವುದರ ಹಿಂದೆ ಪುರುಷ ವ್ಯವಸ್ಥೆಯ ಬಹುದೊಡ್ಡ ರಾಜಕಾರಣ ಅಡಗಿದೆ. ಅಂದರೆ ಹೆಣ್ಣುಮಕ್ಕಳಿಗೆ ಬಹು ಬೇಗನೇ ವಿವಾಹ ಮಾಡುವುದರಿಂದ ಚಿಕ್ಕ ವಯಸ್ಸಿನ ಮಕ್ಕಳು ಮಾನಸಿಕವಾಗಿ ಚಂಚಲವಾಗಿರುವುದಿಲ್ಲ ಎಂಬ ಮತ್ತು ದೈಹಿಕವಾಗಿ ಶುದ್ಧಳಾಗಿರುತ್ತಾಳೆ ಎಂಬ ಪುರುಷ ಆಲೋಚನಾ ಕ್ರಮಗಳು ಬಾಲ್ಯ ವಿವಾಹ ನಿಷೇಧಕ್ಕೆ ಅಡ್ಡಿಯನ್ನುಂಟು ಮಾಡುತ್ತಿವೆ.

ಗ್ರಾಮೀಣ ಭಾಗಗಳಿಗೆ ಮೂಲಭೂತ ಸೌಲಭ್ಯಗಳು ಇಲ್ಲದೇ ಇರುವುದರಿಂದ ಅಂದರೆ ಸರಿಯಾದ ಶಾಲೆಗಳು ಇಲ್ಲದಿರುವುದು, ಇದ್ದರೂ ಶಾಲೆಗಳಿಗೆ ಸರಿಯಾದ ಮೂಲಭೂತ ಸೌಲಭ್ಯಗಳು (ಹೆಣ್ಣುಮಕ್ಕಳಿಗೆ ಪ್ರತ್ಯೇಕವಾದ ಶೌಚಾಲಯ ವ್ಯವಸ್ಥೆ, ಸರಿಯಾದ ಕಟ್ಟಡಗಳು, ನೀರಿನ ವ್ಯವಸ್ಥೆ ಮುಂತಾದವು) ಇಲ್ಲದೇ ಇರುವುದು, ಸಾರಿಗೆ ಸೌಲಭ್ಯಗಳು ಇಲ್ಲದೇ

ಇರುವುದರಿಂದ ಗ್ರಾಮೀಣ ಭಾಗದ ಜನರು ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ಕೊಡಿಸಲು ಮುಂದಾಗುತ್ತಿಲ್ಲ. ಇದರಿಂದಾಗಿ ಶಾಲೆಯನ್ನು ಅರ್ಧಕ್ಕೆ ನಿಲ್ಲಿಸಿ ಚಿಕ್ಕ ವಯಸ್ಸಿನಲ್ಲಿಯೇ ವಿವಾಹ ಬಂಧನಕ್ಕೆ ಒಳಗು ಮಾಡುತ್ತಿದ್ದಾರೆ.

ಜಾತಿ ವ್ಯವಸ್ಥೆಯನ್ನು ಸಮಾಜದಿಂದ ಕಿತ್ತೊಗೆದು ಜಾತ್ಯಾತೀತ ಸಮಾಜವನ್ನು ನಿರ್ಮಿಸಬೇಕೆಂಬ ಕನಸನ್ನು ಹೊಂದಿ ಇಂದು ಹಲವಾರು ಜಾತಿ ವಿರೋಧಿ ಹೋರಾಟಗಳು ನಡೆಯುತ್ತಿವೆ. ಆದರೆ ಬಾಲ್ಯ ವಿವಾಹಗಳಿಂದಾಗಿ ಸಮಾಜದಲ್ಲಿ ಜಾತಿ ವ್ಯವಸ್ಥೆಯು ಬಹು ಬೇಗನೇ ನೆಲೆಯೂರುತ್ತಿದೆ. ಅಂದರೆ ಕುಟುಂಬದಲ್ಲಿನ ಮಕ್ಕಳು ಪ್ರೀತಿ–ಪ್ರೇಮಕ್ಕೆ ಬಲಿಯಾಗಿ ಎಲ್ಲಿ ವಿಜಾತೀಯ ಮದುವೆಗಳಿಗೆ ಒಳಗಾಗಿ, ತಮ್ಮ ಜಾತಿಗಳಿಗೆ ಅಪಮಾನಗಳಾಗುತ್ತವೆ ಎಂಬ ಭಯದಿಂದ ತಮ್ಮ ಮಕ್ಕಳನ್ನು ತಮ್ಮ ಜಾತಿಗಳಲ್ಲಿಯೇ ವಿವಾಹ ಮಾಡುವುದರ ಮೂಲಕ ಜಾತಿ ಶುದ್ಧತೆಯನ್ನು ಕಾಪಾಡಿಕೊಳ್ಳುತ್ತಿದ್ದಾರೆ. ಇದು ಸಮಾಜಕ್ಕೆ ತುಂಬಾ ಅಪಾಯಕಾರಿಯಾದುದು. ಒಂದು ಕಡೆ ಜಾತಿ ವ್ಯವಸ್ಥೆಯನ್ನು ಸಮಾಜದಿಂದ ಕಿತ್ತೊಗೆಯುವ ಪ್ರಯತ್ನಗಳು ನಡೆಯುತ್ತಿದ್ದರೆ, ಇನ್ನೊಂದು ಕಡೆ ಬಾಲ್ಯ ವಿವಾಹಗಳ ಮೂಲಕ ಜಾತಿ ವ್ಯವಸ್ಥೆಯು ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ.

ಶಿಕ್ಷಣ ಮತ್ತು ವಿವಾಹಕ್ಕೆ ನೇರವಾದ ಸಂಬಂದವಿದ್ದು, ಶಿಕ್ಷಣ ವಂಚಿತರಾದ ಬಹಳಷ್ಟು ಹೆಣ್ಣುಮಕ್ಕಳು ಮತ್ತು ಗಂಡು ಮಕ್ಕಳು ಬಾಲ್ಯದಲ್ಲಿಯೇ ವಿವಾಹ ಬಂಧನಕ್ಕೆ ಸಿಲುಕಿರುವುದು ಕಂಡುಬರುತ್ತದೆ. ಹೀಗೆ ವಿವಾಹಕ್ಕೆ ಒಳಗಾದವರಲ್ಲಿ ಹೆಣ್ಣುಮಕ್ಕಳ ಸಂಖ್ಯೆಯೇ ಅಧಿಕವಾಗಿದೆ. ಈಗಾಗಲೇ ಬಾಲ್ಯ ವಿವಾಹಕ್ಕೆ ಒಳಗಾಗಿ ಗಂಡನ ಮನೆಯಲ್ಲಿ ಜೀವಿಸುತ್ತಿರುವ ಹೆಣ್ಣುಮಕ್ಕಳು ಗಂಡನ ಮನೆಯಲ್ಲಿನ ಹಿಂಸೆಯನ್ನು ತಾಳಲಾರದೇ ಅಲ್ಲಿಂದ ಹೊರಬಂದು ತವರು ಮನೆಯನ್ನು ಸೇರಿದ ಹೆಣ್ಣುಮಕ್ಕಳು ಬಹಳಷ್ಟು ಸಂಖ್ಯೆಯಲ್ಲಿದ್ದಾರೆ. ಇವರೆಲ್ಲರೂ ಆರ್ಥಿಕವಾಗಿ ಸಬಲಗೊಳ್ಳಲು ಕೌಶಲ್ಯಾಭಿವೃದ್ಧಿ ಕೆಲಸಗಳನ್ನು ಸೃಷ್ಟಿಸುವಂತಾಗಬೇಕು.

ಪ್ರತಿಯೊಂದು ಶಾಲೆಗಳಲ್ಲಿ ಎಸ್.ಡಿ.ಎಮ್.ಸಿ. ಸದಸ್ಯರನ್ನು ಆಯ್ಕೆ ಮಾಡಲಾಗಿರುತ್ತದೆ. ಇದೊಂದು ಸಾಂಸ್ಥಿಕ ರಚನೆಯಾಗಿದೆ. ಇದರ ಮೂಲಕ ಬಾಲ್ಯ ವಿವಾಹವನ್ನು ತಡೆಯಬಹುದು. ಅಂದರೆ ಈ ಸದಸ್ಯರು ಸ್ಥಳೀಯರಾಗಿದ್ದು, ಗ್ರಾಮದಲ್ಲಿ ಬಡ ಕುಟುಂಬಗಳಿಂದ ಹಿಡಿದು ಉತ್ತಮ ಆರ್ಥಿಕ ವ್ಯವಸ್ಥೆಯನ್ನು ಹೊಂದಿರುವ ಕುಟುಂಬದವರೆಗೆ ಎಲ್ಲರ ಪರಿಸ್ಥಿತಿಗಳನ್ನೂ ತಿಳಿದುಕೊಂಡಿರುತ್ತಾರೆ ಹಾಗಾಗಿ ಇವರಿಗೆ ಉತ್ತಮ ರೀತಿಯ ತರಬೇತಿಯನ್ನು ಕೊಡುವುದರ ಮೂಲಕ ಬಾಲ್ಯ ವಿವಾಹವನ್ನು ನಿರ್ಮೂಲನೆ ಮಾಡಬಹುದಾಗಿದೆ.

ಶಿಕ್ಷಣ ಇಲಾಖೆಯವರು ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ಇರುವ ಯೋಜನೆಗಳ ಕುರಿತಾಗಿ ಜನರಲ್ಲಿ ಅರಿವು ಮೂಡಿಸುವ ಕೆಲಸವನ್ನು ಮಾಡಬೇಕಾಗಿದೆ. ಹಾಗೆಯೇ ಸಮಾಜದ ಎಲ್ಲ

ಮಕ್ಕಳಿಗೂ ೧೨ನೆಯ ತರಗತಿಯವರೆಗೆ ಉಚಿತ ಶಿಕ್ಷಣವನ್ನು ಕೊಡುವಂತಾಗಬೇಕು. ಹೆಣ್ಣುಮಕ್ಕಳ ಶಿಕ್ಷಣವನ್ನು ಉತ್ತೇಜಿಸುವುದರಿಂದ ಬಾಲ್ಯ ವಿವಾಹಗಳ ಸಂಖ್ಯೆ ಕಡಿಮೆಯಾಗುತ್ತದೆ.

ಪಿತೃಪ್ರಧಾನ ವ್ಯವಸ್ಥೆ ತನ್ನ ಅನುಕೂಲಕ್ಕಾಗಿ ಹೆಣ್ಣುಮಕ್ಕಳನ್ನು ಬಾಲ್ಯ ವಿವಾಹ ಪದ್ಧತಿಗೆ ಬಲಿಯಾಗಿಸುತ್ತಿದೆ. ಇದರಲ್ಲಿ ಹೆಣ್ಣುಮಕ್ಕಳ ಪಾತ್ರವೇನೂ ಇಲ್ಲ. ಆದರೂ ವ್ಯವಸ್ಥೆಯಲ್ಲಿನ ಸಾಮಾಜಿಕ ಮೌಲ್ಯಗಳಿಗೆ ಒಳಗಾಗಿ ಹಿಂಸೆಯನ್ನು ಅನುಭವಿಸುತ್ತಿರುವವರು ಮಾತ್ರ ಏನೂ ಅರಿಯದ ಹೆಣ್ಣುಮಕ್ಕಳು. ಬಾಲ್ಯ ವಿವಾಹಗಳಿಂದ ಹೆಣ್ಣುಮಕ್ಕಳು ಮಾನಸಿಕವಾಗಿ, ದೈಹಿಕವಾಗಿ ಹಲವಾರು ಸಮಸ್ಯೆಗಳಿಗೆ ಗುರಿಯಾಗುತ್ತಿದ್ದಾರೆ. ಇದು ಪಿತೃಪ್ರಧಾನ ವ್ಯವಸ್ಥೆಯ ರೋಗಪೀಡಿತ/ಕ್ರೂರ ಮನಸ್ಥಿತಿಯನ್ನು ತೋರಿಸುತ್ತದೆ. ಹೆಣ್ಣುಮಕ್ಕಳಲ್ಲಿ ಆತ್ಮವಿಶ್ವಾಸ, ಆತ್ಮ ಗೌರವ ಮತ್ತು ಸ್ವತಂತ್ರ ಅಸ್ತಿತ್ವ ರೂಪುಗೊಳ್ಳಬೇಕಾದರೆ, ಸಂವಿಧಾನ ಬದ್ಧವಾದ ಕಾನೂನುಗಳ ಅರಿವನ್ನು ಪಡೆಯಬೇಕು. ಮುಖ್ಯವಾಗಿ ಬಾಲ್ಯ ವಿವಾಹ ನಿಷೇಧ ಕಾನೂನಿನ ಅರಿವು ಪಡೆಯುವುದು ಮತ್ತು ತಮಗಿರುವ ಹಕ್ಕುಗಳನ್ನು ಅಧಿಕಾರದ ನೆಲೆಯಲ್ಲಿ ಚಲಾಯಿಸುವಂತಾಗಬೇಕು.

# ಅನುಬಂಧಗಳು

ಅನುಬಂಧ–೧ : ವಕ್ತೃವಿವರ

ಅನುಬಂಧ–೨ : ಉಲ್ಲೇಖಿತ ಗ್ರಂಥಗಳು

ಅನುಬಂಧ–೩ : ಪರಾಮರ್ಶನ ಗ್ರಂಥಗಳು

## ಅನುಬಂಧ ೧

## ವಕ್ತೃವಿವರ

| ಹೆಸರು | ವಯಸ್ಸು | ಶಿಕ್ಷಣ | ಜಾತಿ | ಊರು |
|---|---|---|---|---|
| ಗಾದಿಲಿಂಗಮ್ಮ | ೪೦ | ಇಲ್ಲ | ನಾಯಕ | ವಣೇನೂರು |
| ಸುಂಕಣ್ಣ | ೫೨ | ಇಲ್ಲ | ನಾಯಕ | ವಣೇನೂರು |
| ಪಾಪಮ್ಮ | ೩೫ | ೨ನೇ | ಕುರುಬ | ಬೆಣಕಲ್ |
| ಹಂಪಮ್ಮ | ೫೫ | ಇಲ್ಲ | ಮಡಿವಾಳ | ಸಿಂದುವಾಳ |
| ಶಾಂತಮ್ಮ | ೪೦ | ೩ನೇ | ಬೋವಿ | ಮೋಕಾ |
| ಶಕುಂತಲಮ್ಮ | ೨೮ | ೫ನೇ | ಮಾದರು | ಸಂಗನಕಲ್ಲು |
| ಹನುಮಂತಮ್ಮ | ೨೨ | ೫ನೇ | ಮಡಿವಾಳ | ಮೋಕಾ |
| ಹುಲಿಗೆಮ್ಮ | ೨೦ | ೭ನೇ | ಕುರುಬ | ಬಳ್ಳಾರಿ |
| ಸುಜಾತ | ೨೨ | ೮ನೇ | ನಾಯಕ | ಹನುಮನಹಳ್ಳಿ |
| ರಾಧಮ್ಮ | ೩೩ | ೪ನೇ | ವಿಶ್ವಕರ್ಮ | ಕಮಲಾಪುರ |
| ಚಂದ್ರಮ್ಮ | ೩೮ | ೩ನೇ | ಆದಿದ್ರಾವಿಡ | ವ್ಯಾಸನಕೇರಿ |
| ಶಾಂಭವಿ | ೩೫ | ೧೨ನೇ | ಲಿಂಗಾಯತ | ಗಾಳೆಮ್ಮನಗುಡಿ |
| ಮೇರಮ್ಮ | ೪೫ | ಇಲ್ಲ | ಆದಿದ್ರಾವಿಡ | ಹನುಮನಹಳ್ಳಿ |
| ಲಕ್ಷ್ಮಿದೇವಿ | ೨೪ | ೬ನೇ | ನಾಯಕ | ಮರಿಯಮ್ಮನಹಳ್ಳಿ |
| ಗುಂಡಮ್ಮ | ೨೮ | ೮ನೇ | ಆದಿದ್ರಾವಿಡ | ಚೌಡಾಪುರ |
| ನಾಗರತ್ನಮ್ಮ | ೪೦ | ೫ನೇ | ಕುರುಬ | ಕಲ್ಲಳ್ಳಿ |
| ಚಂದ್ರಾಭಾಯಿ | ೨೭ | ೩ನೇ | ಲಂಬಾಣಿ | ಕಲ್ಲಳ್ಳಿತಾಂಡ |
| ಗೀತಾಭಾಯಿ | ೨೬ | ೪ನೇ | ಲಂಬಾಣಿ | ಡಣಾಪುರ |

| | | | | |
|---|---|---|---|---|
| ಶಶಿಕಲಾ | ೩೪ | ೬ನೇ | ನಾಯಕ | ಚಿಲಕನಹಟ್ಟಿ |
| ರುದ್ರಮ್ಮ* | ೨೬ | ೪ನೇ | ಲಿಂಗಾಯತ | ಎಚ್.ಜಿ.ಹಳ್ಳಿ |
| ನಾಗಮ್ಮ | ೩೩ | ಇಲ್ಲ | ಬೋವಿ | ಉಪನಾಯಕನಹಳ್ಳಿ |
| ಗಾಳೆಮ್ಮ | ೩೨ | ಇಲ್ಲ | ನಾಯಕ | ವ್ಯಾಸನಕೇರಿ |
| ಎಸ್ತೇರಮ್ಮ | ೨೮ | ೬ನೇ | ಆದಿದ್ರಾವಿಡ | ಡಣಾಪುರ |
| ಸುಶೀಲಮ್ಮ | ೪೩ | ಇಲ್ಲ | ಕುರುಬರು | ಅಲ್ಲೀಪುರ |
| ಅನೂಷ* | ೨೨ | ೧೦ನೇ | ಕಬ್ಬೇರು | ಕುರುಗೋಡು |
| ಅಂಜಿನಮ್ಮ | ೩೫ | ಇಲ್ಲ | ನಾಯಕ | ಬಿಜಕಲ್ |
| ಸುಲೋಚನ | ೩೨ | ಇಲ್ಲ | ಬೋವಿ | ಗೆಜ್ಜಲಗಟ್ಟ |
| ಗೌರಮ್ಮ | ೨೮ | ೪ನೇ | ಅಗಸರು | ತುಮರಿಕೊಪ್ಪ |
| ಲಲಿತಾಬಾಯಿ | ೨೬ | ೩ನೇ | ಲಂಬಾಣಿ | ಡಣಾಪುರ |
| ಯಲ್ಲಮ್ಮ | ೩೦ | ೪ನೇ | ನಾಯಕ | ಹಲ್ಕಿಹಾಳ |
| ಉಮಾದೇವಿ | ೨೮ | ೬ನೇ | ನಾಯಕ | ಶಾಕಾಪುರ |
| ರಾಧ | ೩೦ | ೮ನೇ | ಅಗಸರು | ಮನ್ನೇರಾಳ |
| ನಾರಾಯಣಮ್ಮ | ೩೨ | ೪ನೇ | ಲಿಂಗಾಯತ | ಗಂಗಾವತಿ |
| ಕೊಂಡಮ್ಮ | ೨೯ | ಇಲ್ಲ | ತಳವಾರ | ಗಂಗಾವತಿ |
| ಗಂಗಮ್ಮ | ೩೦ | ಇಲ್ಲ | ಬಡಿಗೇರ | ಕನಕಗಿರಿ |
| ರೂಪ | ೨೪ | ಇಲ್ಲ | ತಳವಾರ | ಹುಲಿಕಿಹಾಳ |
| ಮಲ್ಲಮ್ಮ* | ೨೨ | ಇಲ್ಲ | ಕುರುಬರು | ಕನಕಗಿರಿ |
| ಸುಮಂಗಲ | ೨೮ | ಇಲ್ಲ | ವಡ್ಡರು | ಕೊಪ್ಪಳ |
| ದುರುಗಮ್ಮ | ೩೦ | ೪ನೇ | ನಾಯಕ | ಗಿಣಿಗೇರ |
| ಗೋವಿಂದಮ್ಮ | ೩೫ | ೬ನೇ | ವಡ್ಡರು | ಕುಷ್ಟಗಿ |
| ಚಂದ್ರಮ್ಮ | ೪೦ | ೮ನೇ | ನಾಯಕ | ಅರಿಕೇರ |

| | | | | |
|---|---|---|---|---|
| ಹುಲಿಗೆಮ್ಮ | ೩೮ | ಇಲ್ಲ | ವಡ್ಡರು | ಯಲಬುರ್ಗಾ |
| ನಿಂಗಪ್ಪ | ೩೬ | ೧೨ನೇ | ಕುರುಬ | ಮಸಬಹಂಚಿನಾಳ |
| ರಾಜಣ್ಣ | ೪೦ | ೧೦ನೇ | ಲಿಂಗಾಯತ | ಗಂಗಾವತಿ |
| ಮಲ್ಲಿಕಾರ್ಜುನ | ೩೨ | ೧೨ನೇ | ಲಿಂಗಾಯತ | ಗಂಗಾವತಿ |
| ವೀರೇಶ | ೩೦ | ಇಲ್ಲ | ನಾಯಕ | ಯಲಬುರ್ಗಾ |
| ಗಾದಿಲಿಂಗಪ್ಪ | ೪೨ | ೮ನೇ | ಬೋವಿ | ತುಮರಗುದ್ದಿ |
| ಪಕೀರಮ್ಮ | ೪೦ | ಇಲ್ಲ | ಮುಸ್ಲಿಂ | ಕನಕಗಿರಿ |
| ಮಾಬುನ್ನಿ | ೩೦ | ಇಲ್ಲ | ಮುಸ್ಲಿಂ | ಕನಕಗಿರಿ |
| ಅಕ್ತರ್ | ೪೮ | ಇಲ್ಲ | ಮುಸ್ಲಿಂ | ಪಾಪಿನಾಯಕನಹಳ್ಳಿ |
| ಲಕ್ಷ್ಮಣ | ೩೫ | ಇಲ್ಲ | ಬಾರಿಕೇರ | ಹಿರೇಕೊಪ್ಪ |
| ಪೋತಯ್ಯ | ೩೩ | ೪ನೇ | ಬಾರಿಕೇರ | ಸೋಮಪುರ |
| ಪರಸಪ್ಪ | ೪೮ | ೧೦ನೇ | ಆದಿದ್ರಾವಿಡ | ಸಿದ್ದಾಪುರ |
| ವಿರುಪಾಕ್ಷಪ್ಪ | ೩೮ | ೧೨ನೇ | ನಾಯಕ | ಕುರಲಗೇರಿ |
| ಗಾದಿಲಿಂಗಪ್ಪ ಬಡಿಗೇರ | ೪೦ | ಇಲ್ಲ | ಗಾಣಿಗರು | ಶಿರೋಳ |
| ಗುಂಡವ್ವ | ೩೫ | ಇಲ್ಲ | ಬಾರಿಕೇರ | ಗಂಗಾಪುರ |
| ಅಂಬವ್ವ ಕಡೇಮನಿ | ೨೬ | ೫ನೇ | ಕುರುಬರು | ಕಜಗೇರಿ |
| ರೇಣುಕವ್ವ | ೨೪ | ೮ನೇ | ಕುರುಬರು | ರಾಂಪುರ |
| ಗೌರವ್ವ | ೩೫ | ಇಲ್ಲ | ಲಿಂಗಾಯತ | ಚಿಕ್ಕೊಪ್ಪ |
| ಬಸಮ್ಮ | ೩೫ | ೪ನೇ | ಲಿಂಗಾಯತ | ಚಿಕ್ಕೊಪ್ಪ |
| ಪದ್ಮಾವತಿ | ೩೦ | ಇಲ್ಲ | ಕಬ್ಬೇರ | ಹಿರೇಕೊಪ್ಪ |
| ರಂಗಪ್ಪ | ೪೨ | ೮ನೇ | ನಾಯಕ | ದುಂಡೂರು |
| ಮಲ್ಲಯ್ಯ | ೩೮ | ಇಲ್ಲ | ಚೆನ್ನದಾಸ | ಬಸಾಪುರ |
| ಲಕ್ಷ್ಮವ್ವ | ೩೫ | ಇಲ್ಲ | ಛಲವಾದಿ | ಕೊಲ್ಲೂರ |

| | | | | |
|---|---|---|---|---|
| ಪದ್ದಮ್ಮ | ೩೦ | ೬ನೇ | ಭಲವಾದಿ | ಕೊಲ್ಲೂರ |
| ಚಂದ್ರವ್ವ | ೨೮ | ೭ನೇ | ಭಲವಾದಿ | ದುಂಡೂರು |
| ವಿಶಾಲಾಕ್ಷಮ್ಮ | ೩೦ | ೮ನೇ | ಮಡಿವಾಳ | ಕುಂಟೋಜಿ |
| ಚಂದ್ರಾಬಾಯಿ | ೩೩ | ೫ನೇ | ಬಂಜಾರ | ಕುಂಟೋಜಿ |
| ಬಾಲವ್ವ | ೨೫ | ೮ನೇ | ಮಡಿವಾಳ | ಬಲಗೋಡ |
| ಗೀತಾಬಾಯಿ | ೨೪ | ೯ನೇ | ಲಂಬಾಣಿ | ರಾಂಪುರ |
| ಕವಿತಾಬಾಯಿ | ೩೦ | ೧೦ನೇ | ಲಂಬಾಣಿ | ರಾಂಪುರ |
| ಗೋವಿಂದಮ್ಮ | ೨೬ | ಇಲ್ಲ | ಕುರುಬರು | ಬಸಲಾಪುರ |
| ಮೀನಾಕ್ಷಮ್ಮ | ೩೦ | ಇಲ್ಲ | ಕುರುಬರು | ಬಸಲಾಪುರ |
| ಹನುಮಂತಮ್ಮ | ೨೬ | ೫ನೇ | ನಾಯಕ | ಗಂಗಾಪುರ |
| ಲಕ್ಷ್ಮಿದೇವಮ್ಮ | ೨೮ | ೮ನೇ | ಭಲವಾದಿ | ಹಿರೇಕೊಪ್ಪ |
| ಗಂಗಕ್ಕ | ೨೪ | ೪ನೇ | ಕುರುಬ | ಕುರಲಗೇರಿ |
| ಬೈಜಾಬಾಯಿ | ೨೨ | ಇಲ್ಲ | ಲಂಬಾಣಿ | ಕುರಲಗೇರಿ |
| ಶೋಬಾ ಪಾಟೀಲ | ೨೫ | ಇಲ್ಲ | ಲಿಂಗಾಯತ | ಹೊನ್ನಾಪುರ |
| ಅಲುವೇಲಮ್ಮ | ೨೦ | ಇಲ್ಲ | ನಾಯಕ | ಸಂಗನೂರು |
| ಮೇರವ್ವ | ೨೪ | ಇಲ್ಲ | ಭಲವಾದಿ | ಸಂಗನೂರು |
| ಹುಲಿಗೆವ್ವ | ೨೫ | ಇಲ್ಲ | ಭಲವಾದಿ | ಸಂಗನೂರು |
| ಪದ್ಮಾವತಿ | ೪೦ | ಇಲ್ಲ | ಕುರುಬರು | ಕೊಟ್ನಳ್ಳಿ |
| ಲಲಿತಾಬಾಯಿ | ೩೮ | ೪ನೇ | ಲಂಬಾಣಿ | ಕೊಟ್ನಳ್ಳಿ |
| ಬಸಮ್ಮ ಕಡೇಮನಿ | ೪೨ | ಇಲ್ಲ | ಭಲವಾದಿ | ಜಂಗವಾಡ |
| ಶಕುಂತಲ | ೪೦ | ಇಲ್ಲ | ನಾಯಕ | ಜಂಗವಾಡ |
| ಪಕೀರಪ್ಪ | ೪೬ | ೪ನೇ | ಭಲವಾದಿ | ಹಾಗನೂರು |
| ಮಲ್ಲಿಕಾರ್ಜುನ | ೪೨ | ೧೦ನೇ | ಭಲವಾದಿ | ಹಾಗನೂರು |

| | | | | |
|---|---|---|---|---|
| ಭಾಷಾ | ೪೫ | ೮ನೇ | ಮುಸ್ಲಿಂ | ಬೀರನೂರು |
| ಹೊನ್ನೂರಸ್ವಾಮಿ | ೩೮ | ೫ನೇ | ಮುಸ್ಲಿಂ | ಬೀರನೂರು |
| ಮಾರೆವ್ವ | ೪೦ | ಇಲ್ಲ | ಛಲವಾದಿ | ನಸಗುನ್ನಿ |
| ಶಾಂಭವಿ | ೨೮ | ೧೨ನೇ | ನಾಯಕ | ಕೊಡರಕೊಪ್ಪ |
| ನಾಗಪ್ಪ | ೩೯ | ೮ನೇ | ನಾಯಕ | ಕೊಡರಕೊಪ್ಪ |
| ಅಂಜಿನಪ್ಪ | ೪೦ | ೧೦ನೇ | ಕುರುಬ | ಹೊಸೂರು |
| ಸುರೇಶಪ್ಪ | ೪೪ | ೮ನೇ | ಛಲವಾದಿ | ತಲಗಿಹಾಳ |
| ಓಬಳೇಶಪ್ಪ | ೩೮ | ೧೦ನೇ | ನಾಯಕ | ಸಂಗನೂರು |
| ಇಂದ್ರಮ್ಮ | ೪೨ | ಇಲ್ಲ | ಕಬ್ಬೇರ | ಹಳಕುರ್ಕಿ |
| ಪ್ರಭಾವತಿ | ೩೬ | ಇಲ್ಲ | ನಾಯಕ | ಹಳಕುರ್ಕಿ |
| ಮಂಜುಳ | ೩೨ | ೭ನೇ | ಛಲವಾದಿ | ನಸಗುನ್ನಿ |
| ತಿಪ್ಪವ್ವ | ೩೩ | ೭ನೇ | ನಾಯಕ | ಕೆಂಡೂರು |
| ದುರುಗೇಶ | ೩೮ | ೮ನೇ | ನಾಯಕ | ಹೊಸೂರು |

- ವಕ್ತೃಗಳ ಅಪೇಕ್ಷೆಯಂತೆ ಮೂಲ ಹೆಸರುಗಳನ್ನು ಬದಲಾಯಿಸಲಾಗಿದೆ

# ಅನುಬಂಧ–೨

## ಉಲ್ಲೇಖಿತ ಗ್ರಂಥಗಳು


೧. ಅನುಪಮಾ ಎಚ್.ಎಸ್, ೨೦೧೨, ಮಹಿಳೆ ದಲಿತತ್ವ ಮತ್ತು ರಾಜಕೀಯ ಪ್ರಜ್ಞೆ, ಲಡಾಯಿ ಪ್ರಕಾಶನ, ಗದಗ.

೨. ಉಷಾ ಎಂ, ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. Kakkar A.K, 2009, Child Marriage in India, Issues and Challenges, Cyber Tech Publications, New Delhi.

೪. ಗೀತಾ ಕೃಷ್ಣ ಮೂರ್ತಿ, ೨೦೦೯, ಮಹಿಳಾ ಹಕ್ಕುಗಳು: ಮಾನವ ಹಕ್ಕುಗಳ ನೆಲೆಯಲ್ಲಿ; ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಚಿದಾನಂದಮೂರ್ತಿ ಎಂ, ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನ ಬುಕ್‌ಹೌಸ್, ಬೆಂಗಳೂರು.

೬. ನಂಜಮ್ಮಣ್ಣಿ ಎಂ, ೨೦೦೩, ಭಾರತೀಯ ಸಾಮಾಜಿಕ ಸಂಸ್ಥೆಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೭. ನಾಗಭೂಷಣ ಡಿ.ಎಸ್, ೨೦೦೮, ಲೋಹಿಯಾ ಸಮಾಜವಾದ ದರ್ಶನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೮. ಪ್ರೀತಿ ಶುಭಚಂದ್ರ, ೨೦೦೨, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಪೂರ್ವಾಚಾರ್ ಎಂ, ೨೦೦೨, ಭಾರತೀಯ ಸಮಾಜ ಮತ್ತು ಸಂಸ್ಕೃತಿ, ವಿಶ್ವಕರ್ಮ ಪ್ರಕಾಶನ, ಶಿವಮೊಗ್ಗ.

೧೦. ಭಗವತ್ ಶರಣ ಉಪಾಧ್ಯಾಯ, ೨೦೦೮, ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೧೧. ಬೈರಪ್ಪ ಕೆ, ೧೯೯೭, ಭಾರತೀಯ ಸಮಾಜ, ಕೇಂಬ್ರಿಡ್ಜ್ ಪಬ್ಲಿಕೇಷನ್ ಕಂಪನಿ, ಬೆಂಗಳೂರು

೧೨. ಮಧುಕೀಶ್ವರ್ (ಅನು), ಮೀರಾ ಎಲ್.ಜಿ, , ೧೯೯೭, ಮಾನುಷಿಯ ಮಾತು, ಅಕ್ಷರ ಚಿಂತನ ಪ್ರಕಾಶನ, ಸಾಗರ.

೧೩. ವಾಣಿ ಪೆರಿಯೋಡಿ, ೨೦೧೫, ಚಂದದ ಬದುಕು: ಕಿಶೋರಿಯರಿಗೆ ಜೀವನ ಕೌಶಲ್ಯ ಮಾಹಿತಿ ಕೈಪಿಡಿ, ಜಿಲ್ಲಾಡಳಿತ, ಕೊಪ್ಪಳ.

೧೪. ವಿರೂಪಾಕ್ಷ ಪೂಜಾರಹಳ್ಳಿ(ಸಂ), ೨೦೦೭, ಪೆರಿಯಾರರ ವಿಚಾರಧಾರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಶಿವರಾಜ್ ವಿ ಪಾಟೀಲ, ೨೦೧೧, ಕರ್ನಾಟಕ ರಾಜ್ಯದಲ್ಲಿನ ಬಾಲ್ಯವಿವಾಹ ತಡೆ ಬಗೆಗಿನ ವರದಿ, ಕರ್ನಾಟಕ ಸರ್ಕಾರ, ಬೆಂಗಳೂರು.
೧೬. ಶ್ರೀನಿವಾಸ ಕೆ.ಎಚ್.(ಅನು), ೨೦೦೩, ಮಾನವ ಹಕ್ಕುಗಳು: ಒಂದು ಆಕರ ಗ್ರಂಥ, ನ್ಯಾಷಲ್ ಬುಕ್ ಟ್ರಸ್ಟ್, ಇಂಡಿಯಾ.
೧೭. ಶೇಷ ನವರತ್ನ, ೨೦೦೯, ಮನುಸ್ಮೃತಿ, ಸಮಾಜ ಪುಸ್ತಕಾಲಯ ಧಾರವಾಡ.
೧೮. ಶೈಲಜ ಹಿರೇಮಠ, ೨೦೦೩, ಸ್ತ್ರೀ ಕಥನ, ಭುವನ ಪ್ರಕಾಶನ, ಹೊಸಪೇಟೆ.
೧೯. ಶೈಲಜ ಹಿರೇಮಠ, ೨೦೧೬, ಕುಟುಂಬ, ಮಹಿಳೆ, ದೌರ್ಜನ್ಯ ಮತ್ತು ಕಾನೂನು ಪರ್ಯಾಯ ಸಾಧ್ಯತೆಗಳಿಗಿರುವ ತೊಡಕುಗಳು, ಸಂವಾದ, ಎಸ್.ಆರ್.ಗೋವಿಂದು, ಸ್ಫೂರ್ತಿಧಾಮ, ಬೆಂಗಳೂರು.
೨೦. ಸಬಿಹಾ ಭೂಮೀಗೌಡ, ೨೦೧೪, ಮಹಿಳೆ–ಇಂದಿನ ಸವಾಲುಗಳು, ಲಡಾಯಿ ಪ್ರಕಾಶನ, ಗದಗ.
೨೧. ಸರೋಜ ಕೆ. ೨೦೦೧, ಮಹಿಳೆ ಮತ್ತು ಆರೋಗ್ಯ : ಮಹಿಳಾ ಅಧ್ಯಯನಗಳ ದೃಷ್ಟಿಯಲ್ಲಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೨. ಸುಮಿತ್ರಾಬಾಯಿ ಬಿ.ಎನ್ ಮತ್ತು ತೇಜಸ್ವಿ ನಿರಂಜನ; ಸ್ತ್ರೀವಾದಿ ಪ್ರವೇಶಿಕೆ, ಕರ್ನಾಟಕ ಲೇಖಕಿಯರ ಸಂಘ, ಮೈಸೂರು.
೨೩. ಹಲಸಂಗಿಯ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ ಇತರರು, ೨೦೧೦, ಗರತಿಯ ಹಾಡು, ಸಮಾಜ ಪುಸ್ತಕಾಲಯ, ಧಾರವಾಡ.
೨೪. ಹಾಲತಿ ಸೋಮಶೇಖರ್, ೨೦೦೭, ಮಹಿಳಾ ಚಳವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು.

**ಉಲ್ಲೇಖಿತ ಪತ್ರಿಕೆಗಳು ( ದಿನ, ವಾರ, ಮಾಸಿಕ, ತ್ರೈಮಾಸಿಕ)**

೧. ಪ್ರಜಾವಾಣಿ ದಿನಪತ್ರಿಕೆ ೮ನೇ ಸೆಪ್ಟೆಂಬರ್ ೨೦೧೪.
೨. ಪ್ರಜಾವಾಣಿ, ದಿನಪತ್ರಿಕೆ, ೨೫ ಮೇ ೨೦೦೫
೩. ಪ್ರಜಾವಾಣಿ ದಿನಪತ್ರಿಕೆ, ೨೯ನೇ ಆಗಸ್ಟ್ ೨೦೧೫.
೪. ಪ್ರಜಾವಾಣಿ ದಿನಪತ್ರಿಕೆ, ೧ ಸೆಪ್ಟೆಂಬರ್ ೨೦೧೫.
೫. ವಿಜಯ ಕರ್ನಾಟಕ, ದಿನಪತ್ರಿಕೆ, ೮ನೇ ಡಿಸೆಂಬರ್ ೨೦೧೫.
೬. ದಿಕ್ಸೂಚಿ ಮಾಸ ಪತ್ರಿಕೆ, ಸೆಪ್ಟೆಂಬರ್ ೨೦೦೧.
೭. ಸಂವಾದ ಮಾಸ ಪತ್ರಿಕೆ, ೨೦೧೬ ಎಸ್.ಆರ್.ಗೋವಿಂದು, ಸ್ಫೂರ್ತಿಧಾಮ, ಬೆಂಗಳೂರು.

# ಅನುಬಂಧ – ೩

## ಪರಾಮರ್ಶನ ಗ್ರಂಥಗಳು

೧. ಅಂದನೂರು ಶೋಭ ಮತ್ತು ಶ್ರೀಲಕ್ಷ್ಮಿ ಬಿ.ಬಿ (ಸಂ), ೧೯೮೮, ಮಹಿಳೆಯರ ಮುನ್ನಡೆ, ಮಾನಿನಿ ಪ್ರಕಾಶನ, ಬೆಂಗಳೂರು.

೨. ಅನ್ನಪೂರ್ಣೇಶ್ವರಿ ಎನ್, ೨೦೦೨, ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿ, ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು.

೩. ಆಶೀಶ್‌ನಂದಿ(ಅನು), ಸುಬ್ಬಣ್ಣ ಕೆ.ವಿ, ೧೯೯೫, ಆಶೀಶ್ ನಂದಿ ವಿಚಾರಧಾರೆಗಳು, ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ.

೪. ಇಂದಿರಾ ಆರ್, ೨೦೦೨, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಉಷಾ ಎಂ, ೨೦೦೫, ಮಹಿಳೆ ಮತ್ತು ಜಾತಿ, ಪ್ರಸಾರಾಂಗ ಕನ್ನಡ ವಿಶ್ವದ್ಯಾಲಯ, ಹಂಪಿ.

೬. ಒಡೆಯರ್ ಡಿ. ಹೆಗ್ಗಡೆ ಮತ್ತು ಅನ್ನಪೂರ್ಣೇಶ್ವರಿ, ೨೦೦೩, ಮಹಿಳಾ ಅಧ್ಯಯನಗಳು, ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ಮಾನವ ಅಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು.

೭. ಒಡೆಯರ್ ಡಿ. ಹೆಗ್ಗಡೆ ಮತ್ತು ಅನ್ನಪೂರ್ಣೇಶ್ವರಿ, ೨೦೦೬, ಮಹಿಳಾ ಹಕ್ಕುಗಳು, ಹೆಗ್ಗಡೆ ಪ್ರಕಾಶನ, ಮಂಡ್ಯ.

೮. ಗಾಯತ್ರಿ ಎನ್, ೧೯೯೬, ಬಿಡುಗಡೆಯ ಹಾದಿಯಲ್ಲಿ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೯. ಗಾಯತ್ರಿ ಎನ್, ೧೯೯೮, ಮಹಿಳಾ ಚಳುವಳಿಯ ಮಜಲುಗಳು, ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೧೦. ಗಾಯತ್ರಿ ಎನ್, ೨೦೧೦, ಸಂಚಲ, ಮಾ–ಲೆ ಪ್ರಕಾಶನ, ಬೆಂಗಳೂರು.

೧೧. ಗೀತಾ ಕೆ.ಎಸ್, ೨೦೦೮, ಮಹಿಳೆ, ಕಾನೂನು ಮತ್ತು ನ್ಯಾಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨. ಗೀತಾ ಕೃಷ್ಣಮೂರ್ತಿ, ೨೦೦೧, ಮಹಿಳೆ ಸಮಾಜ ಮತ್ತು ಕಾನೂನು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೩. ಗೀತಾ ಕೃಷ್ಣಮೂರ್ತಿ, ೨೦೦೧, ಮಹಿಳೆ ಕಾನೂನು ಮತ್ತು ರಾಜಕಾರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ಗೌಡ ವಿ.ಹೆಚ್, ೨೦೦೪, ಮಹಿಳೆ ಮತ್ತು ಕಾನೂನು, ಶ್ರೀಮತಿ ಯಶೋಧಾ ರಾಗೌ ಟ್ರಸ್ಟ್, ಮೈಸೂರು.

೧೫. ಚಂದ್ರಶೇಖರ್ ಟಿ.ಆರ್, ೨೦೦೧, ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಚಂದ್ರಶೇಖರ್ ಟಿ.ಆರ್, ೨೦೦೩, ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಸಿವಿಜಿ ಪಬ್ಲಿಕೇಷನ್ಸ್ ಬೆಂಗಳೂರು.

೧೭. ಚಂದ್ರಶೇಖರ ಟಿ.ಆರ್, ೧೯೯೯, ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ಚಂದ್ರಶೇಖರ ಟಿ.ಆರ್, ೨೦೧೨, ಕರ್ನಾಟಕದ ಜನಗಣತಿ ೨೦೧೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ.

೧೯. ಛಾಯಾಧಾತರ್, ಸರಸ್ವತೀ ರಿಸಬೂಡ (ಅನು), ೧೯೯೭, ಸ್ತ್ರೀ–ಪುರುಷ, ಇಳಾ ಪ್ರಕಾಶನ, ಬೆಂಗಳೂರು.

೨೦. ಜವರಯ್ಯ ಮ.ನ, ೨೦೦೦, ಜಾತಿ ಸತಿ ಮತ್ತು ಮಹಿಳೆ, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು.

೨೧. ಜ್ಯೋತ್ಸ್ನಾ ಕಾಮತ್, ೧೯೯೯, ಮಹಿಳೆ : ಒಂದು ಅಧ್ಯಯನ, ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು.

೨೨. ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಕುಮಾರಪ್ಪ ಜಿ (ಅನು), ೧೯೯೭, ಮಾತೆಯರು ಮಾನ್ಯರಾಗಿದ್ದಾಗ, ನವಕರ್ನಾಟಕ ಪ್ರಕಾಶನ ಬೆಂಗಳೂರು.

೨೩. ನಡಗೇರಿ ಎಸ್.ಆರ್, ೨೦೦೫, ಕಾನೂನು ಮತ್ತು ಮಹಿಳೆ, ಶ್ರೀ ರಾಜಗುರು ಪ್ರಕಾಶನ, ಬಿಜಾಪುರ.

೨೪. ನಂಜಮ್ಮಣ್ಣಿ ಎಂ, ೧೯೭೧, ಸಾಮಾಜಿಕ ಮಾನವಶಾಸ್ತ್ರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೫. ನಾಗಾರ್ಜುನ ಹಾ.ಮ(ಸಂ), ೨೦೧೦, ಸ್ತ್ರೀವಾದಿ ಚಿಂತನೆಗಳು, ದೇಸಿ ಪುಸ್ತಕ, ಬೆಂಗಳೂರು.

